ಪ್ರಾಯಃ–ಬಹುವಾಗಿ (ಸಂದರ್ಭ ವಿಶೇಷಗಳಲ್ಲಿ), ಪಿಶಾಚಾವಿಷ್ಟ ದೇಹೇ ಅಪಿ–ಪಿಶಾಚಿಯು ಪ್ರವೇಶಿಸಿದ ದೇಹದಲ್ಲಿಯೂ, ಭೇದಃ–ಭೇದಾದಿಯು, ನ ದೃಶ್ಯತೇ–ಕಂಡುಬರುವುದಿಲ್ಲ; (ಪಿಶಾಚಗ್ರಸ್ತನಿಗೆ ಬಲವಾಗಿ ತಾಡನಾದಿಗಳನ್ನು ಮಾಡಿದರೂ ಆ ವ್ಯಕ್ತಿಗೆ ದುಃಖಾದಿ ಪೀಡೆಯಾಗುವುದು ಕಂಡುಬರುವುದಿಲ್ಲ; ಗಾಯ ಮೊದಲಾದುವೂ ಸಂಭವಿಸುವುದಿಲ್ಲ); ಯತ್–ಯಾವ ಕಾರಣದಿಂದ, ಮಂತ್ರೇಣ ಮಂತ್ರಶಕ್ತಿಯಿಂದ, ಕುಂಠಿತಾಧಾರಾ–ಸ್ತಂಭನ ಮಾಡಲ್ಪಟ್ಟ ಕತ್ತಿಯ ಅಲಗು (ಕತ್ತರಿಸುವ ಹರಿತವಾದ ಭಾಗವು), ನರಾನ್–ಜನರನ್ನು, ನ ಛಿನತ್ತಿ–ಕತ್ತರಿಸುವುದಿಲ್ಲವೋ (ಖಡ್ಗಸ್ತಂಭನ ಮಂತ್ರದಿಂದ, ಖಡ್ಗದ ತುಂಡರಿಸುವ ಶಕ್ತಿಯೇ ನಿರೋಧಿಸಲ್ಪಡುತ್ತದೆಯೋ), ತತ್–ಆದ್ದರಿಂದ, ಹರೇಃ–ಶ್ರೀಹರಿಯ, ಛೇದಃ–ಛೇದವು, ಶ್ರುತಿಪ್ರೋಕ್ತ ಸಾರ್ವಜ್ಞಚ್ಛೇದಃ ಏವ–ಶ್ರುತ್ಯುಕ್ತಸರ್ವಜ್ಞತ್ವದ ಛೇದವೇ ಸರಿ.

**ಬ್ರಹ್ಮಾಂಡಖರ್ಪರಚ್ಛೇದೇ ಯನ್ನಖಾಗ್ರಚ್ಛಿದಾಪಿ ನ ।**
**ಕೋ ಯುಕ್ತಿಮಾಂಸ್ತಸ್ಯ ವಿಷ್ಣೋಶ್ಛೇದಂ ಸಂಭಾವಯೇಚ್ಛರೈಃ ॥**

ಬ್ರಹ್ಮಾಂಡ ಖರ್ಪರಚ್ಛೇದೇ–ಬ್ರಹ್ಮಾಂಡದ ಖರ್ಪರವನ್ನು (ಮುಚ್ಚಳದ ಚಿಪ್ಪನ್ನು) ಸೀಳಿದರೂ, ಯನ್ನಖಾಗ್ರಚ್ಛಿದಾ ಅಪಿ ನ–ಯಾವ ಪರಮಾತ್ಮನ ಉಗುರಿನ ತುದಿಯೂ ಸಹ ಸೀಳಲಿಲ್ಲವೋ (ಕ್ಷುದ್ರವಾದ ಕಲ್ಲು ಬಡಿದರೆ, ಸಾಮಾನ್ಯ ಮನುಷ್ಯನ ಉಗುರು ಸೀಳಿ ಒಡೆಯುವುದು ಕಾಣುತ್ತದೆ), ತಸ್ಯ–ಆ,

---

ಖರ್ಪರವನ್ನು ಸೀಳಿತೋ (೧೦೦ ಯೋಜನ ವಿಸ್ತೀರ್ಣದ ಸುವರ್ಣಮಯ ಖರ್ಪರವನ್ನು ಒಡೆಯಿತೋ, (ನಖಕ್ಕೆ ಯಾವ ವಿಧದ ಛೇದವೂ ಆಗಲಿಲ್ಲವೋ), ಆ ಪರಮಾತ್ಮನ ದೇಹಕ್ಕೆ ಯಾವ ವಿವೇಕಿಯು, ಬಾಣಗಳ ತಾಡನದಿಂದ ಛೇದ ಭೇದಾದಿಗಳನ್ನು ತಿಳಿಯುವನು? (ಸರ್ವಥಾ ಅಸಂಭಾವಿತವೇ ಆಗಿರುತ್ತದೆ) (೨೬). ಶ್ರೀಹರಿಯು ಸಕಲಜಗತ್ತನ್ನು ತನ್ನ ಒಂದು ರೋಮಕೂಪದಲ್ಲಿ ಧರಿಸಿರುವನೆಂದು ಬಹುಪ್ರಮಾಣಸಿದ್ಧವಾಗಿದೆ; ಆತನ ಒಂದು ರೋಮವನ್ನು ಛೇದಿಸಿದರೂ ಜಗತ್ತಿನ ನಾಶವೇ ಆಗುವುದಿಲ್ಲವೇ? ಹೀಗಿರಲು, ಆ ಶ್ರೀಹರಿಯ ದೇಹವನ್ನು ಛೇದಿಸುವುದೆಂತು? ಸರ್ವವಿನಾಶಕನಾದ ಮಹಾದೇವನಿಗೂ ನಿಯಾಮಕನಾದ ಶ್ರೀಕೃಷ್ಣನ ಛೇದವನ್ನು (ಘಾತಾದಿಯನ್ನು) ಯಾವನೂ ಮಾಡಲಾರನು;

ವಿಷ್ಣೋಃ—ಶ್ರೀಹರಿಗೆ, ಶರೈಃ—ಬಾಣಗಳಿಂದ, ಛೇದಂ—ಸೀಳುವಿಕೆಯನ್ನು, ಕಃ—ಯಾವ, ಯುಕ್ತಿಮಾನ್—ಬುದ್ಧಿವಂತನು, ಸಂಭಾವಯೇತ್—ಸಂಭವಿಸುವುದೆಂದು ತಿಳಿಯುತ್ತಾನೆ? (ಯಾವನೂ ತಿಳಿಯುವುದಿಲ್ಲ).

**ರೋಮಚ್ಛೇದೋ ಜಗಚ್ಛೇದೋ ಯದ್ರೋಮ್ಣಿ ನಿಖಿಲಂ ಜಗತ್ ।**
**ನಿಯಂತಾ ಯೋಽಖಿಲಚ್ಛೇತ್ತುಃ ಸ ಛೇದ್ಯಃ ಕೇನ ವಾ ವದ ॥ ೨೭ ॥**

ಬೇರೆರಡು ಯುಕ್ತಿಗಳನ್ನು ಹೇಳುತ್ತಾರೆ :—

ಯತ್—ಯಾವ ಕಾರಣದಿಂದ, ರೋಮ್ಣಿ—ಭಗವಂತ ರೋಮದಲ್ಲಿ, ನಿಖಿಲಂ ಜಗತ್ — ಸಮಸ್ತ ಜಗತ್ತು, ಅಸ್ತಿ — ಇರುತ್ತದೆಯೋ, (ತತ್ — ಆದ್ದರಿಂದ), ರೋಮಚ್ಛೇದಃ—ರೋಮದ (ವೈಗೂಢಲಿನ) ಕತ್ತರಿಸುವಿಕೆಯು (ಛೇದವು), ಜಗಚ್ಛೇದಃ—ಜಗತ್ತಿನ ಛೇದವೇ (ಆಗುತ್ತದೆ) ; (ಹೀಗೆ ಒಂದು ಕೂದಲನ್ನು ಛೇದಿಸುವುದು ಸಂಭಾವಿತವಲ್ಲದಿರಲು, ದೇಹವನ್ನೇ ಛೇದಿಸುವುದು ಸುತರಾಂ ಅಸಂಭಾವಿತವೆಂದು ಹೇಳಲೇನು?); ಯಃ-ಯಾವನು(ಶ್ರೀಕೃಷ್ಣನು-ಭಗವಂತನು), ಅಖಿಲಚ್ಛೇತ್ತುಃ—ಸಮಸ್ತಛೇದಕನಾದ ಪುರುಷನ (ಸಂಹಾರಕನಾದ ರುದ್ರನ), ನಿಯಂತಾ—ನಿಯಾಮಕನೋ, 'ನ ಋತೇ ತ್ವತ್ಕ್ರಿಯತೇ ಕಿಂಚ ನಾರೇ' ಎಂಬ ಶ್ರುತಿಯಂತೆ, ಆತನನ್ನುಳಿದು ಯಾರೂ ಏನನ್ನು ಮಾಡಲು ಶಕ್ತರಲ್ಲ), ಸಃ—ಆತನು (ಆ ಶ್ರೀಕೃಷ್ಣನು), ಕೇನ—ಯಾರಿಂದ, ಛೇದ್ಯಃ—ಛೇದ್ಯನು, ವದವಾ—ಹೇಳು, ನೋಡುವಾ! (ಯಾವ ವಿವೇಕಿಯು ತನ್ನ ದೇಹವನ್ನೇ ಕತ್ತರಿಸೆಂದು ತನ್ನಿಂದ ಪ್ರೇರ್ಯನಾದ ಅನ್ಯನನ್ನು ಪ್ರೇರಿಸುತ್ತಾನೆ?)

---

ಸರ್ವಪ್ರೇರಕನು, ಸ್ವದೇಹವನ್ನು ಛೇದಿಸುವುದರಲ್ಲಿ ಅನ್ಯನನ್ನು ಪ್ರೇರಿಸುವುದು ಅತ್ಯಂತ ಅಸಂಭಾವಿತವಲ್ಲವೇ? (೨೭). ಹಾಗೂ ನೋಡಬೇಕು; ದಕ್ಷನ ಯಜ್ಞಧ್ವಂಸದಲ್ಲಿ ತೊಡಗಿದ ಮಹದೇವನು, ಯಜ್ಞಪಶುವಿನ ವಧೆ ನಡೆದು, ಅದರ ವಪೆಯನ್ನು ಅಗ್ನಿದ್ವಾರಾ, ಪರಮಾತ್ಮನಿಗೆ ಅರ್ಪಣೆಯಾಗುವುದರ ಮೊದಲೇ, ಯಜಮಾನನಾದ ದಕ್ಷನನ್ನು ಶಿರಚ್ಛೇದಮಾಡಿ ಪರಿಹರಿಸಲು ಯತ್ನಿಸಿದಾಗ, ಪಶ್ವಾಲಂಭನದಿಂದ ತನಗೆ ತಲ್ಪಬೇಕಾದ ಆಹುತಿಯು ತಪ್ಪುವುದೆಂದು ಯೋಚಿಸಿ, ದಕ್ಷನ ಶಿರಸ್ಸು ಅಚ್ಛೇದ್ಯವಾಗುವಂತೆ ಮಾಡಿದನು—ಮಹಾದೇವನ ಶಕ್ತಿಯನ್ನೇ ಲೀಲೆಯಿಂದ, ಸ್ತಂಭನಮಾಡಿದನು; ರುದ್ರದೇವನ ಛೇದನಶಕ್ತಿಯೂ,

**ಸ್ವಾಹಾರಸ್ಯ ವಿಚ್ಛೇದೇ ದಕ್ಷಂ ಪಶುಪತೇರಪಿ ।**
**ಅಚ್ಛೇದ್ಯಮಕರೋದ್ಯಸ್ತು ತಸ್ಯ ಭೇದಂ ಕರೋತಿ ಕಃ ॥ ೨೮ ॥**

ಯಃ–ಯಾವ ಪರಮಾತ್ಮನು, ಸ್ವಾಹಾರಸ್ಯ–ತನ್ನ ಆಹಾರದ, ವಿಚ್ಛೇದೇ–ವಿಘ್ನವಾಗುತ್ತಿರಲು, (ಪಶುವಧೆಯ ಮೊದಲೇ ದಕ್ಷನನ್ನು ಸಂಹರಿಸಿದರೆ, ತನಗೆ ಅರ್ಪಿತವಾಗಬೇಕಾದ ಯಜ್ಞಪಶುವಿನ ದೇಹದ 'ವಪೆ' ಮೊದಲಾದ ಆಹುತಿಯು ತಪ್ಪುವುದೆಂದು ಚಿಂತಿಸಿ), ಪಶುಪತೇಃ ಅಪಿ–ಮಹಾದೇವನಿಗೂ ಸಹ, ಅಚ್ಛೇದ್ಯಂ–(ದಕ್ಷನ) ಶಿರಚ್ಛೇದವು ಆಗದಂತೆ, (ಅಚ್ಛೇದ್ಯವಾದುದನ್ನಾಗಿ), ಅಕರೋತ್–ಮಾಡಿದನೋ, ತಸ್ಯ–ಆತನ, ಭೇದಂ–ಭೇದವನ್ನು, ಕಃ–ಯಾರು, ಕರೋತಿ–ಮಾಡುತ್ತಾನೆ? (ಯಾರೂ ಸಮರ್ಥರಲ್ಲ), (ಲೀಲೆಯಿಂದ, ಹೀಗೆ, ರುದ್ರನ ಶಕ್ತಿಯನ್ನೇ ಸ್ತಂಭನಮಾಡಿ, ದಕ್ಷ ಶಿರಸ್ಸನ್ನು ಕತ್ತರಿಸಲಾಗದಂತೆ ಮಾಡಿದ ಭಗವಂತನ ಭೇದವನ್ನು ಯಾರೂ ಮಾಡಲಾರರು–ಅದನ್ನು ಚಿಂತಿಸುವುದೂ ಶಕ್ಯವಿಲ್ಲ).

**ಆಕ್ರಮ್ಯೋರಸಿ ದಕ್ಷಸ್ಯ ಸಿತಧಾರೇಣ ಹೇತಿನಾ ।**
**ಛಿಂದನ್ನಪಿ ತದುದ್ಧರ್ತುಂ ನಾಶಕ್ನೋತ್ತ್ರ್ಯಂಬಕಸ್ತದಾ ॥ ೨೯ ॥**
**ಶಸ್ತ್ರೈರಸ್ತ್ರಾನ್ವಿತೈರೇನಮನಿರ್ಭಿನ್ನತ್ವಚಂ ಹರಃ ।**
**ವಿಸ್ಮಯಂ ಪರಮಾಪನ್ನೋ ದಧ್ಯೌ ಪಶುಪತಿಶ್ಚಿರಂ ॥ ೩೦ ॥**

---

ಭಗವಂತನ ಅಧೀನವೇ ಆಗಿರುವಾಗ, ಭಗವಂತನ ಭೇದವನ್ನು ನಿರ್ವಹಿಸುವ ಅನ್ಯನು ಯಾರಿರುವನು? (ಯಾರೂ ಸಮರ್ಥರಲ್ಲ) (೨೮). ಶ್ರೀಭಾಗವತದಲ್ಲಿ ಈ ಪ್ರಮೇಯವು ನಿರೂಪಿತವಾಗಿರುವ ಸಂದರ್ಭಗಳನ್ನು ಗಮನಿಸಿರಿ; ಮಹದೇವನು, ದಕ್ಷನ ಎದೆಯಮೇಲೆ ಕೂತು, ಹರಿತವಾದ ಖಡ್ಗದಿಂದ ದಕ್ಷನ ತಲೆಯನ್ನು ಕತ್ತರಿಸಿದರೂ (ಕಂಠಭಾಗದಲ್ಲಿ ಬಹುವಾರ ಹೊಡೆದರೂ), ಅದನ್ನು ದೇಹದಿಂದ ಬೇರ್ಪಡಿಸಲು ಅಶಕ್ತನಾದನು; ಅಸ್ತ್ರಪೂತಶಸ್ತ್ರಗಳಿಂದಲೂ, ದಕ್ಷನ ದೇಹದ ಚರ್ಮವೂ ಸಹ ಸೀಳದಿರುವುದನ್ನು ಕಂಡು, ಮಹಾದೇವನು, ಆಶ್ಚರ್ಯಚಕಿತನಾದನು; ಬಹುಕಾಲ ಶ್ರೀಹರಿಯನ್ನು ಚಿಂತಿಸಿದನು; ಆಗ ಶ್ರೀಹರಿ ಪ್ರೇರಣೆಯಿಂದ ಒಂದು ಉಪಾಯವು ಹೊಳೆಯಿತು; ಯಜ್ಞದಲ್ಲಿ ಪಶುವನ್ನು ವಧಿಸುವ ಉಪಾಯವನ್ನು ಪಶುಪತಿಯು, ಧ್ಯಾನದಿಂದ ತಿಳಿದು, ಯಜಮಾನನಾದ

**ದೃಷ್ಟ್ವಾ ಸಂಜ್ಞಪನೇ ಯೋಗಂ ಪಶೂನಾಂ ಸ ಪತಿರ್ಮಖೇ ।**
**ಯಜಮಾನಪಶೋಸ್ತಸ್ಯ ಕಾಯಾತ್ತೇನಾಹರಚ್ಛಿರಃ ॥ ೩೧ ॥**
**ಇತಿ ಭಾಗವತೇ ಪ್ರೋಕ್ತಮುತಚ್ಚಿತ್ರಂ ಕಿಮುಚ್ಯತೇ ॥ ೩೨ ॥**

ಇದೇ ಅರ್ಥವನ್ನು ವಿಸ್ತರಿಸುವ ಶ್ರೀಭಾಗವತ ಶ್ಲೋಕಗಳನ್ನೇ ಉದಾಹರಿಸುತ್ತಾರೆ :—

ದಕ್ಷಸ್ಯ–ದಕ್ಷಸ್ಯ, ಉರಸಿ–ವಕ್ಷಸ್ಥಲದಲ್ಲಿ, ಆಕ್ರಮ್ಯ–ಕೂತು, ಸಿತಧಾರೇಣ–ಹರಿತವಾದ ಅಲಗುಳ್ಳ (ತುದಿಯುಳ್ಳ), ಹೇತಿನಾ–ಖಡ್ಗ (ಆಯುಧ) ದಿಂದ, ಛಿಂದನ್ ಅಪಿ–(ಶಿವನು) ಕತ್ತರಿಸಿದರೂ, ತ್ರ್ಯಂಬಕಃ–ತ್ರಿನೇತ್ರನು (ಶಿವನು), ತದಾ–ಆಗ, ತತ್–ದಕ್ಷನ ಶಿರಸ್ಸನ್ನು, ಉದ್ಧರ್ತುಂ–(ಶರೀರದಿಂದ ಬೇರ್ಪಡಿಸಿ) ಮೇಲೆ ಕಿತ್ತಲು, ನ ಅಶಕ್ನೋತ್–ಶಕ್ತನಾಗಲಿಲ್ಲ; ಅಸ್ತ್ರಾನ್ವಿತೈಃ–ಅಸ್ತ್ರಸಹಿತಗಳಾದ (ಅಭಿಮಂತ್ರಿತ), ಶಸ್ತ್ರೈಃ–ಆಯುಧಗಳಿಂದಲೂ, ಅನಿರ್ಭಿನ್ನತ್ವಚಂ–ಚರ್ಮವು ಸಹ ಒಡೆಯದ (ಸೀಳದ), ಏನಂ–ಈ ದಕ್ಷನನ್ನು (ಕಂಡು), ಹರಃ–ಮಹಾದೇವನು, ಪರಂ ವಿಸ್ಮಯಂ–ಅತ್ಯಂತ ಅಶ್ಚರ್ಯವನ್ನು, ಆಪನ್ನಃ–ಹೊಂದಿದವನಾಗಿ, ಪಶುಪತಿಃ–ಹರನು, (ಪಶುಪತಿಯು–ಯಜ್ಞದಲ್ಲಿ ಶ್ರೀಹರಿಗೆ ಅರ್ಪಿಸಲಾಗುವ ಪಶುಗಳ ಪತಿಯಾದ ರುದ್ರನು), ಚಿರಂ–ಬಹುಕಾಲ, ದಧ್ಯೌ–ಧ್ಯಾನಿಸಿದನು; ಮಖೇ–ಯಜ್ಞದಲ್ಲಿ, ಪಶೂನಾಂ–ಪಶುಗಳ ಸಃ ಪತಿಃ–ಆ ಪತಿಯು (ಪಶುಪತಿಯು) ಸಂಜ್ಞಪನೇ–ಸಂಹಾರದಲ್ಲಿ (ಶ್ರೀಹರಿಗೆ ಅರ್ಪಿತವೆಂದು ನಿಶ್ಚಯಿಸಿ ಹಿಂಸೆಮಾಡುವ–ಕೊಲ್ಲುವ), ಯೋಗಂ–ಉಪಾಯುವನ್ನು, ದೃಷ್ಟ್ವಾ–ಮನಗಂಡು, ಯಜಮಾನಪಶೋಃ–(ದಕ್ಷನನ್ನೇ ಯಜ್ಞಪಶುವನ್ನಾಗಿ ಮಾಡಿ ಸಂಹರಿಸುವೆನೆಂದು ಸಂಕಲ್ಪಿಸಿ) ದಕ್ಷನೆಂಬ ಪಶುವಿನ, ತಸ್ಯ ಕಾಯಾತ್–ಆತನ ದೇಹದಿಂದ,

---

ದಕ್ಷನನ್ನೇ ಯಜ್ಞಪಶುವೆಂದು ಕಲ್ಪಿಸಿ ಶ್ರೀಹರಿಗೆ ಅರ್ಪಿಸುವೆನೆಂಬ ಭಾವನೆಯಿಂದ, ಖಡ್ಗದಿಂದ ತಾಡನವಮಾಡಿದನು ; ತಕ್ಷಣವೇ, ಶಿರಸ್ಸು ಕತ್ತರಿಸಲ್ಪಟ್ಟಿತು ; ಈ ವಿಧ ಸರ್ವಪ್ರೇರಕಶಕ್ತಿಯುಳ್ಳ ಅಚ್ಯುತನು ಅಚ್ಛೇದ್ಯನೆಂಬುದು ಏನಾಶ್ಚರ್ಯವು ! ಈ ವಿಧ ಶಕ್ತಿಯುಳ್ಳವನು, ಶ್ರೀಹರಿಯೆಂದು ಭಾಗವತದಲ್ಲಿ ಹೇಳಲಾಗಿದೆ (೨೯–೩೨). ಮತ್ತೂ ನೋಡಿರಿ; ಪರಮಾತ್ಮನ ಕೃಪಾಲೇಶಕ್ಕೆ ಪಾತ್ರನಾದ ಕಾರಣದಿಂದ ಭಕ್ತನಾದ ಬಾಲಕ ಪ್ರಹ್ಲಾದನು, ಯಾವ ಅಸ್ತ್ರಶಸ್ತ್ರಗಳಿಂದಲೂ,

ತೇನ–ಆಯೋಗ (ಉಪಾಯ) ದಿಂದ, ಶಿರಃ–ಶಿರಸ್ಸನ್ನು, (ಶ್ರೀಹರಿಗೆ ಆಹುತಿಯನ್ನರ್ಪಿಸುವೆನೆಂಬ ಅನುಸಂಧಾನದಿಂದ), ಆಹರತ್–ಅಪಹರಿಸಿದನು (ಕತ್ತರಿಸಿ ಬೇರ್ಪಡಿಸಲು ಶಕ್ತನಾದನು); ಇತಿ–ಹೀಗೆ, ಭಾಗವತೇ–ಶ್ರೀಭಾಗವತದಲ್ಲಿ, ಪ್ರೋಕ್ತಂ–ಹೇಳಲಾಗಿದೆ; ಅತಃ–(ಈ ವಿಧವಾದ ಶಕ್ತಿಯುಳ್ಳವನಾದ್ದರಿಂದ), ಆದ್ದರಿಂದ, ಅಚ್ಯುತೇ–ಶ್ರೀಹರಿಯಲ್ಲಿ, ಕಿಂ ಚಿತ್ರಂ–ಏನಾಶ್ಚರ್ಯವು? (ಎಷ್ಟು ಮಾತ್ರವೂ ಆಶ್ಚರ್ಯವಲ್ಲ).

**ಯತ್ಕೃಪಾಲೇಶತಸ್ತ್ರಾತಂ ಪ್ರಹ್ಲಾದಂ ಕಿಲ ರಕ್ಷಸಾಂ ।**
**ಚಿಚ್ಛಿದುರ್ನಾಸ್ತ್ರಶಸ್ತ್ರಾಣಿ ಕಶ್ಛಿಂದ್ಯಾತ್ತಂ ಮಹಾಪ್ರಭುಂ ॥ ೩೩ ॥**

ಬೇರೊಂದು ಯುಕ್ತಿಯನ್ನು ತೋರಿಸುತ್ತಾರೆ :—

ಯತ್ಕೃಪಾಲೇಶತಃ – ಯಾವಾತನ ಕೃಪಾಂಶ ಮಾತ್ರದಿಂದ, ತ್ರಾತಂ – ರಕ್ಷಿತನಾದ, ಪ್ರಹ್ಲಾದಂ–ಪ್ರಹ್ಲಾದನನ್ನು, ರಕ್ಷಸಾಂ–ದೈತ್ಯರ, ಅಸ್ತ್ರಶಸ್ತ್ರಾಣಿ–ಅಸ್ತ್ರ, ಶಸ್ತ್ರಗಳು, ನ ಚಿಚ್ಛಿದುಃ–ಕತ್ತರಿಸಲಿಲ್ಲವೋ (ಯಾವ ಅಪಾಯವನ್ನು ಮಾಡಲಿಲ್ಲವೋ), ತಂ – ಆ, ಮಹಾಪ್ರಭುಂ – ಮಹಾಸ್ವಾಮಿಯನ್ನು, ಕಃ – ಯಾವಾತನು, ಛಿಂದ್ಯಾತ್–ಛೇದಿಸಲು ಶಕ್ತನಾದಾನು? (ಯಾರೂ ಸಮರ್ಥರಲ್ಲ); ಕಿಲ–(ಪ್ರಹ್ಲಾದನು ಶ್ರೀ ಹರಿಕೃಪೆಯಿಂದ ಅಚ್ಛೇದ್ಯ ದೇಹವುಳ್ಳವನಾಗಿದ್ದನೆಂಬುದು ಸರ್ವಜನ ಪ್ರಸಿದ್ಧವಾಗಿದೆ).

**ಸಂಧ್ಯರ್ಥಂ ಹಸ್ತಿನಪುರೀಂ ಪ್ರವಿಷ್ಟಂ ಕಿಲ ಕೌರವಾಃ ।**
**ನ ಬದ್ಧುಮಪಿ ಯಂ ಶೇಕುಃ ಕಶ್ಛಿಂದ್ಯಾತ್ತಂ ಮಹಾಪ್ರಭುಂ ॥ ೩೪ ॥**

ಪುನಃ ಬೇರೆ ಯುಕ್ತಿಯನ್ನೂ ನಿರೂಪಿಸುತ್ತಾರೆ :—

ಸಂಧ್ಯರ್ಥಂ–ಸಂಧಿಗಾಗಿ (ಕುರುಪಾಂಡವರಲ್ಲಿ ಸಂಧಿಯನ್ನು ಮಾಡಲು), ಹಸ್ತಿನಪುರೀಂ–ಹಸ್ತಿನಾವತೀ ಪಟ್ಟಣವನ್ನು, ಪ್ರವಿಷ್ಟಂ–ಪ್ರವೇಶಿಸಿದ, ಯಂ–

---

ರಾಕ್ಷಸರಿಂದ ಸಹ ಸಂಹರಿಸಲ್ಪಡದೇ ರಕ್ಷಿತನಾದನು; ಅಂಥ ಮಹಾಪ್ರಭುವನ್ನು (ಭಗವಂತನನ್ನು) ಯಾರೂ ಛೇದಿಸಲಾರರಷ್ಟೆ! (೩೩). ಶ್ರೀಕೃಷ್ಣನು ಕುರುಪಾಂಡವರಲ್ಲಿ ಸಂಧಿಮಾಡಿಸಿ, ಯುದ್ಧವನ್ನು ತಪ್ಪಿಸಲು, ಹಸ್ತಿನಾವತಿಗೆ ಹೋದಾಗ, ದುರ್ಯೋಧನಾದಿ ದುಷ್ಟರು, ಶ್ರೀಕೃಷ್ಣನನ್ನು ಬಂಧಿಸಲು

ಯಾವ (ವಿಶ್ವರೂಪಿಯಾದ ಶ್ರೀಕೃಷ್ಣ) ನನ್ನು, ಕೌರವಾಃ–ದುರ್ಯೋಧನಾದಿಗಳು, ಬದ್ಧುಂ–ಬಂಧಿಸಲು (ಪಾಶದಿಂದ ಕಟ್ಟಲು), ಅಪಿ–(ಪೂರ್ವಾಲೋಚನೆ ನಡೆಸಿಕೊಂಡು ಸಿದ್ಧರಾಗಿದ್ದರೂ), ನ ಶೇಕುಃ – ಸಮರ್ಥರಾಗಲಿಲ್ಲವೋ, ತಂ – ಆ, ಮಹಾಪ್ರಭುಂ–ಮಹಾಸ್ವಾಮಿಯನ್ನು, (ಹಿಂದೆ, ಮುಂದೆ, ಪಾರ್ಶ್ವ, ಮೇಲೆ ಕೆಳಗೆ, ಒಳಗೆ, ಹೊರಗೆ, ಸರ್ವತ್ರ, ಅಸ್ತ್ರಶಸ್ತ್ರಗಳಲ್ಲಿ ಸಹ ವಿದ್ಯಮಾನನಾದ ಭಗವಂತನನ್ನು), ಕಃ – ಯಾವಾತನು, ಭಿಂದ್ಯಾತ್ – ಭೇದಿಸಲು ಶಕ್ತನು? (ಸರ್ವರೂ ಅಶಕ್ತರೇ).

**ಅತೋಽಜ್ಞಜನಮೋಹಾಯ ನಟವದ್ದರ್ಶಯೇತ್ಪರಂ ।**
**ಸುಧಾದೃಷ್ಟ್ಯಾ ಮೃತಾಶೇಷಸ್ವಸೈನ್ಯೋಜ್ಜೀವನೈಕದಃ ॥ ೩೫ ॥**

ಪ್ರಮಾಣವಚನ ಸೂಚಿತ ಬೇರೊಂದು ಯುಕ್ತಿಯನ್ನು ತೋರಿಸಿ, ಉಕ್ತ ಪ್ರಮೇಯವನ್ನು ಉಪಸಂಹರಿಸುತ್ತಾರೆ :—

ಅತಃ–ಆದ್ದರಿಂದ (ಈ ಮೊದಲು ನಿರೂಪಿಸಿದ ಯುಕ್ತಿಗಳಿಂದ ಬಾಧಿತವಾದ್ದರಿಂದ), ಅಜ್ಞಜನಮೋಹಾಯ – ಅಜ್ಞಾನಿಗಳನ್ನು ಮೋಹಗೊಳಿಸಲು (ವಂಚಿಸಲು), ನಟವತ್–ನಟನಂತೆ (ಇಲ್ಲದುದನ್ನು ತೋರಿಸುವ ಐಂದ್ರಜಾಲಿಕನಂತೆ), ಪರಂ–ಅನ್ಯವಾದುದನ್ನೇ (ತನ್ನಲ್ಲಿ ಇಲ್ಲದುದನ್ನೇ), ದರ್ಶಯೇತ್–ತೋರಿಸುತ್ತಾನೆ; (ಪರಂ – ಮತ್ತೇನೆಂದರೆ), ಸುಧಾದೃಷ್ಟ್ಯಾ – ಅಮೃತವನ್ನು ಸುರಿಸುವ ತನ್ನ ನೋಟದಿಂದ (ಅಮೃತಸದೃಶ ದೃಷ್ಟಿಯಿಂದ), ಮೃತಾಶೇಷಸ್ವಸೈನ್ಯೋಜ್ಜೀವನೈಕದಃ–ಮೃತರಾದ ಸಕಲ ಸ್ವಸೈನ್ಯವನ್ನು (ಕಪಿಕಟಕವನ್ನು),

---

ಯತ್ನಿಸಿದರು – ಆದರೂ ಶಕ್ತರಾಗಲಿಲ್ಲ; ವಿಶ್ವರೂಪಿಯಾದ ಶ್ರೀಕೃಷ್ಣನನ್ನು ಬಂಧಿಸುವುದೆಂತು? ಸರ್ವತ್ರ ವಿದ್ಯಮಾನನಾದ ಶ್ರೀಕೃಷ್ಣನು ಶಸ್ತ್ರಾಸ್ತ್ರಗಳಲ್ಲಿ ಸಹ ಇರುತ್ತಿರಲು, ಆ ಶಸ್ತ್ರ ಮೊದಲಾದ್ದರಿಂದ ಆತನನ್ನು ಭೇದಿಸಬಹುದೇ? (ಸರ್ವಥಾ ಶಕ್ಯವಿಲ್ಲ) (೩೪). ಶ್ರೀಹರಿಯು, ಅಜ್ಞಜನಮೋಹನಕ್ಕಾಗಿ, (ತನ್ನ ನಿಜವನ್ನು ತಿಳಿಸದೇ ಅವರನ್ನು ವಂಚಿಸಲು), ನಟನಂತೆ, (ರಂಗಸ್ಥಲದಲ್ಲಿ ತನ್ನಲ್ಲಿಲ್ಲದ ಗುಣಗಳನ್ನು ತೋರುವಂತೆ) ಭೇದಾದಿಗಳುಳ್ಳವನಂತೆ ತೋರಿಸಿಕೊಳ್ಳುತ್ತಾನೆ; ವಾಸುದೇವ ಸಹಸ್ರನಾಮದಲ್ಲಿ ಶ್ರೀರಾಮನ ಪ್ರಸಕ್ತಿ ಬರಲು, ಮೃತರನ್ನು ಉಜ್ಜೀವಗೊಳಿಸುವ ಅಮೃತದಂತೆ ಸಮರ್ಥವಾದ, ತನ್ನ ಕೃಪಾದೃಷ್ಟಿ ಮಾತ್ರದಿಂದ,

ಉಜ್ಜೀವನಗೊಳಿಸಿ ಜೀವನಪ್ರದನಾದ ಶ್ರೀರಾಮನು,[1] (ಈತನು ಅನ್ಯರಿಂದ ಭೇದಾದಿ ಭಂಗವನ್ನು ಹೊಂದುವನೇ ? (ಸರ್ವಥಾ ಇಲ್ಲ.)

**ನಟೋ ನಾಟ್ಯಕೃತೇ ನಾರೀ ನಾರ್ಯೇವಾಜ್ಞಸ್ಯ ಕಿಂ ದೃಶಾ ॥ ೩೬ ॥**

'ನಟವತ್' ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದರ ವಿವೇಚನೆಯಿದು :—

ನಾಟ್ಯಕೃತೇ–ನರ್ತನಕ್ಕಾಗಿ (ವಿಡಂಬನೆಗಾಗಿ), ನಟಃ–ನಟನು, ನಾರೀ–ಸ್ತ್ರೀಯಾದರೆ (ವೇಷಧಾರಿಯಾದರೆ), ಅಜ್ಞಸ್ಯ–ಅಜ್ಞಾನಿಯ, ದೃಶಾ–ದೃಷ್ಟಿಯಿಂದ, ನಾರೀ ಏವ ಕಿಂ–ಸ್ತ್ರೀಯೇ ಆಗುವನೇನು ? (ಇಲ್ಲ) ; (ಹೀಗೆ ಶ್ರೀಹರಿಯ ಭೇದಾದಿ ಪ್ರದರ್ಶನವೂ ಎಂದು ತಿಳಿಯಬೇಕು).

---

ತನ್ನವರಾದ ಸಕಲ ಕಪಿಸಮೂಹವನ್ನು ಉಜ್ಜೀವಿಸುವ ಮಹಾಪ್ರಭುವೆಂದು, ನಿರೂಪಿಸಲ್ಪಟ್ಟಿರುವನು ; (ನೋಟದಿಂದ ಈ ಶಕ್ತಿಯುಳ್ಳವನು, ಅನ್ಯರಿಂದ ಸಂಹೃತನಾಗುವನೇ ? ಸರ್ವಥಾ ಇಲ್ಲ ; ಭೇದಭೇದಾದಿಗಳಿಗಂತೂ ಲೇಶವೂ ಅವಕಾಶವಿಲ್ಲ; ಮೃತರನ್ನು ಉಜ್ಜೀವಿಸುವಾತನು, ದೇಹಗತವ್ರಣಾದಿ (ಗಾಯಾದಿ) ಗಳನ್ನು ಪರಿಹರಿಸಲು ಅಶಕ್ತನೇ ? (೩೫). ನಟನೊಬ್ಬನು, ನರ್ತನಕ್ಕಾಗಿ ಸ್ತ್ರೀ ವೇಷವನ್ನು ಧರಿಸಿದರೆ, ಅಜ್ಞಾನಿಯ ದೃಷ್ಟಿಯಿಂದ (ತಿಳಿಯುವಂತೆ) ಆತನು ನಾರಿಯೇ ಆಗುವನೇನು ? (ಇಲ್ಲ) ; ಅದರಂತೆ ಶ್ರೀಹರಿಯೂ ಭೇದಭೇದಾದಿ ದೋಷಗಳನ್ನು ಪ್ರದರ್ಶಿಸುವನೆಂದು ತಿಳಿಯಬೇಕು (೩೬). ಕಣ್ಣು ಗಂಧವನ್ನು ಗ್ರಹಿಸಲಾರದು ; ಕಣ್ಣಿನಿಂದ ಕಂಡ ಪುಷ್ಪದಗಂಧಜ್ಞಾನವು ನಾಸಿಕವನ್ನಾಶ್ರಯಿಸಿ, ಉಂಟಾಗುವಂತೆ (ಕಣ್ಣು ತನಗೆ ಗಂಧ ವಿಷಯದಲ್ಲಿ ಆಶ್ರಯಭೂತವಾದ–ಉಪಜೀವ್ಯವಾದ ಘ್ರಾಣವನ್ನು ಅನುಸರಿಸುವಂತೆ–ಪೂರ್ವದಲ್ಲಿ ನಾಸಿಕದಿಂದಾದ ಗಂಧ ಜ್ಞಾನವನ್ನಾಶ್ರಯಿಸುವಂತೆ), ಶ್ರುತ್ಯುಕ್ತ ಅರ್ಥವನ್ನು ಗ್ರಹಿಸುವುದರಲ್ಲಿ, ಪ್ರತ್ಯಕ್ಷಾದಿ ಅನ್ಯಪ್ರಮಾಣಗಳು, ಶ್ರುತಿಯನ್ನೇ ಆಶ್ರಯಿಸುತ್ತವೆ ; ವೇದೈಕ ಸಮಧಿಗಮ್ಯನಾದ (ಶ್ರುತಿಮಾತ್ರದಿಂದ ತಿಳಿದು ನಿಶ್ಚಯಿಸಲ್ಪಡಲರ್ಹನಾದ)

---

[1] ಶ್ರೀರಾಮನ ಈ ಮಹಿಮೆಯು, ವಾಸುದೇವ ಸಹಸ್ರನಾಮದಲ್ಲಿ ಶ್ರೀರಾಮಾವತಾರ ಪ್ರಸ್ತಾವದಲ್ಲಿ ನಿರೂಪಿತವಾಗಿದೆ ; ದೃಷ್ಟಿ ಮಾತ್ರದಿಂದ ಮೃತರನ್ನು ಉಜ್ಜೀವನಗೊಳಿಸುವ ಮಹಿಮನನ್ನು ಭೇದಾದಿಗೊಳಪಡಿಸುವುದು ಅಶಕ್ಯವೇ ಸರಿ. 'ಸುಧಾದೃಷ್ಟ್ಯಾ ಮೃತಾಶೇಷ ಸ್ವಸೈನ್ಯೋಜ್ಜೀವನೈಕದಃ '—ಎಂಬುದು ಆತನ ನಾಮವೇ ಆಗಿದೆ.

**ಗಂಧಸ್ಯ ಜ್ಞಾಪನೇ ಚಕ್ಷುರ್ಘ್ರಾಣಾನುಸರಣಂ ಚರೇತ್ ।**
**ಉಪನೀತೋ ಯತೋ ಗಂಧಶ್ಚಕ್ಷುಷಾಪಿ ಪ್ರಕಾಶ್ಯತೇ ॥ ೩೭ ॥**

**ಶ್ರೌತಾರ್ಥಜ್ಞಾಪನೇ ಮಾನಾನ್ಯುಪಜೀವಂತಿ ಯಚ್ಛ್ರುತಿಂ ।**
**ಅತಃ ಶ್ರುತ್ಯೈಕಗಮ್ಯೇಽರ್ಥೇ ಶ್ರುತಿರೇವ ಬಲೀಯಸೀ ॥ ೩೮ ॥**

ಯೋಗಿ ಪ್ರತ್ಯಕ್ಷಾದಿಗಳಿಂದ ವಿರೋಧವನ್ನು ಹೇಳಿ, ಶ್ರೀಹರಿಗೆ ಭೇಧಾದಿ ದೋಷರಾಹಿತ್ಯವನ್ನು ಹೇಳಿ, ಸರ್ವಪ್ರಮಾಣಗಳಿಗೆ ಉಪಜೀವ್ಯವಾದ ವೇದ ವಿರೋಧದಿಂದ ಸಹ ವೇಧಾದಿಗಳ ಭ್ರಮತ್ವವನ್ನು ಸದೃಷ್ಟಾಂತವಾಗಿ ಸಾಧಿಸುತ್ತಾರೆ :—

ಗಂಧಸ್ಯ–(ಪೂರ್ವಾನುಭೂತವಾದ ಪುಷ್ಪದ) ಗಂಧದ, ಜ್ಞಾಪನೇ–ಜ್ಞಾನಕ್ಕಾಗಿ (ಜ್ಞಾನವಿಷಯದಲ್ಲಿ), ಚಕ್ಷುಃ–ಕಣ್ಣು, ಘ್ರಾಣಾನುಸರಣಂ–ಘ್ರಾಣವನ್ನು (ನಾಸಿಕದ ಆಶ್ರಯವನ್ನು), ಚರೇತ್–ಹೊಂದುತ್ತದೆ; (ಕಣ್ಣಿನಿಂದ ಗಂಧವು ಗ್ರಾಹ್ಯವಲ್ಲ); (ತನಗೆ ಯೋಗ್ಯವಲ್ಲದ ಗಂಧಜ್ಞಾನಕ್ಕಾಗಿ ಕಣ್ಣು, ಘ್ರಾಣವನ್ನು ಆಶ್ರಯಿಸುವಂತೆ), ಯತಃ–ಯಾವ ಕಾರಣದಿಂದ, ಉಪನೀತಃ–ಗ್ರಹಿಸಲ್ಪಟ್ಟ, ಗಂಧಃ–ಗಂಧವು, ಚಕ್ಷುಷಾ ಅಪಿ–ಕಣ್ಣಿನಿಂದ ಸಹ, ಪ್ರಕಾಶ್ಯತೇ–ತಿಳಿಯಲ್ಪಟ್ಟು, ಪ್ರಕಟವಾಗುವುದೋ ; (ಹಾಗೆಯೇ), ಯತ್–ಯಾವಕಾರಣದಿಂದ, ಶ್ರೌತಾರ್ಥಜ್ಞಾಪನೇ – ಶ್ರುತ್ಯರ್ಥಜ್ಞಾನ ವಿಷಯದಲ್ಲಿ, ಮಾನಾನಿ – (ಅನ್ಯ ಪ್ರತ್ಯಕ್ಷಾದಿ) ಪ್ರಮಾಣಗಳು, ಶ್ರುತಿಂ–ಶ್ರುತಿಯನ್ನು, ಉಪಜೀವ್ಯಂತಿ–ಆಶ್ರಯಿಸುತ್ತವೆಯೋ (ಶ್ರುತಿಯಿಂದ ಮಾತ್ರ ಸಮಧಿಗನ್ಯನಾದ – ನಿಶ್ಚಯವಾಗಿ ತಿಳಿಯಲ್ಪಡುವ,

---

ಭಗವಂತನನ್ನು ತಿಳಿಯಲು, ಪ್ರತ್ಯಕ್ಷಾದಿ ಅನ್ಯಪ್ರಮಾಣಗಳು[1] ಶ್ರುತಿಯನ್ನೇ ಉಪಜೀವಿಸುತ್ತವೆ ; ಆದ್ದರಿಂದ ಭಗವದ್ವಿಷಯದಲ್ಲಿ ಶ್ರುತಿಯೇ ಪ್ರಬಲವು–ಅದರ ವಿರೋಧವಿದ್ದರೆ, ಪ್ರತ್ಯಕ್ಷಾದಿಗಳು ಪ್ರಮಾಣಗಳಲ್ಲ (೩೭–೩೮). ನಿರನಿಷ್ಟೋ ನಿರವದ್ಯಃ ಇತ್ಯಾದಿ ಶ್ರುತಿವಿರುದ್ಧವಾದ, ಪ್ರತ್ಯಕ್ಷ ಅನುಮಾನಾದಿಗಳು, ಶ್ರುತಿ ವಿರೋಧವಾದ್ದರಿಂದಲೇ (ಆಶ್ರಯವಾದ–ಉಪಜೀವ್ಯವಾದ ವೇದವಿರುದ್ಧವನ್ನು ಹೇಳುವುದರಿಂದ, ಪ್ರಮಾಣಗಳಾಗುವುದಿಲ್ಲ ; ತಮ್ಮ ಅರ್ಥವನ್ನು ಸಾಧಿಸ

---

[1] ಸ್ಮೃತಿಗಳು ಹೇಳುವ ವಿಷಯಗಳೂ, ವೇದಾನುಸಾರಿಯಾಗಿದ್ದರೆ ಮಾತ್ರ ಪ್ರಮಾಣವು—ಅನ್ಯಥಾ ಅಲ್ಲ ; ಅವೂ ತ್ಯಾಜ್ಯಗಳೇ ಆಗುತ್ತವೆ.

ಭಗವಂತನ ಜ್ಞಾನವು, ಪ್ರತ್ಯಕ್ಷಾನುಮಾನಗಳಿಂದಲೂ ಸಾಧಿಸಬಹುದಾದರೂ, ಜ್ಞಾನನಿಶ್ಚಯಕ್ಕೆ ಶ್ರುತಿಯೇ ಅವಶ್ಯಕವೋ), ಅತಃ–ಆ ಕಾರಣದಿಂದ, ಶ್ರುತ್ಯೈಕ-ಗಮ್ಯೇ–ಶ್ರುತಿಯಿಂದ ಮಾತ್ರಜ್ಞೇಯವಾದ, ಅರ್ಥೇ–ಅರ್ಥವಿಷಯದಲ್ಲಿ (ವಸ್ತುವಿಷಯದಲ್ಲಿ), ಶ್ರುತಿಃ ಏವ–ಶ್ರುತಿಯೇ, ಬಲೀಯಸೀ–ಪ್ರಬಲವು (ಪ್ರಮಾಣವು).

**ತದ್ವಿರುದ್ಧಂ ತು ಯನ್ಮಾನಮುಪಜೀವ್ಯವಿರೋಧತಃ ।**
**ನ ಸ್ವಾರ್ಥಸಾಧಕಂ ತಸ್ಮಾದಜ್ಞದೃಂಗ್ನೇಶದೋಷದೃಕ್ ॥ ೩೯ ॥**

ತದ್ವಿರುದ್ಧಂ–('ನಿರನಿಷ್ಟೋ ನಿರವದ್ಯಃ' ಇತ್ಯಾದಿ) ವೇದ ವಿರುದ್ಧವಾದ, ಮಾನಂ–ಪ್ರತ್ಯಕ್ಷಾದಿ ಪ್ರಮಾಣವು, ಯತ್–ಯಾವ ಕಾರಣದಿಂದ, ಉಪಜೀವ್ಯ ವಿರೋಧತಃ–ಮುಖ್ಯಾಧಾರ (ಆಶ್ರಯ) ವಾದ ಶ್ರುತಿವಿರೋಧದಿಂದ, ನ ಸ್ವಾರ್ಥ-ಸಾಧಕಂ–ತನ್ನ ಅರ್ಥವನ್ನು ಸಾಧಿಸಲು ಅಸಮರ್ಥವೋ, ತಸ್ಮಾತ್–ಅದರಿಂದ, ಅಜ್ಞದೃಕ್–ಅಜ್ಞಾನಿಗಳ ವೇಧಾದಿಪ್ರತ್ಯಕ್ಷವು, ಈಶದೋಷದೃಕ್–ಪರಮಾತ್ಮನಿಗೆ ದೋಷವನ್ನು ಸಾಧಿಸುವುದಲ್ಲ ; (ಪ್ರತ್ಯಕ್ಷವಲ್ಲ).

**ನ ಹಿ ಮಂದದೃಶಾಂ ದೃಷ್ಟ್ಯಾ ರತ್ನಸ್ಯಾನರ್ಘತಾ ಗತಾ ।**
**ಕಿಂತು ಮಂದೈವ ದೃಗ್ರತ್ನಪರೀಕ್ಷಾ ಶಾಸ್ತ್ರತೋ ಭವೇತ್ ॥ ೪೦ ॥**

ಉಕ್ತಾರ್ಥದಲ್ಲಿ (ಉಪಜೀವ್ಯ ವಿರೋಧವಿರುವಲ್ಲಿ ಪ್ರತ್ಯಕ್ಷದ ಅಪ್ರಾಮಾಣ್ಯವನ್ನು ಹೇಳಿ, ಈಗ) ಅಂತರಂಗ ದೃಷ್ಟಾಂತವನ್ನು ಹೇಳುತ್ತಾರೆ :—

ಮಂದದೃಶಾಂ–ರತ್ನಪರೀಕ್ಷಾ ಶಾಸ್ತ್ರಜ್ಞಾನವಿಲ್ಲದವರ, ದೃಷ್ಟ್ಯಾ–ದೃಷ್ಟಿಯಿಂದ, ರತ್ನಸ್ಯ–ರತ್ನದ, ಅನರ್ಘತಾ–(ಶಿಲಾಮಾತ್ರವೆಂಬ ಅಜ್ಞದೃಷ್ಟಿಯಿಂದ) ಅಮೂಲ್ಯತ್ವವು (ಬಹುಬೆಲೆಯುಳ್ಳದ್ದೆಂಬುದು), ಗತಾ ನ ಹಿ – ಹೋಗಲಿಲ್ಲವಷ್ಟೆ (ಅದು ಅನರ್ಘ್ಯವಾಗಿಯೇ ಇರುತ್ತದೆಯಷ್ಟೆ) ; ಕಿಂತು–ಮತ್ತೇನೆಂದರೆ (ಇದರಿಂದ

---

ಲಾರವು ; ಆದ್ದರಿಂದ ಅಜ್ಞಾನಿಗಳ ಪ್ರತ್ಯಕ್ಷವು (ಶ್ರೀಹರಿಯು ಭೇದಾದಿಗಳುಳ್ಳವನೆಂಬ ಪ್ರತ್ಯಕ್ಷವು) ಪರಮಾತ್ಮನಿಗೆ ದೋಷವನ್ನು ಸಾಧಿಸಲಾರದು (೩೯). ರತ್ನಪರೀಕ್ಷಾವಿದ್ಯೆಯನ್ನು ಅರಿಯದ ಅಜ್ಞನು, ರತ್ನವನ್ನು ನೋಡಿ, ಕಲ್ಲೆಂದರೆ, ರತ್ನದ ಅಮೂಲ್ಯತ್ವವು ಕಳೆದುಹೋಗುವುದೇ (ಬೆಲೆಯಿಲ್ಲದ ಸಾಮಾನ್ಯ ಶಿಲೆಯಾಗುವುದೇ ? – ಇಲ್ಲ) ; ಕಿಂತು, ಆತನ ರತ್ನಪರೀಕ್ಷಾವಿದ್ಯೆಯ ಬೆಲೆಯೇ

ಬೇರೇನು ಸಿದ್ಧವಾಗುತ್ತದೆಂದರೆ), ರತ್ನಪರೀಕ್ಷಾಶಾಸ್ತ್ರತಃ–ರತ್ನಪರೀಕ್ಷಾಶಾಸ್ತ್ರದ ದೆಶೆಯಿಂದ (ಆ ಶಾಸ್ತ್ರಕ್ಕಿಂತ), ದೃಕ್–(ಅಜ್ಞಾನಿಯ, ಅದರ) ಜ್ಞಾನವೇ, ಮಂದಾ ಏವ–ಅಲ್ಪವಾದುದು (ಹೀನವಾದುದು), ಭವೇತ್–ಆಗುತ್ತದೆ (ರತ್ನದ ಬೆಲೆಯು ಕಡಿಮೆಯಾಗುವುದಿಲ್ಲ; ಪರೀಕ್ಷಕನು ಜ್ಞಾನದ ಬೆಲೆಯೇ ಹೀನನೆಂದು ಸಿದ್ಧವಾಗುತ್ತದೆ).

**ಶ್ರುತಿಸ್ತು ನಿರನಿಷ್ಟೋಽಸೌ ನಿರವದ್ಯ ಇತಿ ಪ್ರಭುಂ ।**
**ಸ್ಪಷ್ಟಮಾಚಷ್ಟ ತತ್ಕಷ್ಟಂ ದ್ರಷ್ಟುಮೀಷ್ಟೇ ಕ ಈಶಿತುಃ ॥ ೪೧ ॥**

ಉಪಜೀವ್ಯ ಶ್ರುತಿವಾಕ್ಯವನ್ನು ಸ್ಪಷ್ಟವಾಗಿ ಹೇಳುತ್ತಾರೆ:—

ಶ್ರುತಿಸ್ತು–ಶ್ರುತಿಯಾದರೋ, ಅಸೌ–ಈ ಭಗವಂತನು, ನಿರನಿಷ್ಟಃ–ಅನಿಷ್ಟವಿಲ್ಲದವನು, (ಇಷ್ಟವಲ್ಲದ ಅನುಭವವನ್ನು ಎಂದೂ ಹೊಂದುವನಲ್ಲ); ನಿರವದ್ಯಃ–ದೋಷರಹಿತನು; ಇತಿ–ಎಂದು, ಪ್ರಭುಂ–ಶ್ರೀಹರಿಯನ್ನು, ಸ್ಪಷ್ಟಂ–ಸ್ಪಷ್ಟವಾದ (ಅನ್ಯಾರ್ಥಕ್ಕೆ ಅವಕಾಶವಿಲ್ಲದ) ಶಬ್ದಗಳಿಂದ, ಆಚಷ್ಟ–ಹೇಳಿತು; ಕಃ–ಯಾವ ಪುರುಷನು, ಕಷ್ಟಂ–(ವೇಧಾದಿರೂಪದ) ಅನಿಷ್ಟವನ್ನು, ದ್ರಷ್ಟುಂ–ಕಾಣಲು (ಪ್ರತ್ಯಕ್ಷಾದಿಗಳಿಂದ ತಿಳಿಯಲು), ಈಷ್ಟೇ–ಸಮರ್ಥವಾಗುತ್ತಾನೆ? (ಯಾವನೂ ಆಗುವುದಿಲ್ಲ).

**ನ ಕರ್ಮಣಾ ವರ್ಧತೇ ಯೋ ನೋಽಕನೀಯಾನ್ ಪರಃ ಪ್ರಭುಃ ।**
**ನ ಭೂತ್ಯೈ ನಾಂಹಸೋ ಹತ್ಯೈ ತಸ್ಯ ಯಾತ್ರಾ ಶಿವಾರ್ಚನಂ ॥೪೨॥**

ಪುತ್ರಾರ್ಥಿಯಾಗಿ ಶ್ರೀಕೃಷ್ಣನು ಕೈಲಾಸಯಾತ್ರೆಯನ್ನು ಕೈಗೊಂಡ ನೆಂಬುದೂ, ಶ್ರೀರಾಮನು ಶಿವಲಿಂಗ ಪ್ರತಿಷ್ಠೆಮಾಡಿ (ಬ್ರಹ್ಮಹತ್ಯಾ ಪರಿಹಾರ

---

ಕಡಿಮೆಯಾಗುವುದಲ್ಲವೇ? (೪೦). ಶ್ರುತಿಯಾದರೋ 'ನಿರನಿಷ್ಟೋ ನಿರವದ್ಯಃ' ಎಂದು ಸ್ಪಷ್ಟವಾಗಿ, ಯಾವ ಅನಿಷ್ಟವಾಗಲಿ (ಅಪ್ರಿಯವಾದ ಅನುಭವವುಳ್ಳವನಾಗಲಿ) ಛೇದಭೇದಾದಿ ದೋಷವುಳ್ಳವನಾಗಲಿ, ಅಲ್ಲವೆಂದು ಘೋಷಿಸುತ್ತದೆ; ಹೀಗಿದ್ದೂ ಯಾವ ಪುರುಷನು, ಅನ್ಯಪ್ರಮಾಣವನ್ನಾಶ್ರಯಿಸಿ, ಭಗವಂತನಲ್ಲಿ ದುಃಖಾದಿದೋಷಗಳನ್ನು ಕಂಡಾನು? (ಕಾಣಲು ಸಮರ್ಥನಾಗುವುದಿಲ್ಲ) (೪೧). 'ನ ಕರ್ಮಣಾ ವರ್ಧತೇ ನೋಽಕನೀಯಾನ್' ಎಂಬ ಶ್ರುತಿಯು ಪುಣ್ಯ ಪಾಪ ರೂಪ ಕರ್ಮಗಳಿಂದ ಭಗವಂತನು ವೃದ್ಧಿಹ್ರಾಸಗಳನ್ನು ಹೊಂದುವುದಿಲ್ಲವೆಂದು

ಕ್ಕಾಗಿ) ದನೆಂಬುದೂ ಅವರ ನೀಚತ್ವವನ್ನು (ದೋಷವನ್ನು) ಸಾಧಿಸುವುದಿಲ್ಲವೆಂದು ತೋರಿಸುತ್ತಾರೆ :—

ಯಃ—ಯಾವ, ಪರಃ – ಸರ್ವೋತ್ತಮನಾದ, ಪ್ರಭುಃ – ಸ್ವಾಮಿಯು, ನ ಕರ್ಮಣಾ ವರ್ಧತೇ—' ನ ಕರ್ಮಣಾ ವರ್ಧತೇ ' (ಎಂಬ ಶ್ರುತಿಯು) ' ಪುಣ್ಯಕರ್ಮದಿಂದ ವೃದ್ಧಿಹೊಂದುವುದಿಲ್ಲ ' ನೋಕನೀಯಾನ್—(ಪಾಪ ಕರ್ಮದಿಂದ) ಕೃಶನೂ (ನೀಚನೂ) ಆಗುವುದಿಲ್ಲವೋ (ಪುಣ್ಯಪಾಪಗಳಿಂದ ವೃದ್ಧಿಹ್ರಾಸಗಳಿಲ್ಲದವನೆಂದು ತಿಳಿದುಬರುವನೋ), ತಸ್ಯ—ಆತನ (ಶ್ರೀಕೃಷ್ಣ ರಾಮರೂಪಿಯಾದ ಶ್ರೀಹರಿಯ), ಯಾತ್ರಾ—ಕೈಲಾಸಯಾತ್ರೆಯು, ಭೂತ್ಯೈ—ಪುತ್ರಾದಿ ಐಶ್ವರ್ಯ ಪ್ರಾಪ್ತಿಗಾಗಿ, ನ – ಅಲ್ಲವು ; ಶಿವಾರ್ಚನಂ – ಲಿಂಗಾರ್ಚನೆಯು, ಅಂಹಸಃ – ಬ್ರಹ್ಮಹತ್ಯಾರೂಪ ಪಾಪದ, ಹತ್ಯೈ—ನಾಶಕ್ಕಾಗಿ (ಪರಿಹಾರಕ್ಕಾಗಿ), ನ—ಅಲ್ಲವು (ಆದ್ದರಿಂದ ಮನುಷ್ಯಾವತಾರದಲ್ಲಿ ಮನುಷ್ಯರಂತೆ ನಟನೆಯೆಂದೇ ಅರ್ಥ).

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೪೩ ॥**

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಗೀತಾವಚನತಃ ಸಮಾಧತ್ಸ್ವ ಮನಃ ಸದಾ ॥ ೪೪ ॥**

ಉಕ್ತಾರ್ಥವನ್ನು ಗೀತಾವಾಕ್ಯದಿಂದಲೂ ಸಮರ್ಥಿಸುತ್ತಾರೆ :—

ತ್ರಿಷು ಲೋಕೇಷು—ಮೂರು ಲೋಕಗಳಲ್ಲಿ (ಸಕಲಜಗತ್ತಿನಲ್ಲಿ), ಪಾರ್ಥ—ಹೇ ಅರ್ಜುನ! ಮೇ—ನನಗೆ (ಶ್ರೀಕೃಷ್ಣನಿಗೆ), ಕಿಂಚನ—ಯಾವುದೊಂದು, ಕರ್ತವ್ಯಂ—ಅವಶ್ಯ (ನನಗಾಗಿ) ಮಾಡಬೇಕಾದ ಕರ್ಮವು, (ಕೈಲಾಸಯಾತ್ರಾದಿ

---

ಹೇಳುತ್ತದೆ ; ಶ್ರೀಕೃಷ್ಣನು ಕೈಲಾಸಯಾತ್ರೆಯನ್ನು ಮಾಡಿದುದು, ಪುತ್ರಾದಿ ಐಶ್ವರ್ಯ ಪ್ರಾಪ್ತಿಗಾಗಿ ಅಲ್ಲ ಮತ್ತು ಶ್ರೀರಾಮನು, (ರಾಮೇಶ್ವರದಲ್ಲಿ) ಲಿಂಗ ಪೂಜೆಯನ್ನು (ಶಿವಾರ್ಚನೆಯನ್ನು) ಮಾಡಿದುದು, (ರಾವಣ ಹತ್ಯೆಯಿಂದ ಬಂದುದೆಂಬ) ಬ್ರಹ್ಮಹತ್ಯಾ ದೋಷಪರಿಹಾರಕ್ಕಾಗಿಯೂ ಅಲ್ಲವೆಂದೂ ಈ ಶ್ರುತಿಯಿಂದಲೇ ಸಿದ್ಧವಾಗುತ್ತದೆ (೪೨). ಶ್ರೀಕೃಷ್ಣನೇ ಅರ್ಜುನನಿಗೆ ಗೀತೆಯಲ್ಲಿ, ' ಹೇ ಪಾರ್ಥ ! ಜಗತ್ತಿನಲ್ಲಿ ನಾನು ನನಗಾಗಿ ಮಾಡಬೇಕಾದ ಯಾವ ಕರ್ತವ್ಯವೂ

ಯಾವ ಕರ್ಮವೂ), ನ ಅಸ್ತಿ–ಇರುವುದಿಲ್ಲ; (ಏಕೆಂದರೆ) ಅನವಾಪ್ತಂ–ಈವರೆಗೆ ದೊರೆಯದುದು ಅವಾಪ್ತವ್ಯಂ – ಮುಂದೆ ದೊರೆಯಬೇಕಾದುದು (ಕಿಂಚನ–ಯಾವುದೊಂದು ಪ್ರಯೋಜನವೂ, ನಾಸ್ತಿ ಏವ–ಇಲ್ಲವೇ ಇಲ್ಲ); (ಹೀಗಿದ್ದರೂ ಲೋಕಸಂಗ್ರಹಕ್ಕಾಗಿ),[1] ಕರ್ಮಣಿ–ಕರ್ಮಾಚರಣೆಯಲ್ಲಿ (ಕೈಲಾಸಯಾತ್ರಾ, ಸ್ಯಮಂತಪಂಚಕ ಕ್ಷೇತ್ರಕ್ಕೆ ಸೂರ್ಯಗ್ರಹಣಕ್ಕಾಗಿ ಯಾತ್ರಾ, ದೇವಋಷಿ ತರ್ಪಣಾದಿ ಕರ್ಮಗಳಲ್ಲಿ), ವರ್ತೇ ಏವ–ಇದ್ದೇ (ತೊಡಗಿಯೇ) ಇರುತ್ತೇನೆ; ಮಾಂ – ನನ್ನನ್ನು, ಕರ್ಮಾಣಿ – ಕರ್ಮಗಳು, ನ ಲಿಂಪಂತಿ – ಲೇಪಿಸುವುದಿಲ್ಲ, ಮೇ–ನನಗೆ, ಕರ್ಮಫಲೇ–ಕರ್ಮಗಳ ಫಲದಲ್ಲಿ, ಸ್ಪೃಹಾ–ಇಚ್ಛೆಯು (ಆಶೆಯು), ನ–ಇರುವುದಿಲ್ಲ; ಇತಿ–ಹೀಗೆಂಬ, ಗೀತಾವಚನತಃ–ಗೀತೆಯಲ್ಲಿನ (ಶ್ರೀಕೃಷ್ಣನ) ಮಾತುಗಳಿಂದ, ಮನಃ – ಮನಸ್ಸನ್ನು, ಸದಾ – ಸರ್ವದಾ, ಸಮಾಧತ್ಸ್ವ–ಸಮಾಹಿತವನ್ನಾಗಿ ಮಾಡಿಕೊಳ್ಳು (ಶ್ರೀಹರಿಯು ನಿರ್ದೋಷಿಯೆಂಬ ನಿಶ್ಚಯವನ್ನು ಹೊಂದಿ ಸ್ವಸ್ಥಚಿತ್ತನಾಗು).

**ಈಜೇ ಚ ಭಗವಾನ್ರಾಮೋ ಯತ್ರಾಸ್ಪೃಷ್ಟೋಽಪಿ ಕರ್ಮಣಾ ।**
**ಲೋಕಸ್ಯ ಸಂಗ್ರಹಾಯೇಶೋ ಯಥಾನ್ಯೋಽಘಾಪನುತ್ತಯೇ ।**
**ಇತಿ ಭಾಗವತೋಕ್ತ್ಯಾ ಚ ಸ್ವಸ್ಥಚಿತ್ತಃ ಸದಾ ಭವ ॥ ೪೫ ॥**

ಇದೇ ವಿಷಯಕ್ಕೆ ಭಾಗವತ ವಚನವನ್ನು ಹೇಳುತ್ತಾರೆ:—

ಇಲ್ಲ; ಹಿಂದೆ ದೊರೆಯದ, ಮುಂದೆ ದೊರೆಯಬೇಕಾದ ಯಾವ ಪ್ರಯೋಜನವೂ ನನಗೆ ಇರುವುದಿಲ್ಲ; ಯಾವ ಕರ್ಮಗಳೂ ನನ್ನನ್ನು ಲೇಪಿಸುವುದಿಲ್ಲ – ನನಗೆ ಕರ್ಮಫಲಾಶೆಯೂ ಇಲ್ಲ' ಎಂದಿರುವನು; ಈ ನುಡಿಗಳೂ (ಗೀತೋಕ್ತ ಶ್ರೀಕೃಷ್ಣನ ವಾಕ್ಯಗಳೂ), ಇದೇ ಅರ್ಥವನ್ನೇ ಸಮರ್ಥಿಸುತ್ತದೆ; ಆದ್ದರಿಂದ ಶ್ರೀಹರಿಯು (ಪರಮಾತ್ಮನು) ಸರ್ವದಾ ದೋಷದೂರನೆಂಬ ನಿಶ್ಚಯವನ್ನು ಹೊಂದಿ, ಸ್ವಸ್ಥ ಚಿತ್ತನಾಗಿರಬೇಕು (೪೩–೪೪). ಕರ್ಮಗಳ ಲೇಪವೇ ಇಲ್ಲದ ಭಗವಾನ್ ಪರಶುರಾಮದೇವನೂ, ಸಹ ಕ್ಷತ್ರಿಯ ಸಂಹಾರರೂಪದ ಪಾಪಮಾರ್ಜನೆಗೆಂಬಂತೆ,

[1] 'ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ' ಇತ್ಯಾದಿ ಮುಂದಿನ ವಾಕ್ಯಗಳಿಂದ ಶ್ರೀಕೃಷ್ಣನ ಕರ್ಮಾಚರಣೆಯು ಕೇವಲ ಲೋಕಶಿಕ್ಷಾರ್ಥವೆಂಬುದು ಸ್ಪಷ್ಟವಾಗಿದೆ.

*

ಕರ್ಮಣಾ – ಕರ್ಮದಿಂದ, ಅಸ್ಪೃಷ್ಟಃ ಅಪಿ – ಲೇಪವಿಲ್ಲದವನಾದರೂ, ಭಗವಾನ್ ರಾಮಃ–ಭಗವದವತಾರನಾದ ಶ್ರೀ ಪರಶುರಾಮದೇವನು, ಯತ್ರ–ಸ್ಯಮಂತಪಂಚಕ ಕ್ಷೇತ್ರದಲ್ಲಿ, ಲೋಕಸ್ಯ–ಲೋಕದ, ಸಂಗ್ರಹಾಯ–ಶಿಕ್ಷಾರ್ಥವಾಗಿ, ಅನ್ಯಃ–ಅನ್ಯರು (ಮನುಷ್ಯ ಮೊದಲಾದವರು), ಅಘಾಪನುತ್ತಯೇ–ಪಾಪಪರಿಹಾರಕ್ಕಾಗಿ, ಯಥಾ – ಹೇಗೋ, (ಹಾಗೆ), ಈಶಃ – ಸ್ವಾಮಿಯು (ಸರ್ವನಿಯಾಮಕನಾದ ತಾನು), ಈಜೇಚ–ಯಜ್ಞವನ್ನೇ ಆಚರಿಸಿದನು ; ಇತಿ–ಹೀಗೆಂಬ, ಭಾಗವತೋಕ್ತ್ಯಾ ಚ–ಭಾಗವತ ಪ್ರಮಾಣದಿಂದ ಸಹ, ಸದಾ–ಸರ್ವದಾ, ಸ್ವಸ್ಥಚಿತ್ತಃ–ಸ್ಥಿರಬುದ್ಧಿಯುಳ್ಳವನು, (ದೋಷದೂರನೆಂಬ ನಿಶ್ಚಯವುಳ್ಳವನು), ಭವ–ಆಗು.

**ಅಥಾಪಿ ಭಗವದ್ದೋಷಂ ವೃಥಾ ಯೋ ಮನುತೇ ನರಃ ।**
**ತಂ ದೋಷೇಷುಃ ಶಿಲಾಕ್ಷಿಪ್ತದಾರುಪ್ರೋತಶರೋಪಮಃ ।**
**ಶ್ರುತ್ಯಾಕೃಷ್ಟಗುಣೋತ್ಸೃಷ್ಟೋಽರ್ಧಾನುಷ್ಕಮನುಧಾವತಿ ॥ ೪೬ ॥**

**ತಸ್ಮಾತ್ ಸ್ವಮೂಲರೂಪೇ ಚ ಸ್ವಾವತಾರೇಷು ಚ ಪ್ರಭುಃ ।**
**ಅವದ್ಯಗಂಧವಿಧುರಃ ಇತಿ ಸರ್ವಂ ಮನೋರಮಂ ॥ ೪೭ ॥**

ಅಥಾಪಿ–ಹೀಗಿದ್ದರೂ (ಶ್ರುತಿ, ಸ್ಮೃತಿಯುಕ್ತಿ, ಪ್ರತ್ಯಕ್ಷಗಳೆಂಬ ಮೂರು ಪ್ರಮಾಣಗಳಿಂದ ನಿರ್ದೋಷತ್ವವು ಸಿದ್ಧವಾದರೂ), ಯಃ ನರಃ – ಯಾವ

---

ಲೋಕಸಂಗ್ರಹಕ್ಕಾಗಿ, ಸ್ಯಮಂತಪಂಚಕವೆಂಬ ಕ್ಷೇತ್ರದಲ್ಲಿ, ಮನುಷ್ಯಸಾಮಾನ್ಯರು ಹೇಗೋ ಹಾಗೆ, ಯಜ್ಞವನ್ನು ಆಚರಿಸಿದನೆಂದು ಶ್ರೀಭಾಗವತದಲ್ಲಿಯೂ ಉಕ್ತವಾಗಿದೆ; ಈ ಪ್ರಮಾಣದಿಂದ ಸಹ ಸಿದ್ಧವಾಗುವ ಭಗವಂತನ ನಿರ್ದೋಷತ್ವ ವಿಷಯದಲ್ಲಿ ಯಾವ ಸಂಶಯವೂ ಇಲ್ಲದಂತೆ ಸ್ವಸ್ಥಚಿತ್ತನಾಗಬೇಕು (೪೫). ಹೀಗೆ ಶ್ರುತಿ, ಸ್ಮೃತಿ, ಯುಕ್ತಿ ಪ್ರತ್ಯಕ್ಷಾದಿಗಳಿಂದ ಸಹ ಸಮರ್ಥಿಸಲ್ಪಡುವ ಭಗವಂತನ ದೋಷದೂರತ್ವವನ್ನು ತಿಳಿದೂ, ಯಾವ ಪ್ರಮಾಣವೂ ಇಲ್ಲದೇ ಭಗವಂತನಿಗೆ ದೋಷವುಂಟೆಂದು ತಿಳಿಯುವ ಮನುಷ್ಯನು, ಅಂಧತಮಸ್ಸನ್ನೇ ಹೊಂದುತ್ತಾನೆ; ಆಕರ್ಣ ಸೆಳೆದು ಬಿಡಲ್ಪಟ್ಟ ಬಾಣವು ಪರನನ್ನು ಭೇದಿಸುವ ಶಕ್ತಿಯಿಲ್ಲದ ಮರದ ತುಂಡಿನಂತೆ, ದೊಡ್ಡ ಕಲ್ಲುಬಂಡೆ

ಮನುಷ್ಯನು, ವೃಥಾ – ವ್ಯರ್ಥವಾಗಿ (ಪ್ರಮಾಣವಿಲ್ಲದೇ) ಭಗವದ್ದೋಷಂ – ಭಗವಂತನಿಗೆ ದೋಷವನ್ನು, ಮನುತೇ–ತಿಳಿಯುವನೋ, ತಂ–ಆ ಪುರುಷನನ್ನು (ದೋಷಿಯೆಂದು ತಿಳಿಯುವವನನ್ನು), ದೋಷೇಷುಃ–ದೋಷವೆಂಬ ಬಾಣವು, ಶಿಲಾಕ್ಷಿಪ್ತದಾರುಪ್ರೋತಶರೋಪಮಃ – ಕಲ್ಲು ಬಂಡೆಯಲ್ಲಿ ಪ್ರಯೋಗಿಸಲಾದ, ತುದಿಯಲ್ಲಿ ಕಟ್ಟಿಗೆಯುಳ್ಳ (ಮರದ ತುದಿಯುಳ್ಳ) ಬಾಣಸದೃಶವಾಗಿ, (ಉಕ್ಕಿನ ಬಾಣದಂತೆ ಪರದೇಹವನ್ನು ಸೀಳುವ ಶಕ್ತಿಯಿಲ್ಲದ್ದರಿಂದ 'ದಾರುಪ್ರೋತ' ವೆಂದಿರುವರು), ಶ್ರುತ್ಯಾಕೃಷ್ಟಗುಣೋತ್ಸೃಷ್ಟೇಃ–(ಶ್ರುತಿಸಿದ್ಧಗಳಾದ ಶ್ರೀಹರಿಯ ಅಚ್ಛೇದ್ಯತ್ವ ಅವೇಧ್ಯತ್ವಾದಿ ಗುಣಗಳನ್ನು ಪರಿತ್ಯಾಗ ಮಾಡಿರುವುದರಿಂದ) ಕರ್ಣಪರ್ಯಂತ ಎಳೆದುಬಿಟ್ಟ (ಧನುಸ್ಸಿನ ಹಗ್ಗವನ್ನೆಳೆದುಬಿಟ್ಟ) ಶರವಾದ್ದರಿಂದ, ಧಾನುಷ್ಕಂ–ಧನುರ್ಧಾರಿ ಪುರುಷನನ್ನೇ, (ಕಲ್ಲುಬಂಡೆಯಿಂದ ಹಿಂದಿರುಗಿ ಬಂದು ಧಾನುಷ್ಕನನ್ನೇ), ಅನುಧಾವತಿ–ಸೇರುತ್ತದೆ (ಬಡಿಯುತ್ತದೆ) ; *(ದೋಷವೆಂಬ ಬಾಣವು ಅದನ್ನು ಪ್ರಯೋಗಿಸಿದ ಮನುಷ್ಯನಿಗೇ ಬಡಿದು, ಆತನನ್ನು ತಮಸ್ಸಿನಲ್ಲಿ ಹಾಕುತ್ತದೆಂದು ಭಾವ) ; ತಸ್ಮಾತ್–ಆದ್ದರಿಂದ, ಸ್ವಮೂಲರೂಪೇ ಚ–ತನ್ನ ಮೂಲರೂಪದಲ್ಲಿಯೂ, ಚ–ಮತ್ತು, ಸ್ವಾವತಾರೇಷು–ತನ್ನ ಅವತಾರ ರೂಪಗಳಲ್ಲಿಯೂ, ಪ್ರಭುಃ–ಮಹಾಸ್ವಾಮಿಯು, ಅವದ್ಯಗಂಧವಿಧುರಃ–ದೋಷವೆಂಬ ಗಂಧ ಸಹ ಇಲ್ಲದವನು, (ಅದರ ವಾಸನೆಯೂ ಇಲ್ಲದಿರುವಾಗ, ವಸ್ತುವೆಲ್ಲಿರಬೇಕು ?–ಇಲ್ಲವೇ ಇಲ್ಲ), ಇತಿ–ಎಂಬುದು, ಸರ್ವಂ–ಎಲ್ಲವೂ, ಮನೋಹರಂ–ಮನಸ್ಸಿಗೆ ಆಹ್ಲಾದಕರವೇ ಸರಿ.

---

ಯನ್ನು ಬಡಿದು, ಪುಟಿದು ಹಿಂದುರಿಗಿ, ಧನುಸ್ಸಿನಿಂದ ತನ್ನನ್ನು ಪ್ರಯೋಗಿಸಿದ ಪುರುಷನನ್ನೇ ತಾಕಿ ಅಪಘಾತವನ್ನುಂಟುಮಾಡುವಂತೆ, ಭಗವದ್ದೋಷರೂಪದ ಈ ಬಾಣವು, ಪರಮಾತ್ಮನಲ್ಲಿ ದೋಷಾರೋಪಣೆಯನ್ನು ಪ್ರಯೋಗಿಸಿದ ಪುರುಷನನ್ನೇ, ಅಂಧತಮಸ್ಸಿಗೆ ತಳ್ಳುತ್ತದೆ; ಆದ್ದರಿಂದ ತನ್ನ ಮೂಲರೂಪ ಮತ್ತು ಅವತಾರಗಳಲ್ಲಿ ಸಹ, ಮಹಾಪ್ರಭುವಾದ ಪರಮಾತ್ಮನು, ದೋಷ ಗಂಧವೂ ಇಲ್ಲದೇ ಶುದ್ಧಸ್ವರೂಪನಾಗಿ ವಿರಾಜಿಸುತ್ತನೆಂದು ತಿಳಿಯುವುದು ಆನಂದಕರವು (ಮನಸ್ಸಿಗೆ ಶಾಂತಿ ಉಲ್ಲಾಸಗಳನ್ನು ದೊರಕಿಸುತ್ತದೆ) (೪೬–೪೭).

**ಇದಂ ರೂಪ್ಯಂ ರೂಪ್ಯತಾತ್ರೇತ್ಯೇವಂ ವಾ ಭ್ರಮವಿಗ್ರಹಃ ।**
**ಅನ್ಯೋನ್ಯಧರ್ಮಾನಧ್ಯಸ್ಯ ಚಾನ್ಯೋನ್ಯಾತ್ಮಕತಾಂ ತಥಾ ॥ ೪೮ ॥**
**ಇತಿ ಭಾಷ್ಯಕೃತೋ ಭಾಷಾ ತೇನ ಭ್ರಾಂತಿರ್ದ್ವಿರೂಪಿಣೀ ।**
**ತಾದಾತ್ಮ್ಯರೋಪರೂಪೋ ವಾ ಧರ್ಮಾರೋಪಾತ್ಮಿಕಾಪಿ ವಾ ॥**
**ನಾಜ್ಞಾನಮಹಮಿತ್ಯಸ್ತಿ ನಾಜ್ಞಾನತ್ವಂ ಮಯೀತ್ಯಪಿ ।**
**ಭ್ರಮೋ ಬ್ರಹ್ಮಣಿ ತೇನ ಸ್ಯಾತ್ಕಥಮಜ್ಞಾನಕಲ್ಪನಾ ॥ ೫೦ ॥**

ಪರನಂತೆ (ಮಾಯಾವಾದಿಯಂತೆ), ಪರಬ್ರಹ್ಮನಲ್ಲಿ ಅಜ್ಞಾನರೂಪದ ದೋಷವನ್ನು ನಿವಾರಿಸಲು, ಅಜ್ಞಾನದ ಆರೋಪವೇ (ಬ್ರಹ್ಮನಲ್ಲಿ) ಅಸಂಭವ ವೆಂದು ಹೇಳುತ್ತಾರೆ :—

ಭ್ರಮವಿಗ್ರಹಃ–ಭ್ರಮದ ಆಕಾರವು (ಸ್ವರೂಪವು), ಇದಂ ರೂಪ್ಯಂ– ಇದು ಬೆಳ್ಳಿಯು (ಶುಕ್ತಿಯನ್ನು ಕಂಡು ಬೆಳ್ಳಿಯೇ ಎಂದು ತಿಳಿಯುವುದು), ರೂಪ್ಯತಾ ಅತ್ರ–ಇಲ್ಲಿ (ಶುಕ್ತಿಯಲ್ಲಿ) ರೂಪ್ಯತ್ವವಿದೆ (ಬೆಳ್ಳಿ ಇದೆ), ಇತ್ಯೇವಂ ವಾ – ಹೀಗೆಂದಾಗಲಿ (ಆಗಿರುತ್ತದೆ–ಅನ್ಯಪ್ರಕಾರದಿಂದ ಭ್ರಮೆಯು ಇರುವುದಿಲ್ಲ; ಅನ್ಯೋನ್ಯಧರ್ಮಾನ್ – ಪರಸ್ಪರರ ಧರ್ಮಗಳನ್ನು (ಒಂದರಲ್ಲಿ ಮತ್ತೊಂದರ ಧರ್ಮಗಳನ್ನು), ಅಧ್ಯಸ್ಯ – ಆರೋಪಿಸಿ, ಚ–ಅಥವಾ

---

ಮಾಯಾವಾದಿಯು ಹೇಳುವ ಅಜ್ಞಾನವು ಪರಬ್ರಹ್ಮನಲ್ಲಿ ಆರೋಪಿತ ವಾಗಲು ಅವಕಾಶವೇ ಇಲ್ಲ; ಅಜ್ಞಾನದಿಂದಷ್ಟೆ, ಜೀವಭಾವ, ಮಿಥ್ಯಾ ಜಗತ್ತು ಮುಂತಾದ ಪ್ರಮೇಯಗಳ ನಿರ್ವಾಹವಾಗಬೇಕು; ಬ್ರಹ್ಮನಿಗೆ ತಾನೇ ಜೀವನೆಂಬ ಮುಂತಾದ ಭ್ರಮೆಯುಂಟಾಗಲು, ಅಜ್ಞಾನದ ಆರೋಪವಾಗಬೇಕು; ಬ್ರಹ್ಮನಿಗೆ ಭ್ರಮೆಯೇ ಇಲ್ಲದಿರಲು ಅಜ್ಞಾನದ ಸಂಸರ್ಗವೇ ಕೂಡುವುದಿಲ್ಲ; ಶುಕ್ತಿಯಲ್ಲಿ ರಜತಭ್ರಮೆಯು, ಎರಡು ಪ್ರಕಾರ ವಾಗಿರುತ್ತದೆ; ಇದು ರಜತವೇ ಎಂಬ ತಾದಾತ್ಮ್ಯಜ್ಞಾನ (ರಜತಸ್ವರೂಪವೇ ಎಂಬ ಜ್ಞಾನ); ಮತ್ತು ಇಲ್ಲಿ ರಜತವಿದೆ, ಎಂದರೆ ಈ ಸ್ಥಲದಲ್ಲಿ ರಜತತ್ವ (ಬೆಳ್ಳಿಯ ಧರ್ಮಗಳು) ಇದೆ; ಹೀಗೆ ಭ್ರಮೆಯ ಆಕಾರವು (ಸ್ವರೂಪವು) ಎರಡು ವಿಧವಾಗಿರಬಹುದು; ಮೂರನೇ ಪ್ರಕಾರವಿಲ್ಲ; ಅನ್ಯೋನ್ಯಸ್ಮಿನ್, ಅನ್ಯೋನ್ಯಾತ್ಮಕತಾ (ಇದು ಅದೇ–ಅದೇ ಇದು; ಎಂಬ ಜ್ಞಾನ), ಅಥವಾ ಅನ್ಯೋನ್ಯಧರ್ಮಾಂಶ್ಚಾಧ್ಯಸ್ಯ (ಒಂದರ ಧರ್ಮವನ್ನು ಮತ್ತೊಂದರಲ್ಲಿ

(ಮತ್ತು), ತಥಾ—ಹಾಗೆಯೇ, ಅನ್ಯೋನ್ಯಾತ್ಮಕತಾಂ—ಒಂದರ ಸ್ವರೂಪ ವಾದುದೇ ಮತ್ತೊಂದು (ಎಂಬಂತೆ ಭ್ರಮೆಯು ದ್ವಿವಿಧವೆಂದು), ಇತಿ—ಹೀಗೆ, ಭಾಷ್ಯಕೃತಃ—ಭಾಷ್ಯಕಾರರ (ಅದ್ವೈತ ಭಾಷ್ಯಕಾರರ), ಭಾಷಾ—ವಾಕ್ಯವಿದೆ ('ಅನ್ಯೋನ್ಯಸ್ಮಿನ್ನನ್ಯೋನ್ಯಾತ್ಮಕತಾಮನ್ಯೋನ್ಯಧರ್ಮಾಂಶ್ಚಾಧ್ಯಸ್ಯ' ಎಂಬುದೇ ಆ ವಾಕ್ಯವು); ತೇನ—ಅದರಿಂದ (ನಿನಗೂ ಸಹ), ತಾದಾತ್ಮ್ಯಾರೋಪರೂಪಾ—ಒಂದರ ಸ್ವರೂಪವನ್ನು ಮತ್ತೊಂದರಲ್ಲಿ ಆರೋಪಿಸುವುದು, ವಾ—ಅಥವಾ, ಧರ್ಮಾರೋಪಾತ್ಮಿಕಾ ಅಪಿ ವಾ—ಒಂದರ ಧರ್ಮಗಳನ್ನು ಮತ್ತೊಂದರಲ್ಲಿ ಆರೋಪಿಸುವುದು, ಭ್ರಾಂತಿಃ—(ಎಂದು) ಭ್ರಮೆಯು, ದ್ವಿರೂಪಿಣೀ—ಎರಡು ಪ್ರಕಾರವಾಗಿ ಮಾತ್ರ (ಇರುತ್ತದೆ); ಬ್ರಹ್ಮಣಿ—ಪರಬ್ರಹ್ಮನಲ್ಲಿ, ಅಹಂ—ನಾನು, ಅಜ್ಞಾನಂ—ಅಜ್ಞಾನವೇ, ಇತಿ ಭ್ರಮಃ—ಎಂಬ ಭ್ರಮೆಯು, ನಾಸ್ತಿ—ಇರುವುದಿಲ್ಲ; ಮಯಿ—ನನ್ನಲ್ಲಿ, ಅಜ್ಞಾನತ್ವಂ—ಅಜ್ಞಾನತ್ವವು (ಆ ಧರ್ಮವುಳ್ಳವನು ನಾನು), ನ—ಇರುವುದಿಲ್ಲ (ಎಂಬ ರೂಪದ ಭ್ರಮೆಯೂ ಇಲ್ಲ); ತೇನ—ಅದರಿಂದ, ಅಜ್ಞಾನಕಲ್ಪನಾ—(ಅಜ್ಞಾನದ ಸಂಸರ್ಗವುಳ್ಳವನೆಂಬ) ಅಜ್ಞಾನದ ಭ್ರಮೆಯು, ಕಥಂ ಸ್ಯಾತ್—ಹೇಗುಂಟಾಗುತ್ತದೆ? (ಅಜ್ಞಾನವೇ ನಾನೆಂಬ ತಾದಾತ್ಮ್ಯವಾಗಲಿ, ಅಜ್ಞಾನತ್ವ ಧರ್ಮವುಳ್ಳವನೆಂಬುದಾಗಲಿ ಇರುವುದಿಲ್ಲವಾದ್ದರಿಂದ, ಅಜ್ಞಾನದ ಆರೋಪಕ್ಕೆ ಅವಕಾಶವೇ ಇಲ್ಲ).

**ಅಜ್ಞೋಽಹಮಿತಿ ತು ಜ್ಞಾನಂ ಸಿದ್ಧಾಜ್ಞಾನಸ್ಯ ವೇದನಂ ।**
**ಉಕ್ತಾಕಾರದ್ವಯಾಯೋಗಾತ್ ಸಿದ್ಧಿಶ್ಚ ಭ್ರಮರೂಪಿಣೀ ॥ ೫೧ ॥**

---

ಆರೋಪಿಸಿಕೊಳ್ಳುವುದು—ಪರಸ್ಪರ ಧರ್ಮಗಳ ಆರೋಪ) ಎಂಬುದಾಗಿ ಭ್ರಮೆಯು ದ್ವಿಪ್ರಕಾರವೆಂದು ಅದ್ವೈತಭಾಷ್ಯಕಾರರ ವಾಕ್ಯವೇ ಇದೆ; ಶುಕ್ತಿಯಲ್ಲಿ ರಜತತಾದಾತ್ಮ್ಯದ ಆರೋಪ ಅಥವಾ ರಜತಧರ್ಮದ (ಥಳಥಳಿಸುವ ಮುಂತಾದ ಧರ್ಮದ) ಆರೋಪಗಳೇ ಈ ಎರಡು ಪ್ರಕಾರಗಳು; ಬ್ರಹ್ಮನಿಗೆ, ಅಜ್ಞಾನವೇ ನಾನು ಎಂಬ ತಾದಾತ್ಮ್ಯಜ್ಞಾನವಾಗಲಿ, ನನ್ನಲ್ಲಿ ಅಜ್ಞಾನತ್ವವಿದೆ (ಅಜ್ಞಾನವೆಂಬ ಧರ್ಮವಿದೆ) ಎಂದಾಗಲಿ, ಭ್ರಮೆ ಇಲ್ಲದ್ದರಿಂದ, ಅಜ್ಞಾನಸಂಸರ್ಗವುಳ್ಳವನೆಂಬ ಕಲ್ಪನೆಗೆ ಅವಕಾಶವಿಲ್ಲ (೪೮—೫೦). ನಾನು ಅಜ್ಞನೆಂಬ ಜ್ಞಾನದಲ್ಲಿರುವ ಅಜ್ಞಾನವು ಆರೋಪಿತವಲ್ಲ; ಮೊದಲೇ

**ನಾಸ್ತ್ಯೇವೇತಿ ಕುತೋಽಜ್ಞಾನಂ ಕಲ್ಪಿತಂ ಸ್ಯಾದಿಯಂ ತು ಧೀಃ ।**
**ನಾಜ್ಞಾನಕಲ್ಪನಾರೂಪಾ ತತೋಽಜ್ಞಾನಮಕಲ್ಪಿತಂ ॥ ೫೨ ॥**

'ನಾನು ಅಜ್ಞನು' ಎಂಬ ಜ್ಞಾನವೇ ಅಜ್ಞಾನದ ಆರೋಪವಲ್ಲವೇ ? ಎಂದರೆ ಹೇಳುತ್ತಾರೆ :—

ಅಹಂ—ನಾನು, ಅಜ್ಞಃ—ಅಜ್ಞನು, ಇತಿ—ಎಂಬ, ಜ್ಞಾನಂ ತು—ಜ್ಞಾನವಾದರೋ, ಸಿದ್ಧಾಜ್ಞಾನಸ್ಯ—ಮೊದಲೇ ಸಿದ್ಧವಾಗಿರುವ ಅಜ್ಞಾನದ, ವೇದನಂ—ವೇದನೆಯು (ಸಂಸರ್ಗ ಮಾತ್ರದ ಅರಿವು—ಅನುಭವವು); ಉಕ್ತಾಕಾರದ್ವಯಾಯೋಗಾತ್—(ಉಕ್ತವಾದ—ಈ ಹಿಂದೆ ಹೇಳಿದ) ಹೇಳಲಾದ ದ್ವಿಪ್ರಕಾರಕ ಭ್ರಮೆಯೂ, ಹೊಂದುವುದಿಲ್ಲವಾದ್ದರಿಂದ, ಸಿದ್ಧಿಃ ಚ—ಪೂರ್ವಸಿದ್ಧವಾದುದೇ, ಭ್ರಮರೂಪಿಣೀ—ಭ್ರಮರೂಪವಾದುದೇ (ತನ್ನಿಂದ ಭಿನ್ನವಾದ ಅಜ್ಞಾನದಿಂದ ಕಲ್ಪಿತವಲ್ಲ);[1] ನಾಸ್ತಿ ಏವ ಇತಿ—ಇಲ್ಲವೆಂದೇ ತಿಳಿದು (ಸ್ವರೂಪಭೂತವಾದ ಅಭಾವರೂಪಾದಿ ಅಜ್ಞಾನವು ಇಲ್ಲವೆಂದೇ ಭಾವಿಸಿ), ಅಜ್ಞಾನಂ—ಅಜ್ಞಾನವು, ಕಲ್ಪಿತಂ—(ಹೊಸದಾಗಿ ಸಂಸರ್ಗವುಳ್ಳದ್ದೆಂದು) ಕಲ್ಪಿತವು, ಸ್ಯಾತ್—ಆಗುತ್ತದೆ; ಇಯಂ ತು ಧೀಃ—ನಾನು ಅಜ್ಞನೆಂಬ ಬುದ್ಧಿಯು, ಅಜ್ಞಾನಕಲ್ಪನಾರೂಪಾ ನ—ಅಜ್ಞಾನದಿಂದ ಕಲ್ಪಿತವಾದುದಲ್ಲ (ಉಂಟಾದುದಲ್ಲ—ಸಹಜವು—ಮೊದಲೇ ಇದ್ದುದು); ತತಃ—ಅಜ್ಞಾನವು ಆರೋಪಿತವಲ್ಲದ್ದರಿಂದ (ಇಲ್ಲದ ಬೇರೆ ವಸ್ತುವು ಆರೋಪಿತವೆಂದು ಕಂಡಿಲ್ಲವಾದ್ದರಿಂದ), ಅಜ್ಞಾನಂ—ಅಜ್ಞಾನವು, ಅಕಲ್ಪಿತಂ—ಕಲ್ಪಿತವಲ್ಲ (ಕೃತಕವಲ್ಲ—ಸಹಜವೇ).

---

ಸಿದ್ಧವಾಗಿರುವ ಅಜ್ಞಾನದ ಅರಿವು; ಹಿಂದೆ ಹೇಳಲಾದ ಎರಡು ಪ್ರಕಾರದ ಭ್ರಮೆಯೂ ಕೂಡುವುದಿಲ್ಲ; ಪೂರ್ವಸಿದ್ಧಭ್ರಮೆಯಾದೀತಲ್ಲದೇ ಅಜ್ಞಾನ ಕಲ್ಪಿತವಲ್ಲ; ನನ್ನಲ್ಲಿ ಮೊದಲಿಗೆ ಅಜ್ಞಾನವೆಂಬುದಿಲ್ಲವೆಂದೇ ಭಾವಿಸಿ, ಅಜ್ಞಾನವು ಕಲ್ಪಿತವೆಂದು ತೋರುವುದಲ್ಲದೇ, ಅದು ಕಲ್ಪಿತವಲ್ಲ (೫೧—೫೨).

[1] ಅಜ್ಞಾನವು ಅನ್ಯತ್ರವಿರಬೇಕು—ಅದು ಶುದ್ಧಬ್ರಹ್ಮನ ಸಂಸರ್ಗವನ್ನು ಹೊಂದಿ, ಅವನಲ್ಲಿ ಆರೋಪಿತವಾಗಬೇಕು; ತನ್ನಲ್ಲಿಯೇ ಅಜ್ಞಾನವಿದ್ದರೆ, ಅದು ಆರೋಪಿತವೆನಿಸುವುದಿಲ್ಲ; ಅಜ್ಞಾನದ ಆರೋಪದಿಂದಲೇ ಭ್ರಮೆಯು ಇಲ್ಲದಿರುವುದನ್ನು ಕಾಣುವುದಷ್ಟೇ ಭ್ರಮವು.

**ನಾಜ್ಞಾನಮನ್ಯಧರ್ಮೋಽಯಂ ಬ್ರಹ್ಮಾಜ್ಞಾನೈಕವಾದಿನಃ ॥ ೫೩ ॥**

ಮೊದಲೇ ಸಿದ್ಧವಾದ ಅಜ್ಞಾನದ ಸಂಸರ್ಗರೂಪದ ಆರೋಪವೇಕೆ ಆಗಬಾರದೆಂಬ ಶಂಕೆಯನ್ನು ಪರಿಹರಿಸುತ್ತಾರೆ:—

ಅಯಂ—ಈ, ಅಜ್ಞಾನಂ—ಅಜ್ಞಾನವೆಂಬ ಧರ್ಮವು, ಅನ್ಯಧರ್ಮಃ—ಬ್ರಹ್ಮಭಿನ್ನ ಯಾವನೊಬ್ಬ ಚೇತನನ ಧರ್ಮವು, ನ—ಅಲ್ಲ; (ಏಕೆಂದರೆ) ಬ್ರಹ್ಮಾಜ್ಞಾನೈಕವಾದಿನಃ—(ನೀನು) ಕೇವಲ ಬ್ರಹ್ಮನನ್ನೇ ಅಜ್ಞಾನವು ಆಶ್ರಯಿಸಿರುವುದೆಂದು ವಾದಿಸುವಿ (ಹೇಳುತ್ತೀ).[1]

**ಅತದ್ವತಿ ಚ ತದ್ವತ್ತ್ವಜ್ಞಾನಂ ಚೇತ್ಸ್ಯಾದಯಂ ಭ್ರಮಃ ।**
**ಅಜ್ಞಾತವಚ್ಚ ತೇ ಬ್ರಹ್ಮತದ್ವತ್ತಾಧೀಃ ಕಥಂ ಭ್ರಮಃ ॥ ೫೪ ॥**

ಅಯಂ—ನಾನು ಅಜ್ಞನೆಂಬ ಈ ಅನುಭವವು, ಅತದ್ವತಿ—ಅಜ್ಞಾನವಿಲ್ಲದವನಲ್ಲಿ, ತದ್ವತ್ತ್ವಜ್ಞಾನಂ ಚೇತ್ — ಅಜ್ಞಾನವುಳ್ಳತನವೆಂಬುದಾದರೆ, ಭ್ರಮಃ—(ಅದು) ಭ್ರಮೆಯೆಂದು, ಸ್ಯಾತ್—ಆಗುತ್ತದೆ (ಅಜ್ಞಾನಸಂಬಂಧದ ಆರೋಪವೆಂದಾಗುತ್ತದೆ); (ಅಜ್ಞಾನಕ್ಕೆ ಆಧಾರನಲ್ಲದ ಬ್ರಹ್ಮನಲ್ಲಿ ಅಜ್ಞಾನಾಧಾರತ್ವವು ತೋರಿದರೆ ಆರೋಪವಾಗಬಹುದು; ಆದರೆ ಹಾಗೆಂಬುದು

ಈ ಅಜ್ಞಾನವೆಂಬ ಧರ್ಮವು ಬ್ರಹ್ಮಭಿನ್ನ (ಚೇತನ ಭಿನ್ನ) ಮತ್ತೊಬ್ಬನ ಧರ್ಮವಲ್ಲ; ಬ್ರಹ್ಮನನ್ನೇ (ನಿರ್ವಿಶೇಷ ಬ್ರಹ್ಮವಸ್ತುವನ್ನೇ) ಅಜ್ಞಾನವು ಆಶ್ರಯಿಸಿರುತ್ತದೆಂದು ಅದ್ವೈತದ ಸಿದ್ಧಾಂತವಾಗಿದೆ; ಅನ್ಯಧರ್ಮವಾಗಿದ್ದು, ಬ್ರಹ್ಮನಲ್ಲಿ ಬಂದಿದ್ದರೆ, ಅದನ್ನು ಕಲ್ಪಿತವೆನ್ನಬಹುದು (೫೩). ನಾನು ಅಜ್ಞನೆಂಬ ಅನುಭವವು, ಅಜ್ಞಾನವಿಲ್ಲದವನಲ್ಲಿ ಭ್ರಮೆಯಾಗುತ್ತದೆ; ಅಜ್ಞಾನವಿದ್ದವನಿಗೆ ಈ ಅನುಭವವು ಭ್ರಮೆಯೆನಿಸುವುದಿಲ್ಲ; ಬ್ರಹ್ಮನು ಅಜ್ಞಾನಕ್ಕೆ ಆಧಾರ (ಆಶ್ರಯ) ನಲ್ಲದಿದ್ದು, ಅಜ್ಞಾನದ ಆಧಾರತ್ವವು ತೋರಿದರೆ, ಆ ಧರ್ಮದ ಆರೋಪವಾಗುತ್ತದೆ; (ಜೀವನಾಗಿರುವ ಬ್ರಹ್ಮನು) ನಿನ್ನ ಮತದಂತೆ, 'ಅಹಂ ಅಜ್ಞಃ' ಎಂದೇ ತಿಳಿಯುತ್ತಾನೆ; ಅಜ್ಞಾನವುಳ್ಳವನೆಂಬ ಅನುಭವವು ಹೇಗೆ ಭ್ರಮೆಯಾಗುತ್ತದೆ? (ಆಗುವುದಿಲ್ಲ) (೫೪).

[1] ಅಜ್ಞಾನಾಶ್ರಯತ್ವ ಮತ್ತು ವಿಷಯತ್ವಗಳನ್ನು, ನಿರ್ವಿಶೇಷಬ್ರಹ್ಮಚೈತನ್ಯಕ್ಕೆ ಮಾತ್ರ ಅದ್ವೈತವು ಹೇಳುತ್ತದೆ. ಅಜ್ಞಾನವೇ ಜಗದಾರೋಪಾದಿಗಳಿಗೆ ಕಾರಣವೆನ್ನುತ್ತದೆ.

ನಿನ್ನ ಮತವಲ್ಲ); ಅಜ್ಞಾತವತ್—ಅಜ್ಞಾನವುಳ್ಳವನು (ಅಹಂ ಅಜ್ಞಃ—ಎಂದೇ), ತೇ – ನಿನ್ನ, ಬ್ರಹ್ಮ – ಬ್ರಹ್ಮನು ತಿಳಿಯುತ್ತಾನಲ್ಲದೇ (ಬೇರೆಯಲ್ಲ); ತದ್ವತ್ತಾಧೀಃ – ಅಜ್ಞಾನವುಳ್ಳವನೆಂಬ ಬುದ್ಧಿಯು (ಅನುಭವವು), ಕಥಂ– ಹೇಗೆ, ಭ್ರಮಃ—ಭ್ರಮವು ? (ಅಲ್ಲ).

**ಅಜ್ಞಾನಾರೋಪತಸ್ತತ್ರ ತದ್ಯೋಗಸ್ಯಾಪ್ಯಭಾವವಾಕ್ ।**
**ಅಜ್ಞಾನಾರೋಪಮೂಲೈವ ಸ ಚ ಸರ್ವತ್ರ ದುರ್ಲಭಃ ॥ ೫೫ ॥**

ಅಜ್ಞಾನವು ಬ್ರಹ್ಮನಲ್ಲಿ ಆರೋಪಿತವೇ; ಅದರಿಂದಲೇ ಅಜ್ಞಾನವುಳ್ಳವನೆಂಬ ಭ್ರಮವೆಂದರೆ, ಹೇಳುತ್ತಾರೆ :—

ಅಜ್ಞಾನಾರೋಪತಃ—ಅಜ್ಞಾನದ ಆರೋಪದಿಂದ, ತತ್ರ—ಬ್ರಹ್ಮನಲ್ಲಿ, ತದ್ಯೋಗಸ್ಯ ಅಪಿ—ಅಜ್ಞಾನ ಸಂಸರ್ಗದ (ಸಂಬಂಧದ), ಅಭಾವವಾಕ್—ಇಲ್ಲವೆಂಬ ಉಕ್ತಿಯು ಯುಕ್ತವಾಗುತ್ತದೆ (ಅಜ್ಞಾನವೂ ಮಿಥ್ಯೆಯಾದ್ದರಿಂದಲೇ ಕೂಡುತ್ತದೆ) ; ಅಜ್ಞಾನಾರೋಪಮೂಲಾ ಏವ – ಅಜ್ಞಾನದ ಆರೋಪವೇ ಮೂಲವು (ಎಂದರೆ, ಅಜ್ಞಾನದ ಆರೋಪವು ಸಿದ್ಧವಾದರೆ, ಅದರ ಸಂಸರ್ಗದ ಆರೋಪವು ಆಗಬಹುದು) ; ಸ ಚ—ಸಂಸರ್ಗಾರೋಪದ ಮೂಲಭೂತವಾದ ಅಜ್ಞಾನದ ಆರೋಪವು, ಸರ್ವತ್ರ—ಬ್ರಹ್ಮನಲ್ಲಿ ಅಥವಾ ಅನ್ಯರಲ್ಲಿಯಾಗಲಿ, ಎಲ್ಲಿಯೂ, ದುರ್ಲಭಃ—ದುರ್ಲಭವು (ಇರುವುದೆಂಬುದಕ್ಕೆ ಪ್ರಮಾಣವಿಲ್ಲ— ಅಪ್ರಾಮಾಣಿಕವಾದ್ದರಿಂದ ದುರ್ಲಭವು).

**ಅನ್ಯೋನ್ಯಧರ್ಮಾಧ್ಯಾಸೋಽಸ್ತಿ ತತ್ರಾಧ್ಯಾಸಸ್ತವಾಪಿ ನ ।**
**ಅತೋ ನಾಜ್ಞಾನಸಂಸರ್ಗಾರೋಪೋಽಪ್ಯಯಮಭೂತ್ತವ ॥ ೫೬ ॥**

---

ಬ್ರಹ್ಮನಿಗೆ ಅಜ್ಞಾನಸಂಬಂಧವಿಲ್ಲವೆಂಬ ಮಾತು, ಅಜ್ಞಾನವೂ ಮಿಥ್ಯೆಯೆಂಬುದರಿಂದಲೇ (ಅದೂ ಆರೋಪಿತವೆಂಬುದರಿಂದ ಮಾತ್ರ) ಯುಕ್ತವಾಗುತ್ತದೆ; ಅಜ್ಞಾನವು ಆರೋಪಿತವಾಗಬೇಕು—ಕಲ್ಪಿತವಾಗಬೇಕು—ಹೀಗೆಂಬುದು ಸಿದ್ಧವಾದರೆ, ಅದರ ಸಂಸರ್ಗದ ಆರೋಪವು (ಸಂಬಂಧವು) ಬ್ರಹ್ಮನಲ್ಲಿರುತ್ತದೆ ಎನ್ನಬಹುದು; ಆದರೆ ಅಜ್ಞಾನವು ಕಲ್ಪಿತ (ಆರೋಪಿತ) ವೆಂಬಲ್ಲಿ ಯಾವ ಪ್ರಮಾಣವೂ ಇಲ್ಲ—ಬ್ರಹ್ಮನಲ್ಲಿ ಅಥವಾ ಅನ್ಯತ್ರ ಎಲ್ಲಿಯೂ, ಕಲ್ಪಿತವಾದ ಅಜ್ಞಾನವಿರುವುದಿಲ್ಲ (೫೫). 'ಅಹಂ ಅಜ್ಞಃ' ಎಂಬ ಅನುಭವ

'ನಾನು ಅಜ್ಞನು' ಎಂಬ ಜ್ಞಾನದಲ್ಲಿ ಅಜ್ಞಾನದ ಆರೋಪವಿರುತ್ತದೆಂಬುದೂ, ಅದ್ವೈತಿಯ ಸಿದ್ಧಾಂತಕ್ಕೆ ವಿರೋಧವಾಗುವುದೆನ್ನುತ್ತಾರೆ:—

ಅನ್ಯೋನ್ಯಧರ್ಮಾಧ್ಯಾಸಃ— ಒಂದರ ಧರ್ಮವನ್ನು ಮತ್ತೊಂದರಲ್ಲಿ ತಿಳಿಯುವುದು ಅಧ್ಯಾಸವು (ಆರೋಪವು) (ನಾನು ಕೃಶನು, ಎಂಬ ಜ್ಞಾನದಲ್ಲಿ ಕೃಶತ್ವವು ದೇಹದ ಧರ್ಮವು—ಅದು ಆತ್ಮನಲ್ಲಿ ಆರೋಪಿತವಾಗಿದೆ—ನಿನ್ನ ಮತದಂತೆ ಇಲ್ಲಿ, ಆತ್ಮನಲ್ಲಿ ಅಧ್ಯಾಸವು ಇರುತ್ತದೆ) (ದೇಹತಾದಾತ್ಮ್ಯವನ್ನು ಆತ್ಮನಿಗೆ ತಿಳಿದರೆ, ಅದು ಆರೋಪವೆಂದರೂ, ನನ್ನಲ್ಲಿ ದೇಹವಿದೆ, ಎಂಬ ಸಂಸರ್ಗಾರೋಪವು ಕೂಡುವುದಿಲ್ಲ); [1] ತತ್ರಾಪಿ—ಅಲ್ಲಿಯೂ (ಅಹಮಜ್ಞಃ

ದಲ್ಲಿ ಆರೋಪಿತತ್ವವೇ ಇಲ್ಲ; ತಾದಾತ್ಮ್ಯರೋಪವಿಲ್ಲೆಂದು ಈ ಹಿಂದೆ ನಿರೂಪಿಸಲಾಯಿತು; ಒಂದರ ಧರ್ಮ ಮತ್ತೊಂದರಲ್ಲಿ (ಪರಸ್ಪರವಾಗಿ)

---

[1] ತಾದಾತ್ಮ್ಯರೋಪ ಮತ್ತು ಸಂಸರ್ಗಾರೋಪಗಳ ಸ್ವರೂಪವನ್ನು ಸ್ಪಷ್ಟಸ್ಪಷ್ಟವಾಗಿ ಗ್ರಹಿಸಿರಬೇಕಾದುದು, ಇಲ್ಲಿ ಅವಶ್ಯಕವಾಗುತ್ತದೆ; 'ಅಹಂ ಕೃಶಃ' 'ನಾನು ಕೃಶನು' ಎಂದರೆ, ದೇಹಕ್ಕೂ ಆತ್ಮನಿಗೂ ಅಭೇದವು ತೋರುತ್ತದೆ—ಇದು ತಾದಾತ್ಮ್ಯರೋಪವು; 'ಆತ್ಮನಲ್ಲಿ ದೇಹದ ಕೃಶತ್ವವು ತೋರುತ್ತದೆ' ಎಂದರೆ, ಅದು ಸಂಸರ್ಗಾರೋಪವು; ಶುಕ್ತಿಯನ್ನು ಕಂಡು ರಜತವೆಂದರೆ, ಶುಕ್ತಿಗೂ ರಜತಕ್ಕೂ ಅಭೇದವನ್ನು ಹೇಳಿದಂತಾಗುವುದರಿಂದ, ಇದು ತಾದಾತ್ಮ್ಯರೋಪವು; ಹಾಗಲ್ಲದೇ 'ಶುಕ್ತಿಯು ರಜತತ್ವದ (ಬೆಳ್ಳಿಯ ಧರ್ಮದ) ಸಂಬಂಧವು ಕಾಣುತ್ತದೆ' ಎಂದರೆ ಅದು ಸಂಸರ್ಗಾರೋಪವೆನಿಸುತ್ತದೆ; ಪ್ರಕೃತ, ಆತ್ಮನಿಗೆ 'ಅಹಂ ಅಜ್ಞಾನಂ'—'ನಾನೇ ಅಜ್ಞಾನವು' ಎಂಬ ಅನುಭವವಿಲ್ಲ—ಆತ್ಮ ಮತ್ತು ಅಜ್ಞಾನಗಳಲ್ಲಿ ಅಭೇದವು ತೋರುವುದಿಲ್ಲವಾದ್ದರಿಂದ, ತಾದಾತ್ಮ್ಯರೋಪವಿಲ್ಲ; 'ನನ್ನಲ್ಲಿ ಅಜ್ಞಾನವು ತೋರಿಬರುತ್ತದೆ' ಎಂದರೆ ಸಂಸರ್ಗಾರೋಪವಾಗಬಹುದು; ಹೀಗೆ ಅನುಭವವು ಯಾರಿಗೂ ಉಂಟಾಗುವುದಿಲ್ಲ; ಅಂತೂ 'ಅಹಮಜ್ಞಃ' ಎಂಬ ಅನುಭವವು ಉಭಯ ವಿಧದ ಆರೋಪವನ್ನು ಸಾಧಿಸುವುದಿಲ್ಲ; 'ಅಹಂ ಅಜ್ಞಾನವಾನ್' ಎಂದು ಅನುಭವ ಬಂದರೆ, ಅನ್ಯತ್ರವಿರುವ ಅಜ್ಞಾನತ್ವವು (ಆ ಧರ್ಮವು) ತನ್ನಲ್ಲಿ ಆರೋಪಿತವೆಂದು ಹೇಳಬಹುದು; ಅದ್ವೈತದಂತೆ, ಅಜ್ಞಾನವು ಬ್ರಹ್ಮಾಶ್ರಿತವು—ಅದಕ್ಕೆ ಸತ್ಯತ್ವವೂ ಇಲ್ಲ—ಇದ್ದರೆ ಅದ್ವೈತಹಾನಿ; ಅದೂ ಮಿಥ್ಯೆಯೇ—ಆರೋಪಿತವೇ! ಅಭಾವರೂಪದ ಅಜ್ಞಾನದ ಆರೋಪವೆನ್ನಲೂ ಬರುವುದಿಲ್ಲ—ಅದು ಬ್ರಹ್ಮಭಿನ್ನರಾದ ಜೀವರಲ್ಲಿರುವುದಲ್ಲದೇ ಬ್ರಹ್ಮನಲ್ಲಿಲ್ಲ; ಅನ್ಯರಲ್ಲಿರುವ ಈ ಅಜ್ಞಾನವು ಬ್ರಹ್ಮನಲ್ಲಿ ಆರೋಪಿತವೆನ್ನಲಿಕ್ಕೂ ಬರುವುದಿಲ್ಲ—ಅದ್ವೈತಹಾನಿಯೇ ಆಗುತ್ತದೆ.

ಎಂಬಲ್ಲಿಯೂ), ತವಾಪಿ–ನಿನ್ನ ಮತದಂತೆ ಸಹ, ಅಧ್ಯಾಸಃ–ಆರೋಪವು, ನ–ಇರುವುದಿಲ್ಲ; ಅತಃ–ಆದ್ದರಿಂದ, ಅಯಂ–ಈ, ಅಜ್ಞಾನಸಂಸರ್ಗಾರೋಪಃ ಅಪಿ–ಅಜ್ಞಾನಸಂಸರ್ಗದ ಆರೋಪವೂ, ತವ–ನಿನಗೆ (ನಿನ್ನ ಮತದಲ್ಲಿ), ನ ಅಭೂತ್–ಸಿದ್ಧವಾಗಲಿಲ್ಲ.

**ತತ್ರೈವ ಸನ್ನಿಕೃಷ್ಟಸ್ಯ ಸನ್ನಿಕರ್ಷೇ ಕಥಂ ಭ್ರಮಃ ।**
**ಘಟವದ್ಭೂಮಿಘಟಯೋಃ ಸಂಯೋಗೋ ಯದಕಲ್ಪಿತಃ ॥ ೫೭ ॥**

ಉಕ್ತಾರ್ಥದಲ್ಲಿ ಯುಕ್ತಿಯನ್ನು ಸೂಚಿಸಿ ದೃಷ್ಟಾಂತವನ್ನು ಹೇಳುತ್ತಾರೆ:—

ತತ್ರ ಏವ – ಧರ್ಮಿಯಲ್ಲಿಯೇ (ವಸ್ತುವಿನಲ್ಲಿಯೇ), ಸನ್ನಿಕೃಷ್ಟಸ್ಯ–ಸಮೀಪದಲ್ಲಿರುವುದಕ್ಕೆ (ಅಜ್ಞಾನಕ್ಕೆ), ಸನ್ನಿಕರ್ಷೇ–ಸಾಮೀಪ್ಯ ವಿಷಯದಲ್ಲಿ, ಭ್ರಮಃ–ಭ್ರಮವು, ಕಥಂ – ಹೇಗೆ ಕೂಡುತ್ತದೆ? (ಭ್ರಮೆಯು ಯುಕ್ತವಾಗುವುದಿಲ್ಲ); ಭೂಮಿಘಟಯೋಃ–ಘಟವುಳ್ಳ ಭೂಮಿ ಮತ್ತು ಘಟಕ್ಕೂ, ಸಂಯೋಗಃ–(ಇರುವ ಸಂಬಂಧವು, ಯತ್ – ಯಾವ ಕಾರಣದಿಂದ, ಅಕಾಲ್ಪನಿಕಃ – ಸತ್ಯವಾದುದು (ಕಲ್ಪಿತವಲ್ಲ); (ತತ್–ಆದ್ದರಿಂದ) ಕಥಂ ಭ್ರಮಃ–ಅಜ್ಞಾನವುಳ್ಳವನಲ್ಲಿ, ಅಜ್ಞಾನಸಂಸರ್ಗದ ಆರೋಪವು–ಭ್ರಮೆಯು, ಆಗುವುದಿಲ್ಲ—ಕೂಡುವುದಿಲ್ಲ—ಯುಕ್ತವಾಗುವುದಿಲ್ಲ).

---

ಆರೋಪವಾದರೆ ಉಂಟಾಗುವ ಸಂಸರ್ಗಾರೋಪವೂ ಇಲ್ಲ; ಆದ್ದರಿಂದ 'ಅಹಂ ಅಜ್ಞಾನವಾನ್' ಎಂಬ ಅನುಭವವು ಯಾರಿಗೂ ಬರುವುದಿಲ್ಲವಾದ್ದರಿಂದ, ನಿನ್ನ ಮತದಲ್ಲಿ ಯಾವ ಪ್ರಕಾರದ ಆರೋಪವೂ ಬ್ರಹ್ಮನಲ್ಲಿರುವುದಿಲ್ಲವಾದ್ದರಿಂದ ಆರೋಪವನ್ನು ಒಪ್ಪಿದರೆ, ಅಪಸಿದ್ಧಾಂತವೇ ಪ್ರಾಪ್ತವಾಗುತ್ತದೆ (೫೬). ಆತ್ಮಸ್ವರೂಪವನ್ನೇ ಆಶ್ರಯಿಸಿರುವ ಅಜ್ಞಾನವೇ 'ಅಹಂ ಅಜ್ಞಃ' ಎಂಬ ಅನುಭವಕ್ಕೆ ಮೂಲವಾಗಿರುವುದರಿಂದ, ಅಜ್ಞಾನವಾಗಲೀ ಅದರ ಸಂಸರ್ಗವಾಗಲಿ, ಆರೋಪಿತವಲ್ಲ (ಕಲ್ಪಿತವಲ್ಲ); ಭೂಮಿ ಮತ್ತು ಘಟಗಳ ಸಂಪರ್ಕವು ಕಲ್ಪಿತವಲ್ಲ–ಸತ್ಯವಾದುದು; ಅದರಂತೆ, ಆತ್ಮನ ಆಶ್ರಯದಲ್ಲಿರುವ ಅಜ್ಞಾನದ ಸಂಸರ್ಗವು (ನಿತ್ಯಸಮೀಪದಲ್ಲಿಯೇ ಇರುವ ಭ್ರಮರೂಪವಾದುದಲ್ಲ) (೫೭).

**ದೋಷಾಭಾವಾಚ್ಚ ನಾಜ್ಞಾನಭ್ರಾಂತಿರ್ಯುಕ್ತಾ ಮತೇ ತವ ।**
**ತಮೋಽನ್ಯಭ್ರಮದೋಷೋಽಪಿ ನ ಹಿ ದೋಷಃ ಸ್ವದರ್ಶನೇ ॥**

ಬ್ರಹ್ಮನು ದೋಷದೂರನಾದ್ದರಿಂದ ಸಹ ಅಜ್ಞಾನದ ಆರೋಪವು ಯುಕ್ತವಲ್ಲವೆನ್ನುತ್ತಾರೆ :—

ತವ—ನಿನ್ನ, ಮತೇ—ಮತದಂತೆ, ದೋಷಾಭಾವಾತ್ ಚ—(ಬ್ರಹ್ಮನು ಶುದ್ಧನಾದ್ದರಿಂದ) ದೋಷರಹಿತನಾದ್ದರಿಂದ ಸಹ, ಅಜ್ಞಾನಭ್ರಾಂತಿಃ—ಅಜ್ಞಾನದ ಆರೋಪವು, ನ ಯುಕ್ತಾ—ಉಪಪನ್ನವಲ್ಲ (ಯುಕ್ತವಾಗುವುದಿಲ್ಲ); ತಮಃ—ಅಂಧಕಾರವು, ಅನ್ಯಭ್ರಮೇ—ಘಟಾದಿ ಅನ್ಯವಸ್ತುವಿಷಯಕ ಭ್ರಮದಲ್ಲಿ (ಭ್ರಮೆಯನ್ನುಂಟುಮಾಡುವುದರಲ್ಲಿ), ದೋಷಃ ಅಪಿ—ದೋಷವೇ ಆದರೂ, ಸ್ವದರ್ಶನೇ—ಅಂಧಕಾರದ ದರ್ಶನದಲ್ಲಿ (ಕತ್ತಲೆಯನ್ನು ನೋಡುವುದರಲ್ಲಿ, ಕತ್ತಲೆಯೇ), ದೋಷಃ ನ ಹಿ—ದೋಷವಲ್ಲವಷ್ಟೆ[1] (ಅಜ್ಞಾನಕ್ಕೆ ಅಜ್ಞಾನದ ಅರೋಪವಾಗುವುದೇ ದೋಷವೆಂದೂ ಹೇಳಲು ಬರುವುದಿಲ್ಲವೆಂದು, ಅಲ್ಲಿ ಪ್ರಾಪ್ತವಾಗುವ ಯುಕ್ತಿದೋಷವನ್ನು ನಿರೂಪಿಸಲಾಗಿದೆ).

---

ಅಂಧಕಾರವು ಅನ್ಯವಸ್ತುವಿನಲ್ಲಿ ಭ್ರಮೆಗೆ ಕಾರಣವಾಗಬಹುದು; ಆದರೆ ತನಗೆ ತಾನೇ (ತನ್ನ ವಿಷಯಕ್ಕೆ ತಾನೇ) ಭ್ರಮವಾಗುವುದಿಲ್ಲ; ಕತ್ತಲೆಯಲ್ಲಿ ಕತ್ತಲೆಯ ಆರೋಪವೆಂಬುದು ಇಲ್ಲ; ಅದರಂತೆ, ಅಜ್ಞಾನವಿದ್ದರೆ, ಅಜ್ಞಾನವಶದಿಂದ ಅಹಂ ಮಮಕಾರರೂಪದ ಸಾಂಸಾರಿಕ ಭ್ರಮೆಯುಂಟಾದೀತು—ಅಜ್ಞಾನವು ತನಗೆ ತಾನೇ ಭ್ರಮೆಯು ಹೇಗಾದೀತು? ಆಗುವುದಿಲ್ಲವಾದ್ದರಿಂದ ಬ್ರಹ್ಮನಲ್ಲಿ ಅಜ್ಞಾನದ ಆರೋಪವು ಯುಕ್ತವಲ್ಲ; ಮೇಲಾಗಿ ಬ್ರಹ್ಮನು ನಿರ್ದೋಷಿಯೆಂಬುದು ನಿನ್ನ ಮತ; ಆದ್ದರಿಂದ ಸಹ ಅವನಿಗೆ ಭ್ರಾಂತಿಯು ಯುಕ್ತವಲ್ಲ; ಅಜ್ಞಾನವು ಬ್ರಹ್ಮಾಶ್ರಿತವೆನ್ನು

---

[1] ಅಜ್ಞಾನವಿದ್ದರೆ, ಅಜ್ಞಾನವಶದಿಂದ, ಅಹಂಮಮಕಾರ ರೂಪದ ಸಾಂಸಾರಿಕ ಭ್ರಮವುಂಟಾಗಬಹುದು; ಅಜ್ಞಾನವು ತನಗೆ ತಾನೇ ಭ್ರಮೆಯಾಗುವುದು ಹೇಗೆ? (ಅಜ್ಞಾನದ ಇರುವಿಕೆಯೇ ಭ್ರಮವಲ್ಲ) ದೋಷವು ಸ್ವಯಂ ಇದ್ದು ಭ್ರಮಕಾರಣವಾಗುತ್ತದೆ— ಸ್ವಯಂ ಭ್ರಮವಲ್ಲ; ಅಜ್ಞಾನಾಶ್ರಿತನಾದ ಬ್ರಹ್ಮನಲ್ಲಿ ಅಜ್ಞಾನದ ಆರೋಪವು ಕೂಡುವುದಿಲ್ಲ.

**ತಮೋಂತರಂ ಚ ತಮಸಃ ಪ್ರಮಾಯೈ ಸ್ಯಾದ್ಭ್ರಮಾಯ ನ।**
**ತೇನಾಜ್ಞಾನಾಂತರಂ ಚಾಜ್ಞಾನಸ್ಯೋಪೋದ್ಬಲಕಂ ಭವೇತ್ ॥ ೭೯ ॥**

**ಪ್ರಮಾಯಾ ಏವ ಹೇತುಃ ಸ್ಯಾತ್ತದ್ಭೂಯಸ್ತ್ವೇ ಕ್ವತದ್ಭ್ರಮಃ।**
**ಅತದ್ವತಿ ಹಿ ತದ್ಧೀತ್ವೇ ಭ್ರಮಃ ಸ್ಯಾನ್ನತು ತದ್ವತಿ ॥ ೬೦ ॥**

ಮೊದಲಿನ ಅಜ್ಞಾನವು ನಂತರದ ಅಜ್ಞಾನಕ್ಕೆ ದೋಷರೂಪವಾಗಲಿ, ಎಂದರೆ ಹೇಳುತ್ತಾರೆ:—

(ಯಾವ ಕಾರಣದಿಂದ), ತಮೋಂತರಂ—ಬೇರೊಂದು ಅಂಧಕಾರವು, ತಮಸಃ – ಅಂಧಕಾರದ, ಪ್ರಮಾಯೈ—ಪ್ರಮೆಗಾಗಿಯೇ (ಯಥಾರ್ಥ—ಸತ್ಯ ಜ್ಞಾನಕ್ಕಾಗಿಯೇ), ಸ್ಯಾತ್—ಆಗುವುದೋ, ನ ಭ್ರಮಾಯ—(ಅಂಧಕಾರದ) ಭ್ರಮೆಗಾಗಿ ಅಲ್ಲವೋ, ತೇನ – ಆ ಕಾರಣದಿಂದ (ಒಂದು ತಮಸ್ಸು, ಬೇರೊಂದು ತಮಸ್ಸಿನ ಪ್ರಮೆಗೆ ಮಾತ್ರ ಅಸಹಾಯಕವಾಗುವುದರಿಂದ), ಅಜ್ಞಾನಾಂತರಂ—ಒಂದು ಅಜ್ಞಾನವು, ಅಜ್ಞಾನಸ್ಯ—(ನಂತರದ) ಅಜ್ಞಾನಕ್ಕೆ, ಉಪೋದ್ಬಲಕಂ – ದಾರ್ಢ್ಯವನ್ನುಂಟುಮಾಡುವುದು, ಭವೇತ್ – ಆಗುತ್ತದೆ

---

ವುದೂ, ಬ್ರಹ್ಮನು ನಿರ್ದೋಷಿಯೆನ್ನುವುದೂ ಪರಸ್ಪರ ವಿರೋಧವೇ ಸರಿ (೫೮). ಅಂಧಕಾರವು ಮತ್ತೊಂದು ಅಂಧಕಾರದ ಭ್ರಮೆಗೆ (ಯಥಾರ್ಥ ಜ್ಞಾನಕ್ಕೆ ಕಾರಣವಾಗಬಹುದಲ್ಲದೇ—ಅದರ ಭ್ರಮೆಗಲ್ಲ, ಅದರಂತೆ, ಒಂದು ಅಜ್ಞಾನವು ಮತ್ತೊಂದು ಅಜ್ಞಾನದ ಪ್ರಾಬಲ್ಯಕ್ಕೆ (ದಾರ್ಢ್ಯಕ್ಕೆ) ಕಾರಣ ವಾಗಬಲ್ಲದು—ಯಾವ ದೋಷಕ್ಕೂ ಅಲ್ಲ; ಪ್ರಮೆಗೆ ಮಾತ್ರ ಕಾರಣವಾಗು ವುದರಿಂದ ಅಜ್ಞಾನದ ನಿಬಿಡತ್ವವು (ಅಂಧಕಾರದ ನಿಬಿಡತೆಯಂತೆ) ಅಜ್ಞಾನದ (ಅಂಧಕಾರದ) ಭ್ರಮೆಯು ಇರಲು ಸಾಧ್ಯವಿಲ್ಲ ; (ಒಂದು ಅಜ್ಞಾನದಿಂದ ಇನ್ನೊಂದು ಅಜ್ಞಾನದಲ್ಲಿ ಜ್ಞಾನಪ್ರಕಾಶವನ್ನುಂಟುಮಾಡಿದರೆ ಭ್ರಮೆ ಯಾದೀತು ! ಹಾಗಾಗಲು ಶಕ್ಯವೇ ಇಲ್ಲ ; ಇಲ್ಲದಿದ್ದಲ್ಲಿ ಇರುವುದೆಂದು ತಿಳಿ ಯುವುದೇ ಭ್ರಮೆಯು ; ಇದ್ದುದನ್ನೇ ತಿಳಿಯುವುದು ಭ್ರಮೆಯಲ್ಲ)[1]

---

[1] ವಿರಲವಾದ ನೆರಳಲ್ಲಿ ಅಂಧಕಾರವಿಲ್ಲೆಂಬ ಭ್ರಮೆಯು ಸಂಭವಿಸಬಹುದಾದರೂ, ರಾತ್ರಿಯಲ್ಲಿ (ಗುಹೆ ಮೊದಲಾದ ಸ್ಥಳದಲ್ಲಿ ಸಹ) ನಿಬಿಡವಾದ ಅಂಧಕಾರವಿರುವಲ್ಲಿ ಅಂಧಕಾರದ ಭ್ರಮೆಯೆಂಬುದು ಇರಲು ಶಕ್ಯವಿಲ್ಲವಷ್ಟೆ.

(ಅಗಬಹುದಲ್ಲದೇ ದೋಷರೂಪವಾಗುವುದಿಲ್ಲ) ; ಅತಃ–ಆದ್ದರಿಂದ, ಪ್ರಮಾಯಾಃ ಏವ–ಯಥಾರ್ಥಜ್ಞಾನಕ್ಕೇ, ಹೇತುಃ–ಕಾರಣವು, ಸ್ಯಾತ್– ಆಗುತ್ತದೆ (ಅಜ್ಞಾನಬಾಹುಲ್ಯದಿಂದ ಅಜ್ಞಾನವೇ ದೃಢವಾಗುತ್ತದೆಯಲ್ಲದೇ ಬೇರೆಯಲ್ಲ) ; ತದ್ಭೂಯಸ್ತ್ವೇ – ಅಂಧಕಾರದ ನಿಬಿಡತ್ವವೇ ಇದ್ದಲ್ಲಿ, ತದ್ಭ್ರಮಃ ಕ್ವ – ಅಂಧಕಾರದ ಭ್ರಮೆಯೆಲ್ಲಿ? (ಹೇಗಿರಲು ಸಾಧ್ಯ?) ಅತದ್ವತಿ – ಅದಿಲ್ಲದಿದ್ದಲ್ಲಿ (ಇಲ್ಲದ ವಸ್ತುವಿನಲ್ಲಿ), ತದ್ಧೀತ್ವೇ–ಅದಿದೆಯೆಂಬ ಜ್ಞಾನವು (ಇದೆಯೆಂದು ತಿಳಿಯುವುದು), ಭ್ರಮಃ ಸ್ಯಾತ್ – ಭ್ರಮುವೆನಿಸುತ್ತದೆ; ತದ್ವತಿ–ಅದನ್ನು ಮೊದಲೇ ಉಳ್ಳದ್ದರಲ್ಲಿ, ನ–ಭ್ರಮೆಯಿಲ್ಲವು.

**ಅನಾದ್ಯಜ್ಞಾನವಾದೇ ಚ ತಸ್ಯಾಜ್ಞಾನಂ ನ ಕಿಂಚನ ॥ ೬೧ ॥**

ನಮ್ಮಲ್ಲಿ ನಿನ್ನನ್ನು ಖಂಡಿಸುವ ಯುಕ್ತಿಗಳಿಗೇನೂ ಕೊರತೆಯಿಲ್ಲವೆಂದು ತೋರಿಸಲು, ಈ ಪೂರ್ವದ ದೋಷಗಳನ್ನು ಹೇಳಿದ್ದಾಯಿತು; ವಸ್ತುತಃ ಅದು ನಿನ್ನ ಮತವೇ ಅಲ್ಲವೆನ್ನುತ್ತಾರೆ:—

ಅನಾದ್ಯಜ್ಞಾನವಾದೇ–(ನಿನ್ನ) ಅಜ್ಞಾನವು ಅನಾದಿಯೆಂಬ ವಾದದಲ್ಲಿ, ತಸ್ಯ – ಅಜ್ಞಾನಕ್ಕೆ, ಅಜ್ಞಾನಂ ಕಿಂಚನ – ಬೇರೊಂದು (ಅಜ್ಞಾನವೆಂಬುದೊಂದು), ನ–ಇಲ್ಲವೇ ಇಲ್ಲ (ಆದ್ದರಿಂದ ಪೂರ್ವದ ಅಜ್ಞಾನವು ನಂತರದ ಅಜ್ಞಾನದ (ಭ್ರಮೆಗೆ) ಆರೋಪಕ್ಕೆ ಕಾರಣವನ್ನೇ ಹೇಳುವಂತಿಲ್ಲ).

**ಕಿಂಚ ಪ್ರಾತೀತಿಕಾಜ್ಞಾನಂ ಕಥಂ ಸ್ವಭ್ರಮಕಾರಣಂ ।**
**ಭ್ರಮಾತ್ಪೂರ್ವೋ ಹಿ ದೋಷಃ ಸ್ಯಾದ್ದೋಷಜಶ್ಚ**
**ಭ್ರಮೋ ಭವೇತ್ ॥ ೬೨ ॥**

---

(ಶ್ಲೋ–೬೦). ನಿಮ್ಮ (ಅದ್ವೈತ) ಮತಪ್ರಕ್ರಿಯೆಯಂತೆ ಆತ್ಮಾಶ್ರಿತವಾದ ಅಜ್ಞಾನವು ಅನಾದಿಯಾದುದು ; 'ಅನಾದಿಮಾಯಯಾ ಸುಪ್ತಃ' ಇತ್ಯಾದಿಯಾಗಿದೆ–ನಿಮ್ಮ ಮತಪ್ರಕ್ರಿಯೆಯು ; ಅನಾದಿಯಾದ ಅಜ್ಞಾನವು ಅಜ್ಞಾನದ (ಉತ್ತರದ ನಂತರದ ಅಜ್ಞಾನದ) ಆರೋಪಕ್ಕೆ ಕಾರಣವೆನ್ನಲು ಬರುವುದಿಲ್ಲ (೬೧). ಅಜ್ಞಾನದ ಪ್ರತೀತಿ ಕಾಲದಲ್ಲಿ (ಅಹಂ ಅಜ್ಞಃ ಎಂಬ ಅನುಭವದ ಸಮಯದಲ್ಲಿ) ತೋರುವ (ಆಗಲೇ ಇರುವ ಅಜ್ಞಾನವು,) ತನ್ನ ಭ್ರಮೆಗೆ (ಅಜ್ಞಾನದ ಆರೋಪಕ್ಕೆ) ತಾನೇ ಹೇಗೆ ಕಾರಣವಾಗುತ್ತದೆ? ಭ್ರಮೆಗೆ

ಬೇರೆ ದೂಷಣವನ್ನು ಹೇಳುತ್ತಾರೆ :—

ಕಿಂಚ–ಮತ್ತೂ ಏನೆಂದರೆ, ಪ್ರತೀತಿಕಾಜ್ಞಾನಂ–ಪ್ರತೀತಿ (ಅನುಭವ) ಕಾಲದಲ್ಲಿ ತೋರುವ (ಆಗ ಮಾತ್ರ ಇರುವುದಾದ) ಅಜ್ಞಾನವು, ಕಥಂ–ಹೇಗೆ, ಸ್ವಭ್ರಮಕಾರಣಂ – ತನಗೇ ಭ್ರಮಕಾರಣವಾಗುತ್ತದೆ? (ಆಗುವುದಿಲ್ಲ); ದೋಷಃ – ದೋಷವು, ಭ್ರಮಾತ್ ಪೂರ್ವಃ ಹಿ–(ಹಿ–ಯಾವ ಕಾರಣದಿಂದ) ದೋಷವು ಭ್ರಮೆಗಿಂತ ಪೂರ್ವದಲ್ಲಿ (ಮೊದಲಿಗೇ) ಇರಬೇಕಷ್ಟೆ? ದೋಷಜಶ್ಚ–ದೋಷದಿಂದ ಹುಟ್ಟಿದುದು, ಭ್ರಮಃ–ಭ್ರಮವು, ಭವೇತ್–ಆಗಬಲ್ಲದು! (ಕಾರಣವು ಕಾರ್ಯದ ಮೊದಲೇ ಅವಶ್ಯವಾಗಿರಬೇಕು—ದೋಷವು ಇದ್ದರೆ ಭ್ರಮದ ಉತ್ಪತ್ತಿಯು).

**ದೋಷೇ ಧೀಃ ಸ್ಯಾದ್ಭ್ರಮಾಕಾರಾ ಭ್ರಮೇ ಸತ್ಯೇವ ತಚ್ಚ ಸತ್ ।**
**ಪ್ರಾತೀತಿಕಂ ಭವೇದ್ದೋಷ ಇತ್ಯನ್ಯೋನ್ಯಾಶ್ರಯೋ ಧ್ರುವಃ ॥೬೩॥**

ಅನ್ಯದೂಷಣವನ್ನೂ ತೋರಿಸುತ್ತಾರೆ :—

ದೋಷೇ (ಸತಿ) – ಅಜ್ಞಾನವೆಂಬ ದೋಷವಿದ್ದರೆ, ಭ್ರಮಾಕಾರಾ–ಭ್ರಮೆಯೆಂಬ, ಧೀಃ–ಜ್ಞಾನವು, ಸ್ಯಾತ್–ಉಂಟಾಗುತ್ತದೆ; ಭ್ರಮೇ ಸತಿ ಏವ–ಭ್ರಮೆಯು ಇದ್ದರೆ ಮಾತ್ರ, ತತ್ – ಅಜ್ಞಾನವು, ಸತ್ – ಇರುತ್ತದೆ (ಅಜ್ಞಾನದ ಭ್ರಮೆಯಿದ್ದರೆ); ಪ್ರಾತೀತಿಕಂ ಭವೇತ್ – ಪ್ರತೀತಿಕಾಲದಲ್ಲಿ ಇರುವುದೆಂಬ, ದೋಷಃ – ಅಜ್ಞಾನವೆಂಬ ದೋಷವು ಇರುತ್ತದೆ (ಅಜ್ಞಾನವೆಂಬ ದೋಷವಿದ್ದರೆ ಅಜ್ಞಾನಭ್ರಮವಿರುತ್ತದೆ); ಇತಿ–ಹೀಗೆ, ಅನ್ಯೋನ್ಯಾಶ್ರಯಃ– ಅನ್ಯೋನ್ಯಾಶ್ರಯದೋಷವು, ಧ್ರುವಃ – ಸ್ಥಿರವಾಗುತ್ತದೆ (ತಪ್ಪುವುದಿಲ್ಲ).

---

ಕಾರಣವಾದ ದೋಷವು ಭ್ರಮೆಗೆ (ಭ್ರಮೆಯ ಉತ್ಪತ್ತಿಗೆ) ಪೂರ್ವದಲ್ಲಿರಬೇಕು; ದೋಷದಿಂದ ಭ್ರಮೆಯು ಹುಟ್ಟಬೇಕು; ಕಾರಣವಾದುದು (ದೋಷವು) ಕಾರ್ಯಕ್ಕೆ (ಭ್ರಮೆಗೆ) ಮೊದಲೇ ಇರಬೇಕಾದುದು ಅವಶ್ಯವು (೬೨). ಇದೂ ಅಲ್ಲದೇ, ದೋಷವಿದ್ದರೆ (ಅಜ್ಞಾನವಿದ್ದರೆ), ಭ್ರಮರೂಪದ ಪ್ರತೀತಿಯುಂಟಾಗುತ್ತದೆ; ಭ್ರಮೆಯಿದ್ದರೆ ಮಾತ್ರ ಅಜ್ಞಾನವಿರುತ್ತದೆ, ಎಂಬ (ಅಜ್ಞಾನವೆಂಬ ದೋಷವಿರುತ್ತದೆ) ಅನ್ಯೋನ್ಯಾಶ್ರಯ ದೋಷವು

**ಕಿಂಚಾಜ್ಞಾನಾಧ್ಯಾಸರೂಪೀ ಸಾಕ್ಷ್ಯನಾದಿರ್ಮತೇ ತವ ।**
**ಜನ್ಮೈವಾಸ್ಯ ನ ಯುಕ್ತಂ ತದ್ದೋಷಜತ್ವಂ ತು ದೂರತಃ ॥ ೬೪ ॥**

ಬೇರೊಂದು ದೂಷಣವನ್ನೂ ಹೇಳುತ್ತಾರೆ:

ಕಿಂಚ – ಮತ್ತೂ ಏನೆಂದರೆ, ತವ – ನಿನ್ನ, ಮತೇ – ಮತದಲ್ಲಿ (ಮತ ಪ್ರಕ್ರಿಯೆಯಂತೆ), ಅಜ್ಞಾನಾಧ್ಯಾಸರೂಪೀ–ನಾನು ಅಜ್ಞನೆಂದು ಉಂಟಾಗ ತಕ್ಕ ಅಜ್ಞಾನದ ಭ್ರಮೆಯು, ಸಾಕ್ಷೀ – ಸಾಕ್ಷೀರೂಪವಾದುದೇ (ಸಾಕ್ಷಿ ಯಿಂದಲೇ ಗ್ರಹಿಸಲ್ಪಡುತ್ತದೆ) ; (ಸಾಕ್ಷೀ – ಚಿದ್ರೂಪದ ಸಾಕ್ಷಿಯೂ), ಅನಾದಿಃ–(ನಿನ್ನಂತೆ) ಅನಾದಿಯು ; ಅಸ್ಯ–(ಅನಾದಿಯಾದ) ಈ ಸಾಕ್ಷಿಗೆ, ಜನ್ಮ ಏವ – ಉತ್ಪತ್ತಿಯೇ, ನ ಯುಕ್ತಂ – ಕೂಡುವುದಿಲ್ಲ, (ಆದ್ದರಿಂದ) ತದ್ದೋಷಜತ್ವಂ–(ಅಹಂ ಅಜ್ಞಃ ಎಂಬ) ಪ್ರತೀತಿಯು ದೋಷದಿಂದ ಹುಟ್ಟಿ ದ್ದೆಂಬುದು, ದೂರತಃ ತು – ದೂರವೇ ಉಳಿಯಿತು (ನಾನು ಅಜ್ಞನೆಂಬ ಭ್ರಮೆಯು ದೋಷದಿಂದ ಹುಟ್ಟಿತ್ತೆಂಬುದು ಅತಿ ಅಸಂಭವವೇ ಸರಿ).

**ಅಮಾನತ್ವಸ್ವತಸ್ತ್ವಂ ಸ್ಯಾದ್ದೋಷಾಜನ್ಯೋ ಭ್ರಮೋಽಪಿ ಚೇತ್ ।**
**ಅತಃ ಪ್ರಮೇಯಮಾನತ್ವಾತ್ತ್ವಯ್ಯಜ್ಞಾನಮಕಲ್ಪಿತಂ ॥ ೬೫ ॥**

ದೋಷದಿಂದ ಭ್ರಮೆಯು ಜನ್ಯವಲ್ಲವೆಂದರೆ ಏನು ತಪ್ಪು ? ಎಂದರೆ ಹೇಳುತ್ತಾರೆ :—

ಅಮಾನತ್ವಸ್ವತಸ್ತ್ವಂ–ಅಪ್ರಾಮಾಣಿಕವಾದ ಸ್ವತಸ್ತ್ವವು (ಸ್ವಾಭಾವಿಕ ವಾಗಿಯೇ ಇರುತ್ತದೆಂಬುದು), ದೋಷಾಜನ್ಯಃ–ದೋಷಜನ್ಯವಲ್ಲದ,

---

ತಪ್ಪುವುದಿಲ್ಲ (೬೩). ಮತ್ತೇನೆಂದರೆ ಅದ್ವೈತಮತದಂತೆ, 'ಅಹಮಜ್ಞಃ' ಎಂಬ ಅಜ್ಞಾನದ ಆರೋಪವು ಸಾಕ್ಷಿಯಿಂದಲೇ ಗ್ರಹಿಸಲ್ಪಡುತ್ತದೆ ; ಸಾಕ್ಷಿ ಯಾದರೋ ಅನಾದಿಯಾದುದು ; ಅದಕ್ಕೆ ಉತ್ಪತ್ತಿ (ಜನ್ಮ) ಎಂಬುದಿಲ್ಲ; ದೋಷದಿಂದ ಅದು ಹುಟ್ಟಿತೆಂದು ಹೇಳುವುದು ದೂರವೇ ಉಳಿಯಿತು ; ಆದ್ದರಿಂದ ನಾನು ಅಜ್ಞನೆಂಬ ಅನುಭವವು (ಪ್ರತೀತಿಯು – ಜ್ಞಾನವು) ಭ್ರಮಾತ್ಮಕವಲ್ಲ (೬೪). ದೋಷದಿಂದ ಹುಟ್ಟಿದ್ದಲ್ಲವೆಂಬ ಈ ಅಜ್ಞಾನ ಭ್ರಮೆಯು, ಯಾವ ಪ್ರಮಾಣವೂ ಇಲ್ಲದೇ, ಸ್ವಾಭಾವಿಕವಾಗಿಯೇ ಇರು ವುದೆಂದು ಹೇಳಿದರೆ, ಸಾಕ್ಷೀಗೋಚರವೆಂಬ ಪ್ರಮಾಣದಿಂದಲೇ (ಅಹಮಜ್ಞಃ

ಭ್ರಮಃ ಅಪಿ – ಭ್ರಮವೂ, ಚೇತ್ – ಆದರೆ, (ತರ್ಹಿ – ಆಗ) (ಸಾಕ್ಷಿಗೆ ಅಜ್ಞಾನದ ಜ್ಞಾನವು ದೋಷಜನ್ಯವಲ್ಲವಾದ್ದರಿಂದ—ಅಜ್ಞಾನದ ಆರೋಪವು ಕೂಡುವುದಿಲ್ಲವಾದ್ದರಿಂದ), ಪ್ರಮೀಯಮಾಣತ್ವಾತ್ – ಪ್ರಮಾಣಸಿದ್ಧವೇ ಆಗುವುದರಿಂದ (ಇದೆ, ಎಂಬ ಪ್ರಮೆಗೆ ಗೋಚರವಾದ್ದರಿಂದ), ತ್ವಯಿ—ನಿನ್ನಲ್ಲಿ (ನಿನಗೆ), ಅಜ್ಞಾನಂ – ಅಜ್ಞಾನವು (ಅಜ್ಞಾನವು ಸಾಕ್ಷಿಯಿಂದಲೇ ಸಾಧಿತ ವಾಗಿ, ಅಜ್ಞಾನವು ಆರೋಪಿತವೆಂಬುದು ಸಿದ್ಧಿಸಲಿಲ್ಲವಾದ್ದರಿಂದ), ಅಕಲ್ಪಿತಂ –ಕಲ್ಪಿತವಲ್ಲ (ಅಜ್ಞಾನಕ್ಕೆ ಬ್ರಹ್ಮಾಶ್ರಿತತ್ವವಿಲ್ಲ ; ಕಿಂತು ಜೀವಾಶ್ರಿತತ್ವವೇ ಸಿದ್ಧವಾಗುತ್ತದೆ) (ಈ ತತ್ವವನ್ನು ತಿಳಿಯದ ನೀನೇ ಅಜ್ಞಾನಿಯು ; ತಿಳಿದ ವನು ಜ್ಞಾನಿಯೇ ಸರಿ—ಆತನಿಗೆ ಅಜ್ಞಾನವೆಂಬ ಭ್ರಮೆಯಿಲ್ಲ).

**ತತ್ವಜ್ಞಾನಾಯೋಗ್ಯತಾಖ್ಯದೋಷೋಽಸ್ಯಾಸುರ ಸಾಕ್ಷಿಷು ।**
**ತನ್ಮೂಲತ್ವಂ ಚ ತಜ್ಜ್ಞಾನೇ ವಿಶೇಷಾದ್ಘಟತೇ ಮಮ ॥ ೬೬ ॥**

ಅಯೋಗ್ಯ ಜೀವರ ಸಾಕ್ಷಿಯೂ, ನಿತ್ಯ ಮತ್ತು ಭ್ರಮಾತ್ಮಕವೆಂದು ಹೇಳುವ ಸಿದ್ಧಾಂತಿಗಳಲ್ಲಿ ಭ್ರಮಕಾರಣವಾದ ದೋಷವಾವುದೆಂದರೆ ಹೇಳು ತ್ತಾರೆ :—

ಆಸುರಸಾಕ್ಷಿಷು – ಅಸುರಸಂಬಂಧಿ ಸಾಕ್ಷಿಜ್ಞಾನದಲ್ಲಿ, ತತ್ವಜ್ಞಾನಾ-ಯೋಗ್ಯತಾಖ್ಯದೋಷಃ–ತತ್ವಜ್ಞಾನಕ್ಕೆ(ಯಥಾರ್ಥಜ್ಞಾನಕ್ಕೆ) ಅನರ್ಹವೆಂಬ ದೋಷವು, ಸ್ಯಾತ್ – (ಭ್ರಮಕಾರಣವು) ಆಗಿರುತ್ತದೆ ; ತತ್ ಜ್ಞಾನೇ –

---

ಎಂಬುದು) ಸಿದ್ಧವಾಗುವುದರಿಂದ) ಅಜ್ಞಾನವು ನಿತ್ಯ ಜೀವಾಶ್ರಿತವೆಂದೂ, ಬ್ರಹ್ಮಾಶ್ರಿತವಲ್ಲವೆಂದೂ (ಬ್ರಹ್ಮನಿಗೆ ಅಹಮಜ್ಞಃ ಎಂಬ ಅನುಭವವಿತ್ತೆಂಬಲ್ಲಿ ಪ್ರಮಾಣವಿಲ್ಲದ್ದರಿಂದ) ಸಿದ್ಧವಾಗುತ್ತದೆ ; ಆದ್ದರಿಂದ ಭ್ರಮೆಯು ದೋಷ ಜನ್ಯವಲ್ಲವೆಂದು ಹೇಳುವುದು ಸುತರಾಂ ಅಯುಕ್ತವು ; ಈ ತತ್ವವನ್ನು ತಿಳಿಯದ ನೀನೇ ಅಜ್ಞಾನಿಯು ; ಜೀವನೇ ಅಜ್ಞಾನಸ್ವಭಾವದವನೆಂದು ತಿಳಿದವನೇ ಜ್ಞಾನಿಯು (೬೫). ಅಸುರಸ್ವಭಾವದ ಸಾಕ್ಷಿಗಳಲ್ಲಿ (ಸ್ವರೂಪ ವುಳ್ಳ ಜೀವರಲ್ಲಿ), ತತ್ವಜ್ಞಾನಕ್ಕೆ ಸ್ವರೂಪದಿಂದಲೇ ಅಯೋಗ್ಯರೆಂಬ ದೋಷ ವಿರುತ್ತದೆ—ಆ ದೋಷದಿಂದ ಜನ್ಯವಾದುದು ಅವರ ಮಿಥ್ಯಾಜ್ಞಾನವು ; ಜೀವಸ್ವರೂಪವು ನಿತ್ಯವಾದುದರಿಂದ, ಅವರ ಭ್ರಮಾತ್ಮಕ ಜ್ಞಾನವೂ

ಅಜ್ಞಾನ ವಿಷಯದಲ್ಲಿ, ತನ್ಮೂಲತ್ವಂ—ತತ್ವಜ್ಞಾನಕ್ಕೆ ಅನರ್ಹರೆಂಬ ದೋಷವೇ ಕಾರಣವು (ಇದು ಸ್ಪಷ್ಟವೇ); ಮಮ—ನನ್ನ (ತತ್ವವಾದಿಯ—ಸಿದ್ಧಾಂತಿಯ), ಮತೇ – ಮತದಲ್ಲಿ, ವಿಶೇಷಾತ್ – (ಯೋಗ್ಯತೆ ಮತ್ತು ಜ್ಞಾನಗಳಿಗೆ ಜೀವ ಸ್ವರೂಪತ್ವವೆಂಬ ಅಭೇದವಿದ್ದರೂ), ಭೇದಪ್ರತಿನಿಧಿಯಾದ 'ವಿಶೇಷ' ದ ಬಲದಿಂದ, ಘಟತೇ—ಕೂಡುತ್ತದೆ (ಯುಕ್ತವಾಗುತ್ತದೆ) (ನಿತ್ಯಭ್ರಮೆಗೆ—ಮಿಥ್ಯಾಜ್ಞಾನಕ್ಕೆ, ಆ ಜೀವರ ಸದೋಷಸ್ವರೂಪವೇ ಕಾರಣವು).[1]

**ನಿರ್ವಿಶೇಷಚಿತೋ ದೋಷಃ ಕಃ ಸ್ಯಾಜ್ಜನ್ಮ ಚ ಕಿಂ ತವ ।**
**ಅಜ್ಞಾನಾರೋಪವಾದಸ್ತದಜ್ಞಾನಾದೇವ ಕೇವಲಂ ॥ ೬೭ ॥**

ತವ—ನಿನಗೆ (ಅದ್ವೈತಮತದಲ್ಲಿ), ನಿರ್ವಿಶೇಷಚಿತಃ—ಸರ್ವಧರ್ಮಶೂನ್ಯ ಚೇತನನಿಗೆ, ಕಃ ದೋಷಃ—ದೋಷವಾವುದು? ಚ—ಮತ್ತು, ಕಿಂ ಜನ್ಮ—ಜನ್ಮವಾವುದು? (ಭ್ರಮೋತ್ಪತ್ತಿಯು ಹೇಗೆ?) (ಯಾವುದೂ ಇಲ್ಲ); ತತ್—ಆದ್ದರಿಂದ, ಅಜ್ಞಾನಾರೋಪವಾದಃ—(ಬ್ರಹ್ಮಚೇತನಕ್ಕೆ) ಅಜ್ಞಾನದ ಆರೋಪವೂ, ಅದರಿಂದ ಜೀವ ಭಾವ ಮತ್ತು ಭ್ರಮೆಯೂ, ಎಂಬ ವಾದವು,

---

ನಿತ್ಯವೇ ; ಸ್ವರೂಪ ಮತ್ತು ಜ್ಞಾನಗಳಿಗೆ ಐಕ್ಯವಿದ್ದರೂ (ಅಭೇದವಿದ್ದರೂ), ಅವುಗಳ ವ್ಯಂಜಕ ವ್ಯಂಗ್ಯಭಾವದ ಸಿದ್ಧಿಗೆ ಅಪೇಕ್ಷಿತವಾದ ಭೇದವು, ಭೇದ ಪ್ರತಿನಿಧಿಯಾದ 'ವಿಶೇಷ' ದ ಬಲದಿಂದ ಸಂಭಾವ್ಯವಾಗುತ್ತದೆ (ಘಟಿಸುತ್ತದೆ —ಯುಕ್ತವಾಗುತ್ತದೆ) (೬೬). ನಿನ್ನ ಮತಪ್ರಮೇಯವನ್ನು ಸರಿಯಾಗಿ ತಿಳಿಯದೇ (ಅದರ ಅಜ್ಞಾನದಿಂದ) ಅಜ್ಞಾನದ ಆರೋಪವೆಂಬ, ಕೇವಲ ಯುಕ್ತಿವಿರುದ್ಧವಾದ ಈ ವಾದವನ್ನು ಮುಂದಿಡುತ್ತಿರುವಿ; ನಿನ್ನ ಮತದಂತೆ ಚೇತನನು ನಿರ್ವಿಶೇಷನು (ವಿಶೇಷ ಮೊದಲಾದ ಸಮಸ್ತ ಧರ್ಮಶೂನ್ಯನು) ಆಗಿದ್ದಾನೆ ; ಆತನಿಗೆ ದೋಷವಾವುದು? ಅದರಿಂದ ಭ್ರಮೆಯ ಉತ್ಪತ್ತಿ ಹೇಗೆ? (ಆವುದೂ ಇಲ್ಲ) ; ಆದ್ದರಿಂದ ನಿನ್ನ ನಿರ್ವಿಶೇಷತ್ವವಾದವನ್ನು ತಿಳಿಯದೇ ಅಜ್ಞಾನದ ಆರೋಪವೇ ಭ್ರಮೆಗೆ ಕಾರಣವೆನ್ನುವಿ (೬೭).

---

1 ದುಷ್ಟಸ್ವರೂಪದಿಂದ ಮಿಥ್ಯಾಜ್ಞಾನವು (ಅಯಥಾರ್ಥಜ್ಞಾನವು) ಅಭಿವ್ಯಕ್ತವಾಗಲು ಅವಶ್ಯಕವೆಂಬ ಭೇದಭಾವವು (ವ್ಯಂಗ್ಯ—ಜ್ಞಾನ ; ವ್ಯಂಜಕ—ಸ್ವರೂಪಗಳೆಂಬ ಭೇದಭಾವವು) ಭೇದಪ್ರತಿನಿಧಿಯಿಂದ ಘಟಿಸುತ್ತದೆ.

*

ತದಜ್ಞಾನಾದೇವ[1]–(ನಿರ್ವಿಶೇಷ ಚೇತನತ್ವವಾದದ) ಅಜ್ಞಾನದಿಂದ, ಕೇವಲಂ–ಮಾತ್ರವೇ (ಅನ್ಯಕಾರಣವಿಲ್ಲ). (ಭ್ರಮೆಗೆ ಕಾರಣವು, ಚೇತನದಲ್ಲಿ ಅಜ್ಞಾನದ ಆರೋಪವೇ ಎಂಬುದು ಯುಕ್ತವಲ್ಲ).

**ಅಜ್ಞಾನಾರೋಪಮೂಲಸ್ತೇ ಶಾಸ್ತ್ರವಿಸ್ತೃತಪಾದಪಃ ।**
**ಮೂಲಸ್ಯ ದುರ್ಬಲತ್ವೇ ತು ಸೋಽಪಿ ವಾತಾಹತಃ ಪತೇತ್ ॥ ೬೮ ॥**

ಅಜ್ಞಾನದ ಆರೋಪವೇ ಕೂಡುವುದಿಲ್ಲವೆಂಬ ಕಾರಣದಿಂದ ನಿನ್ನ ಪೂರಾ ಶಾಸ್ತ್ರವೇ ಬಿದ್ದುಹೋಗುತ್ತದೆನ್ನುತ್ತಾರೆ:—

ಅಜ್ಞಾನಾರೋಪಮೂಲಃ–ಅಜ್ಞಾನದ ಆರೋಪವೇ ಮೂಲ (ಬುಡ–ಬೇರು) ವಾಗಿ ಉಳ್ಳ, ತೇ – ನಿನ್ನ, ಶಾಸ್ತ್ರವಿಸ್ತೃತಪಾದಪಃ – ಶಾಸ್ತ್ರವೆಂಬ ವಿಸ್ತಾರವಾದ ವೃಕ್ಷವು, ವಾತಾಹತಃ–ವಾಯುವಿನಿಂದ ಹತವಾಗಿ (ತಾಡಿತವಾಗಿ) (ಮುಖ್ಯಪ್ರಾಣನ ಯುಕ್ತಿಗಳಿಂದ ತಾಡಿತವಾಗಿ), ಸಃ ಅಪಿ–ಆ ಮಹಾವೃಕ್ಷವೇ, ಮೂಲಸ್ಯ–ಮೂಲದ (ಬುಡದ), ದುರ್ಬಲತ್ವೇನ–ಅಸಾಮರ್ಥ್ಯದಿಂದ (ಬಲಹೀನತೆಯಿಂದ), ಪತೇತ್ ತು–ಬಿದ್ದುಹೋಗುವುದೇ ಸರಿ.

**ಸತ್ಯಾಜ್ಞಾನಭವಂ ವಿಶ್ವಮಸತ್ಯಂ ಕೇನ ಹೇತುನಾ ।**
**ಆಮ್ರಸ್ಯ ಬೀಜತಃ ಕಿಂ ಸ್ಯಾದ್ವಿಷವೃಕ್ಷಸ್ಯ ಸಂಭವಃ ॥ ೬೯ ॥**

ನಿನ್ನ ಶಾಸ್ತ್ರವು ಅಜ್ಞಾನಾರೋಪವೆಂಬ ಮೂಲದಮೇಲೆ ನಿಂತ ಮಹಾವೃಕ್ಷದಂತಿದೆ; ಆ ಮೂಲವು (ವೃಕ್ಷದ ಬುಡವು) ದುರ್ಬಲವಾದುದರಿಂದ, ಪ್ರಚಂಡವಾಯುವಿನ ಹೊಡೆತವನ್ನು ತಡೆಯಲಾರದೆ ಬಿದ್ದುಹೋಗುವುದು ನಿಶ್ಚಯ; ವಾಯ್ವವತಾರರಾದ ಶ್ರೀಮದಾಚಾರ್ಯರ ಶಾಸ್ತ್ರೋಕ್ತ ಸದ್ಯುಕ್ತಿಗಳೆಂಬ ಗಾಳಿ ಹೊಡೆತಕ್ಕೆ ಸಿಕ್ಕು ಅದ್ವೈತಶಾಸ್ತ್ರರೂಪದ ಮಹಾವೃಕ್ಷವು, ಅದನ್ನೆದುರಿಸಿ ನಿಲ್ಲಲಾರದೇ, ಬಿದ್ದುಹೋಗುತ್ತದೆ (೬೮). ಅಜ್ಞಾನವು ಆರೋಪಿತವಲ್ಲದೇ ಸತ್ಯವಾದರೆ, ಅದ್ವೈತದ ಹಾನಿ ಮಾತ್ರವಲ್ಲ, ಜಗನ್ಮಿಥ್ಯಾತ್ವವೂ ನಿಲ್ಲುವುದಿಲ್ಲ; ಸತ್ಯವಾದ ಅಜ್ಞಾನದಿಂದ ಹುಟ್ಟಿದ (ಸತ್ಯಭೂತವಾದ

---

[1] ಚೇತನನಿಗೆ ನಿರ್ವಿಶೇಷತ್ವವನ್ನು (ನಿರ್ಧರ್ಮಕತ್ವವನ್ನು) ಅಂಗೀಕರಿಸಿರುವುದರಿಂದ, ಸ್ವರೂಪಯೋಗ್ಯತೆ, ಎಂಬ ಧರ್ಮವೂ ಇಲ್ಲದಂತಾಗಿ, ಆರೋಪಮೂಲವೆಂಬ ದೋಷಕ್ಕೂ ಅವಕಾಶವೇ ಇಲ್ಲವಾಗುತ್ತದೆ.

ಆ ಶಾಸ್ತ್ರವೃಕ್ಷವು ಬೀಳುವ ಪ್ರಕಾರವನ್ನು ನಿರೂಪಿಸುತ್ತಾರೆ :—

ಸತ್ಯಾಜ್ಞಾನಭವಂ – ( ಸತ್ಯ = ಅನಾರೋಪಿತವಾದುದು ) ಸತ್ಯವೆಂಬ ಅಜ್ಞಾನದಿಂದ ಹುಟ್ಟಿದ (ಅಜ್ಞಾನವೇ ಉಪಾದಾನಕಾರಣವಾಗಿ ಉಳ್ಳ), ವಿಶ್ವಂ–ಜಗತ್ತು, ಕೇನ–ಯಾವ, ಹೇತುನಾ–ಹೇತುವಿನಿಂದ (ಕಾರಣದಿಂದ–ಲಕ್ಷಣಜ್ಞಾನದಿಂದ), ಅಸತ್ಯಂ – ಅಸತ್ಯವು (ಮಿಥ್ಯೆಯು ?); ಆಮ್ರಸ್ಯ – ಮಾವಿನ, ಬೀಜತಃ – ಬೀಜದಿಂದ, ವಿಷವೃಕ್ಷಸ್ಯ – ವಿಷವೃಕ್ಷದ (ಬೇವಿನ ಮರದ), ಸಂಭವಃ–ಉತ್ಪತ್ತಿಯು, ಸ್ಯಾತ್ ಕಿಂ–ಆಗುವುದೇನು ? (ಇಲ್ಲ) (ಸತ್ಯವಾದ ಉಪಾದಾನ ಕಾರಣದಿಂದ ಕಾರ್ಯವೂ ಸತ್ಯವಾದುದೇ ಆಗಬೇಕು–ಈ ವಿಷಯಕ್ಕೆ ಉಕ್ತವಾದ ದೃಷ್ಟಾಂತವಿದು; ಆದ್ದರಿಂದ ಆರೋಪಿತ ಅಜ್ಞಾನದಿಂದ ಸತ್ಯನಿಶ್ವವು ಹೇಗೆ ಮಿಥ್ಯೆಯಾಗುವುದು ? !)

**ಸತ್ಯಾಜ್ಞಾನಾಗತೋ ಭೇದೋ ಜ್ಞಾನಬಾಧ್ಯಃ ಕಥಂ ತವ ।**
**ಸತ್ಯಾಜ್ಞಾನನಿವೃತ್ತೇಶ್ಚಾಯೋಗಾನ್ಮೋಕ್ಷಃ ಕಥಂ ತವ ॥ ೭೦ ॥**

ಸತ್ಯಜ್ಞಾನಾಗತಃ – ಸತ್ಯವಾದ ಅಜ್ಞಾನವೇ ಉಪಾದಾನವಾಗಿ ಉಳ್ಳ, ಭೇದ–ಭೇದವು (ಸತ್ಯ ಜಗತ್ತಿನಲ್ಲಿ ಕಾಣುವ ಬಹುವಿಧ ಭೇದಗಳು), ತವ–ನಿನ್ನ ಮತದಲ್ಲಿ, ಜ್ಞಾನಬಾಧ್ಯಃ–(ಬ್ರಹ್ಮಜ್ಞಾನ–ಐಕ್ಯಜ್ಞಾನದಿಂದ) ಜ್ಞಾನ

---

ಅಜ್ಞಾನವೇ ಉಪಾದಾನ ಕಾರಣವಾದರೆ), ವಿಶ್ವವು ಹೇಗೆ ಅಸತ್ಯವಾಗುತ್ತದೆ? (ಶಕ್ಯವಿಲ್ಲ) ; ಮಾವಿನ ಬೀಜದಿಂದ ಬೇವಿನ ಮರವು ಹುಟ್ಟುವುದೇ ? (ಇಲ್ಲ) ಸತ್ಯವಾದ ಕಾರಣದಿಂದ ಅಸತ್ಯವಾದ ಜಗತ್ತು ಹುಟ್ಟುವುದು ಶಕ್ಯವಿಲ್ಲ— ಯುಕ್ತಿವಿರುದ್ಧವು (೬೯). ಹಾಗೂ, ಸತ್ಯಭೂತವಾದ ಅಜ್ಞಾನದಿಂದ ಪ್ರಾಪ್ತವಾದ (ಹುಟ್ಟಿದ) ಜಗತ್ತು, ಸತ್ಯವಾದ ಭೇದವುಳ್ಳದ್ದೇ ಆಗಿರಬೇಕು; ಜಗತ್ತಿನಲ್ಲಿ ಕಂಡುಬರುವ ಬಹುವಿಧ ಭೇದಗಳೂ ಸತ್ಯವೇ ಆದವು ; ಈ ಭೇದವು (ಬ್ರಹ್ಮೈಕ್ಯಜ್ಞಾನದಿಂದ ಬಾಧ್ಯವಾಗಲಾರದು—ಸತ್ಯನಾದ ಬ್ರಹ್ಮನು ಬಾಧ್ಯನಾಗದಿರುವಂತೆ; ಮಿಥ್ಯಾವಸ್ತುವು ಜ್ಞಾನಬಾಧ್ಯವಾಗು ವುದಲ್ಲದೇ (ಇಲ್ಲದಂತಾಗುತ್ತದೆಯಲ್ಲದೇ) ಸತ್ಯವಸ್ತು ಎಂದೂ ಬಾಧಿತವಾಗು ವುದಿಲ್ಲ; ಇಷ್ಟು ಮಾತ್ರವಲ್ಲ—ಸತ್ಯವಾದ ಅಜ್ಞಾನದ ನಿವೃತ್ತಿಯೇ ಇಲ್ಲದ್ದ ರಿಂದ ಸಂಸಾರದಿಂದ ಮೋಕ್ಷವೆಂಬುದೂ ಇಲ್ಲವೆಂದೇ ಪ್ರಾಪ್ತವಾಗುತ್ತದೆ

ದಿಂದ ಬಾಧಿತವಾದುದು, ಕಥಂ—ಹೇಗೆ? (ಸತ್ಯವು ಜ್ಞಾನಬಾಧ್ಯವಲ್ಲ—ಸತ್ಯನಾದ ಬ್ರಹ್ಮನಂತೆ); (ಸತ್ಯವಾದ ಅಜ್ಞಾನದಿಂದಾದ ಭೇದವೂ ಸತ್ಯವೇ–ಅದೂ ಬಾಧ್ಯವಲ್ಲ); ಸತ್ಯಾಜ್ಞಾನನಿವೃತ್ತೇಃ–ಸತ್ಯವಾದ ಅಜ್ಞಾನದ ನಿವೃತ್ತಿಯೂ (ಬಿಡುಗಡೆಯೂ), ಅಯೋಗಾತ್–ಕೂಡುವುದಿಲ್ಲವಾದ್ದರಿಂದ, ತವ–ನಿನ್ನ ಮತದಲ್ಲಿ, ಕಥಂ ಮೋಕ್ಷಃ–ಮೋಕ್ಷವಾದರೂ ಹೇಗೆ? (ಅಜ್ಞಾನವು ಸತ್ಯವಾದುದೆಂದು ಅದರ ಆರೋಪವು ಬ್ರಹ್ಮನಲ್ಲಿ ಕೂಡುತ್ತದೆಂದರೆ, ಬ್ರಹ್ಮಜ್ಞಾನಿಂದ ಜಗತ್ತು ಬಾಧ್ಯವಲ್ಲವೆಂದೂ, ಮೋಕ್ಷವು ಅಸಂಭಾವ್ಯವೆಂದೂ, ಪ್ರಾಪ್ತವಾಗುತ್ತದೆ).

**ಅಜ್ಞಾನಾಸಂಭವೇ ಕ್ವ ಸ್ಯಾತ್ ಪ್ರತಿಕರ್ಮವ್ಯವಸ್ಥಿತಿಃ ।**
**ಐಕ್ಯಸ್ಯಾವರಣಾಭಾವಚ್ಛಾಸ್ತ್ರವೇದ್ಯೇ ಚ ಕಿಂ ಭವೇತ್ ॥ ೭೦ ॥**

ಅಜ್ಞಾನಾಸಂಭವೇ–(ಹೀಗೆ) ಸತ್ಯಭೂತವಾದ ಅಜ್ಞಾನದ ಕಲ್ಪನೆಯೇ ಕೂಡುವುದಿಲ್ಲವಾದ್ದರಿಂದ, ಪ್ರತಿಕರ್ಮವ್ಯವಸ್ಥಿತಿಃ–ಪ್ರತಿ ವಿಷಯದ ವ್ಯವಸ್ಥೆಯು (ಅಧಿಷ್ಠಾನಭೂತನಾದ ಚೇತನನನ್ನು ಆವರಿಸಿರುತ್ತದೆಂಬ ಅಜ್ಞಾನವು ಯಾವಾಗ ಸರಿಯುವುದೋ – ತೊಲಗುವುದೋ, ಆಗ ಮಾತ್ರ ಘಟಪಟಾದಿ ವಸ್ತುಗಳು ಚೇತನನಿಗೆ ಗೋಚರಿಸುತ್ತದೆಂಬ ವ್ಯವಸ್ಥೆಯು), ಕ್ವ ಸ್ಯಾತ್–

---

(೭೦). ಅದ್ವೈತದ ಇನ್ನೊಂದು ಮುಖ್ಯ ಪ್ರಕ್ರಿಯವೆಂದರೆ, ಘಟಪಟಾದಿ ವಸ್ತುಜ್ಞಾನವು ಚೇತನನಿಗುಂಟಾಗಲು, ಆತನ ಪ್ರತ್ಯಕ್ಷದಿಂದ ಅಜ್ಞಾನದ ಆವರಣವು ಸರಿಯಲು (ಅಪಸರಣವಾಗಲು–ತೊಲಗಲು) ವಸ್ತುಜ್ಞಾನವಾಗುತ್ತದೆ; ಇದನ್ನು ಪ್ರತಿಕರ್ಮವ್ಯವಸ್ಥಿತಿ ಎನ್ನುವರು; ಈ ಹಿಂದೆ ನಿರೂಪಿಸಿದಂತೆ, ಅಜ್ಞಾನದ ಆವರಣಕ್ಕೆ ನಿವೃತ್ತಿಯೇ ಇಲ್ಲದಿರಲು ಈ ಜ್ಞಾನವಿಷಯಕ ವ್ಯವಸ್ಥೆಯ ಗತಿ ಏನು? ಮೇಲಾಗಿ, ಅಜ್ಞಾನದ ಆವರಣವೇ ಅಸಂಭವವಾದ್ದರಿಂದ (ಇದನ್ನು ಈ ಮೊದಲು ಬೇರೆ ಯುಕ್ತಿಗಳಿಂದ ಸುಸ್ಪಷ್ಟವಾಗಿ ಸಾಧಿಸಲಾಗಿದೆ) ಜೀವಬ್ರಹ್ಮೈಕ್ಯಜ್ಞಾನವು ಮರೆಯಾಗಲು ಕಾರಣವಿಲ್ಲ; ಸಂಸಾರಾವಸ್ಥೆಯಲ್ಲಿ ಸಹ ಐಕ್ಯವು (ಅದ್ವೈತದಂತೆ ಸದಾ ಇರುತ್ತದೆಯಾಗಿ) ಆವರಣವಿಲ್ಲದಿದ್ದರೆ, ಆಗಲೂ ಐಕ್ಯವು ತೋರಬೇಕು (ವಸ್ತುಸ್ಥಿತಿ ಹಾಗಿಲ್ಲ); ಮತ್ತೇನೆಂದರೆ ಸದಾ ಸಿದ್ಧವಾದ ಐಕ್ಯವನ್ನು ತಿಳಿಯಲು ಅದ್ವೈತಶಾಸ್ತ್ರವೇಕೆ ಬೇಕು? ಶಾಸ್ತ್ರಕ್ಕೆ ವಿಷಯವೇ ಇಲ್ಲದಂತಾಯಿತು–ಅದು ವ್ಯರ್ಥವೇ ಸರಿ

(ಅಜ್ಞಾನದ ನಿವೃತ್ತಿಯೇ ಇಲ್ಲದಿರಲು), ಎಲ್ಲಿಂದ ಬರಬೇಕು? (ಅದ್ವೈತ ವೃಕ್ಷದ ಈ ಮುಖ್ಯಶಾಖೆಯೂ ಪತಿತವಾದಂತಾಯಿತು);[1] ಐಕ್ಯಸ್ಯ–ಜೀವ ಬ್ರಹ್ಮೈಕ್ಯಕ್ಕೆ, ಆವರಣಾಭಾವಾತ್–ಆವರಕ (ಮುಚ್ಚಳ) ವಿಲ್ಲದ್ದರಿಂದ, (ಸತ್ಯ ವಾದ ಅಜ್ಞಾನವನ್ನು ಒಪ್ಪಿದರೆ, ಬ್ರಹ್ಮಮಾತ್ರ ಸತ್ಯನೆಂಬ ಅದ್ವೈತದ ಹಾನಿ ಯಾಗುವುದರಿಂದ, ಆರೋಪಿತವಾದ (ಮಿಥ್ಯಾಭೂತವಾದ) ಅಜ್ಞಾನವು ಆವರಕವೆಂದು ಹೇಳಬೇಕು; ಹಾಗೆಂದರೆ, ಸತ್ಯವಾದ ಆವರಕವೇ ಇಲ್ಲದ್ದ ರಿಂದ), ಶಾಸ್ತ್ರವೇದ್ಯೇ–ಶಾಸ್ತ್ರವನ್ನು ಅಭ್ಯಸಿಸುವುದರಿಂದ, ಕಿಂ ಭವೇತ್– ಏನು ಫಲವು (ಐಕ್ಯಕ್ಕೆ ಆವರಣವಿದ್ದರೆ) ಐಕ್ಯಜ್ಞಾನವನ್ನು ಬೋಧಿಸುವ ಶಾಸ್ತ್ರದ ಪ್ರಯೋಜನವು – ಅದಿಲ್ಲದಿರಲು, ಐಕ್ಯವು ಶಾಸ್ತ್ರವೇದ್ಯವೆಂಬುದು ಹೇಗೆ ಕೂಡುತ್ತದೆ? (ಕೂಡುವುದಿಲ್ಲ—ಐಕ್ಯಬೋಧಕ ಶಾಸ್ತ್ರದ ಉಪ ಯೋಗವೇ ಇಲ್ಲದಂತಾಯಿತು).[2]

**ಅಜ್ಞಾನಾಸಂಭವಾದ್ಬ್ರಹ್ಮಭ್ರಾಂತ್ಯಾ ಸರ್ವಂ ನ ಕಲ್ಪಿತಂ ।**
**ಅಜ್ಞಾನಾಸಂಭವಾದೇವ ಶಾಸ್ತ್ರಂ ಸರ್ವಂ ಗತಂ ತವ ॥ ೭೨ ॥**

---

(೭೧). ಅದ್ವೈತದ ಮತ್ತೊಂದು ಪ್ರಧಾನಪ್ರಕ್ರಿಯೆ ಎಂದರೆ, ಅಜ್ಞಾನದಿಂದ ಬ್ರಹ್ಮನಿಗೆ ಭ್ರಾಂತಿಯುಂಟಾಗಿ ಜೀವಭಾವ, ಜಗತ್ತುಗಳು ತೋರುತ್ತಿವೆ;

---

1 ಯಾವನ ಅಪರೋಕ್ಷವೃತ್ತಿಯಿಂದ (ಪ್ರತ್ಯಕ್ಷಜ್ಞಾನದಿಂದ) ಬಂಧಕವಾದ ಆವರಣರೂಪದ ಅಜ್ಞಾನವು ನಿವೃತ್ತವಾಗುವುದೋ ಅವನಿಗೆ ಆ ಪದಾರ್ಥವು ಚೇತನನ ಜ್ಞಾನವಿಷಯವಾಗುತ್ತದೆಂಬುದು ಅದ್ವೈತಮತದ ಪ್ರಕ್ರಿಯೆಯು; ಸತ್ಯವಾದ ಅಜ್ಞಾನದ ನಿವೃತ್ತಿಯೇ ಕೂಡದಿರುವಾಗ, ಈ ಪ್ರತಿಕರ್ಮವ್ಯವಸ್ಥೆಯೆಂಬುದು ಹೇಗೆ ನಿಲ್ಲುತ್ತದೆ? (ನಿಲ್ಲುವುದಿಲ್ಲ).

2 ಬ್ರಹ್ಮನಲ್ಲಿ ಅಜ್ಞಾನವೇ ಕೂಡುವುದಿಲ್ಲವಾದ್ದರಿಂದ, ಸರ್ವವೂ ಬ್ರಹ್ಮನ ವಿಪರೀತ ಜ್ಞಾನದಿಂದಲೇ ಎನ್ನಬೇಕು; ಅದಿಲ್ಲದಿದ್ದರೆ ಭ್ರಮೆಗೆ ಅನ್ಯಕಾರಣವೇ ತೋರುವುದಿಲ್ಲ ವಷ್ಟೆ; ಅದ್ವೈತಶಾಸ್ತ್ರವು ಇದಕ್ಕೆ ಯಾವ ಪರಿಹಾರವನ್ನು ಹೇಳುತ್ತದೆ? ಸದಾ ಇರುವು ದೆಂಬ ಜೀವಬ್ರಹ್ಮೈಕ್ಯವು, ಸಂಸಾರದೆಶೆಯಲ್ಲಿ ತಿಳಿಯದಿರಲು ಅಜ್ಞಾನವೇ ಪ್ರತಿಬಂಧಕ ವೆನ್ನಬೇಕು; ಅಜ್ಞಾನದ ಕಲ್ಪನೆಯೇ ಕೂಡದಿರಲು, ಐಕ್ಯಜ್ಞಾನಕ್ಕೆ ಪ್ರತಿಬಂಧಕವೇ ಇಲ್ಲದಂತಾಯಿತು; ಸ್ವತಃ ಸಿದ್ಧವಾದ ಐಕ್ಯಜ್ಞಾನವು ಈಗಲೇ ತೋರಿದ್ದಿದ್ದರೆ, ಅದ್ವೈತ ಶಾಸ್ತ್ರದಿಂದ ತಿಳಿಯಬೇಕಾದ ವಿಷಯವೇ ಇಲ್ಲದಂತಾಯಿತು—ಶಾಸ್ತ್ರಕ್ಕೆ ವಿಷಯವೇ ಇಲ್ಲದಿರಲು ಅದು ವ್ಯರ್ಥವೇ ಸರಿ.

ಹಿಂದೆ ಅಜ್ಞಾನವು ಸತ್ಯವೆಂದರೆ, ಅದೇ ಉಪಾದಾನಕಾರಣವಾಗಿ ಉಳ್ಳ ಜಗತ್ತು ಸತ್ಯವೆಂದು ಹೇಳಿ, ಈಗ ಬ್ರಹ್ಮನಿಗೆ ಭ್ರಾಂತಿಯೇ ಇಲ್ಲದಿರುವುದರಿಂದಲೂ ಜಗತ್ತು ಸತ್ಯವೆಂದು ನಿರೂಪಿಸಿ, ಪ್ರಕೃತ ವಿಷಯವನ್ನು ಉಪಸಂಹರಿಸುತ್ತಾರೆ :—

ಅಜ್ಞಾನಾಸಂಭವಾತ್ – ಅಜ್ಞಾನವೇ (ಬ್ರಹ್ಮನಲ್ಲಿ) ಯುಕ್ತವಾಗುವುದಿಲ್ಲವಾದ್ದರಿಂದ, ಬ್ರಹ್ಮಭ್ರಾಂತ್ಯಾ–ಬ್ರಹ್ಮನ ಭ್ರಾಂತಿಯಿಂದ, ಸರ್ವಂ–ಜೀವ, ಜಗತ್ತು ಇತ್ಯಾದಿ ಸರ್ವವೂ, ಕಲ್ಪಿತಂ ನ–ಕಲ್ಪಿತವಾದುದಲ್ಲ (ಭ್ರಾಂತಿಕಲ್ಪಿತವಲ್ಲ—ಮಿಥ್ಯೆಗಳಲ್ಲ) ; ಅಜ್ಞಾನಾಸಂಭವಾದೇವ–ಬ್ರಹ್ಮನಿಗೆ ಅಜ್ಞಾನವೆಂಬುದೇ ಇಲ್ಲವೆಂಬ ಕಾರಣದಿಂದಲೇ, ತವ–ನಿನ್ನ, ಶಾಸ್ತ್ರಂ–(ಅದ್ವೈತ) ಶಾಸ್ತ್ರವು, ಸರ್ವಂ–ಎಲ್ಲವೂ (ಅದರ ಸರ್ವಪ್ರಮೇಯಗಳೂ), ಗತಂ–ಹಾರಿಹೋಯಿತು (ನಿಲ್ಲಲಾರದೆ ಬಿದ್ದು ಹೋಗುತ್ತವೆ).[1]

**ಕಿಂಚಾಜ್ಞಾನಸ್ಯ ವಿಜ್ಞಾನಮಹಮಿತ್ಯೇವ ದೇಹಿನಾಂ ।**
**ಆಶಾ ಬ್ರಹ್ಮಾಶ್ರಿತಾಜ್ಞಾನೇ ಪಶ್ಯ ಕಿಂ ಕೇನ ಸಂಗತಂ ॥ ೭೩ ॥**

ರೀತ್ಯಂತರದಿಂದ ಸಹ ಅಜ್ಞಾನವಾದವನ್ನು ದೂಷಿಸುತ್ತಾರೆ (ನಿರಾಕರಿಸುತ್ತಾರೆ) :—

---

ಐಕ್ಯಜ್ಞಾನದಿಂದ ಆ ಭ್ರಾಂತಿಯು ಪರಿಹಾರವಾಗಲು, ಇವು ಯಾವುವೂ ಇಲ್ಲದಂತಾಗುತ್ತವೆ–ಬ್ರಹ್ಮನೊಬ್ಬನೇ ಉಳಿಯುತ್ತಾನೆ; ಬ್ರಹ್ಮನಲ್ಲಿ ಅಜ್ಞಾನವಿರಲು ಅವಕಾಶವಿಲ್ಲೆಂದು ಈ ಹಿಂದೆ ಬಹುಪರಿಯಿಂದ ಸಾಧಿಸಿರುವುದರಿಂದ, ಬ್ರಹ್ಮನು ಭ್ರಾಂತನಲ್ಲ; ಆತನ ಉಂಟಾಗಿರುವ ಭ್ರಮೆಯಿಂದ, ಈ ಜೀವ ಜಡಾತ್ಮಕ ಜಗತ್ತು (ಮಿಥ್ಯಾಭೂತವಾದುದು) ಕಲ್ಪಿತವಾಗಿಲ್ಲ; ಅಜ್ಞಾನದ ಕಲ್ಪನೆಗೇ ಅವಕಾಶವಿಲ್ಲದ ಕಾರಣ ನಿನ್ನ (ಅದ್ವೈತಿಯ) ಶಾಸ್ತ್ರವೇ (ಸಕಲ ಮುಖ್ಯಪ್ರಮೇಯಗಳೂ) ಬಿದ್ದು ಹೋಯಿತು (೭೨). ಅಜ್ಞಾನದ ವಿಜ್ಞಾನವು ಎಂದರೆ, 'ಅಹಂ ಅಜ್ಞಃ' ಎಂಬ ರೂಪದ ಅಜ್ಞಾನದ ಸ್ಪಷ್ಟಜ್ಞಾನವು,

[1] ಮಿಥ್ಯಾಜ್ಞಾನದಿಂದ ಕಲ್ಪಿತಗಳೆಂಬ ಭಗವದ್ಗುಣಗಳು, ನಿರ್ಗುಣತ್ವ, ನಿರಾಕಾರತ್ವ ಮುಂತಾದ ಪ್ರಧಾನ ಪ್ರಕ್ರಿಯೆಗಳೆಲ್ಲವೂ, ಅಜ್ಞಾನವೇ ಕೂಡುವುದಿಲ್ಲವೆಂಬ ಒಂದೇ ಕಾರಣದಿಂದ ಬಿದ್ದು ಹೋಗುತ್ತವೆ.

ಕಿಂಚ–ಮತ್ತೇನೆಂದರೆ, ಅಹಂ ಇತಿ–ಅಹಂ ಅಜ್ಞಃ (ನಾನು ನನ್ನನ್ನು ಇತರವನ್ನೂ ತಿಳಿಯೆನು) ಎಂಬ, ಅಜ್ಞಾನಸ್ಯ–ಅಜ್ಞಾನದ, ವಿಜ್ಞಾನಂ–ವಿಶೇಷ ಅರಿವು (ತಿಳುವಳಿಕೆಯು), ದೇಹಿನಾಂ ಏವ– ಲೌಕಿಕ ಪುರುಷರಿಗೆ (ಭೌತಿಕ ದೇಹವುಳ್ಳ ಜೀವರಿಗೆ) ಮಾತ್ರ (ಅಲೌಕಿಕ ಪುರುಷನಾದ ಭಗವಂತನಿಗೆ ಈ ಜ್ಞಾನವಿಲ್ಲ) (ಅದ್ವೈತಿಯು [ಬ್ರಹ್ಮಾಶ್ರಿತ ಅಜ್ಞಾನವಿರುವಲ್ಲಿ] 'ಅಹಮಜ್ಞಃ ಎಂಬ ಪ್ರತ್ಯಕ್ಷದಿಂದ ಬ್ರಹ್ಮನಲ್ಲಿ ಸಹ ಅಜ್ಞಾನವು ಸಿದ್ಧವಾಗುತ್ತದೆಂದು ಆಶಿಸುತ್ತಾನೆ); ಬ್ರಹ್ಮಾಶ್ರಿತಾಜ್ಞಾನೇ – ಬ್ರಹ್ಮಾಶ್ರಿತವಾದ ಅಜ್ಞಾನವಿರುತ್ತಿರಲು, ಆಶಾ–('ಅಹಮಜ್ಞಃ' ಎಂಬ ಜ್ಞಾನವು ಬ್ರಹ್ಮನಿಗೂ ಉಂಟಾಗುತ್ತದೆಂದು) ಅದ್ವೈತಿಯ ಅಭಿಸಂಧಿಯು; ಪಶ್ಯ–ತಿಳಿದುನೋಡು; ಕಿಂ–ಏನು, ಕೇನ–ಯಾವುದರಿಂದ, ಸಂಗತಂ–ಯುಕ್ತವಾಗುತ್ತದೆ (ದೇಹಿಯು 'ಅಹಮಜ್ಞಃ' ಎಂಬ ಜ್ಞಾನವುಳ್ಳವನಾಗುವುದಕ್ಕೂ ಬ್ರಹ್ಮನ ಆಶ್ರಯದಲ್ಲಿ ಅಜ್ಞಾನವಿರುವುದರಿಂದ ಬ್ರಹ್ಮನಿಗೂ ಈ ಜ್ಞಾನವುಂಟಾಗುವುದಕ್ಕೂ ಏನು ಸಂಬಂಧ?) (ಯಾವುದೂ ಇಲ್ಲ).

**ಐಕ್ಯಾತ್ತದೇವ ಚೇದ್ಬ್ರಾಹ್ಮಮನ್ಯೋನ್ಯಾಶ್ರಯತಾ ತದಾ ॥ ೭೪ ॥**

ಐಕ್ಯಾತ್–ಜೀವಬ್ರಹ್ಮರಿಗೆ ಐಕ್ಯವಿರುವುದರಿಂದ (ಅಭಿನ್ನರಾದ್ದರಿಂದ), ತದೇವ – ಜೀವನ ಅನುಭವಸಿದ್ಧವಾದ ಅಜ್ಞಾನವೇ (ಜ್ಞಾನವೇ ತಿಳುವಳಿಕೆಯೇ), ಬ್ರಾಹ್ಮಂ ಚೇತ್–ಬ್ರಹ್ಮನ ಅಜ್ಞಾನವೂ ಆಗಿದೆಯೆಂದರೆ, ತದಾ–

---

ದೇಹಿಗಳಿಗೆ (ಸಂಸಾರಿ ಜೀವರಿಗೆ) ಮಾತ್ರವಿರುತ್ತದೆ; ಭಗವಂತನಿಗೆ ಈ ವಿಜ್ಞಾನವಿಲ್ಲ, ಆತನು ಅಲೌಕಿಕ ಪುರುಷನು; ಅದ್ವೈತಿಯು, ಬ್ರಹ್ಮಾಶ್ರಿತವೆಂಬ ಅಜ್ಞಾನದಿಂದ, ಬ್ರಹ್ಮನಿಗೂ ಲೌಕಿಕಪುರುಷನ ಅಜ್ಞಾನದಂತೆ ಸಂಭವಿಸುತ್ತದೆಂದು ಆಶಿಸುತ್ತಾನೆ; ಈ ಅಭಿಪ್ರಾಯವುಳ್ಳವನಾಗಿ ಬ್ರಹ್ಮನಿಗೇ ಜೀವಭಾವವನ್ನೂ ತಿಳಿಯುತ್ತಾನೆ; ಬ್ರಹ್ಮನ ಆಶ್ರಯದಲ್ಲಿ ಅಜ್ಞಾನವಿದ್ದರೆ ಬ್ರಹ್ಮನಿಗೇಕೆ ಅಜ್ಞಾನವುಂಟಾಗಬೇಕು? ದೇಹಿಯಂತೆ 'ಅಹಮಜ್ಞಃ' ಎಂಬ ಅಜ್ಞಾನವುಂಟಾಗುವುದಕ್ಕೂ, ಜೀವನಿಗೆ ಈ ಜ್ಞಾನವಿರುವುದಕ್ಕೂ, ಬ್ರಹ್ಮನ ಆಶ್ರಯದಲ್ಲಿ ಅಜ್ಞಾನವಿರುವುದಕ್ಕೂ ಏನು ಸಂಬಂಧ? ಯೋಚಿಸಿ ತಿಳಿ (೭೩). ಜೀವಬ್ರಹ್ಮರಿಗೆ ಐಕ್ಯವಿರುವುದರಿಂದ, ಜೀವನ ಅನುಭವಸಿದ್ಧವಾದ ಅಜ್ಞಾನವೇ ಬ್ರಹ್ಮನ ಅಜ್ಞಾನವೂ ಆಗುತ್ತದೆ; ಎಂದರೆ ಆಗ ಅನ್ಯೋನ್ಯಾಶ್ರಯವೆಂಬ

ಆಗ, ಅನ್ಯೋನ್ಯಾಶ್ರಯತಾ – ಅನ್ಯೋನ್ಯಾಶ್ರಯವೆಂಬ ದೋಷವುಂಟಾಗುತ್ತದೆ.

**ಐಕ್ಯಸಿದ್ಧೌ ಭವೇದಜ್ಞಂ ಬ್ರಹ್ಮ ತಸ್ಯಾಜ್ಞತಾವಶಾತ್ ।**
**ಜೀವಭಾವೇ ಭವೇದೈಕ್ಯಂ ತತೋಽನ್ಯೋನ್ಯಾಶ್ರಯೋ ನ ಕಿಂ ॥೭೫॥**

ಉಕ್ತದೋಷವನ್ನು (ಅನ್ಯೋನ್ಯಾಶ್ರಯವನ್ನು) ಸ್ಪಷ್ಟಗೊಳಿಸುತ್ತಾರೆ:

ಐಕ್ಯಸಿದ್ಧೌ–ಜೀವಬ್ರಹ್ಮರ ಐಕ್ಯವು ಸಿದ್ಧವಾದರೆ, ಬ್ರಹ್ಮ–ಬ್ರಹ್ಮನು, ಅಜ್ಞಂ – ಜೀವಾಜ್ಞಾನದ ಪ್ರತ್ಯಕ್ಷದಿಂದ (ಜೀವನಿಗಿರುವ ಅನುಭವದಿಂದ) ತಾನೂ ಅಜ್ಞಾನವುಳ್ಳವನು, ಭವೇತ್ – ಆಗುತ್ತಾನೆ ; ತಸ್ಯ – ಬ್ರಹ್ಮನ, ಅಜ್ಞತಾವಶಾತ್ – ಅಜ್ಞಾನವಶದಿಂದ, ಜೀವಭಾವೇ–ಜೀವತ್ವವು (ತನಗೆ) ಉಂಟಾಗುತ್ತಿರಲು, ಐಕ್ಯಂ–ಜೀವೈಕ್ಯವು, ಭವೇತ್–ಉಂಟಾಗುತ್ತದೆ; ತತಃ – ಆದ್ದರಿಂದ, ಅನ್ಯೋನ್ಯಾಶ್ರಯಃ – ಅನ್ಯೋನ್ಯಾಶ್ರಯವೆಂಬ ದೋಷವು, ನ ಕಿಂ–ಉಂಟಾಗುವುದಿಲ್ಲದೇ ? (ಆಗುತ್ತದೆ).[1]

---

ದೋಷವು ಉಂಟಾಗುತ್ತದೆ (೭೪). ಜೀವಬ್ರಹ್ಮರ ಐಕ್ಯವು ಸಿದ್ಧವಾದರೆ, ಬ್ರಹ್ಮನು ಅಜ್ಞನಾಗುತ್ತಾನೆ; ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾದರೆ ಆ ಅಜ್ಞಾನ ವಶನಾಗಿ ಜೀವಭಾವವನ್ನು ಹೊಂದುತ್ತಾನೆ, ಆಗ ಐಕ್ಯವು ಸಿದ್ಧವಾಗುತ್ತದೆ; ಅಜ್ಞಾನದಿಂದ ಜೀವೈಕ್ಯವೂ, ಜೀವೈಕ್ಯದಿಂದ ಬ್ರಹ್ಮನಿಗೆ ಅಜ್ಞಾನವೂ ಸಿದ್ಧ

---

1 ಅದ್ವೈತಮತದಂತೆ, ಬ್ರಹ್ಮನಿಗೆ ಅಜ್ಞಾನವಶದಿಂದ ಜೀವಭಾವವು ಉಂಟಾಗುತ್ತಿರಲು, ಜೀವೈಕ್ಯವು ಸಿದ್ಧವಾಗುತ್ತದೆ; ಅಜ್ಞಾನದಿಂದ ಕಲ್ಪಿತವಾಗದ ಸ್ವಭಾವದವನು (ಸ್ವರೂಪನು) ಜೀವನಾದರೆ, ಐಕ್ಯವು ಕೂಡುವುದಿಲ್ಲ; ಹೀಗೆ ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾದರೆ, ಅದನ್ನಾಶ್ರಯಿಸಿದ ಐಕ್ಯವು ಸಿದ್ಧವಾಗುತ್ತದೆ; ಜೀವೈಕ್ಯವು ಸಿದ್ಧವಾದರೆ, ಜೀವನ ಅಜ್ಞಾನವು ಬ್ರಹ್ಮನಿಗೂ ಇರುವುದೆಂದು ಸಿದ್ಧವಾಗುತ್ತದೆ; ಹೀಗೆ ಅನ್ಯೋನ್ಯಾಶ್ರಯವು. ವಸ್ತುತಃ ಇದು ಮಾಯಾವಾದಿಗಳ ಮತವಲ್ಲ; ಅವರು ಜೀವಬ್ರಹ್ಮರಿಗೆ ವ್ಯಾವಹಾರಿಕಭೇದವನ್ನು ಹೇಳುತ್ತಾರೆ; ಮತ್ತು ಉಪಾಧಿಯಿಂದ ಪ್ರತಿಬಿಂಬತ್ವವನ್ನು ಬ್ರಹ್ಮನೇ ಹೊಂದುವನೆಂದು ಹೇಳುತ್ತಾರೆ—ಆದರೆ ಬಿಂಬಧರ್ಮವು ಪ್ರತಿಬಿಂಬದಲ್ಲಿ ಪ್ರಾಪ್ತವಾಗಬಹುದಲ್ಲದೇ, ಪ್ರತಿಬಿಂಬ ಧರ್ಮವು (ಜೀವನ ಅಹಮಜ್ಞಃ ಎಂಬ ಜ್ಞಾನವು), ಬಿಂಬನಾದ ಬ್ರಹ್ಮನಲ್ಲಿ ಬರಲು ಶಕ್ಯವೇ ಇಲ್ಲ; ಇದನ್ನು ಮುಂದೆ ಗ್ರಂಥಕಾರರೇ ವಿಸ್ತರಿಸುತ್ತಾರೆ.

**ತಾನ್ಯಹಂ ವೇದ ಸರ್ವಾಣೀತ್ಯುಕ್ತ್ಯಾ ಕೃಷ್ಣಸ್ಯ ಸರ್ವದಾ ।**
**ಅಸ್ತಿ ಸರ್ವಜ್ಞತಾಧ್ಯಕ್ಷಂ ನ ತ್ವಜ್ಞಾನಾಪರೋಕ್ಷಧೀಃ ।**
**ಮನಸಾಧ್ಯಾತಮೇವಾರ್ಥಂ ವದೇದ್ವಾಚಾ ಕಿಲಾಖಿಲಃ ॥ ೭೬ ॥**

ಬೇರೆ ರೀತಿಯಿಂದ ಸಹ ಜೀವಾನುಭವಸಿದ್ಧ ಅಜ್ಞಾನವನ್ನು ಬ್ರಹ್ಮನಲ್ಲಿ ಸೇರಿಸುವ ಪ್ರಯತ್ನವು ನಿಷ್ಫಲವೆಂದು ಹೇಳುತ್ತಾರೆ :—

ತಾನಿ—ಆ (ನನ್ನ ಎಲ್ಲ ರೂಪಗಳ), ಸರ್ವಾಣಿ—ಸಮಸ್ತ ಕರ್ಮಗಳನ್ನು, ಅಹಂ—ನಾನು, ವೇದ—ತಿಳಿದಿರುವೆನು ('ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ' ಎಂದರೆ ನಾನು ಸಮಸ್ತವನ್ನೂ ತಿಳಿದಿರುವೆನು—ನನ್ನ ಎಲ್ಲ ಅವತಾರಗಳನ್ನು ತಿಳಿದಿದ್ದೇನೆ. ಆದರೆ, ಹೇ ಅರ್ಜುನ! ನೀನು ನಿನ್ನ ಜನ್ಮಾಂತರಗಳನ್ನು ತಿಳಿದಿರುವುದಿಲ್ಲ), ಇತಿ—ಎಂಬ, ಕೃಷ್ಣಸ್ಯ—ಶ್ರೀಕೃಷ್ಣನ, ಉಕ್ತ್ಯಾ –(ಗೀತೆಯ) ನುಡಿಯಿಂದ, ಸರ್ವಜ್ಞತಾಧ್ಯಕ್ಷಂ – ಸರ್ವಜ್ಞನೆಂಬ ಜ್ಞಾನವು (ಪ್ರತ್ಯಕ್ಷವು—ಅನುಭವವು), ಸರ್ವದಾ—ಎಲ್ಲ ಕಾಲದಲ್ಲಿ, ಅಸ್ತಿ—ಇರುತ್ತದೆ; ಅಜ್ಞಾನಾಪರೋಕ್ಷಧೀಃ – 'ಅಜ್ಞೋಽಹಂ' (ನಾನು ಅಜ್ಞನು) ಎಂಬ ಅನುಭವ ಪ್ರತ್ಯಕ್ಷವು, ನ ತು –(ಶ್ರೀಕೃಷ್ಣನಿಗೆ) ಇಲ್ಲವೇ ಇಲ್ಲ; ಅಖಿಲಃ—ಸಮಸ್ತ ಜನತೆಯೂ, ಮನಸಾ—ಮನಸ್ಸಿನಿಂದ, ಧ್ಯಾತಂ—ಚಿಂತಿಸಿ, (ಅನುಭವಸಿದ್ಧವಾದ) ಅರ್ಥಂ ಏವ—ಅಭಿಪ್ರಾಯವನ್ನೇ (ವಿಷಯವನ್ನೇ), ವಾಚಾ—ನುಡಿಯಿಂದ, ವದೇತ್—(ನುಡಿಯಿಂದ) ಹೇಳುತ್ತಾರೆ (ನುಡಿಯು ಮನಸ್ಸಿನ ಅನುಭವವನ್ನೇ ಹೇಳುವುದೆಂಬುದನ್ನು ಶ್ರುತಿಸಿದ್ಧವೆಂದು ಸೂಚಿಸುತ್ತಾರೆ); ಕಿಲ – ('ಯದ್ಧಿ ಮನಸಾ ಧ್ಯಾಯತಿ ತದ್ವಾ ವಾಚಾ ವದತಿ' ಎಂಬ ಶ್ರುತಿಯಿಂದ) ಪ್ರಸಿದ್ಧವಷ್ಟೆ.

---

ವೆಂದರೆ, ಸ್ಪಷ್ಟವಾಗಿ ಅನ್ಯೋನ್ಯಾಶ್ರಯವೆಂಬ ದೋಷವು ತಪ್ಪುವುದಿಲ್ಲ (೭೫). ಬ್ರಹ್ಮನಲ್ಲಿ ಯಾವ ವಿಷಯಕವಾದ ಅಜ್ಞಾನವೂ ಎಂದೂ ಇಲ್ಲವೆಂಬುದು ಶ್ರುತಿಸ್ಮೃತಿಸಿದ್ಧವೆಂದು ನಿರೂಪಿಸುತ್ತ, 'ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ' ಎಂಬ ಶ್ರೀಕೃಷ್ಣನ ಗೀತೋಕ್ತಿಯನ್ನು ಉದಹರಿಸಿದ್ದಾರೆ. ಇದರಿಂದ ಶ್ರೀಕೃಷ್ಣನ ಸರ್ವಜ್ಞತ್ವವೂ, ಅರ್ಜುನನ ಅಲ್ಪಜ್ಞತ್ವವೂ ಸಿದ್ಧವಾಗುತ್ತದೆ; ಸರ್ವಜ್ಞತ್ವ, ಅಲ್ಪಜ್ಞತ್ವಗಳು ವಿರುದ್ಧ ಧರ್ಮಗಳೆಂದೂ ಇವು ಬ್ರಹ್ಮನು ಮತ್ತು ಜೀವರಲ್ಲಿ ವ್ಯಾವಹಾರಿಕ ಭೇದವನ್ನು

**ಅತಃ ಸರ್ವಜ್ಞತಾಧ್ಯಕ್ಷಹರ್ಯಕ್ಷಸ್ಯ ಗುಹಾಮಿಮಾಂ ।**
**ಅಜ್ಞಾನಾಧ್ಯಕ್ಷಹರಿಣೀ ಜೈವೀ ನೈವ ವಿವಿಕ್ಷತಿ ॥ ೭೭ ॥**

**ಪ್ರತ್ಯಕ್ಷಮೇಷಯೋರ್ಯುದ್ಧೇ ತಜ್ಜೈಕ್ಯಂ ಜಂಬುಕಾಯತೇ ।**
**ತಸ್ಮಾದ್ಬ್ರಹ್ಮಾಶ್ರಿತಾಜ್ಞಾನಪ್ರತ್ಯಕ್ಷಂ ಮರಣೇಽಪಿ ನ ॥ ೭೮ ॥**

ಅತಃ – ಆದ್ದರಿಂದ (ಭಗವಂತನಿಗೆ ಸರ್ವಜ್ಞತ್ವದ ಪ್ರತ್ಯಕ್ಷವು ಸಿದ್ಧವಾಗಿರುವುದರಿಂದ), ಸರ್ವಜ್ಞತಾಧ್ಯಕ್ಷಹರ್ಯಕ್ಷಸ್ಯ–ಸಾರ್ವಜ್ಞನೆಂಬ ಅನುಭವವುಳ್ಳ ಸಿಂಹದ, ಇಮಾಂ ಗುಹಾಂ–ಈ ಗುಹೆಯನ್ನು, ಜೈವೀ–ಜೀವಸಂಬಂಧವಾದ, ಅಜ್ಞಾನಾಧ್ಯಕ್ಷಹರಿಣೀ – ಅಜ್ಞಾನದ ಪ್ರತ್ಯಕ್ಷವುಳ್ಳದ್ದೆಂಬ ಮೃಗವು (ಜಿಂಕೆಯು), ಪ್ರತ್ಯಕ್ಷಂ–ತಾನೇ (ತನ್ನ ಮರಣವನ್ನು ತಿಳಿದೂ), ನೈವ

---

ಹೇಳುವವರು ಸಹ ಇರುತ್ತವೆಂದು ಅಂಗೀಕರಿಸುತ್ತಾರೆ (ಹೀಗೆ ವಿರುದ್ಧಧರ್ಮಗಳಿಗೆ ಆಶ್ರಯವಾದ ಎರಡು ವಸ್ತುಗಳಲ್ಲಿ ಅಭೇದವಿರಲು ಶಕ್ಯವಿಲ್ಲ); ಶ್ರೀಕೃಷ್ಣನ ನುಡಿಯಿಂದ, ತನ್ನ ಸರ್ವಜ್ಞತ್ವದ ಪ್ರತ್ಯಕ್ಷವು (ಅನುಭವವು) ತನಗೆ ಸದಾ ಇರುವುದೆಂದು ಸಿದ್ಧವಾಗುತ್ತದೆ; ಜೀವಪ್ರತಿನಿಧಿಯಾದ ಅರ್ಜುನನು ಅಲ್ಪಜ್ಞನೆಂದೂ (ನೀನು ತಿಳಿದಿರುವುದಿಲ್ಲ) ಎಂಬುದರಿಂದ ಸಿದ್ಧವಾಗುತ್ತದೆ; ಹೀಗಿರುವಾಗ ಜೀವನ ಅಜ್ಞಾನದ ಅನುಭವವನ್ನು ಬ್ರಹ್ಮನಲ್ಲಿ ತಂದು ಸೇರಿಸುವುದು ಅಯುಕ್ತವಲ್ಲವೇ ? ಮನಸ್ಸಿನಲ್ಲಿದ್ದುದನ್ನೇ ನುಡಿಯಿಂದ ಸರ್ವರೂ ಹೇಳುವರೆಂಬುದು ಶ್ರುತಿಸಿದ್ಧವೂ ಆಗಿದೆ; ಶ್ರೀಕೃಷ್ಣನು ತನ್ನ ಅನುಭವವನ್ನೇ ಹೇಳಿರುವನೆಂಬುದೂ ಸ್ಪಷ್ಟವೇ ಇದೆ (೭೬). ಭಗವಂತನಿಗೆ ತನ್ನ ಸರ್ವಜ್ಞತ್ವದ ಅರಿವು ಸದಾ ಇರುವುದರಿಂದ, ಈ ಸಿಂಹದ ಗುಹೆಯನ್ನು ಜೀವಸಂಬಂಧವಾದ ಅಜ್ಞತ್ವದ ಅನುಭವವೆಂಬ ಹರಿಣಿಯು (ಮೃಗವು) ಪ್ರವೇಶಿಸಲು ಎಂದೂ ಇಚ್ಛಿಸುವುದಿಲ್ಲ; ಹಾಗೆ ನಿನ್ನಂತೆ ಬಲಾತ್ಕಾರದಿಂದ ಅಜ್ಞತ್ವದ ಅನುಭವವನ್ನು ಆತನ ಮನಸ್ಸೆಂಬ ಗುಹೆಯಲ್ಲಿ ಹೊಗಿಸಿದರೆ, ಅದು ಮರಣಹೊಂದುವುದು ನಿಶ್ಚಯ (ಅಪ್ರಾಮಾಣಿಕವೆಂಬುದೇ ಅದರ ಮರಣವು); ಎರಡು ದೊಡ್ಡ ಕಾಳಗದ ಟಗರುಗಳಂತೆ (ಸರ್ವಜ್ಞತ್ವವನ್ನು ಜೀವನೊಳಗೆ ಬಿಡದಿರುವ ಒಂದು ಟಗರೂ, ಅಜ್ಞತ್ವವನ್ನು ಭಗವಂತನಲ್ಲಿ ಸೇರಿಸಲು ಬಿಡದ ಮತ್ತೊಂದು ಟಗರೂ) ಕಾಳಗವನ್ನು (ಯುದ್ಧವನ್ನು)

ವಿವಿಕ್ಷತಿ—ಪ್ರವೇಶಿಸಲು ಇಚ್ಛಿಸುವುದೇ ಇಲ್ಲ ; (ನಿರ್ದೋಷವಾದ ಭಗವದ್ ಪ್ರತ್ಯಕ್ಷ ಸಿದ್ಧವಾದ ಭಗವನ್ಮನದಲ್ಲಿ 'ಅಜ್ಞೋಽಹಂ' ಎಂಬ ಜೀವಪ್ರತ್ಯಕ್ಷವು, ಅಜ್ಞಾನವನ್ನು ಸ್ಥಾಪಿಸಲು (ಸೇರಿಸಲು) ಶಕ್ತವಾಗುವುದಿಲ್ಲ); (ಮತ್ತು ಬಲಾತ್ಕಾರದಿಂದ ಭಗವನ್ಮನದಲ್ಲಿ ಸೇರಿಸಿದರೆ ಅದು ಮೃತವಾಗುತ್ತದೆ, ಎಂದರೆ, ಪ್ರಬಲ ಪ್ರತ್ಯಕ್ಷದಿಂದ ಅಪ್ರಾಮಾಣಿಕತ್ವವೆಂಬ ಮರಣವನ್ನು ಹೊಂದುತ್ತದೆ); ಮೇಷಯೋಃ — ಈ (ಸರ್ವಜ್ಞತ್ವ, ಅಲ್ಪಜ್ಞತ್ವಗಳೆಂಬ) ಟಗರುಗಳ, ಯುದ್ಧೇ—ಜಗಳದಲ್ಲಿ (ಬ್ರಹ್ಮನಲ್ಲಿ ಅಜ್ಞಾನವನ್ನು ಬಿಡುವುದಿಲ್ಲ ವೆಂದೂ, ಜೀವನಲ್ಲಿ ಸರ್ವಜ್ಞತ್ವವನ್ನು ಬಿಡುವುದಿಲ್ಲವೆಂದೂ ಕಾಳಗ ನಡೆ ದಿರಲು), ತಚ್ಚ ಐಕ್ಯಂ—ನೀನು ಹೇಳುವ ಬ್ರಹ್ಮ, ಜೀವರ ಐಕ್ಯವು, ಜಂಬು- ಕಾಯತೇ — ನರಿಯಂತಾಗುತ್ತದೆ (ಆ ಟಗರುತಲೆಗಳ ಮಧ್ಯದಲ್ಲಿ ಸಿಕ್ಕು ನರಿಯು ಮೃತವಾಗುವಂತೆ, ಐಕ್ಯದ ಹೆಸರಿಲ್ಲದಂತಾಗುತ್ತದೆ) (ಪ್ರಮಾಣಸಿದ್ಧ ಭೇದವಿರಲು ಐಕ್ಯವು ಹೇಗೆ ಜೀವಿಸಬಲ್ಲದು ?—ಶಕ್ಯವಿಲ್ಲೆಂದರ್ಥ); ತಸ್ಮಾತ್— ಆದ್ದರಿಂದ, ಬ್ರಹ್ಮಾಶ್ರಿತಾಜ್ಞಾನಪ್ರತ್ಯಕ್ಷಂ—(ಅಜ್ಞಾನವು ಬ್ರಹ್ಮಾಶ್ರಿತವೆಂಬ) ಪ್ರತ್ಯಕ್ಷವು, ಎಂದರೆ ಸಿದ್ಧಿಯು, ಮರಣೇ ಅಪಿ—ಮರಣಪರ್ಯಂತದ ಶಾಸ್ತ್ರ ಪರ್ಯಾಲೋಚನೆಯಿಂದಲೂ, ನ—ಸಾಧಿಸುವುದು ಶಕ್ಯವಿಲ್ಲ.

**ಪ್ರತ್ಯಕ್ಷೇಣಾಜ್ಞತಾ ಸಿದ್ಧೌ ಬ್ರಹ್ಮಣೋ ಜ್ಞಾನರೂಪಿಣಃ ।**
**ಅವಿದ್ಯಾದುರ್ಘಟತ್ವೇನ ಘಟನಾ ಸ್ಯಾತ್ಕಥಂಚನ ॥ ೭೯ ॥**

ಜ್ಞಾನಸ್ವರೂಪನಾದ ಬ್ರಹ್ಮನಲ್ಲಿ ಅಜ್ಞಾನವು ಹೇಗೆ ಕೂಡುತ್ತದೆಂಬ ಶಂಕೆಯನ್ನುಪಹರಿಸಲು, ಅದ್ವೈತಿಯು ಹೇಳುವ 'ದುರ್ಘಟತ್ವಮವಿದ್ಯಾಯಾ

---

ನಡೆಸಿರುವಾಗ, ಮಧ್ಯೆ ಜೀವಬ್ರಹ್ಮರ ಐಕ್ಯವೆಂಬ (ಕಲ್ಪಿತ) ನರಿಯು ಪ್ರವೇಶಿಸಿದರೆ, ಅದಕ್ಕೆ ಮರಣವಲ್ಲದೇ ಅನ್ಯಗತಿಯಿಲ್ಲವೆಂಬುದು ನಿಶ್ಚಯ ; (ಆದ್ದರಿಂದ ಈ ಸಾಹಿತ್ಯಸರಣಿಯ ನಿರೂಪಣೆಯು, ಮರಣಪರ್ಯಂತ ಶಾಸ್ತ್ರಪರ್ಯಾಲೋಚನೆಯನ್ನು ನಡೆಸಿದರೂ, ಬ್ರಹ್ಮನಲ್ಲಿ ಅಜ್ಞಾನವಿರು ವುದೆಂಬ (ಅಜ್ಞಾನವು ಬ್ರಹ್ಮಾಶ್ರಿತವೆಂಬ) ಪ್ರಮೇಯವು ಸರ್ವಥಾ ಸಿದ್ಧ ವಾಗುವುದಿಲ್ಲವೆಂಬುದನ್ನು ಸೂಚಿಸುತ್ತದೆಂದು ತಿಳಿಯಬೇಕು) (೭೭–೭೮). ಜ್ಞಾನಸ್ವರೂಪನಾದ ಬ್ರಹ್ಮನಿಗೆ, ಆತನ ಅನುಭವದಿಂದಲೇ ಅಜ್ಞಾನದ ಸಿದ್ಧಿ

ಭೂಷಣಂ ನ ತು ದೂಷಣಂ' ಎಂಬ ಉಕ್ತಿಯೂ ಅಪ್ರಾಮಾಣಿಕವೆಂದು ಹೇಳುತ್ತಾರೆ :—

ಜ್ಞಾನರೂಪಿಣಃ – ಜ್ಞಾನರೂಪನಾದ, ಬ್ರಹ್ಮಣಃ—ಬ್ರಹ್ಮನಿಗೆ, ಪ್ರತ್ಯಕ್ಷೇಣ—ಪ್ರತ್ಯಕ್ಷದಿಂದ (ಆತನ ಅನುಭವದಿಂದಲೇ), ಅಜ್ಞತಾ ಸಿದ್ಧೌ—ಅಜ್ಞಾನ ಸಿದ್ಧಿಯಾದರೆ (ಸಿದ್ಧವಾಗುತ್ತಿರಲು), ಅವಿದ್ಯಾದುರ್ಘಟತ್ವೇನ—ಅವಿದ್ಯೆಯು (ಜ್ಞಾನರೂಪದಲ್ಲಿ) ಘಟನೆಯಾಗಲು ಸಾಧ್ಯವಿಲ್ಲದ್ದರಿಂದ, ಕಥಂಚನ—ಕಷ್ಟದಿಂದ (ಜ್ಞಾನಾಜ್ಞಾನಗಳು ಏಕತ್ರವಿರುವುದನ್ನು ಸಾಧಿಸಲು), 'ಭೂಷಣಂ ನ ತು ದೂಷಣಂ' ಎಂಬ ವಾಕ್ಯದಿಂದ), ಘಟನಾಸ್ಯಾತ್—ಸಂಭವಿಸಲಿ (ಜ್ಞಾನಾಜ್ಞಾನಗಳು ಏಕತ್ರವಿರುವಂತಾಗಲಿ).

**ತದಸಿದ್ಧೌ ಶ್ರೌತಸಾರ್ವಜ್ಞಸ್ಯೈವಾನುಭವೇ ಸತಿ ।**
**ಉಪಯಂತುರಭಾವಾತ್ತೇ ಕುಮಾರೀಭೂಷಣಂ ವೃಥಾ ॥ ೮೦ ॥**

ತದಸಿದ್ಧೌ—ಅದು (ಅಜ್ಞಾನವು) ಭಗವಂತನಲ್ಲಿ (ಪ್ರತ್ಯಕ್ಷದಿಂದ—ಅನುಭವದಿಂದ) ಸಿದ್ಧವಾಗದಿದ್ದರೆ, (ಅದಕ್ಕೆ ಪ್ರತಿಯಾಗಿ). ಶ್ರೌತಸಾರ್ವಜ್ಞಸ್ಯೈವ—ಶ್ರುತಿಸಿದ್ಧವಾದ ಸರ್ವಜ್ಞತ್ವದ (ಉಪಲಕ್ಷಣದಿಂದ 'ತಾನ್ಯಹಂ ವೇದ ಸರ್ವಾಣಿ' ಇತ್ಯಾದಿ ಸ್ಮೃತಿಗಳನ್ನು ಇಟ್ಟುಕೊಳ್ಳಬೇಕು), ಅನುಭವೇ ಸತಿ—ಅನುಭವವೇ (ಪ್ರತ್ಯಕ್ಷವೇ) ಸಿದ್ಧವಾಗುತ್ತಿರಲು, ಉಪಯಂತುಃ—ಅವಿದ್ಯೆಯನ್ನು (ಅಜ್ಞಾನವನ್ನು) ಅಂಗೀಕರಿಸುವ (ವಿವಾಹದಿಂದ ಸ್ವೀಕರಿಸುವ)

---

ಯಾದರೆ, ಜ್ಞಾನಾಜ್ಞಾನಗಳು ಏಕತ್ರವಿರುವುದು ಅಸಂಭಾವ್ಯವಾದುದರಿಂದ, ಅವುಗಳ ಘಟನೆಯನ್ನು ಹೇಗಾದರೂ ಸಾಧಿಸಬೇಕೆಂದು, ಅದ್ವೈತಿಯು, 'ದುರ್ಘಟತ್ವಮವಿದ್ಯಾಯಾ ಭೂಷಣಂ ನ ತು ದೂಷಣಂ' ಎಂಬ ನುಡಿಯನ್ನು ಆಶ್ರಯಿಸುತ್ತಾನೆ; ಆದರೆ ಅದೂ ಯುಕ್ತವಾಗುವುದಿಲ್ಲ (೭೯). ಅಜ್ಞಾನವು ಬ್ರಹ್ಮನಲ್ಲಿ ಸಿದ್ಧವಾಗದಿದ್ದರೆ, ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾದ ಸರ್ವಜ್ಞತ್ವವೇ ಸಿದ್ಧವೆಂದಾದರೆ, ಅವಿದ್ಯಾನಾಮಕ (ನಿನ್ನ) ಕನ್ಯೆಯನ್ನು, ದುರ್ಘಟತ್ವವೆಂಬ ಭೂಷಣದಿಂದ ಅಲಂಕರಿಸಿ, ಸರ್ವಜ್ಞನಾದ ಭಗವಂತನಲ್ಲಿ ಸೇರಿಸುವ ಯತ್ನವು ವ್ಯರ್ಥವೇ ಸರಿ; ಸರ್ವಜ್ಞನಾದ ಭಗವಂತನು ಅವಿದ್ಯಾಕನ್ಯೆಯನ್ನು ಸ್ವೀಕರಿಸುವುದೇ ಇಲ್ಲ (೮೦). ಬಲಾತ್ಕಾರವಾಗಿ, ಕುಯುಕ್ತಿ

ವರನ, ಅಭಾವಾತ್—ಅಭಾವದಿಂದ, ತೇ—ನಿನ್ನ, ಕುಮಾರೀಭೂಷಣಂ— (ಅವಿದ್ಯೆಯೆಂಬ) ಕುಮಾರಿಯ ಅಲಂಕಾರವು (ದುರ್ಘಟತ್ವವೆಂಬ ಭೂಷಣ ವನ್ನು ತೊಡಿಸುವುದು), ವೃಥಾ—ವ್ಯರ್ಥವೇ ಸರಿ. (ಅಜ್ಞಾನವನ್ನು ಭಗವಂತ ನಲ್ಲಿ ಸೇರಿಸುವ ನಿನ್ನ ಯತ್ನವು ಸಫಲವಾಗುವುದಿಲ್ಲ). (ಜೀವನಿಗೆ ಅವಿದ್ಯಾ ಕನ್ಯೆಯನ್ನು ಅಲಂಕರಿಸಿ ಕೊಡಲು ನೀನೇ ಒಪ್ಪುವುದಿಲ್ಲವಷ್ಟೆ—ಅಹಮಜ್ಞಃ ಎಂಬ ಅಜ್ಞಾನವು ಜೀವನಲ್ಲಿ ಮೊದಲಿಗೇ ಸಿದ್ಧವಾಗಿದೆ; ಹೊಸದಾಗಿ ವಿವಾಹ ಮಾಡಿಕೊಡುವ ಯತ್ನದ ಅವಶ್ಯಕತೆಯೇ ಇರುವುದಿಲ್ಲ).

**ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯೇತ್ಯುಕ್ತಿಶ್ವಶ್ರೂಃ ಕ್ಷಣೇ ಕ್ಷಣೇ।**
**ಉದೂಢಾಮಪಿ ತಾಂ ಕನ್ಯಾಂ ಹನ್ಯಾದೇವೇತಿ ಮೇ ಮತಿಃ ॥ ೮೧ ॥**

ಮಾಯಾಂ—ಅವಿದ್ಯೆಯನ್ನು, ಚಿಚ್ಛಕ್ತ್ಯಾ[1]—ಜ್ಞಾನಬಲದಿಂದ, ವ್ಯುದಸ್ಯ— ನಿರಾಕರಿಸಿ, ಇತ್ಯುಕ್ತಿಶ್ವಶ್ರೂಃ—ಹೀಗೆಂಬ ಭಾಗವತೋಕ್ತಿರೂಪದ ಅತ್ತೆಯು ('ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ' ಹೀಗೆಂಬ ಭಾಗವತ ವಚನರೂಪದ ಅತ್ತೆಯು), ಉದೂಢಾಂ ಅಪಿ—(ಸ್ವರೂಪಜ್ಞಾನಕ್ಕೆ ಅಜ್ಞಾನವು ವಿರೋಧಿಯಲ್ಲವೆಂದು ಅನೃತವನ್ನು ಹೇಳಿ) ಬಲಾತ್ಕಾರದಿಂದ ವಿವಾಹ ಮಾಡಲ್ಪಟ್ಟವಳಾದ, ಕನ್ಯಾಂ—ಕನ್ಯೆಯನ್ನು (ಸೊಸೆಯೆಂಬ ಅಜ್ಞಾನ

---

ಗಳಿಂದ ಈ ಕನ್ಯೆಯನ್ನು ಆತನಲ್ಲಿ ಸೇರಿಸಿದರೂ, ಅತ್ತೆಯು ಆಕೆಯ ನಿಜ ಸ್ವರೂಪವನ್ನು ತಿಳಿದವಳಾದ್ದರಿಂದ ತಪ್ಪದೇ ಹೊರಗೆ ಹಾಕುತ್ತಾಳೆ; ಒಂದು ಕ್ಷಣವೂ ನಿಲ್ಲಗೊಡುವುದಿಲ್ಲ; ಇಲ್ಲಿ 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಇತ್ಯಾದಿ ಭಾಗವತ ವಾಕ್ಯಗಳೇ ಅತ್ತೆಯ ಸ್ಥಾನದಲ್ಲಿರುತ್ತವೆ; ಭಗವಂತನ ಸ್ವರೂಪವು ಸರ್ವಜ್ಞತ್ವ ವಿಶಿಷ್ಟವಾದುದರಿಂದ ಸಹ ಆತನು ಅವಿದ್ಯಾಕನ್ಯೆಯನ್ನು ಮದುವೆ ಯಾಗಲು ಎಂದಿಗೂ ಒಪ್ಪುವುದಿಲ್ಲ; ಇದು ನನ್ನ ನಿಶ್ಚಯಾಭಿಪ್ರಾಯವು(೮೧).

---

[1] ಸ್ವರೂಪಜ್ಞಾನಕ್ಕೆ ಅವಿದ್ಯಾ (ಅಜ್ಞಾನ ಅಥವಾ ಮಾಯಾ) ವನ್ನು ನಿರಾಕರಿಸುವ ಸಾಮರ್ಥ್ಯವಿರುತ್ತದೆಂದು ಸೂಚಿತವಾಗಿದೆ; ಕುಯುಕ್ತಿಗಳಿಂದ ಅಜ್ಞಾನವೆಂಬ ಕೆಸರಿ ನಲ್ಲಿ ದೂಡಲ್ಪಡುವ ಭಗವಂತನಿಗೆ, ಸ್ವರೂಪಸಿದ್ಧವಾದ ಸರ್ವಜ್ಞತ್ವದಿಂದಲೇ ಅದನ್ನು ತಡೆಯುವ ಶಕ್ತಿಯುಂಟೆಂದೂ ಸೂಚಿತವಾಗಿದೆ.

ರೂಪದ ಕನ್ಯೆಯನ್ನು), ಕ್ಷಣೇ ಕ್ಷಣೇ–ಪ್ರತಿ ಕ್ಷಣದಲ್ಲಿ,[1] ಹನ್ಯಾತ್ ಏವ– ಹೊಡೆದು ಹೊರಗೆ ಹಾಕುವಳೆಂದೇ, ಮೇ–ನನ್ನ, ಮತಿಃ–ನಿಶ್ಚಯವು.

**ಸ್ವಾನರ್ಹಾಲಂಕೃತಿಂ ತಸ್ಯಾಃ ಸಹೇತ ಕಥಮೈಶ್ವರೀಂ ।**
**ನಾಪಿ ಜೀವಸ್ಯ ಯೋಗ್ಯೇಯಮನ್ಯೋನ್ಯಾಶ್ರಯದೋಷತಃ ॥೬೨॥**

ತಸ್ಯಾಃ–ಆ ಅವಿದ್ಯಾ ಕನ್ಯೆಯು, ಸ್ವಾನರ್ಹಾಲಂಕೃತಿಂ–ತನಗೆ ಯೋಗ್ಯ ವಲ್ಲದ ಅಲಂಕಾರವನ್ನು (ದುರ್ಘಟತ್ವ ಪರಿಹಾರಕವೆಂಬ ಭೂಷಣವನ್ನು), ಐಶ್ವರೀಂ – (ಕರ್ತುಂ ಅಕರ್ತುಂ ಅನ್ಯಥಾ ಕರ್ತುಂ ಸಮರ್ಥನಾದ, ಈಶ್ವರ ನಾದ ತನಗೇ ಯೋಗ್ಯವೆಂಬ ಅದನ್ನು) ಭೂಷಣವನ್ನು, ಕಥಂ – ಹೇಗೆ, ಸಹೇತ – (ಈಶ್ವರನು) ಸಹಿಸುವನು ? (ಭಗವದನ್ಯತ್ರ ದುರ್ಘಟ ಘಟಕತ್ವ ವನ್ನು ಶ್ರುತಿಯು ಸಹಿಸುವುದಿಲ್ಲ—ಶ್ರುತಿವಿರುದ್ಧವೆಂದು ಭಾವ) ; ಇಯಂ– ಈ ಭೂಷಣಧಾರಿಯಾದ ಕನ್ಯೆಯು, ಅನ್ಯೋನ್ಯಾಶ್ರಯದೋಷತಃ–ಅನ್ಯೋ ನ್ಯಾಶ್ರಯವೆಂಬ ದೋಷಪ್ರಾಪ್ತವಾಗುವುದರಿಂದ, ಜೀವಸ್ಯ ಅಪಿ–ಜೀವನಿಗೆ ಸಹ, ನ ಯೋಗ್ಯಾ–ಅರ್ಹಳಾಗುವುದಿಲ್ಲ; (ಈ ದುರ್ಘಟಕ ಘಟನ ಶಕ್ತಿಯು ಜೀವಯೋಗ್ಯವೆಂಬಲ್ಲಿ ಪ್ರಮಾಣವಿಲ್ಲ ಮತ್ತು ಪ್ರತ್ಯಕ್ಷವಿರುದ್ಧವೂ ಆಗಿದೆ).

---

ಅಘಟನ ಘಟನಾ ಶಕ್ತಿಯು, (ಕರ್ತುಮಕರ್ತುಮನ್ಯಥಾ ಕರ್ತುಂ ಸಾಮರ್ಥ್ಯವು ಈಶ್ವರೀ ಶಕ್ತಿಯು ; ಭಗವಂತನಲ್ಲಿ ಮಾತ್ರ ಇರತಕ್ಕದ್ದು ; ಈ ಈಶ್ವರೀಶಕ್ತಿಯನ್ನು ಅವಿದ್ಯಾಕನ್ಯೆಯು ತಾನು ಧರಿಸಿ, ಅಲಂಕರಿಸಿ ಕೊಂಡು, ಸರ್ವಜ್ಞನಾದ ಆತನನ್ನು ವಂಚಿಸಲಿಚ್ಛಿಸುವುದನ್ನು, ಭಗವಂತನು ಹೇಗೆ ಸಹಿಸುವನು ? (ಸಹಿಸುವುದಿಲ್ಲ) ; ಹೀಗೆ ದುರ್ಘಟ ಘಟನಾಶಕ್ತಿಯೆಂಬ ಭೂಷಣಯುಕ್ತಳಾದ ಅವಿದ್ಯೆಯು, ಜೀವನಲ್ಲಿ ಪ್ರವೇಶಿಸಲೂ ಅರ್ಹಳಲ್ಲ; ಆ ವಿಧ ದುರ್ಘಟಕವನ್ನು ಸುಘಟವನ್ನಾಗಿಸುವ ಶಕ್ತಿಯು ಜೀವನಿಗಿರುವಲ್ಲಿ ಯಾವ ಪ್ರಮಾಣವೂ—ಪ್ರತ್ಯಕ್ಷವಿರುದ್ಧವೂ ಆಗಿದೆ; ಅನ್ಯೋನ್ಯಾಶ್ರಯ ದೋಷವೂ ಉಂಟಾಗುತ್ತದೆ (೬೨).

---

1 'ನ ಯತ್ರ ಮಾಯಾ...' ಎಂದೂ, 'ನ ಯತ್ರ ಶ್ರೂಯತೇ ಮಾಯಾ' ಇತ್ಯಾದಿ ಭಾಗವತ ವಾಕ್ಯಗಳು, ಭಗವಂತನಲ್ಲಿ ಅವಿದ್ಯಾದಿ ಯಾವ ದೋಷವೂ ಇಲ್ಲವೆಂದೂ, ವೈಕುಂಠಾದಿ ಲೋಕಗಳಿಂದ ಮಾಯೆಯು ಹೊರಗೆ ಹಾಕಲ್ಪಟ್ಟಿರುವುದೆಂದೂ (ಮುಕ್ತ ರಿಗೆ ಸಹ ಇಲ್ಲವೆಂದೂ) ಹೇಳಲಾಗಿರುವುದು, ಸೂಚಿತವೆಂದು ತಿಳಿಯಬೇಕು.

**ಜೀವೋಽಪ್ಯಜ್ಞಾನಕಲ್ಪ್ಯಸ್ತೇ ಸೋಽಜ್ಞಾನಸ್ಯ ಕಥಂ ಮಹೀ ।**
**ನ ಹಿ ಭಾರ್ಯೈವ ಭರ್ತಾರಂ ಸೂತೇ ಯತ್ನಶತೈರಪಿ ॥ ೮೩ ॥**

**ಜೀವಸಿದ್ಧೌ ತದಾಧಾರಮಜ್ಞಾನಂ ತೇ ಪ್ರಸಿಧ್ಯತಿ ।**
**ಅಜ್ಞಾನಸಿದ್ಧೌ ತತ್ಕಲ್ಪ್ಯೋ ಜೀವಃ ಸಿಧ್ಯೇನ್ನ ಚಾನ್ಯಥಾ ॥ ೮೪ ॥**

ಅನ್ಯೋನ್ಯಾಶ್ರಯವನ್ನು ಉಪಪಾದನೆ ಮಾಡುತ್ತಾರೆ :—

ಹಿ—ಯಾವ ಕಾರಣದಿಂದ, ತೇ—ನಿನ್ನ ಮತದಲ್ಲಿ, ಜೀವಃ ಅಪಿ—ಯಾವ ಜೀವನೆಂಬುವನೂ, ಅಜ್ಞಾನಕಲ್ಪಿತಃ — ಅಜ್ಞಾನದಿಂದ ಹುಟ್ಟಿದವನೋ (ಬ್ರಹ್ಮನೇ ಅಜ್ಞಾನವಶನಾಗಿ ಜೀವಭಾವವನ್ನು ಹೊಂದುವನೆಂದು ನಿನ್ನ ಮತವು ಹೇಳುವುದರಿಂದ), ಸಃ — ಆ ಜೀವನು, ಅಜ್ಞಾನಸ್ಯ—ಅಜ್ಞಾನದ, ಮಹೀ—ಆಶ್ರಯನು, ಕಥಂ—ಹೇಗೆ ? (ಆಗಬಲ್ಲನು ; ಮೊದಲು ಜೀವನಿದ್ದರೆ, ಅಜ್ಞಾನವು ಅವನನ್ನು ಆಶ್ರಯಿಸಬಹುದು) ; ಭಾರ್ಯಾ ಏವ—(ಪತಿಯ ಆಶ್ರಯದಲ್ಲಿರುವ) ಪತ್ನಿಯೇ, ಭರ್ತಾರಂ—ತನಗೆ ಆಶ್ರಯನಾದ ಪತಿಯನ್ನು, ಯತ್ನಶತೈಃ ಅಪಿ—ಎಷ್ಟು (ಯಾವ) ಪ್ರಯತ್ನದಿಂದಲೂ, ನ ಸೂತೇ—ಪ್ರಸವಿಸಲಾರಳು ; (ತನಗಿಂತ ಮೊದಲು ಹುಟ್ಟಿದ ಪತಿಯನ್ನು, ನಂತರ ಹುಟ್ಟಿದ ಪತ್ನಿಯು ಹಡೆಯುವುದು ಸಾಧ್ಯವೇ ಇಲ್ಲ ; ಜೀವನು ಮೊದಲಿದ್ದರೆತಾನೇ ಅಜ್ಞಾನವು ಆತನನ್ನು ಆಶ್ರಯಿಸಬೇಕು ? ಅಜ್ಞಾನಕಲ್ಪಿತನಾದ ಜೀವನು

---

ಬ್ರಹ್ಮನು ಅಜ್ಞಾನದ ವಶನಾಗಿ ಜೀವಭಾವವನ್ನು (ಜೀವತ್ವವನ್ನು) ಹೊಂದುವನೆಂಬುದು ಅದ್ವೈತಸಿದ್ಧಾಂತವು ; ಆದ್ದರಿಂದ ಅಜ್ಞಾನಕಲ್ಪಿತ ಜೀವನು ಅಜ್ಞಾನಕ್ಕೆ ಆಶ್ರಯನೆಂದರೆ ಅನ್ಯೋನ್ಯಾಶ್ರಯ ದೋಷವು ತಪ್ಪುವುದಿಲ್ಲ ; ನಂತರ ಹುಟ್ಟಿದ ಹೆಂಡತಿಯು ಗಂಡನನ್ನು ಪ್ರಸವಿಸಿದಳೆಂದರೆ ಅಪಹಾಸವಾಗುವಂತೆ, ಈ ಪ್ರಕ್ರಿಯೆಯೂ ಅಪಹಾಸಕರವು ; ಯಾವ ಪ್ರಯತ್ನದಿಂದಾದರೂ ಹೆಂಡತಿಯು ಗಂಡನನ್ನು ಹಡೆಯಬಲ್ಲಳೇ ? ಅಜ್ಞಾನವು ಮೊದಲು ಸಿದ್ಧವಾದರೆ, ಜೀವನು ಅದರಿಂದ ಕಲ್ಪಿತನಾಗುತ್ತಾನೆ; ಜೀವನು ಸಿದ್ಧನಾಗಿದ್ದರೆ, ಅಜ್ಞಾನವು ಅವನ ಆಶ್ರಯದಲ್ಲಿರಬಹುದು ; ಜೀವನಿಲ್ಲದಿದ್ದರೆ ಅಜ್ಞಾನಕ್ಕೆ ಆಶ್ರಯವೇ ಇಲ್ಲ; ಹೀಗೆ ಅನ್ಯೋನ್ಯಾಶ್ರಯವೆಂಬ (ಅಜ್ಞಾನವಿದ್ದರೆ ಜೀವ, ಜೀವನಿದ್ದರೆ ಅಜ್ಞಾನವೆಂಬ ರೂಪದ) ದೋಷವು

ಅಜ್ಞಾನಕ್ಕೆ ಆಶ್ರಯನೆಂಬುದು ಸಲ್ಲದ ಮಾತು;) ಅಜ್ಞಾನವು ಈಶ್ವರನ ಆಶ್ರಯದಲ್ಲಿದ್ದಿದ್ದರೆ, ಜೀವನ ಆಶ್ರಯದಲ್ಲಿರಲಿ ಎಂಬುದೂ ಯುಕ್ತವಲ್ಲ; (ಅಜ್ಞಾನವಿದ್ದರೆ ಜೀವ; ಜೀವನಿದ್ದರೆ [ಅವನಲ್ಲಿ] ಅಜ್ಞಾನವೆಂಬ ಅನ್ಯೋನ್ಯಾಶ್ರಯ ದೋಷವು ತಪ್ಪುವುದೇ ಇಲ್ಲ); ಜೀವಸಿದ್ಧೌ–ಜೀವನು ಸಿದ್ಧನಾದರೆ, ತದಾಧಾರಂ ಅಜ್ಞಾನಂ–ಅವನನ್ನಾಶ್ರಯಿಸಿದ ಅಜ್ಞಾನವು, ತೇ–ನಿನಗೆ (ನಿನ್ನ ಮತದಲ್ಲಿ), ಪ್ರಸಿದ್ಧ್ಯತಿ–ಸಿದ್ಧವಾಗುತ್ತದೆ; ಅಜ್ಞಾನಸಿದ್ಧೌ – ಅಜ್ಞಾನವು ಸಿದ್ಧವಾಗಿದ್ದರೆ, ತತ್ಕಲ್ಪ್ಯಃ – ಅದರಿಂದ ಕಲ್ಪಿತನಾದ, ಜೀವಃ – ಜೀವನು, ಸಿದ್ಧ್ಯೇತ್–ಸಿದ್ಧನಾಗಬಹುದು, ಅನ್ಯಥಾ–ಹಾಗಲ್ಲದಿದ್ದರೆ (ಅಜ್ಞಾನವಿಲ್ಲದೆ), ನ ಚ–ಜೀವನೇ ಇಲ್ಲವು (ನಮ್ಮ ಮತದಲ್ಲಿ ಸ್ವಾಭಾವಿಕ ಜೀವರನ್ನು ಅಂಗೀಕರಿಸುವುದರಿಂದ ಈ ದೋಷವಿಲ್ಲ).

**ಯದ್ಯಜ್ಞಾನಂ ವಿನೈವ ಸ್ಯಾಜ್ಜೀವೋಽನಾದಿಃ ಸ್ವತಸ್ತದಾ ।**
**ಸತ್ಯೋ ಜೀವೇಶಭೇದಃ ಸ್ಯಾತ್ತಸ್ಮಾದಜ್ಞಾನಕಲ್ಪಿತಃ ।**
**ಜೀವೋಽವಶ್ಯಂ ತ್ವಯಾ ವಾಚ್ಯಃ ಕಥಂ ನಾನ್ಯೋನ್ಯಸಂಶ್ರಯಃ ॥**

'ಅನ್ಯಥಾ ನ' ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದುದನ್ನು ವಿವೇಚಿಸುತ್ತಾರೆ:—

ಅಜ್ಞಾನಂ ವಿನಾ–ಅಜ್ಞಾನವಿಲ್ಲದೇ, ಜೀವಃ ಯದಿ ಸ್ಯಾತ್–ಜೀವನು ಒಂದು ಪಕ್ಷ ಇರುವನಾದರೆ (ಭಗವಂತನಿಗೆ ಅಜ್ಞಾನವಶದಿಂದ ಜೀವತ್ವವು ಪ್ರಾಪ್ತವೆಂದು ಹೇಳದಿದ್ದರೆ), ತದಾ–ಆಗ, ಸ್ವತಃ–ಸ್ವಭಾವದಿಂದ, ಅನಾದಿಃ–(ಜೀವೇಶ್ವರರಿಬ್ಬರೂ ಪರಾಪೇಕ್ಷೆಯಿಲ್ಲದೇ ಅನಾದಿಯಿಂದ ಸ್ವಭಾವದಿಂದಲೇ ಸ್ಥಿತರಾದ) ಅನಾದಿಸ್ವರೂಪರೆಂದು (ಸ್ಯಾತ್–ಆಗುವರು) ; ಜೀವೇಶಭೇದಃ–

---

ತಪ್ಪುವುದೇ ಇಲ್ಲ (೮೩–೮೪). ಭಗವಂತನು (ಬ್ರಹ್ಮನು) ಅಜ್ಞಾನವಶನಾಗಿ ಜೀವಭಾವವನ್ನು ಹೊಂದುವನೆಂದು ಹೇಳದಿದ್ದರೆ ಜೀವನು ಸ್ವಭಾವದಿಂದ (ಅನಾದಿಯಿಂದ ಕಾಲಾಕಾಶಗಳಂತೆ) ಭಿನ್ನನೆಂದೇ ಸಿದ್ಧವಾಗುತ್ತದೆ; ಆಗ ಜೀವೇಶ್ವರರ ಭೇದವೂ ಸತ್ಯವಾಯಿತು; ಈ ಭೇದಕ್ಕೆ ಬಾಧವುಂಟಾಗಲು ಜೀವನು ಅಜ್ಞಾನಕಲ್ಪಿತನೆಂದು ಅವಶ್ಯವಾಗಿ ನೀನು ಹೇಳಲೇಬೇಕು— ಅದ್ದರಿಂದ ಅಜ್ಞಾನವಿಲ್ಲದೇ ಜೀವನೇ ಇಲ್ಲ; ಅಂತೂ ಅನ್ಯೋನ್ಯಾಶ್ರಯವು

ಜೀವಬ್ರಹ್ಮರ ಭೇದವು, ಸತ್ಯಃ ಸ್ಯಾತ್—ಸತ್ಯವೇ ಆಗುತ್ತದೆ ; ತಸ್ಮಾತ್—ಆದ್ದರಿಂದ (ಸತ್ಯಃ—ಭೇದವು ಅಬಾಧಿತವು ;), ಜೀವಃ—ಜೀವನು, ಅಜ್ಞಾನಕಲ್ಪಿತಃ—ಅಜ್ಞಾನದಿಂದ ಕಲ್ಪಿತನು (ಎಂದು), ತ್ವಯಾ—ನಿನ್ನಿಂದ, ಅವಶ್ಯಂ ವಾಚ್ಯಃ—ಅವಶ್ಯವಾಗಿ ಹೇಳಲೇಬೇಕು.[1]

**ಜೀವೋಪಾಧಿರವಿದ್ಯೈವ ಲಯೇ ಸುಪ್ತೌ ಚ ವರ್ತನಾತ್ ॥ ೮೬ ॥**

ನಿನ್ನ ಮತದಂತೆ ಅವಿದ್ಯೆಯೇ ಜೀವನ ಉಪಾಧಿಯು ; ಅಂತಃಕರಣವಲ್ಲವೆನ್ನುತ್ತಾರೆ[2] :—

ಜೀವೋಪಾಧಿಃ—ಜೀವತ್ವಕ್ಕೆ ಕಾರಣವು, ಅವಿದ್ಯಾ ಏವ—ಅವಿದ್ಯೆಯೇ (ಅಂತಃಕರಣವಲ್ಲ) ; ಲಯೇ—ಪ್ರಲಯದಲ್ಲಿ, ಸುಪ್ತೌ ಚ—ನಿದ್ರೆಯಲ್ಲಿಯೂ, ವರ್ತನಾತ್ — (ಅವಿದ್ಯೆಯು) ಇರುವುದರಿಂದ (ಅಂತಃಕರಣ ಸಂಬಂಧವಿರುವುದಿಲ್ಲವಾದ್ದರಿಂದಲೂ, ಜೀವಭಾವಕ್ಕೆ ಅವಿದ್ಯೆಯೇ ಕಾರಣವು ; ಅಂತೂ ಅನ್ಯೋನ್ಯಾಶ್ರಯವು ತಪ್ಪಲಿಲ್ಲ).

---

ತಪ್ಪುವುದಿಲ್ಲ (೮೫). ಜೀವಭಾವಕ್ಕೆ ಕಾರಣವು ಅವಿದ್ಯೆಯೇ—ಅಂತಃಕರಣವಲ್ಲ; ಪ್ರಲಯ ಮತ್ತು ನಿದ್ರಾವಸ್ಥೆಗಳಲ್ಲಿ ಸಹ ಅವಿದ್ಯೆಯು ಪ್ರವರ್ತಿಸುತ್ತಿರುವುದಷ್ಟೆ ; ಆಗ ಅಂತಃಕರಣವಿರುವುದಿಲ್ಲ ; ಈ ಕಾರಣದಿಂದ ಸಹ ಅನ್ಯೋನ್ಯಾ

---

1 ಭೇದವು ಬಾಧ್ಯವೆಂದು ಹೇಳುವ ಪರನು ಬ್ರಹ್ಮನಿಗೇ ಜೀವಭಾವವೆಂದು ಹೇಳಬೇಕು—ಅದು ಅಜ್ಞಾನಕಲ್ಪಿತವೆಂದೇ ಹೇಳಬೇಕು—ಅನ್ಯೋನ್ಯಾಶ್ರಯವು ತಪ್ಪುವುದಿಲ್ಲ ; ಜೀವಭಾವವು ಅಂತಃಕರಣಕಲ್ಪಿತವೆಂದು ಹೇಳುವುದೂ ಯುಕ್ತವಾಗುವುದಿಲ್ಲ; ಅದೂ ಸಹ ಅಜ್ಞಾನಕಲ್ಪಿತವೇ ಆಗಬೇಕು—ವಸ್ತುಬಾಹುಲ್ಯವೂ ಅದ್ವೈತಕ್ಕೆ ವಿರೋಧಿಯು ; ಚಕ್ರಕಾಪತ್ತಿ ಎಂಬ ದೋಷವೂ ತಗಲುತ್ತದೆ; ಅಜ್ಞಾನಕಲ್ಪಿತವು ಅಂತಃಕರಣ—ಅಂತಃಕರಣದಿಂದ ಜೀವ; ಹೀಗೆ ಅಜ್ಞಾನ—ಅಂತಃಕರಣ—ಜೀವ—ಜೀವನಲ್ಲಿ ಅಜ್ಞಾನವೆಂಬ ಸುತ್ತಿನ ದೋಷವು ಅಪರಿಹಾರ್ಯವಾಗುತ್ತದೆ.

2 ಬ್ರಹ್ಮನು ಜೀವಭಾವವನ್ನು ಹೊಂದಲು ಅವಿದ್ಯೆಯು (ಅಜ್ಞಾನ) ಕಾರಣವಲ್ಲ ; ಅಂತೂ ಅಂತಃಕರಣವೇ ಕಾರಣವು ಎಂದು ಹೇಳಿ ಅನ್ಯೋನ್ಯಾಶ್ರಯ ದೋಷವನ್ನು ತಪ್ಪಿಸಿಕೊಳ್ಳುವುದೂ ಸಾಧ್ಯವಲ್ಲ ಎನ್ನುತ್ತಾರೆ; ಪ್ರಲಯ ಮತ್ತು ನಿದ್ರಾವಸ್ಥೆಗಳಲ್ಲಿ ಅಂತಃಕರಣವಿಲ್ಲಷ್ಟೆ—ಜೀವನೇ ಇಲ್ಲವೆಂದಲ್ಲ (ಬ್ರಹ್ಮನೇ ಸ್ವರೂಪದಿಂದಿರುವನೆಂದು ಒಪ್ಪಬೇಕಾದೀತು—ನಿದ್ರಿಸುವವನೇ ಬ್ರಹ್ಮನಾದಾನು !).

**ಅನಾದಿತ್ವೇ ನಾನವಸ್ಥಾದೋಷಸ್ಯ ಸ್ಯಾತ್ ಕ್ವಚಿಚ್ಛಮಃ ।**
**ಅನ್ಯೋನ್ಯಾಶ್ರಯದೋಷಸ್ತು ಕ್ಷೋಣ್ಯಾಂ ಶೂನ್ಯಪ್ರತಿಕ್ರಿಯಃ ।**
**ಯದಂಕುರಾದ್ಧಿ ಯದ್ಬೀಜಂ ಕಿಂ ತದ್ಬೀಜಾತ್ತದಂಕುರಃ ॥ ೮೭ ॥**

ಅನವಸ್ಥಾ ದೋಷಕ್ಕಿಂತ ಅನ್ಯೋನ್ಯಾಶ್ರಯವು ಪ್ರಬಲವೆಂದು ಹೇಳುತ್ತಾರೆ:—

ಅನಾದಿತ್ವೇನ—(ಜೀವ ಅಜ್ಞಾನಗಳ ಈ ಸಂಬಂಧವು) ಅನಾದಿಯಾದ್ದರಿಂದ, ಅನವಸ್ಥಾದೋಷಸ್ಯ—ಅನವಸ್ಥಾದೋಷಕ್ಕೆ, ಕ್ವಚಿತ್—ಕೆಲವು ಸಂದರ್ಭದಲ್ಲಿ (ಪ್ರಾಮಾಣಿಕತ್ವವಿದ್ದರೆ)' ಶಮಃ—ಪರಿಹಾರವು, ಸ್ಯಾತ್—ಉಂಟಾಗುತ್ತದೆ; ಅನ್ಯೋನ್ಯಾಶ್ರಯ ದೋಷಃ ತು— ಅನ್ಯೋನ್ಯಾಶ್ರಯ ದೋಷವಾದರೋ, ಕ್ಷೋಣ್ಯಾಂ—ಜಗತ್ತಿನಲ್ಲಿ (ಎಲ್ಲಿಯೂ), ಶೂನ್ಯಪ್ರತಿಕ್ರಿಯಃ—ಪರಿಹಾರವಿಲ್ಲದುದು (ಆಗಿರುತ್ತದೆ) ; ಯದಂಕುರಾತ್—ಯಾವ ಅಂಕುರದಿಂದ, ಯದ್ಬೀಜಂ—ಯಾವ ಬೀಜವೋ, ತದ್ಬೀಜಾತ್—ಅದೇ ಬೀಜದಿಂದ, ತದಂಕುರಃ—ಅದೇ ಅಂಕುರವು, ಕಿಂ—ಆಗುವುದೇನು (ಇಲ್ಲ).[1]

---

ಶ್ರಯವು ತಪ್ಪುವುದಿಲ್ಲ (೮೬). ಬೀಜಾಂಕುರದಂತೆ, ಪರಸ್ಪರ ಕಾರಣತ್ವವನ್ನು ನಿರ್ಣಯಿಸಲಾಗಿರುವುದಕ್ಕೆ ಅನವಸ್ಥಾದೋಷವೆನ್ನುವರು ; ಅನವಸ್ಥಾದೋಷವು, ಪ್ರಾಮಾಣಿಕವಾಗಿದ್ದಲ್ಲಿ ಪರಿಹಾರವಾಗುವುದು (ಉಪಶಮನ

---

1 ಬೀಜಾಂಕುರದ ಅನವಸ್ಥಾ ದೋಷವು, ಎಂದರೆ ಬೀಜದಿಂದ ಅಂಕುರವೋ, ಅಂಕುರವು ಮರವಾಗಿ ಅದರಿಂದ ಬೀಜವೋ ಎಂಬಲ್ಲಿ ಇರುವ ಪರಸ್ಪರ ಕಾರಣತ್ವವನ್ನು ನಿರ್ಧರಿಸಲು ಶಕ್ಯವಲ್ಲದ್ದರಿಂದ ಈ ದೋಷವು ಅನ್ಯೋನ್ಯಾಶ್ರಯದಂತೆ ಪ್ರಬಲ ದೋಷವಲ್ಲ; ಬೀಜಾಂಕುರದ ಅನವಸ್ಥೆಯು ಪ್ರಾಮಾಣಿಕವಾದ್ದರಿಂದ ದೋಷವಲ್ಲ; ಅನ್ಯೋನ್ಯಾಶ್ರಯ ದೋಷವು ಯಥಾರ್ಥಜ್ಞಾನದ ಸಿದ್ಧಿಗೇ ಬಾಧಕವಾಗುತ್ತದೆ. ಒಂದು ಮರದಿಂದ ಹುಟ್ಟಿದ ಒಂದು ಬೀಜವು ಅದೇ ಮರದ ಉತ್ಪತ್ತಿಗೆ ಕಾರಣವಲ್ಲ—ಸದೃಶವಾದ ಇನ್ನೊಂದು ಮರದ ಉತ್ಪತ್ತಿಗೆ ಕಾರಣವಾಗಬಹುದು; ಆದ್ದರಿಂದ ಇಲ್ಲಿ ಅನ್ಯೋನ್ಯಾಶ್ರಯವೆಂಬ ದೋಷಕ್ಕೆ ಅವಕಾಶವಿಲ್ಲ ; ಅಜ್ಞಾನದಿಂದ ಜೀವನು ಕಲ್ಪಿತನೆಂದರೆ (ಅಜ್ಞಾನವು ಜೀವನಲ್ಲಿರುವುದೆಂಬಲ್ಲಿ), ಜೀವನು ಮೊದಲಿಗೆ ಇದ್ದರೆ, ಅಜ್ಞಾನವು ಅವನನ್ನು ಆಶ್ರಯಿಸಬಹುದಾದ್ದರಿಂದ ಅಜ್ಞಾನದಿಂದ ಜೀವ—ಜೀವನಲ್ಲಿ ಅಜ್ಞಾನ ಎಂಬಂತೆ ಅನ್ಯೋನ್ಯಾಶ್ರಯ ದೋಷವು ಬೀಜಾಂಕುರನ್ಯಾಯದಲ್ಲಿರುವುದಿಲ್ಲ.

**ತಸ್ಮಾದವಿದ್ಯಾಪ್ರತ್ಯಕ್ಷಂ ಮನ್ಯೇ ಪಾಂಡಿತ್ಯಶೂನ್ಯ ತೇ ।**
**ಪೂರ್ವೋತ್ತರಪ್ರಮೇಯಸ್ಯಾವಿದ್ಯಾಯಾ ಏವ ಸಾಧಕಂ ॥ ೮೮ ॥**

'ಅಹಮಜ್ಞಃ' ಎಂಬ ಅವಿದ್ಯೆಯ ಅನುಭವದ ದೂಷಣವನ್ನು ಉಪ ಸಂಹರಿಸುತ್ತಾರೆ :—

ಪಾಂಡಿತ್ಯಶೂನ್ಯ – ಹೇ ಅಪಂಡಿತ ! ಮೂರ್ಖ ! ತಸ್ಮಾತ್ – ಹೀಗೆ (ಅಕಾರಣದಿಂದ), ಅವಿದ್ಯಾಪ್ರತ್ಯಕ್ಷಂ–ಅವಿದ್ಯಾನುಭವವನ್ನು, ತೇ–ನಿನಗೆ, ಮನ್ಯೇ–ತಿಳಿಯುತ್ತೇನೆ; ಪೂರ್ವೋತ್ತರಪ್ರಮೇಯಸ್ಯ–(ಜೀವಾನುಭವವನ್ನು ಬ್ರಹ್ಮನಲ್ಲಿ ತಂದು ಸೇರಿಸುವುದರಿಂದ) ಜ್ಞಾನಾಭಾವರೂಪ ಅಜ್ಞಾನದ (ಅಹಮಜ್ಞಃ ಎಂಬ ಅನುಭವದಿಂದ ಭಾವರೂಪ ಅಜ್ಞಾನವು ಸಿದ್ಧವಾಗು ವುದೆಂಬ ವಿಷಯವನ್ನು ನೀನು ತಿಳಿಯಲಿಲ್ಲವೆಂಬ), ಅವಿದ್ಯಾಯಾಃ–ಅವಿದ್ಯೆಗೆ, ಸಾಧಕಂ ಏವ–ಸಾಧಕವೇ ಆಗುತ್ತದೆ.

**ಏಕಾಜ್ಞಾನೇಪಿ ಸರ್ವೋಽಜ್ಞಃ ಸ್ಯಾದೈಕ್ಯಬಲತೋ ನ ಚೇತ್ ।**
**ಏಕದುಃಖೇಪಿ ದುಃಖ್ಯನ್ಯಃ ಸ್ಯಾದೈಕ್ಯಸ್ಯ ಸಮಾಶ್ರಯಾತ್ ।**
**ಏಕಾನುಭೂತಿಃ ಸರ್ವಸ್ಯೇತ್ಯಾಗತೋ ಜಾತಿಸಂಕರಃ ॥ ೮೯ ॥**

---

ಹೊಂದುತ್ತದೆ ; ಆದರೆ ಅನ್ಯೋನ್ಯಾಶ್ರಯ ದೋಷವು ಪರಿಹಾರವಾಗದ ದೋಷವು—ಅತ ಏವ, ಪ್ರಬಲವಾದುದು ; ಬೀಜದಿಂದ ಅಂಕುರವಾಗಿ, ಅದು ವೃಕ್ಷವಾಗಿ, ಅಲ್ಲಿ ಪುನಃ ಬೀಜವು ಹುಟ್ಟುತ್ತದೆ ; ಪರಸ್ಪರ ಒಂದಕ್ಕೊಂದು ಕಾರಣವೆಂದು ಪ್ರಾಮಾಣಿಕವಾಗಿದೆ (ಯಥಾರ್ಥವಾಗಿದೆ—ಸತ್ಯವಾಗಿದೆ) ; ಆದರೆ ಅಲ್ಲಿ ಅನ್ಯೋನ್ಯಾಶ್ರಯ ದೋಷವಿಲ್ಲ ; ವೃಕ್ಷದಲ್ಲಿ ದೊರೆತ ಬೀಜದಿಂದ ಅದೇ ವೃಕ್ಷವು ಹುಟ್ಟುವುದಿಲ್ಲವಷ್ಟೆ (೮೭). ಜೀವನ ಅನುಭವಗೋಚರ ವಾದ ಅಜ್ಞಾನವನ್ನು ಬ್ರಹ್ಮನಲ್ಲಿರುವುದೆಂಬ ನಿನ್ನ ಕಲ್ಪನೆಯಿಂದ, ನಿನ್ನ ಅಜ್ಞಾನವು ಸಿದ್ಧವಾಗುತ್ತದೆಯಲ್ಲದೇ ಬ್ರಹ್ಮನ ಅಜ್ಞಾನವಲ್ಲ ; ಹೇ ಅಪಂಡಿತ! ನಿನಗೆ ಪೂರ್ವೋತ್ತರ ಪ್ರಮೇಯಗಳ ಜ್ಞಾನವೇ ಇಲ್ಲ (೮೮). ಜೀವಾನು ಭವಸಿದ್ಧವಾದ ಅಜ್ಞಾನವು ಬ್ರಹ್ಮನಲ್ಲಿಯೂ ಇರುವುದಾದರೆ, ಸಮಸ್ತಜೀವರು ಬ್ರಹ್ಮನೇ ಅಜ್ಞಾನವಶದಿಂದ, ಜೀವಭಾವವನ್ನು ಹೊಂದಿಯೇ ಕಲ್ಪಿತರಾದ್ದ ರಿಂದ ಈ ವಿಧ ಐಕ್ಯಜ್ಞಾನದಿಂದ, ಒಬ್ಬನ ದುಃಖವು ಮತ್ತೊಬ್ಬನಿಗೂ

ಒಬ್ಬ ಜೀವನ ಅನುಭವವೇ ಬ್ರಹ್ಮಾನುಭವವೆಂದು ಅಂಗೀಕರಿಸಿದರೆ, ಸರ್ವವ್ಯವಹಾರ ವಿಚ್ಛೇದವೇ ಪ್ರಾಪ್ತವಾಗುತ್ತದೆನ್ನುತ್ತಾರೆ[1] :—

ನ ಚೇತ್—ವ್ಯಾವಹಾರಿಕ ಭೇದವೆಂಬುದರಿಂದ ವ್ಯವಸ್ಥೆಯನ್ನು ಹೇಳದಿದ್ದರೆ, ಏಕಾಜ್ಞಾನೇ—ಒಬ್ಬನು (ಜೀವನು) ಅಜ್ಞಾನಿಯಾದರೆ (ಒಬ್ಬನಲ್ಲಿ ಅಜ್ಞಾನದ ಅನುಭವವಿರುತ್ತಿರಲು), ಸರ್ವಃ ಅಪಿ—ಸರ್ವರೂ, ಅಜ್ಞಃ—ಅಜ್ಞಾನಿಗಳೇ, ಐಕ್ಯಬಲತಃ—ಐಕ್ಯಬಲದಿಂದ (ಎಲ್ಲವೂ ಒಂದೇ ಎಂಬ ಪ್ರಮೇಯದ ಆಧಾರದಿಂದ), ಸ್ಯಾತ್—ಆಗಬೇಕು ; ಏಕದುಃಖೇ—ಒಬ್ಬನು ದುಃಖಿಯಾಗುತ್ತಿರಲು, ಐಕ್ಯಸ್ಯ—ಐಕ್ಯದ, ಸಂಶ್ರಯಾತ್—ಬಲದಿಂದ, ಅನ್ಯಃ ಅಪಿ—ಮತ್ತೊಬ್ಬನು, ದುಃಖೀ ಸ್ಯಾತ್—ದುಃಖವುಳ್ಳವನು ಆಗಬೇಕು ; ಏಕಾನುಭೂತಿಃ—ಒಬ್ಬನು (ಚಂಡಾಲನು) ಅನುಭವ ಮಾಡಿದರೆ (ಸ್ವಪತ್ನಿಯನ್ನು ಭೋಗಿಸಿದರೆ) (ಅಥವಾ ತಾನು ಚಂಡಾಲನೆಂಬ ಸ್ವರೂಪಾನುಭವವುಳ್ಳವನಾದರೆ), ಸರ್ವಸ್ಯ—(ಅದು) ಎಲ್ಲರಿಗೂ (ಬ್ರಾಹ್ಮಣಾದಿ ಸರ್ವರಿಗೂ), ಇತಿ—ಎಂಬ ಈ ರೀತಿಯಿಂದ, ಜಾತಿಸಂಕರಃ — ವರ್ಣಸಾಂಕರ್ಯವು, ಆಗತಃ — ಪ್ರಾಪ್ತವಾಯಿತು (ಬ್ರಾಹ್ಮಣ ಸ್ತ್ರೀಯೂ ಚಂಡಾಲಸಂಗ ಮಾಡಿದಂತಾದೀತು) (ಜೀವನ ಅಜ್ಞಾನಪ್ರತ್ಯಕ್ಷವು ಬ್ರಹ್ಮನಿಗೂ ಇರುವುದಾದರೆ, ಸರ್ವಜೀವರಿಗೂ ಐಕ್ಯಬಲದಿಂದ ಉಂಟಾಗಬೇಕೆಂಬ ತತ್ವದ ಅಂಗೀಕಾರವು ಮಹಾ ಅನರ್ಥಕಾರಕವೆನ್ನುತ್ತಾರೆ).

---

(ಸರ್ವರಿಗೂ), ಅದೇ ಐಕ್ಯಬಲದಿಂದ ಒಬ್ಬನ ಅಜ್ಞಾನವು ಸಮಸ್ತರಿಗೂ ಇರಬೇಕಾಗುತ್ತದೆ; ಹೀಗೆಯೇ ಒಬ್ಬನ ಎಲ್ಲ ವಿಧದ ಅನುಭವಗಳೂ ಸರ್ವರಿಗೆ ಇರಬೇಕಾಗುತ್ತದೆ; ಬ್ರಾಹ್ಮಣನು ವೇದಾಧ್ಯಯನ ಮಾಡಿದರೆ, ಚಂಡಾಲನೂ ಮಾಡಿದಂತಾಗುತ್ತದೆ; ಚಂಡಾಲನ ಸ್ತ್ರೀಭೋಗದಿಂದ ಬ್ರಾಹ್ಮಣಸ್ತ್ರೀಯೂ ಚಂಡಾಲನ ಸಂಗ ಮಾಡಿದ ಅನುಭವವನ್ನು ಪಡೆಯಬೇಕಾಗುತ್ತದೆ; ಜಾತಿ ಸಾಂಕರ್ಯವು ವಿಶೇಷವಾಗಿ ಬಂದೊದಗಬೇಕಾಗುತ್ತದೆ (೮೯). ಈ ಪರಿಸ್ಥಿತಿ

---

1 ಅಹಮಜ್ಞಃ ಎಂಬ ಜೀವನ ಅಜ್ಞಾನಾನುಭವವು ಬ್ರಹ್ಮನಲ್ಲಿ ಸಹ ಅಜ್ಞಾನವುಂಟೆಂದು ಸಾಧಿಸುತ್ತದೆಂದೂ, ಅಜ್ಞಾನವಶನಾಗಿ ಬ್ರಹ್ಮನೇ ಜೀವಭಾವವನ್ನು ಹೊಂದಿರುವನೆಂದೂ, ಆದ್ದರಿಂದ ಜೀವಬ್ರಹ್ಮೈಕ್ಯವು ಸಿದ್ಧವಾಗುತ್ತದೆಂದೂ ಹೇಳಿದರೆ ಪ್ರಾಪ್ತವಾಗುವ ವ್ಯವಹಾರಲೋಪದೋಷಗಳನ್ನು ವಿವರಿಸುತ್ತಾರೆ.

**ವ್ಯಾವಹಾರಿಕಭೇದೇನ ಸಮಾಧಾನೇತ್ವಿದಂ ಗತಂ ।**
**ಏಕಂ ಸಂಧಿತ್ಸತಃ ಪುಚ್ಛಮಪರಂ ಚ್ಯವತೇ ತವ ॥ ೯೦ ॥**

ಜೀವನ ಅಜ್ಞಾನಪ್ರತ್ಯಕ್ಷದಿಂದ (ಅನುಭವದಿಂದ) ಬ್ರಹ್ಮನಲ್ಲಿ ಅಜ್ಞಾನವನ್ನು ಕಲ್ಪಿಸುವುದು ಗಾದೆಯ ಮಾತಿನಂತಾಗುತ್ತದೆನ್ನುತ್ತಾರೆ :—

(ಗಿಡ್ಡಾದ—ತುಂಡು ಕೌಪೀನವನ್ನು ಧರಿಸಲು ಹೊರಟು, ಒಂದು ತುದಿಯನ್ನು ಸಿಕ್ಕಿಸಿಕೊಳ್ಳುವಷ್ಟರಲ್ಲಿ ಮತ್ತೊಂದು ತುದಿಯು ತಪ್ಪಿಸಿಕೊಳ್ಳುವಂತೆ ವ್ಯಾವಹಾರಿಕ ಭೇದವನ್ನು ಜೀವರಲ್ಲಿ ಪರಸ್ಪರವಾಗಿ ಹೇಳಿ, ಉಕ್ತಸಾಂಕರ್ಯವನ್ನು ಪರಿಹರಿಸಿಕೊಳ್ಳುವ ಯತ್ನದಲ್ಲಿ ಜೀವಾಜ್ಞಾನದಿಂದ ಬ್ರಹ್ಮನ ಅಜ್ಞಾನವನ್ನು ಸಾಧಿಸಲು ಹೊರಟ ಯತ್ನವು ಬಿದ್ದುಹೋಗುತ್ತದೆ).

ವ್ಯಾವಹಾರಿಕಭೇದೇನ—ಜೀವರಲ್ಲಿ ಪರಸ್ಪರವಾಗಿ ವ್ಯಾವಹಾರಿಕ ಭೇದವನ್ನು ಹೇಳುವುದರಿಂದ (ಭಿನ್ನ ಸುಖ ದುಃಖ ಮೊದಲಾದ ಅನುಭವಗಳ ವ್ಯವಸ್ಥೆಗಾಗಿ, ವ್ಯಾವಹಾರಿಕ—ತೋರಿಕೆಯ ಭೇದವನ್ನು ಹೇಳಿ), ಸಮಾಧಾನೇ—ಸಮಾಧಾನಪಡುತ್ತಿರಲು, ಇದಂ ತು ಗತಂ—ಅಹಮಜ್ಞಃ ಎಂಬ ಅನುಭವದಿಂದ, ಬ್ರಹ್ಮನಿಗೆ ಅಜ್ಞಾನವನ್ನು ಸಾಧಿಸುವ ಯತ್ನವು ಬಿದ್ದುಹೋಯಿತು ; (ಇದು ಹೇಗಾಯಿತೆಂದರೆ) ಏಕಂ ಪುಚ್ಛಂ—ಒಂದು ತುದಿಯನ್ನು, ಸಂಧಿತ್ಸತಃ—ಸಿಗಿಸಿಕೊಳ್ಳುವುದರಲ್ಲಿರುವ, ತವ—ನಿನಗೆ, ಅಪರಂ—ಮತ್ತೊಂದು ತುದಿಯು, ಚ್ಯವತೇ—ತಪ್ಪಿಹೋಗುತ್ತದೆ.

**ಅತೋಽನುಭವಮಾಶ್ರಿತ್ಯ ಜೀವಾಜ್ಞಾನೇ ಮತಂ ಗತಂ ।**
**ಐಕ್ಯೇನ ತಮತಿಕ್ರಮ್ಯ ಬ್ರಹ್ಮಾಜ್ಞಾನೇ ಮತಂ ಗತಂ ॥ ೯೧ ॥**

---

ಯನ್ನು ನಿವಾರಿಸಲು ವ್ಯಾವಹಾರಿಕ ಭೇದವನ್ನು (ಜೀವರಲ್ಲಿ ಪರಸ್ಪರವಾಗಿ) ಹೇಳಬೇಕಾಗುತ್ತದೆ ; ಭಿನ್ನ ವ್ಯವಹಾರಗಳ ವ್ಯವಸ್ಥೆಯನ್ನು ಸಾಧಿಸಲು ಜೀವರಲ್ಲಿ ವ್ಯಾವಹಾರಿಕ ಭೇದವನ್ನು ಹೇಳಿದರೆ, ಉದ್ದವಿಲ್ಲದ ಕೌಪೀನದ ಒಂದು ತುದಿಯನ್ನು ಸಿಕ್ಕಿಸಿಕೊಳ್ಳುವುದರಲ್ಲಿ ಇನ್ನೊಂದು ತುದಿಯು ತಪ್ಪಿಹೋದಂತಾಗುತ್ತದೆ (೯೦). ಜೀವನ ಅಜ್ಞಾನಾನುಭವದಿಂದ ಬ್ರಹ್ಮನಲ್ಲಿ ಅಜ್ಞಾನವಿರುವುದೆಂಬ ನಿನ್ನ ಮತವೂ ಸಿದ್ಧವಾಗಲಿಲ್ಲ ; ಮತ್ತು ಐಕ್ಯವನ್ನು ಅಂಗೀಕರಿಸುವುದರಿಂದ ಪ್ರಾಪ್ತವಾಗುವ ವ್ಯವಹಾರಗಳ ಅವ್ಯವಸ್ಥೆಯನ್ನು ಪರಿಹರಿಸಲು,

ದೃಷ್ಟಾಂತವನ್ನು ಮುಖ್ಯ ಪ್ರಮೇಯದಲ್ಲಿ ಯೋಜಿಸಿ ತೋರಿಸುತ್ತಾರೆ:

ಅತಃ—ಆದ್ದರಿಂದ, ಅನುಭವಂ—(ನಾನು ಅಜ್ಞನೆಂಬ) ಅನುಭವವನ್ನು, ಆಶ್ರಿತ್ಯ—ಅವಲಂಬಿಸಿ, ಜೀವಾಜ್ಞಾನೇ—ಜೀವನ ಅಜ್ಞಾನದಲ್ಲಿ (ಅಪಾಂಡಿತ್ಯದಿಂದ), ಮತಂ—ಬ್ರಹ್ಮನಲ್ಲಿ ಅಜ್ಞಾನವಿರುತ್ತದೆಂಬ ಮತವು (ಅಭಿಪ್ರಾಯವು), ಗತಂ—ಬಿದ್ದುಹೋಯಿತು (ಸಿದ್ಧವಾಗಲಿಲ್ಲ); ಐಕ್ಯೇನ—(ಜೀವಬ್ರಹ್ಮರು) ಅಭಿನ್ನರೆಂದು ತಿಳಿದು, ತಂ—ಜೀವನು ಅಜ್ಞಾನಿಯೆಂಬ ಪಕ್ಷವನ್ನು, ಅತಿಕ್ರಮ್ಯ—ಮೀರಿ, ಬ್ರಹ್ಮಾಜ್ಞಾನೇ—ಬ್ರಹ್ಮನೂ ಅಜ್ಞಾನಿಯೆಂಬಲ್ಲಿ, ಮತಂ—(ವ್ಯಾವಹಾರಿಕ ಭೇದವನ್ನು ಅಂಗೀಕರಿಸಿ, ವ್ಯವಹಾರಾನುಭವಗಳ ವ್ಯವಸ್ಥೆಯನ್ನು ಸಂಪಾದಿಸಬಹುದೆಂಬ) ಅಭಿಪ್ರಾಯವೂ, ಗತಂ—ಬಿದ್ದುಹೋಯಿತು.

**ಜೀವೋಽಜ್ಞೋ ನ ಜಗತ್ಕರ್ತಾ ಯಃ ಕರ್ತಾ ತಸ್ಯ ನಾಜ್ಞತಾ ।**
**ಅತೋಽಜ್ಞಾನಭ್ರಮಾಯೋಗಾದ್ಭ್ರಾಂತಿಃ ಶಾಸ್ತ್ರಕೃತಸ್ತವ ।**
**ಕಥಂಚಿದ್ಭ್ರಮಯೋಗೋಽಪಿ ಭ್ರಾಂತಿಃ ಶಾಸ್ತ್ರಕೃತಸ್ತವ ॥ ೯೨ ॥**

ಮತವು ಬಿದ್ದುಹೋಯಿತೆಂಬ ಪ್ರಕಾರವನ್ನು ಲೇಶತಃ ಪ್ರದರ್ಶಿಸುತ್ತಾರೆ:—

ಜೀವಃ—ಜೀವನು, ಅಜ್ಞಃ—ಅಲ್ಪಜ್ಞನು (ಅಜ್ಞಾನವುಳ್ಳವನು); ಜಗತ್ಕರ್ತಾ—ಜಗತ್ಸೃಷ್ಟ್ಯಾದಿ ಕರ್ತನು, ನ—ಅಲ್ಲ; ಯಃ—ಯಾರು, ಕರ್ತಾ

---

ಜೀವರಲ್ಲಿ ಪರಸ್ಪರ ವ್ಯಾವಹಾರಿಕ ಭೇದವನ್ನು ಹೇಳಿ, ಅದರಿಂದ ಸಹ ಪರಿಹಾರವು ದೊರೆಯದೇ ನಿನ್ನ ಉಭಯ ಮತಗಳೂ ಒಂದನ್ನು ಸಾಧಿಸುವುದರಲ್ಲಿ ಮತ್ತೊಂದು ಬಿದ್ದುಹೋದವು; ಜೀವಬ್ರಹ್ಮರ ಐಕ್ಯವನ್ನು ಸಾಧಿಸಲು ಹೋಗಿ, ಬ್ರಹ್ಮನಲ್ಲಿ ಅಜ್ಞಾನವನ್ನು ಒಪ್ಪಿ ಅಹಮಜ್ಞಃ ಎಂಬ ಜೀವಾನುಭವದಿಂದ ಅದನ್ನು ಸಾಧಿಸುವುದರೊಳಗೆ, ವ್ಯಾವಹಾರಿಕಭೇದವೆಂದು ಕರೆದು ಜೀವಬ್ರಹ್ಮರ ಭೇದವನ್ನೇ ಅಂಗೀಕರಿಸುವ ಪ್ರಸಂಗ ಬಂದಿತು; ಇದು ಶೋಚನೀಯವು! (೯೧). ಅಜ್ಞನಾದ ಜೀವನು ಜಗತ್ಕರ್ತನಲ್ಲ; ಯಾರು ಜಗತ್ಕರ್ತನೋ ಆತನಿಗೆ ಅಜ್ಞಾನವಿಲ್ಲ; ಬ್ರಹ್ಮನಿಗೆ ಅಜ್ಞಾನವಶದಿಂದ ಜೀವತ್ವ ಭ್ರಮೆಯುಂಟಾಗಿರುವುದೆಂಬುದು, ನಿನ್ನ ಶಾಸ್ತ್ರಕಾರನ ಕಲ್ಪನೆಯು; ಸರ್ವಜ್ಞನಾದ ಬ್ರಹ್ಮನಲ್ಲಿ ಅಜ್ಞಾನದ ಆರೋಪದಿಂದ ಭ್ರಮೆಯುಂಟೆಂದು,

–ಕರ್ತನೋ, ತಸ್ಯ–ಆತನಿಗೆ, ಅಜ್ಞತಾ–ಅಜ್ಞಾನವು, ನ–ಇಲ್ಲ (ಅಜ್ಞತ್ವ ವಿರಲು ಸಾಧ್ಯವಿಲ್ಲ) (ಜಗತ್ತು ಅಜ್ಞಾನಕಲ್ಪಿತವೆಂಬ ವಾದವು ವ್ಯರ್ಥವು); ಅತಃ– ಆದ್ದರಿಂದ (ಉಕ್ತನ್ಯಾಯದಂತೆ), ಅಜ್ಞಾನಭ್ರಮಾಯೋಗಾತ್– ಅಜ್ಞಾನವನ್ನು ಆರೋಪಿಸುವುದು ಕೂಡುವುದಿಲ್ಲವಾದ್ದರಿಂದ, ತವ– ನಿನ್ನ, ಶಾಸ್ತ್ರಕೃತಃ–(ಬ್ರಹ್ಮನಲ್ಲಿ ಅಜ್ಞಾನವುಂಟೆಂದು ಆರೋಪಿಸಿದ) ಶಾಸ್ತ್ರಕರ್ತನಿಗೆ, ಭ್ರಾಂತಿಃ– (ಅಸಂಭವವಾದುದನ್ನು ಆರೋಪಿಸುವುದೆಂಬ) ಭ್ರಮೆಯು (ಎಂದು ಹೇಳದೇ ಅನ್ಯಗತಿಯಿಲ್ಲ); ಕಥಂಚಿತ್– (ಅವಿಚಾರದೆಶೆಯಲ್ಲಿ ರಮಣೀಯವಾಗಿ ತೋರಿದರೂ) ಹೇಗಾದರೂ, ಭ್ರಮಯೋಗೇ ಅಪಿ– ಭ್ರಾಂತಿಯು ಕೂಡಿದರೂ, ಶಾಸ್ತ್ರಕೃತಃ–ಬ್ರಹ್ಮನಲ್ಲಿ ಅಜ್ಞಾನವಿರುವುದೆಂಬ ಶಾಸ್ತ್ರಕರ್ತನಾದ, ತವ–ನಿನಗೇ, ಭ್ರಾಂತಿಃ–ಭ್ರಾಂತಿಯು.

**ಜೀವಾನುಭೂತಮಜ್ಞಾನಂ ಸರ್ವಜ್ಞೇ ಕೇನ ನೀಯತೇ ।**
**ಹಾ ವತ್ಸಗಲರಜ್ಜ್ವೈವ ದಿಗ್ಗಜಂ ಬದ್ಧುಮಿಚ್ಛಸಿ ॥ ೯೩ ॥**

ಸರ್ವರಿಗೆ ಉಕ್ತಪ್ರಮೇಯವನ್ನು ಬುದ್ಧ್ಯಾರೂಢ ಮಾಡಿಕೊಡುತ್ತಾರೆ:

ಜೀವಾನುಭೂತಂ–ಜೀವನಿಗೆ ಪ್ರತ್ಯಕ್ಷಸಿದ್ಧವಾದ, ಅಜ್ಞಾನಂ–ಅಜ್ಞಾನ ವನ್ನು, ಸರ್ವಜ್ಞೇ–(ಅಜ್ಞಾನಸಂಭವಕ್ಕೆಡೆಯಿಲ್ಲದ) ಸರ್ವಜ್ಞನಾದ ಭಗವಂತ ನಲ್ಲಿ (ಬ್ರಹ್ಮನಲ್ಲಿ), ಕೇನ–ಯಾವ ಪ್ರಮಾಣದಿಂದ, ನೀಯತೇ–ಸಾಧಿಸ ಲಾಗುತ್ತದೆ? (ಪ್ರತ್ಯಕ್ಷವು ಜೀವನಲ್ಲಿ ಮಾತ್ರ ಅಜ್ಞಾನವನ್ನು ಸಾಧಿಸುತ್ತದೆ;

---

ಅವಿಚಾರದೆಶೆಯಲ್ಲಿರುವಾಗ ತಿಳಿದರೂ, ನಿಜಕ್ಕೂ, ಆ ಭ್ರಮೆಯು ಬ್ರಹ್ಮನಿಗಲ್ಲ—ಅದು ನಿನಗೆ ಬಂದಿದೆ, ಎಂಬುದೇ ನಿಶ್ಚಯವು (೯೨). ಜೀವನ ಅನುಭವಕ್ಕೆ ಗೋಚರಿಸುವ ಅಜ್ಞಾನವನ್ನು ಸರ್ವಜ್ಞೇಶ್ವರನಲ್ಲಿ ಯಾವ ಪ್ರಮಾಣದಿಂದ ಸಾಧಿಸುವಿ? ಪ್ರತ್ಯಕ್ಷವು (ಸಾಕ್ಷಿ ಪ್ರತ್ಯಕ್ಷವು— ಅನುಭವವು—ಪ್ರಧಾನ ಪ್ರತ್ಯಕ್ಷವು) ಜೀವನಲ್ಲಿ ಮಾತ್ರ ಅಜ್ಞಾನವನ್ನು ಸಾಧಿಸುತ್ತದೆ; ಸರ್ವಜ್ಞನಲ್ಲಿ ಅಜ್ಞಾನವಿರುತ್ತದೆಂಬುದು ಸ್ವವ್ಯಾಹತಿಯು (ವಿರುದ್ಧ ಭಾಷಣವು)—ಆದ್ದರಿಂದ ಅನುಮಾನದಿಂದ ಸಹ ಈ ಪ್ರಮೇಯ ವನ್ನು ಸಾಧಿಸಲು ಬರುವುದಿಲ್ಲ; ಕಷ್ಟವು! ಕರುವಿನ ಚಿಕ್ಕ ಹಗ್ಗದಿಂದ ದಿಗ್ಗಜವನ್ನು ಬಂಧಿಸಲು ಇಚ್ಛಿಸಿರುವಿ; ಅಲ್ಪನಾದ ಜೀವನ ಅಜ್ಞಾನವೆಂಬ

ಸರ್ವಜ್ಞನಲ್ಲಿ ಅಜ್ಞಾನವಿರುತ್ತೆಂಬುದು ಸ್ವವ್ಯಾಹತಿಯು–ಸ್ವವಿರುದ್ಧವಚನವು– ಅಂತೂ ಅತ್ಯಂತ ಅಸಂಭಾವಿತವು, ಈ ಪ್ರಮೇಯವು); ಹಾ–ಕಷ್ಟವು!, ವತ್ಸಗಲರಜ್ಜ್ವಾ–ಕರುವಿನ ಕೊರಳಿಗೆ ಕಟ್ಟುವ ಸೂಕ್ಷ್ಮ ಹಗ್ಗದಿಂದ, ದಿಗ್ಗಜಂ ಏವ–ದಿಗ್ಗಜವನ್ನೇ, ಬದ್ಧುಂ–ಕಟ್ಟಲು (ಅಲ್ಪನಾದ ಜೀವನಿಗೆ ಬಂಧಕವಾದ ಅಜ್ಞಾನದಿಂದ ನಿತ್ಯಮುಕ್ತನಾದ ಬ್ರಹ್ಮನನ್ನು [ಸರ್ವೇಶ್ವರನನ್ನು] ಬಂಧಿಸು ವುದನ್ನು), ಇಚ್ಛಸಿ–ಇಚ್ಛಿಸುತ್ತಿರುವಿ.

**ಜೀವಸರ್ವಸ್ವಮಜ್ಞಾನಂ ತ್ವಂ ರಾಜ್ಞೇ ದಾತುಮಿಚ್ಛಸಿ ।**
**ನ ತದ್ದರಿದ್ರವಿತ್ತಂ ಸ ಮಹಾರಾಜೋ ದಿದೃಕ್ಷತಿ ॥ ೯೪ ॥**

ಬೇರೆ ಪ್ರಕಾರದಿಂದಲೂ ಬ್ರಹ್ಮನಲ್ಲಿ ಅಜ್ಞಾನವನ್ನಾರೋಪಿಸುವುದರ ಅಸಂಭಾವನೆಯನ್ನು ತೋರಿಸುತ್ತಾರೆ :—

ತ್ವಂ – ನೀನು, ಜೀವಸರ್ವಸ್ವಂ – ಜೀವನಿಗೆ ಸೇರಿದ, ಅಜ್ಞಾನಂ– ಅಜ್ಞಾನವನ್ನು (ಜೀವನ ಆಸ್ತಿಯನ್ನು), ರಾಜ್ಞೇ–ರಾಜನಿಗೆ, ದಾತುಂ– ಅರ್ಪಿಸಲಿಕ್ಕೆ, ಇಚ್ಛಸಿ–ಆಶಿಸುತ್ತಿರುವಿ; ತದ್ದರಿದ್ರವಿತ್ತಂ–ದರಿದ್ರನ (ಜೀವನ) ಧನವನ್ನು, ಸಃ ಮಹಾರಾಜಃ–ಆ ಮಹಾರಾಜನು, ನ ದಿದೃಕ್ಷತಿ–ನೋಡಲು ಸಹ ಇಚ್ಛಿಸುವುದಿಲ್ಲ.

**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಇತಿ ಶ್ರುತಿಸತೀ ಸಾಧ್ವೀ ತ್ವಾಮಧ್ವನಿ ರುಣದ್ಧಿ ಚ ॥ ೯೫ ॥**

---

ಕೊರಳಿಗೆ ಬಿಗಿಯುವ ಚಿಕ್ಕ ಹಗ್ಗವು ದೊಡ್ಡ ದಿಗ್ಗಜವನ್ನು ಕಟ್ಟಬಲ್ಲದೇ! ಈ ಅಜ್ಞಾನವು ಸರ್ವಜ್ಞನಲ್ಲಿ ಹೊಂದುವುದೇ? (ಸರ್ವಥಾ ಅಶಕ್ಯವನ್ನಿಚ್ಛಿ ಸಿರುವ ನಿನ್ನ ಯತ್ನವು ವ್ಯರ್ಥವು) (೯೩). ಜ್ಞಾನದರಿದ್ರನಾದ ಜೀವನ ಅಜ್ಞಾನವೆಂಬ ಆಸ್ತಿಯನ್ನು ಬ್ರಹ್ಮನೆಂಬ ರಾಜನಲ್ಲಿ (ಅಖಂಡ ಶ್ರೀಮಂತ ಪ್ರಭುವಿನಲ್ಲಿ) ಅರ್ಪಿಸಲು ಇಚ್ಛಿಸುವಿ; ಆ ಮಹಾರಾಜನು ಈ ದರಿದ್ರನ ಧನ ವನ್ನು ಕಣ್ಣಿಂದಲಾದರೂ ನೋಡಬಹುದೇ? (ನೋಡಲಿಚ್ಛಿಸುವುದೇ ಇಲ್ಲ) (೯೪). ಮತ್ತೇನೆಂದರೆ 'ಅನಾದಿಮಾಯಯಾ ಸುಪ್ತಃ'–ಅನಾದಿಯಾದ ಅಜ್ಞಾನವಶನಾಗಿ ನಿದ್ರಿಸುತ್ತಿರುವನೆಂದು ಜೀವನನ್ನು ಶ್ರುತಿಯು ನಿರೂಪಿಸು ತ್ತಿದೆ; ಈ ಶ್ರುತಿಯೆಂಬ ಪತಿವ್ರತಾ ಸ್ತ್ರೀಯು, ದರಿದ್ರನ ಮನೆಯಿಂದ ಧನ

ಅನಾದಿಮಾಯಯಾ ಸುಪ್ತಃ—ಅನಾದಿಯಾದ ಅಜ್ಞಾನದಿಂದ ನಿದ್ರಿಸುತ್ತಿರುವ, ಜೀವಃ—ಜೀವನು, ಯದಾ—ಯಾವಾಗ, ಪ್ರಬುಧ್ಯತೇ—ಎಚ್ಚರಗೊಳ್ಳುವನೋ (ಅಜ್ಞಾನವನ್ನು ತೊರೆದು ಜ್ಞಾನಿಯಾಗುವನೋ), ಇತಿ ಶ್ರುತಿಃ— ('ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ') ಎಂಬ ಶ್ರುತಿಯು, ಸತೀ ಸಾಧ್ವೀ—ಪತಿಪರಾಯಣಳಾದ ನಾರಿಯಂತೆ ಇರುತ್ತ, ತ್ವಾಂ—ನಿನ್ನನ್ನು (ಜೀವಾಜ್ಞಾನವನ್ನು ಬ್ರಹ್ಮನಲ್ಲಿ ಕೊಂಡುಹೋಗುವ ಇಚ್ಛೆಯುಳ್ಳ ನಿನ್ನನ್ನು), ಅಧ್ವನಿ—ಮಾರ್ಗದಲ್ಲಿ (ಬ್ರಹ್ಮನನ್ನು ಸೇರುವ ಮೊದಲಿಗೇ), ರುಣದ್ಧಿ ಚ—ತಪ್ಪದೇ ತಡೆದು ನಿಲ್ಲಿಸುತ್ತಾಳೆ[1] (ದರಿದ್ರನ ಮನೆಯಿಂದ ದ್ರವ್ಯವನ್ನು ಅಪಹರಿಸಿಕೊಂಡು ಹೋಗುವ ಕಳ್ಳನನ್ನು ಗೃಹಪತ್ನಿಯು ನಿರೋಧಿಸುವಂತೆ).

**ಸಂಪೂರ್ಣಸ್ವಸುಖಜ್ಞಾನೇ ಸಂಸಾರೋ ಮುಕ್ತಿರೇವ ತೇ ।**
**ತದಜ್ಞಾನೇ ತು ನಾಜ್ಞಾನಬೋಧೋಽವಚ್ಛೇದಕೋ ಹ್ಯಸೌ ॥ ೯೬ ॥**

ಸಂಪೂರ್ಣಸ್ವಸುಖಜ್ಞಾನೇ—ಪೂರ್ಣವಾದ ಸ್ವರೂಪಸುಖದ ಜ್ಞಾನವಿದ್ದರೆ (ಅನುಭವವಿದ್ದರೆ—ತಿಳುವಳಿಕೆ ಇದ್ದರೆ), ಸಂಸಾರಃ—ಸಂಸಾರವು, ತೇ—ನಿನಗೆ, ಮುಕ್ತಿಃ ಏವ—ಮೋಕ್ಷವೆಂದೇ ಪ್ರಾಪ್ತವಾಗುತ್ತದೆ; ತದಜ್ಞಾನೇ—

---

ವನ್ನು ಕದ್ದೊಯ್ಯುವ ಚೋರನನ್ನು ಗೃಹಿಣಿಯು ಸ್ವಪತಿಯ ಹಿತದೃಷ್ಟಿಯಿಂದ ತಡೆಯುವಂತೆ, ಸ್ವಸ್ವಾಮಿಯಾದ ಶ್ರೀಹರಿಯ (ಬ್ರಹ್ಮನ) ಪರಿಶುದ್ಧತೆಯ ರಕ್ಷಣಾರ್ಥವಾಗಿ ತಡೆದು ನಿಲ್ಲುತ್ತಾಳೆ; ನೀನು ಬ್ರಹ್ಮನಲ್ಲಿ ಈ ಕದ್ದ ಅಜ್ಞಾನವನ್ನು ಸೇರಿಸಲು ಅಸಮರ್ಥನಾಗಿರುವಿ (೯೫). ಸ್ವರೂಪಸುಖದ ಜ್ಞಾನವಿದ್ದಲ್ಲಿ ಸ್ವರೂಪಸುಖಾನುಭವ ಪ್ರಾಪ್ತಿಯೇ ಮೋಕ್ಷವಾದ್ದರಿಂದ, ಸಂಸಾರದೆಶೆಯಲ್ಲಿ ಈ ಜ್ಞಾನವಿದ್ದರೆ ಸಂಸಾರವೇ ಮೋಕ್ಷವೆಂದಾಗುತ್ತದೆ; ಹಾಗಲ್ಲದೇ ಸ್ವರೂಪಸುಖದ ಜ್ಞಾನವಿಲ್ಲೆಂದರೆ ಅಜ್ಞಾನದ ಜ್ಞಾನವಿಲ್ಲೆಂದಾಗುತ್ತದೆ; ವಸ್ತುಜ್ಞಾನವಿಲ್ಲದೇ (ಘಟಜ್ಞಾನವಿಲ್ಲದೇ) ವಸ್ತುವಿನ ಅಭಾವ

---

1 ಜೀವಾಶ್ರಿತವಾದ ಅಜ್ಞಾನವನ್ನು ಎಂದು ಹೇಳದೇ, ಸ್ಪಷ್ಟವಾಗಿ ಬ್ರಹ್ಮನಲ್ಲಿ ಸೇರಿಸಲು ಹೊರಟಿರುವ ಕಳ್ಳನನ್ನು ಎಂದು ಹೇಳಿ, ರಾಜಮಾರ್ಗದಲ್ಲಿ ಎಲ್ಲರಿಗೂ ಕಾಣುವಂತೆ ಹೊರಟಿರುವ ಪ್ರಸಿದ್ಧ ಚೋರನಿವನೆಂದು ಸೂಚಿಸಿರುವರು.

ಅದರ (ಪೂರ್ಣಸುಖದ) ತಿಳುವಳಿಕೆ ಇಲ್ಲದಿದ್ದರೆ, ಅಜ್ಞಾನಬೋಧಃ—ಅಜ್ಞಾನ ಬೋಧಃ – ಅಜ್ಞಾನದ (ತಿಳುವಳಿಕೆಯು) ಜ್ಞಾನವು, ನ – ಇಲ್ಲ; ಅಸೌ– ಸ್ವರೂಪಾನಂದವು, ಅವಚ್ಛೇದಕಃ—ಅಜ್ಞಾನದ ವಿಷಯವಾಗಿದೆ (ಸ್ವರೂಪಾ ನಂದವನ್ನು ತಿಳಿಯುವುದಿಲ್ಲವೆಂಬ ಅಜ್ಞಾನವು, ವಿಷಯವಾದ ಸ್ವರೂಪಾನಂದ ವನ್ನು ಬೇರೆಯಾಗಿ ತಿಳಿಯದೇ ಹೇಗೆ ಉಂಟಾಗುತ್ತದೆ?) ಹಿ–ಸ್ವರೂಪಭೂತ ವಾದ ಆನಂದಾನುಭವವನ್ನು ಈಗ ಹೇಳಲು ಶಕ್ಯವಿಲ್ಲವಷ್ಟೆ.[1]

**ಅಹಮಂಶೇ ನ ತೇಽಜ್ಞಾನಂ ಕಿಂತ್ವಾನಂದಾದಿಕೇ ಪರಂ ।**
**ಯದ್ಭಾತಂ ನ ತದಜ್ಞಾತಮಿತಿ ವಾಕ್ಯಮನುಸ್ಮರ ॥ ೯೭ ॥**
**ಅತೋಽವಚ್ಛೇದಕಜ್ಞಾನಾಭಾವಾನ್ನಾಜ್ಞಾನಧೀಸ್ತವ ।**
**ಅವಚ್ಛೇದಕತಜ್ಞಾನೇ ಭವ ಏವಾಪುನರ್ಭವಃ ॥ ೯೮ ॥**

ಹಿಂದಿನ ಶ್ಲೋಕಾರ್ಥದ ಉಪಪಾದನೆಯಿದು :—

ಅಹಮಂಶೇ – ನಾನು ಎಂಬ ಆತ್ಮವಿಷಯದಲ್ಲಿ, ತೇ – ನಿನಗೆ (ಅದ್ವೈತಿಗೆ), ಅಜ್ಞಾನಂ—ಅಜ್ಞಾನವು, ನ—ಇಲ್ಲ; ಪರಂ ಕಿಂ ತು—ಮತ್ತೇ ನೆಂದರೆ, ಆನಂದಾದಿಕೇ—ಆತ್ಮನ ಆನಂದಾದಿ ಗುಣವಿಶೇಷಜ್ಞಾನದಲ್ಲಿ ಮಾತ್ರ

---

(ಘಟಾಭಾವ) ಜ್ಞಾನವಾಗುವುದಿಲ್ಲವಷ್ಟೆ; ಅಜ್ಞಾನವು (ಜ್ಞಾನಾಭಾವವು), ತನ್ನ ವಿಷಯವಾದ ವಸ್ತುಜ್ಞಾನವನ್ನು ಅಪೇಕ್ಷಿಸುತ್ತದೆ (೯೬). 'ನಾನು' (ಅಹಂ) ಎಂಬ ಆತ್ಮನ ವಿಷಯದಲ್ಲಿ ನಿನಗೆ (ಯಾರಿಗೂ) ಅಜ್ಞಾನವಿರು ವುದಿಲ್ಲ; ಕಿಂತು ಆತ್ಮನ ಆನಂದಾದಿ ಗುಣಗಳ ಜ್ಞಾನವಿಲ್ಲೆಂದು ಅಜ್ಞಾನದ

---

1 'ಅಹಮಜ್ಞಃ' ಎಂಬಲ್ಲಿ ತೋರುವ ಅಜ್ಞಾನವು ಅಭಾವರೂಪದ ಅಜ್ಞಾನವೇ ಆಗಿರುತ್ತದೆ—ಅದ್ವೈತಿಯು ಹೇಳುವಂತೆ ಭಾವರೂಪಾಜ್ಞಾನವಲ್ಲ; ನನ್ನನ್ನಾಗಲಿ ಇತರ ಅನ್ಯವಸ್ತುವನ್ನಾಗಿ ತಿಳಿಯುವುದಿಲ್ಲವೆಂಬಲ್ಲಿ, ನನ್ನನ್ನು ತಿಳಿಯುವುದಿಲ್ಲವೆಂದರೆ 'ನಾನು' ಎಂಬ ಆತ್ಮನ ಇರುವಿಕೆಯಲ್ಲಿ ಸಂಶಯವಿಲ್ಲ; ಕಿಂತು ಆತನ ಸ್ವಭಾವ ಗುಣಾದಿಗಳ ವಿವರಗಳು ತಿಳಿಯದೆಂದೇ ಭಾವ; ಮತ್ತು ಇತರ ವಸ್ತುಗಳನ್ನು ತಿಳಿಯೆನು ಎಂಬಲ್ಲಿ ಅನ್ಯವಸ್ತುಗಳ ಸಾಮಾನ್ಯಜ್ಞಾನವೂ ಇಲ್ಲದೆ ಅವುಗಳ ತಿಳುವಳಿಕೆಯಿಲ್ಲವೆಂಬುದೂ ಕೂಡುವುದಿಲ್ಲ; ಆದ್ದರಿಂದ ನಾನು ಅಜ್ಞನೆಂಬಲ್ಲಿ ಅನುಭವದಲ್ಲಿ ತೋರುವುದು ಅಭಾವ ರೂಪದ ಅಜ್ಞಾನವೇ ಆಗಿರುತ್ತದೆ—ಯಾವುದನ್ನೂ ಪೂರ್ಣವಾಗಿ ತಿಳಿಯೆನು ಎಂದು ಮಾತ್ರ ಭಾವವು; ಈ ವಿವೇಚನೆಯೇ ಮುಂದಿನ ಶ್ಲೋಕದ ವಿಷಯವೂ ಆಗಿದೆ.

(ಅಜ್ಞಾನವು ಇರುತ್ತದೆ); ಯದ್ಜ್ಞಾತಂ—ಯಾವುದು ತಿಳಿಯಲಾಗಿರುವುದೋ, ತದಜ್ಞಾನಂ—ಅದು ತಿಳಿಯದುದು, ನ—ಅಲ್ಲ (ಆತ್ಮನ ಅಸ್ತಿತ್ವದ ಜ್ಞಾನವಿರುತ್ತಿರಲು ಆತ್ಮನ ಅಜ್ಞಾನವಿದೆ ಎಂದು ಹೇಳಲು ಬರುವುದಿಲ್ಲ), ಇತಿ—ಎಂಬ, ವಾಕ್ಯಂ—(ತತ್ವದೀಪನದ) ವಚನವನ್ನು, ಅನುಸ್ಮರ—ನೆನಪಿಗೆ ತಂದುಕೋ (ಜ್ಞಾತಾಂಶದಲ್ಲಿ ಅಜ್ಞಾನವನ್ನು ನೀನೂ ಅಂಗೀಕರಿಸುವುದಿಲ್ಲ) ; ಅತಃ—ಆದ್ದರಿಂದ, ಅವಚ್ಛೇದಕ ಜ್ಞಾನಾಭಾವಾತ್ – ಅವಚ್ಛೇದಕವಾದ (ಆತ್ಮಾನಂದಾದಿಗಳ—ಸುಖಾದಿ) ಗುಣಗಳ ಜ್ಞಾನವಿಲ್ಲದ್ದರಿಂದ, ತವ—ನಿನಗೆ, ಅಜ್ಞಾನಧೀಃ ನ—(ಅವುಗಳ) ಅಜ್ಞಾನದ ತಿಳುವಳಿಕೆ ಇಲ್ಲ ; ಅವಚ್ಛೇದಕತಜ್ಜ್ಞಾನೇ—ಆತ್ಮಸುಖಾದಿಯ ಜ್ಞಾನವಿದ್ದರೆ, ಭವಃ ಏವ—ಸಂಸಾರವೇ, ಅಪುನರ್ಭವಃ—ಮುಕ್ತಿಯು (ಆಗಲಿ) (ಹೀಗೆ ಭಾವರೂಪ ಅಜ್ಞಾನದಲ್ಲಿ ಅವಚ್ಛೇದಕ ಸುಖಾದಿ ಜ್ಞಾನವಿಲ್ಲವಾದ್ದರಿಂದ ಮತ್ತು ಜ್ಞಾನಾಭಾವದಲ್ಲಿಯೂ ಉಭಯತ್ರ ದೋಷವನ್ನು ಹೇಳಲವಕಾಶವಿರುತ್ತದೆ).[1]

---

ಅರ್ಥ ; ಎಂದರೆ ಅಭಾವರೂಪದ ಅಜ್ಞಾನವಲ್ಲದೇ ಭಾವರೂಪ (ಪ್ರತಿಬಂಧಕ) ಆವರಣಾದಿ ಅಜ್ಞಾನವಲ್ಲ ; ತಿಳಿದುದನ್ನು ತಿಳಿಯದುದೆಂದು ಹೇಳುವುದು ಯುಕ್ತವಲ್ಲ ; 'ಯದ್ಜ್ಞಾತಂ ತದಜ್ಞಾತಂ ನ' ಎಂಬ 'ತತ್ವದೀಪನ' ಗ್ರಂಥಸ್ಥವಾಕ್ಯವನ್ನು ಸ್ಮರಿಸು ; ಜ್ಞಾತಾಂಶದಲ್ಲಿ ಅಜ್ಞಾನವನ್ನು ನೀನೂ (ಅದ್ವೈತಿಯೂ) ಅಂಗೀಕರಿಸುವುದಿಲ್ಲ ; ಅವಚ್ಛೇದಕ (ಆತ್ಮನಿಂದ ಭಿನ್ನನೆಂಬ ವ್ಯವಹಾರಕ್ಕೆ ಒಳಪಡುವ ಆನಂದಾದಿ ಆತ್ಮಗುಣಗಳ) ಜ್ಞಾನವಿಲ್ಲದ್ದ ಮಾತ್ರದಿಂದ ಅವುಗಳ ಅಜ್ಞಾನವಿದೆ ಎಂದಲ್ಲ—ತಿಳುವಳಿಕೆ ಇಲ್ಲವೆಂದಲ್ಲ ; ಅವಚ್ಛೇದಕದ ಜ್ಞಾನವಿದ್ದರೆ ಸಂಸಾರವೇ ಮೋಕ್ಷವೆನಿಸುತ್ತದೆ (ಆನಂದಾದಿ

---

[1] ಅಜ್ಞಾನವು ಎರಡು ಪ್ರಕಾರವಾಗಿರುತ್ತದೆ ; ಭಾವರೂಪವಾದುದು ಮತ್ತು ಅಭಾವರೂಪವಾದುದು ಎಂದು ; ಇರುವ ವಸ್ತುವನ್ನು, ಇರುವ ಮತ್ತೊಂದು ವಸ್ತುವು ಮರೆಮಾಡಿ ಮೊದಲಿನ ವಸ್ತುವನ್ನು ತಿಳಿಯದಂತೆ ಮಾಡುವುದು ಭಾವರೂಪ ಅಜ್ಞಾನದ ಸಾಮಾನ್ಯ ನಿರೂಪಣೆಯು ; ವಸ್ತುವಿನ ಇರುವಿಕೆಯ ಸಾಮಾನ್ಯ ಜ್ಞಾನವಿದ್ದು ಅದರಲ್ಲಿರುವುವೆಂಬ ಗುಣಧರ್ಮಗಳ ವಿವರಗಳು ತಿಳಿಯದಿರುವುದು ಅಭಾವರೂಪದ ಅಜ್ಞಾನವು. ಅಹಮಜ್ಞಃ ಎಂಬಲ್ಲಿ ಆತ್ಮನಿಗೆ ಅನುಭೂತವಾಗುವ ಅಜ್ಞಾನವು ಯಾವುದು (ಎಂಥದು) ಎಂಬಲ್ಲಿ, ನಾನು, ನನ್ನನ್ನು ಮತ್ತು ಅನ್ಯವನ್ನು ತಿಳಿದಿರು

**ಯಥಾ ಲೋಕಪುರಸ್ಕಾರಶ್ಚಕ್ಷುಷಃ ಸರ್ವವಸ್ತುನಃ ।**
**ಗ್ರಹಣೇಽಸ್ತ್ಯಸ್ತಿ ತಮಸೋ ಗ್ರಹಣೇ ತು ಸ ನೇಷ್ಯತೇ ॥ ೯೯ ॥**

ಸುಹೃದ್ಭಾವದಿಂದ ಕೇಳುವವರಿಗೆ ಪರಿಹಾರವನ್ನು ಹೇಳುತ್ತಾರೆ :—

ಚಕ್ಷುಷಃ—ಕಣ್ಣಿಗೆ, ಸರ್ವವಸ್ತುನಃ—ಸಕಲ ಪದಾರ್ಥಗಳನ್ನು, ಗ್ರಹಣೇ—ತಿಳಿಯುವುದರಲ್ಲಿ, ಯಥಾ—ಹೇಗೆ, ಆಲೋಕಪುರಸ್ಕಾರಃ—ಬೆಳಕಿನ ಸಹಾಯವು (ಬೆಳಕನ್ನು ಮುಂದೆ ಮಾಡಿಕೊಂಡೇ ವಸ್ತುಜ್ಞಾನವನ್ನು ಮಾಡಿಕೊಳ್ಳುವ ನಿಯಮವು), ಅಸ್ತಿ—ಇದೆಯೋ, ತಮಸಃ—ಅಂಧಕಾರವನ್ನು, ಗ್ರಹಣೇ ತು—ತಿಳಿಯುವುದರಲ್ಲಿ, ಸಃ—(ಹಾಗೆ) ಬೆಳಕಿನ ಸಹಾಯವು, ನೇಷ್ಯತೇ—ಅಪೇಕ್ಷಿತವಲ್ಲ (ಅವಶ್ಯಕವೆಂದು ತಿಳಿಯಲಾಗುವುದಿಲ್ಲ).

**ಸಿದ್ಧವ್ಯಾಪ್ತೇಸ್ತು ಸಂಕೋಚೋ ವಿರುದ್ಧತ್ವಾದ್ಧಿ ಕೇವಲಂ ।**
**ಅತ್ರಾಪಿ ತತ್ಪುರಸ್ಕಾರೇ ನ ಸ್ಯಾದಜ್ಞಾನಮೇವ ಹಿ ॥ ೧೦೦ ॥**

ಸಿದ್ಧವ್ಯಾಪ್ತೇಃ—(ಕಣ್ಣು ಪದಾರ್ಥಗಳನ್ನು ತಿಳಿಯುವಲ್ಲೆಲ್ಲಾ ಬೆಳಕು ಇರಲೇಬೇಕೆಂಬ) ಸಿದ್ಧವಾದ ವ್ಯಾಪ್ತಿಗೆ, ವಿರುದ್ಧತ್ವಾತ್—(ಅಂಧಕಾರದ—

---

ಗುಣಗಳ ಅನುಭವವೇ ಮೋಕ್ಷವು) (೯೭—೯೮). ಪದಾರ್ಥಗಳನ್ನು ತಿಳಿಯುವುದರಲ್ಲಿ ಕಣ್ಣಿಗೆ ಪ್ರಕಾಶವು (ಬೆಳಕು—light) ಹೇಗೆ ಸಹಕಾರಿಯೋ ಹಾಗೆ ಅಂಧಕಾರವನ್ನು (ಕತ್ತಲೆಯನ್ನು) ತಿಳಿಯಲು ಬೆಳಕಿನ ಅಪೇಕ್ಷೆಯಿಲ್ಲವಷ್ಟೆ (೯೯). ಕಣ್ಣು ಪದಾರ್ಥಗಳನ್ನು ತಿಳಿಯಲು ಬೆಳಕು ಇರಲೇಬೇಕೆಂಬ ವ್ಯಾಪ್ತಿನಿಯಮವು, ಬೆಳಕು ಮತ್ತು ಕತ್ತಲೆಗಳು ಪರಸ್ಪರ ವಿರುದ್ಧಗಳಾದ್ದರಿಂದ ಕಣ್ಣು ಕತ್ತಲೆಯನ್ನು ತಿಳಿಯುವುದರಲ್ಲಿ ಸಂಕೋಚವಾಗುವಂತೆ, ಅಜ್ಞಾನದ ಜ್ಞಾನದಲ್ಲಿ ಪ್ರತಿಯೋಗಿ ಜ್ಞಾನವನ್ನು (ನಿಷೇಧ್ಯ—ನಿಷೇಧಿಸಲ್ಪಡುವ ವಸ್ತು ಜ್ಞಾನವನ್ನು) ಅನುಸರಿಸುವುದೆಂಬ ನಿಯಮವನ್ನು ಸಂಕೋಚಗೊಳಿಸಬೇಕಾ

---

ವುದಿಲ್ಲ ಮತ್ತು ತಿಳಿದಿರುವೆನು ಎಂಬೆರಡೂ ಯುಕ್ತವಾಗುವುದರಿಂದ ಪ್ರಾಪ್ತವಾಗುವ ದೋಷವನ್ನು ನಿರೂಪಿಸಲಾಗಿದೆ; ತಿಳಿದಿರುವುದಿಲ್ಲವೆಂಬ (ಜ್ಞಾನಾಭಾವದ ಪಕ್ಷದಲ್ಲಿ) ಪ್ರತಿಯೋಗಿಜ್ಞಾನವಿದ್ದರೂ ಇಲ್ಲದಿದ್ದರೂ ಜ್ಞಾನಾಭಾವವನ್ನು ಹೇಳಬಹುದು. ನಿಷೇಧಿಸಲ್ಪಡುವ ವಸ್ತುವು ಪ್ರತಿಯೋಗಿಯು; ಹೀಗೆ ವಿಷಯವನ್ನು ಇಲ್ಲಿ ವಿವೇಚಿಸಿ ಪರಿಹಾರಾಂಶವನ್ನು ಮುಂದಿನ ಶ್ಲೋಕಗಳಲ್ಲಿ ಹೇಳುತ್ತಾರೆ.

ಕತ್ತಲೆಯ ದರ್ಶನವು) ವಿರುದ್ಧವಾದ್ದರಿಂದ, ಕೇವಲಂ–(ಅಲ್ಲಿ) ಮಾತ್ರ, ಸಂಕೋಚಃ–(ಬೆಳಕು ಇರಲೇಬೇಕೆಂಬ ನಿಯಮದ) ಸಂಕೋಚವು, ತು–ಅವಶ್ಯವೇ ಸರಿ ; (ಹಾಗೆ) ಅತ್ರಾಪಿ–ಅಜ್ಞಾನದ ಜ್ಞಾನದಲ್ಲಿಯೂ, ತತ್ಪುರಸ್ಕಾರೇ–ಪ್ರತಿಯೋಗಿಯ (ನಿಷೇಧಿಸಲ್ಪಡುವ ಪದಾರ್ಥದ) ಜ್ಞಾನವನ್ನು ಅನುಸರಿಸಿದರೆ, ಅಜ್ಞಾನಂ ಏವ–ಅಜ್ಞಾನವೇ, ನ ಸ್ಯಾತ್–(ಆಗುವುದಿಲ್ಲ) ನಾಶವಾಗುತ್ತದೆ (ಜ್ಞಾನವಿದ್ದಲ್ಲಿ ಅಜ್ಞಾನದ ಯೋಗವಿರುವುದಿಲ್ಲವಾದ್ದರಿಂದ) (ಪ್ರತಿಯೋಗಿಜ್ಞಾನವಿದ್ದರೆ ಮಾತ್ರ ಅದರ ಅಭಾವಜ್ಞಾನವೆಂಬ ನಿಯಮವನ್ನು ಸಂಕೋಚಗೊಳಿಸುವುದು ಅವಶ್ಯಕ).

**ಅತೋ ವ್ಯಾಪ್ತೇಶ್ಚ ಸಂಕೋಚಂ ಕೃತ್ವಾ ಸಾಮಾನ್ಯತೋ ಗ್ರಹಃ ।**
**ವಾಚ್ಯೋಽವಚ್ಛೇದಕಾದೀನಾಮಜ್ಞಾನಂ ತು ವಿಶೇಷತಃ ।**
**ಇತಿ ಸರ್ವೈಃ ಸಮಾಧೇಯಂ ತ್ವಂ ಸರ್ವೇಭ್ಯೋ ಬಹಿಷ್ಕೃತಃ ॥೧೦೦॥**

ಅತಃ–ಆದ್ದರಿಂದ, (ಜ್ಞಾನವು ವಿಷಯಸಾಪೇಕ್ಷವೆಂಬ) ವ್ಯಾಪ್ತೇಃ–ವ್ಯಾಪ್ತಿನಿಯಮಕ್ಕೆ, ಸಂಕೋಚಂ–ಸಂಕೋಚವನ್ನು (ಅನ್ವಯಿಸುವುದಿಲ್ಲವೆಂಬ ಅಪವಾದವನ್ನು), ಕೃತ್ವಾ–ಮಾಡಿಕೊಂಡು, ಸಾಮಾನ್ಯತೋ ಗ್ರಹಃ–ಸಾಮಾನ್ಯಜ್ಞಾನವು, ವಾಚ್ಯಃ–ಹೇಳಲ್ಪಡಬೇಕು ; ಅವಚ್ಛೇದಕಾದೀನಾಂ–ಗ್ರಾಹ್ಯವಾದ ವಿಷಯಗಳ, ಅಜ್ಞಾನಂ ತು–ಅಜ್ಞಾನವನ್ನಾದರೂ, ವಿಶೇಷತಃ–ವಿಶೇಷಕಾರವಾಗಿ (ಎಂದು, ವಾಚ್ಯಃ–ಹೇಳಲ್ಪಡತಕ್ಕದ್ದು), ಇತಿ–ಹೀಗೆ,

---

ಗುತ್ತದೆ (ಸ್ವರೂಪಸುಖದ ಜ್ಞಾನವಿಲ್ಲದೇ ಅದರ ಅಭಾವದ ಜ್ಞಾನವಾಗಲಾರದೆಂಬ ನಿಯಮವಿಲ್ಲ) ; ಈ ಅಭಾವರೂಪದ ಅಜ್ಞಾನವೇ 'ಅಹಮಜ್ಞಃ' ಎಂಬಲ್ಲಿ ತೋರುವ ಅಜ್ಞಾನವು (೧೦೦). ಆದ್ದರಿಂದ ಜ್ಞಾನವು ವಿಷಯಸಾಪೇಕ್ಷ—ವಿಷಯವನ್ನು ಅಪೇಕ್ಷಿಸುತ್ತದೆ–ಎಂಬ ನಿಯಮವನ್ನು ಸಂಕೋಚಗೊಳಿಸಿ, ಸ್ವರೂಪಜ್ಞಾನವನ್ನು ಸಾಮಾನ್ಯವೆಂದೂ, ಆನಂದಾದಿ ಗುಣಗಳ (ಅವಚ್ಛೇದಕಗಳ) ಜ್ಞಾನವನ್ನು ವಿಶೇಷವೆಂದೂ ಹೇಳಲೇಬೇಕು ; ಎಲ್ಲರೂ ಹೀಗೆ ಸಮಾಧಾನಪಟ್ಟುಕೊಳ್ಳುತ್ತಿರಲು, ವಿದ್ವಜ್ಜನರಿಂದ ಹೊರಗಿನವನಾದ (ಅಪಂಡಿತನಾದ) ನೀನು ಮಾತ್ರ ತಿಳಿಯುವುದಿಲ್ಲ (ಅಜ್ಞಾನವನ್ನು ಬ್ರಹ್ಮನಲ್ಲಿ ಸೇರಿಸಿ, ಅದರಿಂದ ಬ್ರಹ್ಮನಿಗೆ ಜೀವತ್ವವು ಬಂದಿರುವುದೆಂಬ ಕಲ್ಪನೆ

ಸರ್ವೈಃ—ಎಲ್ಲ ವಿವೇಕಿಗಳಿಂದ, ಸಮಾಧೇಯಂ — ಸಮಾಧಾನಗೊಳ್ಳಲ್ಪಡು ತ್ತದೆ ; ತ್ವಂ—ನೀನು, ಸರ್ವೇಭ್ಯಃ—ಸಕಲ ವಿದ್ವಜ್ಜನರಿಂದ, ಬಹಿಷ್ಕೃತಃ— ಹೊರಗಿನವನಾಗಿರುತ್ತೀ (ಅಪಂಡಿತನಾದರೆ ಇದನ್ನು ತಿಳಿಯುವುದಿಲ್ಲ).

**ಜ್ಞಾನಾವಿರೋಧಿತೇಽಜ್ಞಾನಂ ಜ್ಞಾನೇ ಸತಿ ಕುತೋ ನ ತತ್ ।**
**ವಿರೋಧಿಚೇತ್ಪರನ್ಯಾಯತರೋಸ್ತ್ವಂ ಮೂಲಸೇಚಕಃ ॥ ೧೦೨ ॥**

ಅಜ್ಞಾನಂ—ಅಜ್ಞಾನವು, ಜ್ಞಾನಾವಿರೋಧಿತೇ — ಜ್ಞಾನದ ವಿರೋಧಿ ಯಲ್ಲದಿದ್ದಲ್ಲಿ, ಜ್ಞಾನೇಸತಿ—(ಸ್ವರೂಪಸುಖಾದಿಗಳ) ಜ್ಞಾನವು ಇದ್ದರೆ, ಕುತೋ ನ ತತ್—ಅದರ ಅಜ್ಞಾನವೇಕೆ ಇರಬಾರದು (ಜ್ಞಾನದೊಡನೆ ಅಜ್ಞಾನವೂ ಇರಬಹುದು) ; ವಿರೋಧಿಚೇತ್ — (ಅಜ್ಞಾನವು ಜ್ಞಾನದ) ವಿರೋಧಿಯು ಆದರೆ, ತ್ವಂ—ನೀನು, ಪರನ್ಯಾಯತರೋಃ—ಪರನ (ಪ್ರತಿವಾದಿಯ) ಯುಕ್ತಿ ಯೆಂಬ ವೃಕ್ಷದ, ಮೂಲಸೇಚಕಃ—(ಪರನ್ಯಾಯವನ್ನು ನೀನೂ ಅನುಸರಿಸಿ ದಂತೆ ಆಗುವುದರಿಂದ) ಬುಡಕ್ಕೆ ನೀರೆರೆದಂತಾಗುತ್ತದೆ (ನೀರೆರೆಯುವವನು ಆಗುವಿ).

**ಜ್ಞಾನಾಭಾವಪದಾರ್ಥಸ್ಯ ಸರ್ವಥಾಽಭಾವ ಏವ ಚೇತ್ ।**
**ಅತ್ಯಂತಾಭಾವಶೂನ್ಯಂ ತಜ್ಜ್ಞಾನಂ ಸ್ಯಾತ್ ಪರಮಾರ್ಥಸತ್॥೧೦೩॥**

ಪ್ರತಿಯೋಗಿಯ (ನಿಷೇಧ್ಯವಸ್ತುವಿನ) ಜ್ಞಾನಭಾವ, ಅಭಾವಗಳಲ್ಲಿ ಜ್ಞಾನಾಭಾವವನ್ನು ನಿಂದಿಸುವ (ನಿರಾಕರಿಸುವ) ಮಾಯಾವಾದಿಯನ್ನು, ನಿನ್ನ ಮತದಲ್ಲಿ ಜ್ಞಾನದ ಅತ್ಯಂತಾಭಾವವೇ ಇಲ್ಲವೋ ಅಥವಾ ಇದೆಯೋ ಎಂದು ಪ್ರಶ್ನಿಸಿ, ಇಲ್ಲವೆಂಬುವ ಪಕ್ಷಕ್ಕೆ ಉತ್ತರವನ್ನು ಹೇಳುತ್ತಾರೆ :—

---

ಯಿಂದ ಭ್ರಮಿಸಿರುವಿ) (೧೦೧). ಸ್ವರೂಪದ ಅಜ್ಞಾನವು (ವಿಶೇಷಜ್ಞಾನ ವಿಲ್ಲದಿರುವುದು) ಅದರ ಸಾಮಾನ್ಯಜ್ಞಾನವನ್ನು ವಿರೋಧಿಸದಿದ್ದರೆ ಸಾಮಾನ್ಯ ಜ್ಞಾನದೊಡನೆ ವಿಶೇಷಜ್ಞಾನದ ಅಭಾವವೂ (ಅಜ್ಞಾನವೂ) ಇರಲು ಬಾಧಕ ವೇನು ? (ಇಲ್ಲ) ಒಂದು ಪಕ್ಷ ಅಜ್ಞಾನವು ಜ್ಞಾನದ ವಿರೋಧಿಯೆಂದರೆ, ಪ್ರತಿವಾದಿಯ ನ್ಯಾಯವನ್ನು ನೀನೂ ಅನುಸರಿಸಿ ಸಮಾಧಾನವನ್ನು ಹೇಳ ಬೇಕಾಗುತ್ತದೆ (೧೦೨). ಜ್ಞಾನಾಭಾವವೆಂಬುದು (ಸಾಮಾನ್ಯ ವಿಶೇಷ ಗಳೆಂಬ ವ್ಯತ್ಯಾಸವಿಲ್ಲದೇ ) ಅತ್ಯಂತ ಅಭಾವರೂಪವಾದುದೇ ಎಂದರೆ,

ಜ್ಞಾನಾಭಾವಪದಾರ್ಥಸ್ಯ—ಜ್ಞಾನಾಭಾವವೆಂಬುದರ ಅರ್ಥವು, ಸರ್ವಥಾ ಅಭಾವಃ ಏವ ಚೇತ್ – ಅತ್ಯಂತಾಭಾವವೆಂದೇ ಆದರೆ, (ಆಗ), ಅತ್ಯಂತಾಭಾವಶೂನ್ಯಂ – ಅತ್ಯಂತಾಭಾವ ಪದಾರ್ಥವು ಶೂನ್ಯವೇ (ಆದ್ದರಿಂದ), ತಜ್ಜ್ಞಾನಂ—ಶೂನ್ಯದ ಜ್ಞಾನವು, ಪರಮಾರ್ಥ ಸತ್—ಪರಮಾರ್ಥ ಸತ್ಯವು (ಪ್ರಮಾಣಸಿದ್ಧ ಸತ್ಯವು), ಸ್ಯಾತ್—ಆಗಲಿ (ಎಂಬ ಆರೋಪಕ್ಕೆ ಅವಕಾಶವಾಗುತ್ತದೆ).[1]

**ವಿದ್ಯಮಾನಸ್ಯ ಚಾರ್ಥಸ್ಯ ಯಥಾಸಂಭವಮೇವ ಧೀಃ ।**
**ಕಿಂ ಜಾತ್ಯಂಧಮತೇ ನಾಸ್ತಿ ಚಿತ್ರರೂಪವತೀ ಕ್ಷಿತಿಃ ॥ ೧೦೪ ॥**

ಜ್ಞಾನದ ಅತ್ಯಂತಾಭಾವವೆಂಬುದು ಇರುತ್ತದೆಂಬ ಎರಡನೆಯ ಪಕ್ಷಕ್ಕೆ ಉತ್ತರವನ್ನು ಹೇಳುತ್ತಾರೆ :—

ವಿದ್ಯಮಾನಸ್ಯ—ಇರುತ್ತದೆಂಬ, ಅರ್ಥಸ್ಯ—ಪದಾರ್ಥದ, ಧೀಃ—ಜ್ಞಾನವು, ಯಥಾಸಂಭವಂ ಏವ—ಸಂದರ್ಭ ಸನ್ನಿವೇಶಗಳಂತೆ (ಅದರ ಜ್ಞಾನವು) ಅವಶ್ಯ

ಅತ್ಯಂತಾಭಾವರೂಪದ ಶೂನ್ಯವೇ ಪರಮಾರ್ಥಸತ್ಯವೆಂದಾಗಬೇಕಾಗುತ್ತದೆ (೧೦೩). ಅದ್ವೈತಿಯು ಜ್ಞಾನಾಭಾವವನ್ನು ಅತ್ಯಂತಾಭಾವವೆಂದು ಹೇಳಿ ಅದರ ಜ್ಞಾನವೂ ಉಂಟೆಂದು ಒಪ್ಪುವುದಾದರೂ, ಪ್ರಪಂಚದ ಜ್ಞಾನಕ್ಕೆ ಮಿಥ್ಯಾತ್ವವನ್ನು ಸಾಧಿಸಲಿಕ್ಕಾಗಿಯೇ ಆಗಿರುತ್ತದೆ; ಅವನ ಮತದಂತೆ ಅತ್ಯಂತಾಭಾವದ ಪ್ರತಿಯೋಗಿಯು ಮಿಥ್ಯಾ ಇರುವ ಪದಾರ್ಥದ ಯಥಾಯೋಗ್ಯವಾದ ಜ್ಞಾನವು ಸನ್ನಿವೇಶಾನುಸಾರವಾಗಿ ಆಗಲೇಬೇಕು; ಹುಟ್ಟು ಕುರುಡನು ನಾನಾರೂಪದ ಜಗತ್ತನ್ನು ಕಾಣದಿದ್ದರೆ ಜಗತ್ತೇ ಇಲ್ಲವೇ? (ಸರ್ವಥಾ ಹಾಗಾಗುವುದಿಲ್ಲ—ಕಣ್ಣಿದ್ದವನು ಕಾಣುತ್ತಾನೆಯೇ ಸರಿ);

[1] ಮಾಯಾವಾದಿ ಮತದಲ್ಲಿ ಬ್ರಹ್ಮನು ಹೇಗೆ ಪರಮಾರ್ಥ ಸತ್ಯನೋ, ಹಾಗೆಯೇ ಅತ್ಯಂತಾಭಾವಪದಾರ್ಥವಾದ ಶೂನ್ಯಕ್ಕೂ ಸತ್ಯವನ್ನೇ ಹೇಳಬೇಕಾದೀತು; ಅತ್ಯಂತಾಭಾವ ಪ್ರತಿಯೋಗಿಗೆ ಮಿಥ್ಯಾತ್ವವಿರುವುದೆಂದು ಅದ್ವೈತಿಯು ಹೇಳುತ್ತಾನೆ; ಎಂದರೆ, ಜ್ಞಾನಾಭಾವವೆಂಬ ಒಂದು ವಸ್ತುವೇ ಇಲ್ಲವೆಂದು ಆತನ ಅಭಿಪ್ರಾಯವಾದರೆ, ಅದರ ಪ್ರತಿಯೋಗಿಯು ಇಲ್ಲವೆಂದೇ ಹೇಳಿದಂತಾಗುತ್ತದೆ; ಅತ್ಯಂತಾಭಾವ ಪ್ರತಿಯೋಗಿತ್ವವಿಲ್ಲದ ಜ್ಞಾನವು (ಮಿಥ್ಯವಲ್ಲದ್ದು) ಬ್ರಹ್ಮನಂತೆ ಸತ್ಯವೇ ಆಗಿರಬೇಕಾಯಿತು; ಆದ್ದರಿಂದ ಶೂನ್ಯವೂ ಬ್ರಹ್ಮನಂತೆ ಸತ್ಯವೆಂದಾಗಬೇಕು.

ವಾಗಿ ಉಂಟಾಗುತ್ತದೆ; ಜಾತ್ಯಂಧಮತೇ–ಹುಟ್ಟು (ಜನ್ಮತಃ) ಕುರುಡನ ಅಭಿಪ್ರಾಯದಲ್ಲಿ, ಚಿತ್ರರೂಪವತೀ–ವಿವಿಧರೂಪಗಳುಳ್ಳ, ಕ್ಷಿತಿಃ–ಭೂಮಿಯು, ನಾಸ್ತಿ ಕಿಂ – ಇರುವುದಿಲ್ಲವೇನು? (ಕುರುಡನಿಗೆ ರೂಪಜ್ಞಾನವಿಲ್ಲದಂತೆ, ಅದ್ವೈತಿಯು ಜ್ಞಾನಾಭಾವದ ಜ್ಞಾನವನ್ನು ಅಂಗೀಕರಿಸದಿದ್ದ ಮಾತ್ರಕ್ಕೆ, ಅದರ ಜ್ಞಾನವೂ ಸಂಭಾವ್ಯವೇ ಆಗಿದೆ).[1]

**ಅಜ್ಞಾನಸ್ಯ ಹಿ ದೌರ್ಘಟ್ಯಂ ಯಥಾ ತೇ ಭೂಷಣಂ ಸದಾ ।**
**ತಥಾ ತಜ್ಜ್ಞಾನದೌರ್ಘಟ್ಯಮಪಿ ಭೂಷಣಮಸ್ತ್ವಿದಂ ॥ ೧೦೫ ॥**

ಸೌಹಾರ್ದದಿಂದ ಪೂರ್ವೋಕ್ತ ಉತ್ತರವನ್ನು ಅಂಗೀಕರಿಸದಿದ್ದರೆ, ಪ್ರತಿಬಂದೀ ಉತ್ತರವನ್ನು ಹೇಳುತ್ತಾರೆ[2] :—

ಅಜ್ಞಾನಸ್ಯ–ಅಜ್ಞಾನದ, ದೌರ್ಘಟ್ಯಂ–ಜ್ಞಾನರೂಪನಾದ ಬ್ರಹ್ಮನಲ್ಲಿ, ಅಜ್ಞಾನವಿರಬಹುದೆಂದು, ಯುಕ್ತವಲ್ಲದ್ದನ್ನು ಸಾಧ್ಯವೆಂದು ಹೇಳುವುದು

---

ಅದರಂತೆ ಜ್ಞಾನಾಭಾವವನ್ನು ಯಥಾಯೋಗ್ಯವಾಗಿ ವಿವೇಕಿಗಳು ಗ್ರಹಿಸು ತ್ತಾರೆ; ಜ್ಞಾನಾಭಾವವನ್ನು ಅತ್ಯಂತಾಭಾವವೆಂದು ಕರೆದು, ಅದು ಇರುತ್ತ ದೆಂಬ ಅದ್ವೈತಿಯ ವಾದವು ಅಂಗೀಕಾರಯೋಗ್ಯವಲ್ಲ (೧೦೪). ಜೀವನ ಅನುಭವಗೋಚರವಾದುದು ಜ್ಞಾನಾಭಾವವು; ಭಾವರೂಪದ ಅಜ್ಞಾನವಲ್ಲ;

---

[1] ಬ್ರಹ್ಮನಿಂದ ಭಿನ್ನವಾದ ಸರ್ವಜಗತ್ತೂ (ಅದ್ವೈತಿಯಂತೆ) ಮಿಥ್ಯಾಭೂತ ವಾದುದು; ಜಗತ್ತಿನ ಜ್ಞಾನಕ್ಕೆ ಮಿಥ್ಯಾತ್ವವನ್ನು ಹೇಳುವುದಕ್ಕಾಗಿ, ಜ್ಞಾನದ ಅತ್ಯಂತಾ ಭಾವವನ್ನು ಅಂಗೀಕರಿಸುತ್ತಾನಲ್ಲದೇ ಬೇರೆಯಲ್ಲ; ಅತ್ಯಂತಾಭಾವದ ಪ್ರತಿಯೋಗಿಯು, ಮಿಥ್ಯಾವೆಂದು ಅವನ ಮತ; ಜ್ಞಾನದ ಅತ್ಯಂತಾಭಾವವಿದೆ, ಎಂದು ಹೇಳುವುದು ಜಗತ್ತಿನ ಜ್ಞಾನಕ್ಕೆ ಮಿಥ್ಯಾತ್ವವನ್ನು ಸಾಧಿಸಲು ಮಾತ್ರ; ಆದರೆ ಜ್ಞಾನಾಭಾವದ ಜ್ಞಾನವು, ಕಣ್ಣಿದ್ದವರಿಗೆ ಜಗತ್ತು ತೋರುವಂತೆ, ವಿವೇಕಿಗಳಿಗೆ, ಅವಕಾಶವಿರುತ್ತದೆಂಬಲ್ಲಿ ದೃಷ್ಟಾಂತವಿರುತ್ತದೆ. ಯಾವ ವಿಧದಿಂದಲೂ ತಿಳಿಯಲಾಗದ ವಸ್ತುವಿರುತ್ತದೆಂಬಲ್ಲಿ ಪ್ರಮಾಣವಿಲ್ಲ; ಜ್ಞಾನದ ಅತ್ಯಂತಾಭಾವವನ್ನು ಒಪ್ಪುತ್ತಾನಲ್ಲದೇ ಜ್ಞಾನಾಭಾವದ ಜ್ಞಾನವನ್ನಲ್ಲವೆಂಬುದನ್ನು ಗಮನಿಸಿರಿ.

[2] ಪ್ರತಿಬಂದೀ = ಪ್ರತಿಬಂಧೀ—ತನ್ನ ಮಾತಿನಿಂದಲೇ ಕಟ್ಟಿಹಾಕುವುದು ಎಂದರ್ಥ ವನ್ನು ತಿಳಿಯಬಹುದು; ಪ್ರತಿವಾದಿಯ ವಾದದಿಂದಲೇ ಆತನ ವಾದವನ್ನು ಎದುರಿಸು ವುದು.

ಭೂಷಣವೇ ಅಲ್ಲದೆ ದೂಷಣವಲ್ಲವೆಂಬ ವಾದವು, ಯಥಾ–ಹೇಗೆ, ತೇ–ನಿನಗೆ (ನಿನ್ನ ಮತದಲ್ಲಿ), ಸದಾ–ಸರ್ವದಾ, ಭೂಷಣಂ–ಭೂಷಣವೋ, ತಥಾ–ಹಾಗೆಯೇ, ತಜ್ಜ್ಞಾನದೌರ್ಘಟ್ಯಂ–ಜ್ಞಾನಾಭಾವದ ಜ್ಞಾನದ ದುರ್ಘಟತ್ವವು (ಯುಕ್ತವಲ್ಲವೆಂಬುದು), ಅಪಿ – ಸಹ, ಇದಂ ಭೂಷಣಂ ಅಸ್ತು – ಇದೂ ಭೂಷಣವೇ ಆಗಲಿ; (ಜ್ಞಾನಾಭಾವದ ಜ್ಞಾನವೂ ಯುಕ್ತವೆಂದಾಗಲಿ; ಪ್ರತಿಯೋಗಿಯ ಜ್ಞಾನಾಭಾವವೂ ಜ್ಞಾನವಿಷಯವಾಗಲಿ).

**ಕಿಮೇಕಕುಂಡಲತ್ವೇನ ಕುಂಡಲದ್ವಯವಾನ್ ಭವ ।**
**ದುರ್ಘಟಸ್ಯ ಹಿ ಯೋ ಹಂತಾ ಸ ಸ್ಯಾದತ್ಯಂತದುರ್ಘಟಃ ॥ ೧೦೬ ॥**

ಏಕಕುಂಡಲತ್ವೇನ–(ಬ್ರಹ್ಮನಲ್ಲಿ ಅವಿದ್ಯೆಯು) ಭೂಷಣವೆಂಬ ಒಂದು ಕುಂಡಲದಿಂದ, ಕಿಂ–ಏನು? (ಪ್ರಯೋಜನವಿಲ್ಲ); ಕುಂಡಲದ್ವಯವಾನ್–(ಜ್ಞಾನಾಭಾವ ಜ್ಞಾನದುರ್ಘಟತ್ವವೆಂಬ ಕುಂಡಲವನ್ನು ಹೊಂದಿ) ಎರಡು ಕುಂಡಲಗಳಿಂದ[1] ಶೋಭಿಸುವವನು, ಭವ – ಆಗು; ಯಃ – ಯಾರು, ದುರ್ಘಟಸ್ಯ–(ಜ್ಞಾನಾಭಾವದ ಅಜ್ಞಾನವನ್ನು ನಿವಾರಿಸುವುದು ಅವಶ್ಯವಾದ್ದರಿಂದ) ಜ್ಞಾನಾಭಾವದ ಜ್ಞಾನವು ದುರ್ಘಟವೆಂಬುದರ, ಹಂತಾ–ಸಂಹಾರಕನು (ಸಮರ್ಥವಾದ ಗಜವನ್ನು ಕೊಲ್ಲುವವನು ಸಿಂಹದಂತೆ ಗಜಕ್ಕಿಂತ ಅಧಿಕ ಸಾಮರ್ಥ್ಯವುಳ್ಳವನೆಂಬಂತೆ), ಅತ್ಯಂತ ದುರ್ಘಟಃ – (ತಾನೇ) ಅತ್ಯಂತ ದುರ್ಘಟನು, ಸ್ಯಾತ್–ಆಗುತ್ತಾನೆ (ಅತ್ಯಂತ ದುರ್ಲಭನಾಗುತ್ತಾನೆ).

---

ಬ್ರಹ್ಮನಲ್ಲಿ ಅವಿದ್ಯೆ (ಅಜ್ಞಾನ) ಇರುವುದು ದುರ್ಘಟ (ಅಸಂಭಾವ್ಯ) ವೆಂಬುದು ಯುಕ್ತಿಯಿಂದ ಸರಿಗಂಡರೂ ದುರ್ಘಟತ್ವವೇ ಭೂಷಣವೆಂದು, 'ಅವಿದ್ಯಾಯಾಃ ದುರ್ಘಟತ್ವಂ ಭೂಷಣಂ ನ ತು ದೂಷಣಂ' ಎಂದು ಹೇಳಿರುವಂತೆ ಜ್ಞಾನಾಭಾವದ ಜ್ಞಾನವು (ತಿಳುವಳಿಕೆಯು) ದುರ್ಘಟತ್ವವೂ ಭೂಷಣವೇ ಆಗಲಿ; ಅಂತೂ ಅದರ ಜ್ಞಾನವಾಗಲಿ (೧೦೫). ಬ್ರಹ್ಮನಲ್ಲಿ ಅವಿದ್ಯೆಯು ಭೂಷಣವೆಂದು ವಾದಿಸುವ ನೀನು ಅದೊಂದೇ ಕುಂಡಲವನ್ನು (ಶ್ರವಣಾಭರಣವನ್ನು) ಇಟ್ಟುಕೊಂಡಿರುವುದು ಯೋಗ್ಯವಲ್ಲ; ಜ್ಞಾನಾಭಾವದ

---

1 ಶಾಸ್ತ್ರರೂಪದ ಕುಂಡಲಗಳೆಂಬ ದೃಷ್ಟಿಯಿಂದ, (ಶಾಸ್ತ್ರಗಮ್ಯ ವಿಷಯಗಳಾದ್ದರಿಂದ) ಕುಂಡಲನಾಮವುಳ್ಳವು— ಈ ದುರ್ಘಟತ್ವಭೂಷಣತ್ವವು.

*

**ಕಿಂಚ ಭಾವಾಜ್ಞಾನವಾದೇ ದುರ್ಘಟತ್ವಂ ಯಥೇಷ್ಯತೇ ।**
**ಅಭಾವಾಜ್ಞಾನವಾದೇಪಿ ದೌರ್ಘಟ್ಯಂ ತದ್ವದಿಷ್ಯತಾಂ ॥ ೧೦೭ ॥**

ಕಿಂಚ – ಮತ್ತೇನೆಂದರೆ, ಭಾವಾಜ್ಞಾನವಾದೇ – ಭಾವರೂಪವಾದ (ಆವರಕ ರೂಪದ) ಅಜ್ಞಾನವನ್ನು ಹೇಳುವ ವಾದದಲ್ಲಿ, ಯಥಾ–ಹೇಗೆ, ದುರ್ಘಟತ್ವಂ – ದುರ್ಘಟತ್ವವನ್ನು, ಇಷ್ಯತೇ – ಒಪ್ಪುವಿಯೋ, (ಹೇಳುವಿಯೋ), ತದ್ವತ್–ಅದರಂತೆ, ಅಭಾವಾಜ್ಞಾನವಾದೇ ಅಪಿ–ಅಭಾವರೂಪ ಅಜ್ಞಾನ ವಾದದಲ್ಲಿ ಸಹ (ಜೀವರಿಗೆ ಬ್ರಹ್ಮವಿಷಯಕ ಅಭಾವರೂಪದ ಅಜ್ಞಾನವಿದೆ, ಎಂದು ಹೇಳುವ ವಾದದಲ್ಲಿಯೂ), ದೌರ್ಘಟ್ಯಂ–ದುರ್ಘಟತ್ವವು, ಇಷ್ಯತಾಂ–ಹೇಳಲ್ಪಡಲಿ.

**ಅಜ್ಞಾನತ್ವಾವಿಶೇಷೇಣ ದ್ವಯೋರಪಿ ಸಮತ್ವತಃ ।**
**ಪಕ್ಷಪಾತೇ ಹೇತ್ವಭಾವಾತ್ ಪಕ್ಷಪಾತೋ ಭವೇತ್ತವ ॥ ೧೦೮ ॥**

ದ್ವಯೋಃ – ಭಾವ, ಅಭಾವರೂಪ ಅಜ್ಞಾನಗಳಲ್ಲಿ, ಅಜ್ಞಾನತ್ವಾವಿಶೇಷೇಣ–ಅಜ್ಞಾನತ್ವವೆಂಬಲ್ಲಿ ಯಾವ ವಿಶೇಷವೂ ಇಲ್ಲದ್ದರಿಂದ, ಅಪಿ–ಮತ್ತು, ಸಮತ್ವತಃ–ಅಜ್ಞಾನತ್ವವು ಸಮಾನವಾಗಿರುವುದರಿಂದ, ಪಕ್ಷಪಾತೇ–ಒಂದರಲ್ಲಿ ಪಕ್ಷಪಾತವನ್ನು ತೋರಿಸಲು, ಹೇತ್ವಭಾವಾತ್–ಕಾರಣವಿಲ್ಲದ್ದರಿಂದ, ತವ – ನಿನಗೆ (ಭಾವರೂಪ ಅಜ್ಞಾನದ ಪರವನ್ನು ವಹಿಸಿದರೆ),

---

ಜ್ಞಾನದುರ್ಘಟತ್ವವನ್ನು ಭೂಷಣವನ್ನಾಗಿ ಅಂಗೀಕರಿಸಿ, ಎರಡು ಕುಂಡಲಗಳುಳ್ಳವನಾಗಿ ಶೋಭಿಸು ; ಈ ದುರ್ಘಟತ್ವವನ್ನು ಸಂಹರಿಸುವವನು (ಪರಿಹರಿಸುವವನು) ದುರ್ಲಭನು ; ಗಜವನ್ನು ಸಂಹರಿಸುವ ಸಿಂಹವು ಅತಿ ಸಮರ್ಥವಾದುದಲ್ಲವೇ ! ಅದರಂತೆ ದುರ್ಘಟತ್ವವನ್ನೇ ಭೂಷಣವನ್ನಾಗಿ ಸ್ವೀಕರಿಸಿ ತದ್ದ್ವಾರಾ ದುರ್ಘಟತ್ವನಾಶಕನಾದ ಅತ್ಯಂತ ದುರ್ಘಟಕನಾಗು (೧೦೬). ಬ್ರಹ್ಮನಲ್ಲಿ ಆವರಕರೂಪದ ಭಾವಾಜ್ಞಾನವನ್ನು ದುರ್ಘಟವಾದರೂ ಅಂಗೀಕರಿಸುವಂತೆ, ಜೀವನಲ್ಲಿ ಬ್ರಹ್ಮವಿಷಯಕ ಅಭಾವರೂಪ ಅಜ್ಞಾನದ ದುರ್ಘಟತ್ವವನ್ನು ಅಂಗೀಕರಿಸಬಹುದಲ್ಲವೇ ? (೧೦೭). ಭಾವರೂಪ ಅಜ್ಞಾನ ಮತ್ತು ಅಭಾವರೂಪ ಅಜ್ಞಾನಗಳಲ್ಲಿ ಯಾವ ವಿಶೇಷವೂ ಇಲ್ಲ ಮತ್ತು ಅವುಗಳಲ್ಲಿ ಅಜ್ಞಾನತ್ವವೆಂಬ ಸಮಾನತೆಯೂ ಇರುತ್ತದೆ ;

ಪಕ್ಷಪಾತಃ – ಪಕ್ಷಪಾತವು (ನಿನ್ನ ಸಿದ್ಧಾಂತದಲ್ಲಿ), ಭವೇತ್ – (ತಪ್ಪದೇ) ಆಗುತ್ತದೆ; (ನಿನ್ನ ಸಿದ್ಧಾಂತವೂ ಭಂಗಗೊಳ್ಳುತ್ತದೆ).

**ನಿತ್ಯಜ್ಞಾನಮತೇ ಜ್ಞಾನಸಾಮಾನ್ಯಾಭಾವ ಏವ ನ ।**
**ಚಕ್ಷುಷಾ ಬ್ರಹ್ಮವಿಜ್ಞಾನಸ್ಯಾಭಾವೋಽಜ್ಞಾನಮುಚ್ಯತೇ ॥ ೧೦೯ ॥**

ಬೇರೆ ರೀತಿಯಿಂದ ಸಹ ಜ್ಞಾನಾಭಾವದ ಜ್ಞಾನದ ಪರೋಕ್ತಿಯ ಅನುಪಪತ್ತಿಯನ್ನು ಪರಿಹರಿಸುತ್ತಾರೆ:—

ನಿತ್ಯಜ್ಞಾನಮತೇ–(ಚೇತನ ಮಾತ್ರನಲ್ಲಿ ಸಾಕ್ಷಿರೂಪಜ್ಞಾನವು) ನಿತ್ಯವಾಗಿರುವುದೆಂಬ ಮತದಲ್ಲಿ (ಸಿದ್ಧಾಂತದಲ್ಲಿ), ಜ್ಞಾನಸಾಮಾನ್ಯಾಭಾವಃ ಏವ ನ – ಜ್ಞಾನಸಾಮಾನ್ಯದ ಅಭಾವವೇ ಇರುವುದಿಲ್ಲ; ಚಕ್ಷುಷಾ – ಕಣ್ಣಿಂದ (ಸಾಕ್ಷಾತ್ತಾಗಿ), ಬ್ರಹ್ಮವಿಜ್ಞಾನಸ್ಯ–ಬ್ರಹ್ಮನ ವಿಶೇಷಜ್ಞಾನದ, ಅಭಾವಃ– ಅಭಾವವು, ಅಜ್ಞಾನಂ – ಅಜ್ಞಾನವೆಂದು, ಉಚ್ಯತೇ[1] – ಹೇಳಲ್ಪಡುತ್ತದೆ

---

ಹಾಗೂ ಒಂದರಲ್ಲಿ ಪಕ್ಷಪಾತ ವಹಿಸಲು ನಿನಗೆ ಯಾವ ಕಾರಣವೂ ಇಲ್ಲ; ಇಷ್ಟಿದ್ದೂ ನೀನು ಭಾವರೂಪ ಅಜ್ಞಾನದಲ್ಲಿ ಮಾತ್ರ ಪರ ವಹಿಸಿದರೆ ನಿನಗೆ ಪಕ್ಷಪಾತದೋಷವೂ ಬರುತ್ತದೆ—ನಿನ್ನ ಸಿದ್ಧಾಂತದ ಪತನವೂ (ಹಾನಿಯೂ) ಆಗುತ್ತದೆ (ಭಾವರೂಪ ಅಜ್ಞಾನದ ವಶನಾಗಿ ಬ್ರಹ್ಮನು ಜೀವಭಾವವನ್ನು ಹೊಂದುವನೆಂಬ ಪ್ರಮೇಯವನ್ನು ಈ ಹಿಂದೆ ಬಹುಪರಿಯಿಂದ ನಿರಾಕರಿಸಲಾಗಿದೆ) (೧೦೮). ಸಕಲ ಜೀವರಲ್ಲಿ ಸಾಕ್ಷಿಜ್ಞಾನವು ಸದಾ ನಿತ್ಯವೆಂಬ ಪ್ರಮೇಯವುಳ್ಳ ಸಿದ್ಧಾಂತದಲ್ಲಿ (ತತ್ವವಾದದಲ್ಲಿ) ಜ್ಞಾನಸಾಮಾನ್ಯದ ಅಭಾವವೆಂಬುದು ಇಲ್ಲ—ವಿಶೇಷಜ್ಞಾನದ ಅಭಾವವು ಎಲ್ಲ ಜೀವರಲ್ಲಿ ಇರುತ್ತದೆ—ಸರ್ವಜ್ಞನಾದ ಬ್ರಹ್ಮನಲ್ಲಿ ಮಾತ್ರ ಇದೂ ಇರುವುದಿಲ್ಲ; ಆದ್ದರಿಂದ ಜೀವನಿಗುಂಟಾಗುವ 'ಅಹಮಜ್ಞಃ' ಎಂಬ ಅನುಭವದಲ್ಲಿ ತೋರುವ ಅಜ್ಞಾನವು ವಿಶೇಷಜ್ಞಾನದ ಅಭಾವರೂಪವಾದುದು—ಅಭಾವರೂಪದ ಅಜ್ಞಾನವು; ಬ್ರಹ್ಮವಿಷಯಕವಾದ ಪ್ರತ್ಯಕ್ಷಜ್ಞಾನವಿಲ್ಲವೆಂದರ್ಥ ; ಹೀಗೆ ತಿಳಿಯುವ ಜೀವನಿಗೆ ಬ್ರಹ್ಮವಿಷಯಕ ಸಾಮಾನ್ಯಜ್ಞಾನವಿಲ್ಲೆಂದರ್ಥವಲ್ಲ; ಅಥವಾ ಶಾಸ್ತ್ರಗಳ

---

1 ಉಚ್ಯತೇ ಎಂಬುದರಿಂದ ಲೋಕರೂಢಿಯನ್ನು ಸೂಚಿಸುತ್ತಾರೆ; ಜ್ಞಾನವಿಲ್ಲೆಂದರೆ ಜ್ಞಾನವಿಶೇಷದ ಜ್ಞಾನವಿಲ್ಲೆಂದೇ ಅರ್ಥ–ಸಾಕ್ಷಾತ್ತಾಗಿ ತಿಳಿದಿಲ್ಲವೆಂದೇ ಅರ್ಥವು.

('ಅಹಮಜ್ಞಃ' ಎಂಬಲ್ಲಿ, ನಾನು ಬ್ರಹ್ಮನನ್ನು ಸಾಕ್ಷಾತ್ತಾಗಿ ನೋಡಿಲ್ಲವೆಂದೇ ಅರ್ಥವಲ್ಲದೇ, ಹಾಗೆ ಹೇಳುವವನು— ಆ ಅನುಭವವುಳ್ಳವನು, ಬ್ರಹ್ಮ ವಿಷಯಕವಾದ ಸಾಮಾನ್ಯಜ್ಞಾನವನ್ನಾಗಲಿ, ಶಾಸ್ತ್ರಾಧ್ಯಯನಾದಿಗಳಿಂದ ಆತನ ಮಹಿಮಾಜ್ಞಾನವನ್ನಾಗಲಿ ಉಳ್ಳವನಲ್ಲವೆಂದಲ್ಲ).

**ನಿಷ್ಕಿಂಚನಪದಂ ವಿತ್ತವಿಶೇಷಾಭಾವವಾಗ್ಯಥಾ ।**
**ಏವಂ ಚ ಮಾನಸಂ ಜ್ಞಾನಂ ಸ್ಯಾದೇವ ಪ್ರತಿಯೋಗಿನಃ ॥ ೧೧೦ ॥**

ನಿಷ್ಕಿಂಚನಪದಂ—(ನ ವಿದ್ಯತೇ ಕಿಂಚನ ಎಂದರೆ ಏನೂ ಇಲ್ಲದ) ದರಿದ್ರ ನೆಂಬ ಪದವು, ವಿತ್ತವಿಶೇಷಾಭಾವವಾಕ್—ಧನಕನಕಾದಿ ವಸ್ತುವಿಶೇಷಗಳ ಅಭಾವದಿಂದ ಮಾತ್ರ ಹೇಳುವುದು (ವಸ್ತ್ರ, ಭೋಜನಪಾತ್ರೆ ಮುಂತಾದ ಅಲ್ಪವಸ್ತುಗಳೂ ಇಲ್ಲವೆಂದಲ್ಲ), ಯಥಾ—ಹೇಗೋ, ಏವಂ ಚ—ಹಾಗೆಯೇ, ಪ್ರತಿಯೋಗಿನಃ—(ಅಹಮಜ್ಞಃ ಎಂಬ ಅಜ್ಞಾನದ ಪ್ರತಿಯೋಗಿಯಾದ ಬ್ರಹ್ಮ ಜ್ಞಾನದ ಅಥವಾ ಬ್ರಹ್ಮಸ್ವರೂಪದ) ಬ್ರಹ್ಮನ, ಮಾನಸಂ ಜ್ಞಾನಂ—ಮನಃ ಪರಿಣಾಮರೂಪದ (ಶಾಸ್ತ್ರಾದಿಜನ್ಯ ಸಂಸ್ಕಾರನಿಮಿತ್ತವಾದ) ಜ್ಞಾನವು, ಸ್ಯಾದೇವ—ಇರುತ್ತದೆಯಾದರೂ (ಅಪರೋಕ್ಷ ದರ್ಶನವಿಲ್ಲೆಂದರ್ಥ).

---

ಅವಲೋಕನದಿಂದ ಉಂಟಾಗುವ ಆತನ ಗುಣಜ್ಞಾನವಿಲ್ಲೆಂದೂ ಅರ್ಥವಲ್ಲ— ಬ್ರಹ್ಮನನ್ನು ಪ್ರತ್ಯಕ್ಷವಾಗಿ (ಸಾಕ್ಷಾತ್ತಾಗಿ—ಕಣ್ಣಿಂದ ಕಂಡು ತಿಳಿಯಬಹುದಾದ ವಿಶೇಷ ರೀತಿಯಲ್ಲಿ) ತಿಳಿಯದೆಂದೇ ಅರ್ಥ (೧೦೯). ಅಹಮಜ್ಞಃ ಎಂಬಲ್ಲಿ ತೋರುವ ಅಜ್ಞಾನವು ಬ್ರಹ್ಮನ ಸಾಮಾನ್ಯಜ್ಞಾನವನ್ನು ವಿರೋಧಿಸದೇ ವಿಶೇಷಜ್ಞಾನವನ್ನು ಮಾತ್ರ ನಿಷೇಧಿಸಿದರೂ ನಾನು ಅಜ್ಞಾನಿಯು ಎಂಬ ಭಾವನೆಯು ಅಯುಕ್ತವಲ್ಲ; ದರಿದ್ರನನ್ನು ನಿಷ್ಕಿಂಚನ—ಏನೂ ಇಲ್ಲದವನು ಎಂದು ಕರೆದ ಮಾತ್ರಕ್ಕೆ ವಸ್ತ್ರ, ಕೈಚಂಬು, ಮುಂತಾದ ಅಲ್ಪವಸ್ತುಗಳು ಇಲ್ಲದವನೆಂಬ ಅರ್ಥವಾಗದೇ, ಧನಕನಕಾದಿ ಬೆಲೆಬಾಳುವ ವಸ್ತುಗಳಿಲ್ಲವೆಂದು ಮಾತ್ರ ಹೇಗೆ ತಿಳಿಯುವೆವೋ ಹಾಗೆ, ಪ್ರತಿಮೆಗಳ ರೂಪದಲ್ಲಿ ಅಥವಾ ಶಾಸ್ತ್ರಾಭ್ಯಾಸದಿಂದ ದೊರೆಯುವ ಮಾನಸಜ್ಞಾನರೂಪದಲ್ಲಿ ತಿಳಿಯುವುದಿಲ್ಲ ವೆಂದರ್ಥವಲ್ಲ; ಕಿಂತು ಪ್ರತ್ಯಕ್ಷದಿಂದ ಕಂಡು ತಿಳಿದಿಲ್ಲವೆಂಬ ಅರ್ಥವು ಲೋಕರೂಢಿಯನ್ನೇ ಅನುಸರಿಸುತ್ತದೆ (೧೧೦).

**ಪರೋಕ್ಷರೂಪಂ ತಜ್ಜ್ಞಾನಂ ತದಭಾವಶ್ಚ ನೋಚ್ಯತೇ ।**
**ಬ್ರಹ್ಮಾಪರೋಕ್ಷಭಾವೇನ ನ ಜಾನಾಮೀತಿ ವಾಕ್ತು ಸಾ ॥ ೧೧೧ ॥**

ತಜ್ಜ್ಞಾನಂ–(ಪ್ರತಿಯೋಗಿ) ಬ್ರಹ್ಮನ ಜ್ಞಾನವು, ಪರೋಕ್ಷರೂಪಂ–ಶಬ್ದಲಿಂಗಾದಿಗಳಿಂದ ಜನ್ಯವಾದುದು (ಮಾನಸಪ್ರತ್ಯಕ್ಷರೂಪವಾದುದು ಅಲ್ಲ); ತದಭಾವಶ್ಚ – (ಪ್ರತಿಯೋಗಿಯ) ಬ್ರಹ್ಮನ ಪರೋಕ್ಷಜ್ಞಾನಾಭಾವವು, ನ ಉಚ್ಯತೇ–ಹೇಳಲ್ಪಡುವುದಿಲ್ಲ; ಬ್ರಹ್ಮಾಪರೋಕ್ಷಭಾವೇನ–ಬ್ರಹ್ಮನ ಪ್ರತ್ಯಕ್ಷ ದರ್ಶನವಿಲ್ಲವೆಂಬ ಅರ್ಥದಿಂದ (ಜ್ಞಾನಮಾತ್ರವನ್ನು ನಿಷೇಧಿಸದೇ), ನ ಜಾನಾಮಿ–ನಾನು ತಿಳಿಯುವುದಿಲ್ಲ, ಇತಿ ಸಾ ವಾಕ್–ಹೀಗೆಂಬ ಆ ವಾಕ್ಯದ (ಅಹಮಜ್ಞಃ ಎಂಬ ವಾಕ್ಯದ), ತು–ಅರ್ಥವಾದರೋ (ಆಗಿರುತ್ತದೆ).

**ಪ್ರತ್ಯಕ್ಷವೃತ್ತಿವೈರೇಽಪಿ ನ ಜಾನಾಮೀತಿ ತೇ ಯಥಾ ।**
**ಪ್ರತ್ಯಕ್ಷವೃತ್ತ್ಯಭಾವೇಽಪಿ ನ ಜಾನಾಮೀತಿ ಮೇ ತಥಾ ॥ ೧೧೨ ॥**

ಅಜ್ಞಾನ ಪದವು ಜ್ಞಾನವಿಶೇಷದ ಅಭಾವವನ್ನು ಹೇಳುತ್ತದೆಂಬುದು ಲೋಕರೂಢಿಯಿಂದ ಮಾತ್ರ ಸಿದ್ಧವಲ್ಲ, ನಿನ್ನಂತೆ ಸಹ ಅದೇ ಅರ್ಥವೆನ್ನುತ್ತಾರೆ :—

ತೇ–ನಿನ್ನ ಮತದಲ್ಲಿ, ಯಥಾ – ಹೇಗೆ, ಪ್ರತ್ಯಕ್ಷವೃತ್ತಿವೈರೇ ಅಪಿ– (ಬ್ರಹ್ಮನಿಗಿರುವುದೆಂಬ ಭಾವರೂಪ ಅಜ್ಞಾನವು) ಸಾಕ್ಷಾತ್ತಾಗಿ ಬ್ರಹ್ಮದರ್ಶನವನ್ನು ವಿರೋಧಿಸಿದರೂ (ಶಾಸ್ತ್ರದಿಂದ ದೊರೆಯುವ ಬ್ರಹ್ಮಜ್ಞಾನವನ್ನು

---

ಸಾಮಾನ್ಯವಾಗಿ ಶಾಸ್ತ್ರಾದಿಗಳಿಂದ ದೊರೆಯುವ ಬ್ರಹ್ಮನ ಮಾನಸ ಜ್ಞಾನವು ಪರೋಕ್ಷಜ್ಞಾನವು; ಅದರ ಅಭಾವವನ್ನು (ಅದೂ ಇಲ್ಲವೆಂದು) 'ನಾನು ತಿಳಿಯುವುದಿಲ್ಲ' ಎಂಬ ಅನುಭವವು ಹೇಳುವುದಿಲ್ಲ; ಆದರೆ ಬ್ರಹ್ಮನನ್ನು ಸಾಕ್ಷಾತ್ತಾಗಿ (ಅಪರೋಕ್ಷದಿಂದ) ಕಂಡಿಲ್ಲವೆಂದು ಮಾತ್ರ ತಿಳಿಸುತ್ತದೆ (೧೧೧). ಅದ್ವೈತಿಯು ಬ್ರಹ್ಮನಲ್ಲಿರುವುದೆಂಬ ಭಾವರೂಪ ಅಜ್ಞಾನವು (ಆವರಕವು) ಬ್ರಹ್ಮಾಪರೋಕ್ಷವನ್ನು ನಿರೋಧಿಸಿದರೂ, ಶಾಸ್ತ್ರದಿಂದ ದೊರೆಯಬಹುದಾದ ಆತನ ಜ್ಞಾನವನ್ನು ಪಡೆಯುತ್ತಿದ್ದರೂ 'ನಾನು ತಿಳಿಯೆನು' ಎಂದು ಹೇಗೆ ಹೇಳುವನೋ, ಸಿದ್ಧಾಂತಿಯೂ ನಾನು ತಿಳಿಯೆನೆಂಬ ಅನುಭವವನ್ನು ಪ್ರತ್ಯಕ್ಷಜ್ಞಾನವು ಈಗ ಆಗಿರುವುದಿಲ್ಲವೆಂಬ ಅರ್ಥದಲ್ಲಿ ಮಾತ್ರ ಉಪಯೋಗಿಸು

ನಿರೋಧಿಸುವುದಿಲ್ಲವೆಂದು ಅದ್ವೈತಮತ), ನ ಜಾನಾಮಿ ಇತಿ ಯಥಾ–ನಾನು ತಿಳಿಯುವುದಿಲ್ಲವೆಂದು ಹೇಗೆ ನೀನು ತಿಳಿಯುವಿಯೋ, ತಥಾ–ಹಾಗೆ, ಪ್ರತ್ಯಕ್ಷವೃತ್ತ್ಯಭಾವೇಪಿ–ಬ್ರಹ್ಮಾಪರೋಕ್ಷಜ್ಞಾನಾಭಾವ ಮಾತ್ರದಲ್ಲಿ, ಮೇ–ನನಗೆ (ನನ್ನ ಸಿದ್ಧಾಂತದಲ್ಲಿ), ನ ಜಾನಾಮಿ ಇತಿ–ನಾನು ತಿಳಿಯುವುದಿಲ್ಲವೆಂಬುದೂ ಯುಕ್ತವಾಗುತ್ತದೆ.[1]

---

ತ್ತೇನೆ; (ಕಾಲಾಂತರದಲ್ಲಿ ಸಾಧನ ಪೂರ್ತಿಯಾದಾಗ ಆಗುವ ಬ್ರಹ್ಮದರ್ಶನವನ್ನು ಅದು ನಿರೋಧಿಸುವುದಿಲ್ಲ ; ಆತನ ಪೂರ್ಣಜ್ಞಾನವೂ ಆಗದೆ ಅಭಾವರೂಪದ ಅಜ್ಞಾನವು ಆಗಲೂ ಇರುತ್ತದೆ) (೧೧೨).

---

[1] ವಸ್ತುತಸ್ತು, ನನ್ನ ಮತಕ್ಕೇ ಲಾಘವವಿದೆ; ಬ್ರಹ್ಮವಿಷಯಕ ಜ್ಞಾನವು ಪರೋಕ್ಷವೆಂದೂ, ಅಪರೋಕ್ಷವೆಂದೂ ಎರಡು ವಿಧವು; ವೃತ್ತಿಜ್ಞಾನವು ಪರೋಕ್ಷವೆನಿಸುವುದು ; ಪ್ರತ್ಯಕ್ಷ ದರ್ಶನವು ಅಪರೋಕ್ಷವು; ಅದ್ವೈತಿಯು ಜ್ಞಾನಪದವನ್ನು ಸಂಕೋಚಗೊಳಿಸಿ ಅಪರೋಕ್ಷ ವಿಷಯದಲ್ಲಿ ಮಾತ್ರ ಪ್ರಯೋಗಿಸುತ್ತಾನೆ; (ಅಜ್ಞಾನವೆಂದರೆ ಅಪರೋಕ್ಷವನ್ನು ಮಾತ್ರ ನಿಷೇಧಿಸುವುದು; ಶಾಸ್ತ್ರಾಭ್ಯಾಸಜನ್ಯಜ್ಞಾನವನ್ನಲ್ಲವೆನ್ನುತ್ತಾನೆ) ; ನಾವಾದರೋ ಜ್ಞಾನಪದವನ್ನು ಪರೋಕ್ಷಜ್ಞಾನಮಾತ್ರದಿಂದ ಸಂಕೋಚಗೊಳಿಸಿ, ಅಜ್ಞಾನವು ಅದನ್ನು ಮಾತ್ರ ನಿರೋಧಿಸುತ್ತದೆನ್ನುತ್ತೇವೆ. ಘಟ ಪ್ರತ್ಯಕ್ಷವನ್ನು ನಿರೋಧಿಸುವ ಕತ್ತಲೆ (ಅಂಧಕಾರ) ಮುಂತಾದ ಆವರಕ ವಸ್ತುವಿನ ಶಕ್ತಿಯನ್ನು ಸಂಕೋಚಗೊಳಿಸಿ, (ಬ್ರಹ್ಮನಿಗಿರುತ್ತದೆಂಬ ಭಾವರೂಪ ಅಜ್ಞಾನಕ್ಕೆ) ಏಕದೇಶದಲ್ಲಿ ಮಾತ್ರ ಕಾರ್ಯಶಕ್ತಿಯನ್ನು ತಿಳಿಯುವಂತೆ, (ಬ್ರಹ್ಮನ ಪ್ರತ್ಯಕ್ಷಜ್ಞಾನವನ್ನು ನಿರೋಧಿಸಿ, ಪರೋಕ್ಷ (ಶಾಸ್ತ್ರಜನ್ಯ) ಜ್ಞಾನವನ್ನು ನಿರೋಧಿಸದಿರುವಂತೆ) ಆಗುತ್ತದೆ. ಎಂದರೆ, ಅದ್ವೈತಿಯು ಭಾವರೂಪ ಅಜ್ಞಾನದ ಪ್ರವೃತ್ತಿಯನ್ನೇ ಬಹು ಸಂಕೋಚಗೊಳಿಸುತ್ತಾನೆ; ನಾವು 'ಅಹಮಜ್ಞಃ' ಎಂದಾಗ ನಮ್ಮ ಅಭಾವರೂಪ ಅಜ್ಞಾನವು, ಪ್ರತ್ಯಕ್ಷವನ್ನು ಮಾತ್ರ ನಿಷೇಧಿಸುತ್ತದೆ; ಕತ್ತಲೆಯಂತಿರುವ ಭಾವರೂಪ ಅಜ್ಞಾನವು ಬ್ರಹ್ಮನನ್ನು ಮರೆಮಾಡಿ ಬ್ರಹ್ಮಜ್ಞಾನವನ್ನು ನಿರೋಧಿಸದಿರುವುದು, ದುರ್ಘಟವೇ ಸರಿ–ಕತ್ತಲೆಯು ಘಟವನ್ನು ಕಾಣದಂತೆ ಮಾಡಿ, ಅದರ ನೆರಳನ್ನು ಮಾತ್ರ ಮರೆಮಾಡುವುದಿಲ್ಲವೆಂಬಂತೆ, ಆಗುತ್ತದೆ; ಅಭಾವರೂಪ ಅಜ್ಞಾನವು ಪ್ರತ್ಯಕ್ಷವನ್ನು ನಿರೋಧಿಸುವುದಿಲ್ಲ; ಜೀವರಿಗೆ ಬ್ರಹ್ಮನ ಸಾಕ್ಷಾದ್ದರ್ಶನವಾದಮೇಲೂ, ಅವನ ವಿಶೇಷಜ್ಞಾನದ ಅಭಾವವು (ಯಥಾಯೋಗ್ಯವಾಗಿ ಜ್ಞಾನಾಭಾವರೂಪದ ಅಜ್ಞಾನವು) ಇದ್ದೇ ಇರುತ್ತದೆ. ಈ ಅಜ್ಞಾನವು ಈಗಲೂ ಬ್ರಹ್ಮದರ್ಶನವನ್ನು ನಿರೋಧಿಸುವುದಿಲ್ಲ; ಆದರೆ ಜೀವಸ್ವರೂಪವನ್ನು ಆಚ್ಛಾದಿಸುವ ವಸ್ತುಗಳು ಬೇರೆ ಇವೆ.

**ಅತೋ ಮಮ ಮತೇಽಜ್ಞಾನಜ್ಞಾನೇ ದೌರ್ಘಟ್ಯಮೇವ ನ ॥೧೧೩॥**

ಉಪಸಂಹರಿಸುತ್ತಾರೆ :—

ಅತಃ—ಆದ್ದರಿಂದ (ಬ್ರಹ್ಮನನ್ನು ತಿಳಿಯುವುದಿಲ್ಲ ಎಂಬಲ್ಲಿ ಪ್ರತಿಯೋಗಿಯಾದ ಪರೋಕ್ಷಜ್ಞಾನಾದಿಗಳನ್ನು ಅಂಗೀಕರಿಸಿ, ಅಪರೋಕ್ಷ ಜ್ಞಾನಮಾತ್ರದಿಂದ ಅದಕ್ಕೆ ಯಾವ ವಿರೋಧವೂ ಇಲ್ಲದ್ದರಿಂದ), ಮಮ ಮತೇ – ನನ್ನ ಮತದಲ್ಲಿ, ಅಜ್ಞಾನಜ್ಞಾನೇ – ಅಜ್ಞಾನವನ್ನು ತಿಳಿಯುವುದೆಂಬುದರ, ದೌರ್ಘಟ್ಯಂ—ದುರ್ಘಟತ್ವವು (ಕೂಡುವುದಿಲ್ಲವೆಂಬುದು), ನ ಏವ—ಇಲ್ಲವೇ ಇಲ್ಲ (ಅದಕ್ಕೆ ಅವಕಾಶವಿಲ್ಲ).

**ದೌರ್ಘಟ್ಯಮೇಕಂ ಭೂಷಾ ಚೇತ್ ಕಿಂ ನ ಸ್ಯಾದ್ಭೂಷಣಾಂತರಂ ।**
**ಪರಸ್ಯೋತ್ತರಮೇವಂ ಚ ಸ್ಯಾದಿತ್ಯೇವ ತದೀರಿತಂ ॥ ೧೧೪ ॥**

ಹೀಗಿದ್ದರೂ ಈ ದೌರ್ಘಟ್ಯವೂ ಇರಲಿ, ನಿನಗೇನು ತೊಂದರೆ ? ಬ್ರಹ್ಮನಲ್ಲಿ ಅವಿದ್ಯೆಯಿರಲು ದುರ್ಘಟವೆಂಬ ದೋಷವನ್ನು ಭೂಷಣವೆಂದೇ ಭಾವಿಸುವ ನಿನಗೆ ಅದರೊಂದಿಗೆ ಇನ್ನೊಂದು ದುರ್ಘಟತ್ವವೆಂಬ ಭೂಷಣವಿದ್ದರೆ ಏಕೆ ಬೇಡ ? ಎಂಬ ಭಾವದಿಂದ ಈ ಹಿಂದೆ ಹೇಳಿದ್ದಲ್ಲದೆ ಸ್ವಮತ ರೀತಿಯಿಂದ ದುರ್ಘಟವೆಂದು ಒಪ್ಪಿ ಹೇಳಿದ್ದಲ್ಲವೆನ್ನುತ್ತಾರೆ :—

ಏಕಂ—ಒಂದು, ದೌರ್ಘಟ್ಯಂ – ದುರ್ಘಟತ್ವವು, ಭೂಷಾ ಚೇತ್—ಭೂಷಣವಾದರೆ (ನಿನಗೆ ಅಲಂಕಾರವೇ ಆಗುವುದಾದರೆ), ಭೂಷಣಾಂತರಂ—ಮತ್ತೊಂದು ಭೂಷಣವು, ಕಿಂ ನ ಸ್ಯಾತ್—ಏಕೆ ಆಗಬಾರದು ? ಪರಸ್ಯ—ಪರನಿಗೆ, ಏವಂ—ಹೀಗೆ, ಉತ್ತರಂ ಸ್ಯಾತ್—ಉತ್ತರವಾಗಲಿ, ಇತ್ಯೇವ—ಹೀಗೆಂದೇ,

---

'ಅಹಂ ನ ಜಾನಾಮಿ' ಎಂಬಲ್ಲಿನ ಅಜ್ಞಾನದ ಪ್ರತಿಯೋಗಿಯು (ನಿಷೇಧ್ಯ ಪದಾರ್ಥವು) ಕೇವಲ ಅಪರೋಕ್ಷಜ್ಞಾನ ಮಾತ್ರವಾದ್ದರಿಂದ ನನ್ನ (ಸಿದ್ಧಾಂತಿಯ) ಮತದಲ್ಲಿ ಅಜ್ಞಾನದ ಜ್ಞಾನವು ದುರ್ಘಟವೆಂಬುದು (ಬ್ರಹ್ಮನಲ್ಲಿ ಹೇಗೆ ಅವಿದ್ಯೆಯು ದುರ್ಘಟವೋ ಹಾಗೆ) ಇಲ್ಲ—ಸುಘಟವೇ ಆಗಿದೆ (೧೧೩). ಈ ಹಿಂದೆ ಜ್ಞಾನಾಭಾವದ ಜ್ಞಾನದ ದುರ್ಘಟತ್ವವನ್ನು ಅಂಗೀಕರಿಸಿ, ಬ್ರಹ್ಮನಲ್ಲಿ ಅವಿದ್ಯೆಯು ದುರ್ಘಟವೆಂದಾದರೂ ಅದು ತನ್ನ ಮತಕ್ಕೆ ಭೂಷಣವಲ್ಲದೇ ದೂಷಣವಲ್ಲವೆಂದು ಮಾಯಾವಾದಿಯು ಹೇಳುವುದರಿಂದ,

ತದೀರಿತಂ—(ಹಿಂದೆ ಎರಡು ಕುಂಡಲಗಳನ್ನಿಟ್ಟು ಶೋಭಿಸೆಂದು) ಈ ದುರ್ಘ-ಟತ್ವವನ್ನು ಅಂಗೀಕರಿಸಿ ಹೇಳಿದುದು.

**ಪರಾಸಿನಾತಿಕ್ರೂರೇಣ ಯಾ ಹ್ಯವಿದ್ಯಾ ಕ್ಷತಾಪಿ ನ ।**
**ಯತೋ ಬ್ರಹ್ಮಚಿತಾ ನಾಶೋ ನಾಜ್ಞಾನಸ್ಯ ಭವನ್ಮತೇ ॥ ೧೧೫ ॥**
**ಸ್ವಸಂತಾನಾಸಿನಾ ಮಂದಧಾರೇಣ ಛಿದ್ಯತೇ ಕಿಲ ।**
**ಆವಿದ್ಯಕಮನೋರೂಪವಿದ್ಯಯಾ ನಾಶಕೀರ್ತನಾತ್ ॥ ೧೧೬ ॥**

ಬ್ರಹ್ಮಸ್ವರೂಪಜ್ಞಾನವು ಅಜ್ಞಾನ ನಾಶಕವಲ್ಲ, ಕಿಂತು ಮನೋವೃತ್ತಿರೂಪವಾದ ಜ್ಞಾನವೇ ಜ್ಞಾನ ನಾಶಕವು ಎಂದು ನೀನು ಹೇಳುವುದೂ ಸರಿಯಲ್ಲವೆನ್ನುತ್ತಾರೆ :—

ಯಾ—ಯಾವ, ಅವಿದ್ಯಾ—ಅವಿದ್ಯೆಯು (ಅನಾದ್ಯನಂತವಾದ ಭ್ರಮ ಪ್ರಮಾದಾದಿ ದೋಷರೂಪ ಅವಿದ್ಯೆಯು), ಅತಿಕ್ರೂರೇಣ – ಅತ್ಯುಗ್ರವಾದ (ಹರಿತವಾದ), ಪರಾಸಿನಾ – ಪರಮಾತ್ಮಸ್ವರೂಪಭೂತ ಜ್ಞಾನಖಡ್ಗದಿಂದ, ಕ್ಷತಾಪಿ ನ—ಗಾಯವೂ ಸಹ ಹೊಂದುವುದಿಲ್ಲವೋ, ಯತಃ—ಯಾವ ಕಾರಣ ದಿಂದ, ಭವನ್ಮತೇ—ನಿನ್ನ ಮತದಲ್ಲಿ, ಬ್ರಹ್ಮಚಿತಾ—ಬ್ರಹ್ಮಸ್ವರೂಪಜ್ಞಾನದಿಂದ, ಅಜ್ಞಾನಸ್ಯ – ಅಜ್ಞಾನದ, ನಾಶಃ – ನಾಶವು, ನ—ಇಲ್ಲವೋ (ನಾಶವಾಗು ವುದಂತಿರಲಿ—ಅಲ್ಪಘಾತವೂ ಆಗುವುದಿಲ್ಲವೋ), ಸಾ ಅವಿದ್ಯಾ—ಆ ಅವಿದ್ಯೆಯು, ಆವಿದ್ಯಕಮನೋರೂಪವಿದ್ಯಯಾ—ಅವಿದ್ಯೆಯಿಂದಲೇ ಜನಿಸಿದ ಮನೋವೃತ್ತಿ

---

ಇದೂ ದುರ್ಘಟವಾದುದನ್ನು ಒಪ್ಪಿ ಭೂಷಣವೆಂದು ಅಂಗೀಕರಿಸೆಂದು ಹೇಳಿದ್ದಾಯಿತು; ಆದರೆ ದುರ್ಘಟವೆಂದು ಆ ಮಾತನ್ನು ಹೇಳಿದ್ದಲ್ಲ (೧೧೪). ಮಾಯಾವಾದಿಯು, ಬ್ರಹ್ಮಸ್ವರೂಪಜ್ಞಾನವು ಅಜ್ಞಾನನಾಶಕವಲ್ಲ; ಆದರೆ ಮನೋವೃತ್ತಿಜ್ಞಾನವೇ ನಾಶಕವೆಂದು ಹೇಳುವ ಪ್ರಮೇಯವು ಅತ್ಯಂತ ಅಸಂಭಾವಿತವು; ಶತ್ರುಗಳ ತೀಕ್ಷ್ಣಗಳಾದ ಶಸ್ತ್ರದಿಂದ ಅಪ್ರತಿಹತನಾದ ರಾಜನು, ಮನೆಯಲ್ಲಿ ತನ್ನ ಪುತ್ರನ ಕೈಲಿದ್ದ ಮೊಂಡಾದ (ಆಟದ) ಖಡ್ಗದಿಂದ ಮೃತನಾದನೆಂಬುದರಂತೆ, ನಿಶಿತವಾದ ಖಡ್ಗದಂತಿರುವ ಬ್ರಹ್ಮಸ್ವರೂಪಜ್ಞಾನ ದಿಂದ ಪರಿಹಾರವಾಗದ ಅಜ್ಞಾನವು, ವೃತ್ತಿಜ್ಞಾನದಿಂದ (ಅವಿದ್ಯೆಯ ಸಂತಾನ ವಾದ—ಅದರಿಂದಲೇ ಹುಟ್ಟಿದ ಜ್ಞಾನದಿಂದ) ತೊಲಗುವುದೆಂಬುದು ಅತ್ಯಂತ

ರೂಪಜ್ಞಾನದಿಂದ, ನಾಶಕೀರ್ತನಾತ್ – ನಷ್ಟವಾಗುವುದೆಂದು ಹೇಳುವುದರಿಂದ, ಸ್ವಸಂತಾನಾಸಿನಾ–ತನ್ನ ಪುತ್ರನಂತಿರುವ (ಅವಿದ್ಯೆಯಿಂದಲೇ ಹುಟ್ಟಿದ) ವೃತ್ತಿಜ್ಞಾನವೆಂಬ ಖಡ್ಗದಿಂದ, ಮಂದಧಾರೇಣ–ಮೊಂಡಾದ ತುದಿಯುಳ್ಳದ್ದರಿಂದ, ಛಿದ್ಯತೇ ಕಿಲ–ಕತ್ತರಿಸಲ್ಪಡುವುದೇ ? (ಸರ್ವಥಾ ಶಕ್ಯವಿಲ್ಲ).[1]

**ಮನಸೋಽಪಿ ಹಿ ಚಿದ್ಯೋಗಾಚ್ಛಕ್ತಿರರ್ಥಪ್ರಕಾಶನೇ ।**
**ಅಜ್ಞಾನನಾಶನೇ ಚ ಸ್ಯಾಚ್ಛಕ್ತಿಸ್ತದ್ಯೋಗತಃ ಪರಂ ॥ ೧೧೭ ॥**

ಈ ಪ್ರಕ್ರಿಯೆಯು ಮಾಯಾವಾದಿಯ ಅನ್ಯಪ್ರಕ್ರಿಯೆಯನ್ನು ವಿರೋಧಿಸುವುದೆನ್ನುತ್ತಾರೆ :—

ಮನಸಃ – ಮನಸ್ಸಿಗೆ, ಅರ್ಥಪ್ರಕಾಶನೇ–ವಸ್ತುಜ್ಞಾನವುಂಟುಮಾಡುವುದರಲ್ಲಿ, ಚಿದ್ಯೋಗಾತ್–ಚೇತನಸಂಬಂಧದಿಂದಲೇ, ಶಕ್ತಿಃ–ಸಾಮರ್ಥ್ಯವು (ಉಂಟಾಗುತ್ತದೆ); (ಅಜ್ಞಾನ ನಾಶನದಲ್ಲಿ ಸಹ ಚೇತನನ–ಸ್ವರೂಪಜ್ಞಾನದ, ಸಂಬಂಧವೇ ಅವಶ್ಯಕವು); ಪರಂ–ಕೇವಲ, ತದ್ಯೋಗತಃ–ಸ್ವರೂಪಜ್ಞಾನ ಸಂಬಂಧದಿಂದಲೇ, ಅಜ್ಞಾನನಾಶನೇ ಚ–ಅಜ್ಞಾನವನ್ನು ನಾಶಮಾಡುವುದ

---

ಅಸಂಭಾವಿತವೇ ಸರಿ (೧೧೫–೧೧೬), ಮನಸ್ಸು ವಸ್ತುಗಳನ್ನು ಗ್ರಹಿಸುವುದಕ್ಕೆ ಸಹ, ಚೇತನದ (ಸ್ವರೂಪಜ್ಞಾನದ) ಸಂಬಂಧವನ್ನು ಹೊಂದಿರಬೇಕೆಂಬ ಪ್ರಕ್ರಿಯೆಯು ಮಾಯಾವಾದಿಗೂ ಸಮ್ಮತವೇ ಆಗಿರುತ್ತದೆ; ಆದ್ದರಿಂದ ಅಜ್ಞಾನವನ್ನು ನಾಶಮಾಡಲು, ಕೇವಲ ವೃತ್ತಿಜ್ಞಾನವು ಸಮರ್ಥವಾಗುತ್ತದೆಂದು ತಿಳಿಯುವುದು ಅಸಂಭಾವಿತವು; ಅಜ್ಞಾನನಾಶಕ್ಕಾದರೂ

---

[1] ವೈರಿಯ ಶಸ್ತ್ರದಿಂದ ಅಪ್ರತಿಹತನಾದ ರಾಜನು, ತನ್ನ ಮಗನ ಕೈಲಿರುವ ಮೊಂಡುತುದಿಯುಳ್ಳ ಖಡ್ಗದಿಂದ ಮೃತನಾದನೆಂಬುದು ಹೇಗೆ ಅಸಂಭಾವಿತವೋ, ಹಾಗೆ ಬ್ರಹ್ಮಸ್ವರೂಪಜ್ಞಾನದಿಂದ ದೂರವಾಗದ (ನಾಶಹೊಂದದ) ಬ್ರಹ್ಮನನ್ನು ಆಚ್ಛಾದಿಸಿರುವ ಭಾವರೂಪ ಅಜ್ಞಾನವು, ವೃತ್ತಿಜ್ಞಾನಮಾತ್ರದಿಂದ (ಪರೋಕ್ಷಜ್ಞಾನಮಾತ್ರದಿಂದ) ನಾಶಹೊಂದಿ, ಜೀವನಿಗೆ ಐಕ್ಯಜ್ಞಾನವಾಗುವುದೆಂಬುದು, ತೀರಾ ಅಸಂಭಾವಿತವು; ಮತ್ತು 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ—' ಎಂಬ ಸ್ಮೃತಿಯಲ್ಲಿ 'ಅವಿದ್ಯೆಯನ್ನು ಚೇತನಶಕ್ತಿಯಿಂದ (ಸ್ವರೂಪಜ್ಞಾನದಿಂದ) ತೊಡೆದುಹಾಕಿ' ಇತ್ಯಾದಿ ಹೇಳುವುದಕ್ಕೆ ಈ ಮಾಯಿಪ್ರಮೇಯವು ವಿರುದ್ಧವಾಗಿದೆ; ಇದೂ ಅಲ್ಲದೇ ಯುಕ್ತಿವಿರುದ್ಧವೂ ಆಗಿದೆ.

ರಲ್ಲಿಯೂ, ಶಕ್ತಿಃ–ಸಾಮರ್ಥ್ಯವು, ಸ್ಯಾತ್–ಉಂಟಾಗಬೇಕಲ್ಲವೇ ? (ನಿನ್ನ ಮತದಂತೆ ಸಹ ಅವಶ್ಯಕವು).

**ನ ಚೇದ್ಘಟಾದಿತುಲ್ಯಸ್ಯ ಜಡಸ್ಯ ದ್ವಿತಯಂ ಚ ನ ।**
**ಭೂತಾವಿಷ್ಟಾಚ್ಚ ಭೀತಸ್ಯ ಭೂತಾತ್ಕಥಮಭೀತತಾ ॥ ೧೧೮ ॥**

ನ ಚೇತ್–ಚೇತನಾವಿಷ್ಟತ್ವವು ಮನಸ್ಸಿಗೆ ಇಲ್ಲದಿದ್ದರೆ (ಮನಸ್ಸಿನಲ್ಲಿ ಚೇತನದ ಆವೇಶವಿಲ್ಲದಿದ್ದರೆ), ಘಟಾದಿತುಲ್ಯಸ್ಯ–ಘಟಸದೃಶವಾದ, ಜಡಸ್ಯ–ಜಡಮನಸ್ಸಿಗೆ, ದ್ವಿತಯಂ ಚ–ವಸ್ತುಪ್ರಕಾಶ ಶಕ್ತಿ ಮತ್ತು ಅಜ್ಞಾನನಾಶಕತ್ವಗಳೆಂಬೆರಡು ಶಕ್ತಿಗಳು, ನ ಚ–ಇಲ್ಲವೇ ಇಲ್ಲ; ಭೂತಾವಿಷ್ಟಾತ್–ಪಿಶಾಚಾವೇಶವುಳ್ಳ ಕಾರಣ, ಭೀತಸ್ಯ–ಹೆದರುವವನಿಗೆ, ಭೂತಾತ್–(ಸ್ವಯಂ) ಪಿಶಾಚದಿಂದ, ಕಥಂ–ಹೇಗೆ, ಅಭೀತತಾ–ನಿರ್ಭಯವು ? (ಭಯರಹಿತನಾಗಿರುವುದು ಶಕ್ಯವಿಲ್ಲ) (ಚೇತನಾವಿಷ್ಟ ಮನಸ್ಸು ಅಜ್ಞಾನವನ್ನು ನಾಶಮಾಡಲು ಸಮರ್ಥವಾದರೆ, ತನ್ನನ್ನು ಸೇವಿಸುವವರಿಗೆ ಯಥಾಯೋಗ್ಯವಾದ ಸರ್ವಜ್ಞತ್ವವನ್ನೇ ಅನುಗ್ರಹಿಸುವ ಜ್ಞಾನಸ್ವರೂಪನಾದ ಬ್ರಹ್ಮನಿಗೆ ಅಜ್ಞಾನ ನಾಶಕಶಕ್ತಿ ಇಲ್ಲವೆಂಬುದು ಸುತರಾಂ ಯುಕ್ತವಲ್ಲ).

---

ಚೇತನಜ್ಞಾನದ ಸಂಬಂಧವು ಅವಶ್ಯಕವೇ ಸರಿ (೧೧೭). ಬ್ರಹ್ಮಸ್ವರೂಪಜ್ಞಾನವು ಅಜ್ಞಾನನಾಶಕವಲ್ಲದಿದ್ದರೆ, ವೃತ್ತಿಜ್ಞಾನವು (ಶಾಸ್ತ್ರಜನ್ಯಬ್ರಹ್ಮಜ್ಞಾನವು) ಅಜ್ಞಾನವನ್ನು ಪರಿಹರಿಸಬಲ್ಲದೆಂಬ ಪ್ರಕ್ರಿಯೆಯು ಕೇವಲ ಆಯುಕ್ತವು; ವಸ್ತುಜ್ಞಾನವನ್ನುಂಟುಮಾಡುವ ಶಕ್ತಿಯೂ, ಅಜ್ಞಾನವನ್ನು ನಾಶಮಾಡುವ ಶಕ್ತಿಯೂ, ಘಟಾದಿ ಜಡವಸ್ತುಸದೃಶವಾದ ಮನಸ್ಸಿಗೆ ಸ್ವಾಭಾವಿಕವಾಗಿ ಇಲ್ಲವೇ ಇಲ್ಲ; ಮನಸ್ಸಿನಲ್ಲಿ ಆವಿಷ್ಟವಾದ (ಪ್ರವೇಶಿಸಿದ–ಸಂಬಂಧವುಳ್ಳ) ಚೇತನಸಾಮರ್ಥ್ಯದಿಂದಲೇ ಈ ಉಭಯಶಕ್ತಿಗಳೂ ಮನಸ್ಸಿಗೆ ಉಂಟಾಗುತ್ತವೆ; ಹೀಗಿರಲು, ವೃತ್ತಿಜ್ಞಾನದಿಂದ ಅಜ್ಞಾನ ನಾಶವಾಗುತ್ತದೆಂಬ ಪ್ರಕ್ರಿಯೆಯು, ಪಿಶಾಚಾವಿಷ್ಟನನ್ನು ಕಂಡು ಹೆದರುವ ಮನುಷ್ಯನು, ಪಿಶಾಚಿಯನ್ನೇ ಕಂಡರೆ ಹೆದರುವುದಿಲ್ಲವೆಂದಂತೆ ಆಗುತ್ತದೆ; ಬ್ರಹ್ಮಜ್ಞಾನದಿಂದ ಪರಿಹಾರವಾಗದ ಅಜ್ಞಾನವು ಶಾಸ್ತ್ರಜ್ಞಾನದಿಂದ (ವೃತ್ತಿಜ್ಞಾನದಿಂದ–ಮಾನಸಜ್ಞಾನದಿಂದ) ಎಂದಿಗೂ ಪರಿಹಾರವಾಗಲಾರದು (೧೧೮).

**ಸಿದ್ಧಂ ಪಶ್ಯತಿ ಚೇದ್ಬ್ರಹ್ಮ ಜಗನ್ನಭ್ರಮಜಂ ತವ ।**
**ಕಲ್ಪಯಿತ್ವೈವ ಪಶ್ಯೇಚ್ಚೇತ್ಸರ್ವಂ ಸ್ಯಾತ್ಸಾರ್ವಕಾಲಿಕಂ ।**
**ಆಮುಕ್ತೇಃ ಕಲ್ಪಕಾಜ್ಞಾನಬ್ರಹ್ಮಚೈತನ್ಯಯೋಃ ಸ್ಥಿತೇಃ ॥ ೧೧೯ ॥**

**ಅತೋ ದೈನಂದಿನಲಯಃ ಕಲ್ಪಾಂತಪ್ರಲಯೋಽಪಿ ವಾ ।**
**ಕಥಂ ಸ್ಯಾತ್ತಸ್ಯ ನಿತ್ಯಸ್ಯ ದರ್ಶನಸ್ಯ ನ ಹಿ ಕ್ಷಯಃ ॥ ೧೨೦ ॥**

ಬ್ರಹ್ಮನ ಅಜ್ಞಾನವು ಪರಿಹಾರವಾಗಿ, ಅಜ್ಞಾನದಿಂದಲೇ ಉಂಟಾಗಿರುವುದೆಂಬ ಜಗದ್ಭ್ರಾಂತಿಯೆಂಬ ದೋಷವನ್ನು ಬೇರೆ ಯುಕ್ತಿಯಿಂದ ಸಹ ಪರಿಹರಿಸಬಹುದೆನ್ನುತ್ತಾರೆ :—

ತವ—ನಿನ್ನ ಮತದಂತೆ, ಬ್ರಹ್ಮ—ಬ್ರಹ್ಮನು, ಸಿದ್ಧಂ—ಸಿದ್ಧವಾಗಿರುವ ಜಗತ್ತನ್ನು, ಪಶ್ಯತಿ ಚೇತ್—ನೋಡುತ್ತಾನೆಂದರೆ, ಜಗತ್—ಜಗತ್ತು, ನ ಭ್ರಮಜಂ—ಬ್ರಹ್ಮನಿಗುಂಟಾದ ಭ್ರಮೆಯಿಂದ ಕಲ್ಪಿತವಾದುದಲ್ಲ; ಕಲ್ಪಯಿತ್ವಾ ಏವ—(ಜಗತ್ತನ್ನು) ಕಲ್ಪಿಸಿಯೇ, ಪಶ್ಯೇತ್ ಚೇತ್—ನೋಡುತ್ತಾನೆಂದರೆ, ಸರ್ವಂ—ಜಗದಾದಿ ಸಕಲ ವಸ್ತುಗಳೂ, ಸಾರ್ವಕಾಲಿಕಂ—ಎಲ್ಲ

---

ಬ್ರಹ್ಮನಿಗೆ ಅವಿದ್ಯಾಸಂಬಂಧವು ದುರ್ಘಟವೆಂದೂ, ಅದರಿಂದ ಉಂಟಾದ ಭ್ರಮೆಯಲ್ಲಿ ಈ ಜಗತ್ತು ತೋರುವುದು, ಕಲ್ಪಿತವೆಂದೂ ಬಹು ಯುಕ್ತಿಗಳಿಂದ ಈ ಮೊದಲು ಸಾಧಿಸಲಾಯಿತು; ಬ್ರಹ್ಮನು ಸಿದ್ಧವಾದ ಜಗತ್ತನ್ನು ನೋಡುತ್ತಾನೆಂದರೆ ಅದು ಭ್ರಮಜನ್ಯವೆಂದಾಗುವುದಿಲ್ಲ; ಅಜ್ಞಾನವೇ ಕಾರಣವಾಗಿವುಳ್ಳ ಭ್ರಮೆಯಿಂದ ಕಲ್ಪಿತವಾದುದನ್ನು ನೋಡುತ್ತಾನೆಂದರೆ ಬ್ರಹ್ಮಕಲ್ಪಿತವೆಲ್ಲವೂ ಸಾರ್ವಕಾಲಿಕ (ನಿತ್ಯ) ವಾಗಬೇಕು; ಭ್ರಮದ ಪರಿಹಾರವು ಅದಕ್ಕೆ ಕಾರಣವಾದ ಅಜ್ಞಾನನಾಶದಿಂದ ಆಗಬೇಕು; ಮುಕ್ತಿಪರ್ಯಂತ ಈ ಜಗತ್ತು ಇದೆ—ಅಜ್ಞಾನವೂ ಇದೆ; ನಿತ್ಯನಾದ ಬ್ರಹ್ಮನೂ ಇದ್ದಾನೆ; ಭ್ರಮಪರಿಹಾರವಾಗದೇ ಜಗತ್ತು ನಾಶವಾಗುವಂತಿಲ್ಲ; ಭ್ರಮ ಪರಿಹಾರಕ್ಕೆ ಕಾರಣವಾದ ದೋಷವು ತೊಲಗಿ ಬಾಧಜ್ಞಾನವುಂಟಾಗಬೇಕಷ್ಟೆ! ಶಾಸ್ತ್ರಗಳಾದರೋ ಚತುರ್ಮುಖನ ಪ್ರತಿದಿನದಲ್ಲಿಯೂ, ಬ್ರಹ್ಮಕಲ್ಪದ ಕೊನೆಯಲ್ಲಿಯೂ ಪ್ರಲಯಗಳಾಗಿ, ಈ ಜಗತ್ತು ನಷ್ಟವಾಗಿ ಪುನಃ ಉತ್ಪನ್ನವಾಗುತ್ತದೆಂದು ಹೇಳುತ್ತವೆ; ಬ್ರಹ್ಮಚೇತನವೂ ಅಜ್ಞಾನವೂ ನಿತ್ಯವೇ ಆದ್ದರಿಂದ

ಕಾಲದಲ್ಲಿ ಇರತಕ್ಕದ್ದು, ಸ್ಯಾತ್—ಆಗಬೇಕು; ಕಲ್ಪಕಾಜ್ಞಾನಬ್ರಹ್ಮಚೈತನ್ಯ-ಯೋಃ—ಜಗತ್ತನ್ನು ಕಲ್ಪಿಸಲು ಕಾರಣವಾದ ಅಜ್ಞಾನವೂ ಬ್ರಹ್ಮನೂ ಉಭಯಕ್ಕೂ, ಆಮುಕ್ತೇಃ—ಮುಕ್ತಿಪರ್ಯಂತ, ಸ್ಥಿತೇಃ—ಸ್ಥಿತಿಯುಂಟಾದ್ದರಿಂದ (ಇರುತ್ತವೆಯಾದ್ದರಿಂದ); ಅತಃ—ಈ ಕಾರಣದಿಂದಲೂ, ದೈನಂದಿನ ಲಯಃ—ಬ್ರಹ್ಮದೇವನ ದಿನಪ್ರಲಯವೂ, ಕಲ್ಪಾಂತಪ್ರಲಯಃ ಅಪಿ ವಾ—(ಬ್ರಹ್ಮನ ೧೦೦ ವರ್ಷಗಳ ನಂತರ) ಬ್ರಹ್ಮಕಲ್ಪದ ಕೊನೆಯಲ್ಲಿ ಸಂಭವಿಸುವ ಪ್ರಲಯವಾಗಲಿ, ಕಥಂ—ಹೇಗೆ, ಸ್ಯಾತ್—ಸಂಭವಿಸುತ್ತದೆ? (ಸಂಭವಿಸುವ ಅವಕಾಶವೇ ಇಲ್ಲ); ತಸ್ಯ ನಿತ್ಯಸ್ಯ—(ಬ್ರಹ್ಮನು ನಿತ್ಯನಾದ್ದರಿಂದಲೂ, ಅಜ್ಞಾನಸಂಬಂಧವು ನಿತ್ಯವಾದ್ದರಿಂದಲೂ) ನಿತ್ಯನ, ದರ್ಶನಸ್ಯ—ಭ್ರಮಾತ್ಮಕ ಜಗತ್ತಿನ ದರ್ಶನಕ್ಕೆ, ನ ಹಿ ಕ್ಷಯಃ—ನಾಶವಿಲ್ಲವೆಂದೇ ಪ್ರಾಪ್ತವಾಗುತ್ತದೆ (ನಿತ್ಯನಿಗೂ ಆತನ ದರ್ಶನಶಕ್ತಿಗೂ ಎಂದೂ ಕ್ಷಯವಿಲ್ಲ—ಪ್ರಲಯಕ್ಕೇ ಅವಕಾಶವಿಲ್ಲ).

**ಭ್ರಮಕಲ್ಪ್ಯಂ ಹಿ ಸರ್ವಂ ತೇ ಕಾಲಾದೃಷ್ಟಾದಿಕಂ ಜಗತ್ ।**
**ಭ್ರಮಸ್ಯ ನಿತ್ಯಸಿದ್ಧತ್ವಾತ್ ಕಿಂ ಕಿಂ ನ ಸ್ಯಾತ್ಸದಾ ತವ ॥ ೧೨೦ ॥**

ಕಾಲ, ಅದೃಷ್ಟ ಮೊದಲಾದ ಸಾಧಾರಣ ಕಾರಣಗಳು ಇಲ್ಲದ್ದರಿಂದ ಜಗದ್ಭ್ರಮೆಯು ನಿತ್ಯವಲ್ಲವೆಂಬ ಸಂಶಯವನ್ನು ಪರಿಹರಿಸುತ್ತಾರೆ :—

---

ಯಾವ ಪ್ರಕಾರದ ಜಗಲ್ಲಯಕ್ಕೂ ಅವಕಾಶವಿಲ್ಲ—ಪುನಃ ಸೃಷ್ಟಿಗೂ ಕಾರಣವಿಲ್ಲೆಂದೂ ಸಿದ್ಧವಾಗುತ್ತದೆ; ನಿತ್ಯಸ್ವರೂಪನಾದ ಬ್ರಹ್ಮನ ದರ್ಶನಶಕ್ತಿಯು (ಜಗತ್ತಿನ ದರ್ಶನವು) ನಾಶ ಹೊಂದುವುದೇ ಇಲ್ಲವಲ್ಲ! (೧೧೯-೧೨೦). ಹೀಗೆ ಭ್ರಮಕಲ್ಪಿತ ಜಗತ್ತಿಗೆ ಸಾಮಾನ್ಯ ಕಾರಣಗಳೆಂಬ ಕಾಲ, ಅದೃಷ್ಟಾದಿಗಳಿರುವುದರಿಂದ ಭ್ರಮೆಯು ನಾಶವಾಗಿ ಪ್ರಲಯವು ಸಂಭವಿಸಲು ಯಾವ ತೊಂದರೆಯೂ ಇಲ್ಲವೆಂಬ ವಾದವೂ ಯುಕ್ತವಲ್ಲ; ಕಾಲ ಅದೃಷ್ಟಾದಿ ಸಕಲ ಬ್ರಹ್ಮೇತರ ಜಗತ್ತೂ ಭ್ರಮಕಲ್ಪಿತವೆಂದು ಮಾಯಾಮತದ ಪ್ರಕ್ರಿಯೆ ಆಗಿರುವುದರಿಂದ, ಭ್ರಮೆಯ ನಿರಾಸವಾದರೆ ಕಾಲಾದಿಗಳೂ ನಷ್ಟವಾಗಬೇಕಲ್ಲದೇ ಇರುವಂತಿಲ್ಲ—ಆದ್ದರಿಂದಲೂ ಲಯವು ಅಸಂಭಾವಿತವಾಗುತ್ತದೆ; ಮಾಯಾಮತದಲ್ಲಿ ನಿತ್ಯವಾದ ವಸ್ತುಗಳು ಯಾವುಯಾವುವಿವೆ? (ಎಲ್ಲವೂ

ತೇ–ನಿನ್ನ ಮತದಲ್ಲಿ, ಕಾಲಾದೃಷ್ಟಾದ್ಯೈದಿಕಂ – ಕಾಲ, ಅದೃಷ್ಟಾದಿಗಳಿಂದ ಸಹಿತವಾದ, ಸರ್ವಂ ಜಗತ್–ಸಮಸ್ತ ಜಗತ್ತು, ಭ್ರಮಕಲ್ಪ್ಯಂ ಹಿ –ಭ್ರಮೆಯಿಂದ ಕಲ್ಪಿತವಾದುದೇ ಸರಿ (ಮಾಯಾಮತದಂತೆ ಬ್ರಹ್ಮೇತರ ಸರ್ವವೂ ಭ್ರಮಕಲ್ಪಿತವು; ಭ್ರಮವಾದರೋ ನಿತ್ಯವಾದುದು); ಭ್ರಮಸ್ಯ –ಬ್ರಹ್ಮನಿಗೆ (ಜೀವಭಾವದ ಬ್ರಹ್ಮನಿಗೆ) ಉಂಟಾಗಿರುವ ಭ್ರಮೆಗೆ, ನಿತ್ಯ ಸಿದ್ಧತ್ವಾತ್–ನಿತ್ಯತ್ವವು (ಸಾರ್ವಕಾಲಿಕತ್ವವು) ಸಿದ್ಧವಾದುದರಿಂದ, ತವ– ನಿನ್ನ ಮತದಂತೆ (ನಿನಗೆ), ಕಿಂ ಕಿಂ–ಯಾವಯಾವದು, ಸದಾ–ಸರ್ವದಾ, ನ ಸ್ಯಾತ್–ಇರುವುವಾಗುವುದಿಲ್ಲ? (ಎಲ್ಲವೂ ಸರ್ವದಾ ಇರುತ್ತವೆ); (ಆದ್ದರಿಂದ ಸಾಮಾನ್ಯ ಕಾರಣಗಳಿರುವುದರಿಂದಲೂ ಜಗತ್ತಿನ ಭ್ರಮೆಯು ನಿತ್ಯವೆಂದೇ ಪ್ರಾಪ್ತವಾಗುತ್ತದೆ).

**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ ।**
**ಗೌರಿಯಂ ವಾಕ್ ಶುನೀ ನೇಯಂ ಪುಚ್ಛಂ ತಸ್ಯಾ ವಿಚಾರಯ ।**
**ಯತಃ ಪ್ರಕೃತಿರೇವೈಷಾ ಮಾಯಾಪುಚ್ಛೇತ್ರ ಗೀಯತೇ ॥ ೨೨ ॥**

'ಮಾಯಿನಂ ತು ಮಹೇಶ್ವರಂ' ಎಂಬ ಶ್ರುತಿಯಿಂದ ಬ್ರಹ್ಮನಲ್ಲಿ ಮಾಯೆಯು ಇರುವುದೆಂದು ತಿಳಿಯಬರುವುದರಿಂದ ಈ ಎಲ್ಲವನ್ನು (ಪ್ರಕ್ರಿಯೆಯನ್ನು) ಕಲ್ಪಿಸುತ್ತೇವೆಂದರೆ, ಉಪಹಾಸದಿಂದ, ಅದನ್ನು ನಿರಾಕರಿಸುತ್ತಾರೆ:

ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ– ಪ್ರಕೃತಿಯನ್ನೇ ಮಾಯೆಯೆಂದು ತಿಳಿಯಬೇಕು; ಮಹೇಶ್ವರನನ್ನು (ಬ್ರಹ್ಮ

---

ಭ್ರಮಕಲ್ಪಿತವೇ ಆಗಿದೆ); ಚೇತನಸ್ವರೂಪವೂ ನಿತ್ಯ–ಬಂಧಿಸಿರುವ (ಭಾವರೂಪ) ಅಜ್ಞಾನವೂ ಅಪರಿಹಾರ್ಯವಾಗಿದೆ (ಹಿಂದಿನ ಶ್ಲೋಕಗಳನ್ನು ನೋಡಿರಿ); ಅತ ಏವ ಭ್ರಮವೂ ನಿತ್ಯ (೧-೨೧). 'ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ' ಎಂಬ ಶ್ರುತಿವಾಕ್ಯವು, ಪ್ರಕೃತಿಯೇ ಮಾಯವು, ಮಹೇಶ್ವರನೇ (ಪರಮಾತ್ಮನೇ) ಮಾಯಿಯು ಎಂದು ಹೇಳುವುದರಿಂದ ಬ್ರಹ್ಮನಲ್ಲಿ ಮಾಯೆಯಿರುವುದೆಂಬುದನ್ನು ಸಮರ್ಥಿಸುತ್ತದೆಂದು ಅದ್ವೈತಿಗಳು ತಿಳಿಯುತ್ತಾರೆ; ಆದರೆ, ಇದು ಅಧಿಕ ಕ್ಷೀರವನ್ನು ಕೊಡುವ ಗೋವಲ್ಲದೇ ಕಚ್ಚಿ ಗಾಯವನ್ನುಂಟುಮಾಡುವ ಶ್ವಾನವಲ್ಲ;

ನನ್ನು) ಮಾಯೀ (ಮಾಯೆಯುಳ್ಳವನು) ಎಂದು ತಿಳಿಯಬೇಕು; ಇಯಂ–ಹೀಗಿರುವ, ವಾಕ್–ವೇದವಾಕ್ಯವು, ಗೌಃ–ಗೃಷ್ಟಿಯು[1] (ತರುಣಗೋವು—ಒಮ್ಮೆ ಮಾತ್ರ ಪ್ರಸವಕ್ಕೆ ಬಂದ ಹಸು); ಇಯಂ–ಇದು, ಶುನೀ ನ–ಶ್ವಾನ ವಲ್ಲ (ನಾಯಿಯಲ್ಲ); ತಸ್ಯಾಃ–ಅದರ (ಆ ವಾಕ್ಯದ), ಪುಚ್ಛಂ–ಕೊನೆಯ ಭಾಗವನ್ನು (ವಾಕ್ಯಶೇಷವನ್ನು), ವಿಚಾರಯ – ತಿಳಿದುನೋಡು ('ಏಷ ಮಾಯಾ ಪ್ರಕೃತಿರೇವ ಪ್ರಗೀಯತೇ'–ಎಂಬುದಾಗಿ ಮಾಯವನ್ನು ಪ್ರಕೃತಿ ಯೆಂದು ಸ್ಪಷ್ಟವಾಗಿ ನಿರೂಪಿಸುತ್ತದೆಯಲ್ಲದೇ–ಅಜ್ಞಾನವೆಂದಲ್ಲ); ಯತಃ–ಯಾವ ಕಾರಣದಿಂದ, ಏಷಾ ಮಾಯಾ–ಈ (ಹಿಂದಿನ ಚರಣಗಳಲ್ಲಿ ಹೇಳಿದ) ಮಾಯೆಯು, ಪ್ರಕೃತಿಃ ಏವ–ಪ್ರಕೃತಿಯೇ ಎಂಬುದಾಗಿ, ಪುಚ್ಛೇ–ಅಂತ್ಯ ಭಾಗದಲ್ಲಿ, ಗೀಯತೇ–ಹೇಳುತ್ತದೆಯೋ (ಆದ್ದರಿಂದ ಮಾಯಾ ಎಂದರೆ ಅಜ್ಞಾನವಲ್ಲ).

**ಯಥಾ ಕುಲಾಲಶ್ಚಕ್ರೀಸ್ಯಾತ್ತಥಾ ಮಾಯೀ ತಯಾ ಸೃಜನ್ ॥೧೨೩**

ಅಜ್ಞಾನರೂಪದ ವ್ರಣವನ್ನುಂಟುಮಾಡುವುದಿಲ್ಲ; ಶ್ವಾನದಂತೆ ವಕ್ರವಾದ ಅಪವಿತ್ರ ಪುಚ್ಛವುಳ್ಳದ್ದಲ್ಲ; ಕಿಂತು ಗೋವಿನಂತೆ ಪವಿತ್ರವಾದ ಪುಚ್ಛ ವುಳ್ಳದ್ದು; ಪ್ರಕೃತಿನಿಯಾಮಕತ್ವಾದಿ ಭಗವಂತನ ಮಹಿಮಾರೂಪದ ಅಮೃತವನ್ನು ದೋಹನಮಾಡುತ್ತದೆ; ಅದರ ಬಾಲವನ್ನಾದರೂ ಸ್ವಲ್ಪ ಪರೀಕ್ಷಿಸಿ ನೋಡು; ಈ ವೇದವಾಕ್ಯವು ಕಡೆಯ ಚರಣದಲ್ಲಿ 'ಏಷ ಮಾಯಾ ಪ್ರಕೃತಿರೇವ ಪ್ರಗೀಯತೇ' ಎಂದು ಮುಂತಾಗಿ ಹೇಳುತ್ತದೆ (೧೨೨). ಘಟ ನಿರ್ಮಾಣಮಾಡುವ ಕುಂಬಾರನು ನಿರ್ಮಾಣಕಾರ್ಯದಲ್ಲಿ ಉಪಯೋಗಿ ಸುವ ಚಕ್ರದಿಂದ ಚಕ್ರೀ ಎನಿಸಿದರೂ ಹೇಗೆ ಚಕ್ರದ ಬಂಧರಹಿತನೋ, ಹಾಗೆಯೇ ಭಗವಂತನೂ ಮಾಯಾನಾಮಕ ಪ್ರಕೃತಿಯನ್ನು ಜಗತ್ಸೃಷ್ಟಿಯಲ್ಲಿ

---

[1] ಗೋ ಶಬ್ದವು ಗೃಷ್ಟಿ ಮತ್ತು ಶ್ರುತಿವಾಕ್ಯಗಳಲ್ಲಿ ಸಮಾನವು; ಗೋವಾದ್ದ ರಿಂದ ಪರಮಾತ್ಮನ ಪ್ರಕೃತಿ ನಿಯಾಮಕತ್ವವೆಂಬ ಮಹಿಮಾರೂಪದ ಅಮೃತವನ್ನು ಕರೆಯುತ್ತದೆ (ದೋಹನ ಮಾಡಿಕೊಳ್ಳಬಹುದು); ನಾಯಿಯಂತೆ ಕಚ್ಚಿ ಭಗವಂತನಲ್ಲಿ ಅಜ್ಞಾನವೆಂಬ ವ್ರಣವನ್ನುಂಟುಮಾಡುವುದಿಲ್ಲವೆಂಬ ಉಪಹಾಸವು ಧ್ವನಿತವಾಗಿದೆ; ಈ ಗೋವು ಪವಿತ್ರವಾದ ಬಾಲವುಳ್ಳದ್ದು; ಶ್ವಾನನಂತೆ ವಕ್ರಪುಚ್ಛವಲ್ಲ; ಸ್ಪಷ್ಟವಾಗಿ (ಋಜುವಾಗಿ—ನೇರವಾಗಿ) ಭಗವನ್ಮಹಿಮೆಯನ್ನು ನಿರೂಪಿಸುತ್ತದೆ.

ಮಾಯಾ ಎಂಬುದರಿಂದ ಪ್ರಕೃತಿಯನ್ನೇ ಹಿಡಿದರೂ, ಭಗವಂತನಿಗೆ ಪ್ರಕೃತಿಸಂಬಂಧವೆಂಬ ದೋಷವುಂಟಾಗುವುದೆಂಬ ಸಂಶಯವನ್ನು ಪರಿಹರಿಸುತ್ತಾರೆ :—

ಯಥಾ—ಹೇಗೆ, ಕುಲಾಲಃ—ಕುಂಬಾರನು (ತನ್ನಲ್ಲಿಯೇ ಇದ್ದ ಚಕ್ರವನ್ನು ಉಪಯೋಗಿಸಿ ಘಟವನ್ನು ನಿರ್ಮಾಣ ಮಾಡುವುದರಿಂದ), ಚಕ್ರೀ ಸ್ಯಾತ್—ಚಕ್ರೀ ಎಂದು (ಚಕ್ರವುಳ್ಳವನೆಂದು) ಕರೆಯಲ್ಪಡುವನೋ, ತಥಾ—ಹಾಗೆಯೇ, ತಯಾ—(ತನ್ನಾಧೀನದಲ್ಲಿರುವ ಮಾಯೆಯನ್ನು ಉಪಯೋಗಿಸಿ, ಜಗತ್ತನ್ನು ಸೃಷ್ಟಿಮಾಡುವುದರಿಂದ—ಮಾಯೆವುಳ್ಳವನಾದ್ದರಿಂದ) ಮಾಯೆಯಿಂದ, ಸೃಜನ್—ಜಗತ್ತನ್ನು ಸೃಷ್ಟಿಮಾಡುವವನಾಗಿ, ಮಾಯೀ-'ಮಾಯೀ' ಎಂದು ಕರೆಯಲ್ಪಡುತ್ತಾನೆ (ಚಕ್ರವನ್ನುಪಯೋಗಿಸುವ ಕುಂಬಾರನು ಚಕ್ರಬಂಧಿತನಲ್ಲವಷ್ಟೆ—ಅದರಂತೆ ಭಗವಂತನು ಮಾಯಾಬದ್ಧನಲ್ಲ).

**ಕಿಂ ನ ಕೋಶಸ್ಥವಿತ್ತೇನ ಧನೀ ರಾಜಾ ವನೇಚರಃ ।**
**ಮತುಪಾ ಸರ್ವಸರ್ವಸ್ವಂ ಗಲೇ ತಸ್ಯ ನ ನಿಕ್ಷಿಪ ॥ ೧೨೪ ॥**

ಭಗವಂತನಲ್ಲಿ 'ಮಾಯೀ' ಎಂಬ ಪದಪ್ರಯೋಗವಿದ್ದರೂ, ಆತನು ಮಾಯಾತಿದೂರನೆಂಬಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ :—

ವನೇಚರಃ—ವನದಲ್ಲಿ ಸಂಚರಿಸುತ್ತಿರುವ, ರಾಜಾ—ರಾಜನು, ಕೋಶಸ್ಥವಿತ್ತೇನ—ತನ್ನ ಕೋಶ (ಭಂಡಾರ) ದಲ್ಲಿರುವ ಧನದಿಂದ, ಧನೀ—ಧನವಂತನು,

---

ಉಪಯೋಗಿಸಿದರೂ 'ಮಾಯೀ' ಎನಿಸುವನಲ್ಲದೇ ಮಾಯಾಬದ್ಧನಲ್ಲ (೧೨೩). ಬೇಟೆಗಾಗಿ ಅರಣ್ಯದಲ್ಲಿರುವ ರಾಜನು ತನ್ನ ಕೋಶದಿಂದ ದೂರವಿದ್ದರೂ 'ಧನೀ' ಅಲ್ಲವೇ ? ತನ್ನ ಸರ್ವಸ್ವವನ್ನು ಹೊತ್ತು ತಿರುಗಬೇಕಾದ್ದಿಲ್ಲವಷ್ಟೆ! ಅಂತೆಯೇ ಮಾಯೀ ಶಬ್ದವಾಚ್ಯನಾದ ಭಗವಂತನೂ ಮಾಯಾಧಿಪತಿಯಾಗಿದ್ದಾನೆ—ಅದರ ಬಂಧನವು ಅವನಿಗಿಲ್ಲ (ಮಾಯಾತಿದೂರನೆಂಬಲ್ಲಿ ಮಾತ್ರ ದೃಷ್ಟಾಂತವನ್ನು ತಿಳಿಯಬೇಕು) ; 'ಇನ್' ಪ್ರತ್ಯಯವು ಮತುಪ್ ಅರ್ಥವುಳ್ಳದ್ದು—ಅದನ್ನುಳ್ಳವನು—ಸ್ವಾಮಿಯು ಎಂದರ್ಥ ; ಧನೀ ಎಂಬ ಶಬ್ದ ಮಾತ್ರ ಪ್ರಯೋಗದಿಂದ, ಗಜತುರಗಾದಿ ತನ್ನ ಸರ್ವಸ್ವವನ್ನು ಕಟ್ಟಿಕೊಂಡು ತಿರುಗಾಡಬೇಕಾಗಿಲ್ಲವಷ್ಟೆ ; ಹೀಗೆ ಮಾಯೀ ಶಬ್ದವಾಚ್ಯನಾದ

ನ ಕಿಂ—ಅಲ್ಲವೇನು ? ಮತುಪಾ—'ಧನೀ' ಎಂಬಲ್ಲಿರುವ 'ಮತುಪ್' ಅರ್ಥದ 'ಇನ್' ಪ್ರತ್ಯಯಬಲದಿಂದ, ಸರ್ವಸರ್ವಸ್ವಂ—(ಗಜತುರಗಾದಿ ಸರ್ವೈಶ್ವರ್ಯವನ್ನು ಹೊಂದಿರುವ) ರಾಜನ ಸರ್ವೈಶ್ವರ್ಯವನ್ನು, ತಸ್ಯ—ಆತನ, ಗಲೇ—ಕುತ್ತಿಗೆಯಲ್ಲಿ, ನ ನಿಕ್ಷಿಪ—ಕಟ್ಟಬೇಡ.[1]

**ಸರ್ವಜ್ಞಂ ಖಲು ತದ್ಬ್ರಹ್ಮ ಕಥಮಜ್ಞಾನವದ್ಭವೇತ್ ।**
**ಸ್ವರೂಪಸ್ಯ ಸದಾ ದೃಷ್ಟೇಃ ಸರ್ವಸ್ಯಾನ್ಯಸ್ಯ ಚಾಂಜಸಾ ॥ ೧೨೩ ॥**

ಬೇರೆ ಯುಕ್ತಿಯಿಂದ ಸಹ ಭಗವಂತನಲ್ಲಿ ಅಜ್ಞಾನವು ಕೂಡುವುದಿಲ್ಲವೆನ್ನುತ್ತಾರೆ :—

ತದ್ಬ್ರಹ್ಮ—ಆ ಬ್ರಹ್ಮನು, ಸರ್ವಜ್ಞಂ ಖಲು—ಸರ್ವಜ್ಞನಲ್ಲವೇ! ಕಥಂ—ಹೇಗೆ (ಸರ್ವಜ್ಞನಾದವನು), ಅಜ್ಞಾನವತ್—ಅಜ್ಞಾನವುಳ್ಳವನು, ಭವೇತ್—ಆಗುತ್ತಾನೆ ? (ಶಕ್ಯವಿಲ್ಲ) (ಸರ್ವಜ್ಞತ್ವವನ್ನು ವಿವರಿಸುತ್ತಾರೆ; ಸ್ವರೂಪಸ್ಯ—ಆತ್ಮಸ್ವರೂಪದ, ಚ – ಮತ್ತು, ಅನ್ಯಸ್ಯ ಸರ್ವಸ್ಯ – ಬೇರೆ ಎಲ್ಲ ವಸ್ತುಗಳ

---

ಭಗವಂತನೂ ಮಾಯಾಬಂಧರಹಿತನಾಗಿರುವನು (೧೨೪). ಬೇರೆ ಯುಕ್ತಿಯೂ ಬ್ರಹ್ಮನಲ್ಲಿ ಮಾಯಾ (ಅಜ್ಞಾನ) ವಿರಲು ಸಾಧ್ಯವಲ್ಲೆಂದು ತೋರಿಸುತ್ತದೆ; ಸರ್ವಜ್ಞನಾದ ಬ್ರಹ್ಮನು ಅಜ್ಞಾನವುಳ್ಳವನು ಹೇಗಾಗುತ್ತಾನೆ ? ತನ್ನನ್ನೂ,

---

1 'ಇನ್' ಪ್ರತ್ಯಯುವು ಧನವುಳ್ಳವನೆಂಬ ಅರ್ಥವನ್ನು ಮಾತ್ರ ಸೂಚಿಸುತ್ತದೆ; ಅದರಿಂದ ರಾಜನು ಗಜತುರಗಾದಿ ಸರ್ವಸ್ವವನ್ನು ಹೊತ್ತು ತಿರುಗಬೇಕಾಗಿಲ್ಲವಾದರೂ, ಅವುಗಳ ಅತನ ಸ್ವಾಮ್ಯಕ್ಕೆ ಏನೂ ಅಪೋಹವಿಲ್ಲವಷ್ಟೆ ; ಧನವು ಕೋಶದಲ್ಲಿಯೇ ಇರುತ್ತಿದ್ದರೂ, ವನದಲ್ಲಿ ಸಂಚರಿಸುವ ರಾಜನೇ ಅದರ ಅಧಿಪತಿಯಾಗಿರುವಂತೆ ಮಾಯಾಧಿಪತಿಯಾದ ಬ್ರಹ್ಮನೂ ಅದರ ಸ್ವಾಮಿಯಾಗಿರುತ್ತಾನೆ ; ಕುತ್ತಿಗೆಯಲ್ಲಿ ಹೊತ್ತು ರಾಜನು ಬೇಟೆಯಾಡಲು ವನಕ್ಕೆ ಹೋಗದಿರುವಂತೆ, ಮಾಯಾದೂರನಾಗಿದ್ದು ಅದರ ಬಂಧನಕ್ಕೆ ತಾನು ಒಳಗಾಗದೆ ಅದರ ಸ್ವಾಮಿಯಾಗಿದ್ದೇ ಅದನ್ನು ಉಪಯೋಗಿಸಿಕೊಂಡು ಜಗತ್ಸೃಷ್ಟ್ಯಾದಿಗಳನ್ನು ಮಾಡುತ್ತಾನೆ—ಅತ ಏವ 'ಮಾಯೀ' ಶಬ್ದವಾಚ್ಯನಾಗಿರುತ್ತಾನೆ; ರಾಜನು ತನ್ನ ಸರ್ವಸ್ವವನ್ನು ಕಟ್ಟಿಕೊಂಡು ತಿರುಗಾಡಿದರೆ, ಅವನ ಮರಣದಿಂದ ರಾಜ್ಯವು ಅರಾಜಕವಾಗುವುದಿಲ್ಲವೇ ? ಎಂಬ ಉಪಹಾಸವೂ ಇಲ್ಲಿದೆ; ಭಗವಂತನಾದರೋ ಮಾಯಾಬಂಧನ ಮಾಡಿಕೊಳ್ಳದೆ ಅದರ ಸ್ವಾಮಿಯಾಗಿ ನಿಯಾಮಕನಾಗಿದ್ದಾನೆ.

(ತನ್ನಿಂದ ಭಿನ್ನವಾದ ಸರ್ವಜಗತ್ತಿನ), ಸದಾ—ಸರ್ವದಾ, ಅಂಜಸಾ—ಸ್ಪಷ್ಟ ವಾಗಿ, ದೃಷ್ಟೇಃ—ಜ್ಞಾನವುಳ್ಳವನಾದ್ದರಿಂದ (ಸರ್ವದಾ ನೋಡುತ್ತಿರುವುದ ರಿಂದಲೂ) ಆತನಲ್ಲಿ ಅಜ್ಞಾನಕ್ಕೆಡೆಯಿಲ್ಲ—ಸರ್ವಜ್ಞನು ಅಜ್ಞಾನವುಳ್ಳವ ನೆಂಬುದು ವ್ಯಾಹತವು; ಎಲ್ಲಿ ಜ್ಞಾನವಿದೆಯೋ ಅಲ್ಲಿಯೇ ಆಗಲೇ ಅಜ್ಞಾನ ವಿರುವುದು ಹೇಗೆ?

**ಅಸಂಗಸ್ಯ ಯತಃ ಸಂಗೋ ವಿನಾಽಜ್ಞಾನಂ ನ ಯುಜ್ಯತೇ ।**
**ಅತಃ ಸಾರ್ವಜ್ಞ್ಯಮಪ್ಯಜ್ಞಾನಾಪೇಕ್ಷಮಿತಿ ಯನ್ಮತಂ ॥ ೧೨೬ ॥**
**ಸ ಪ್ರಷ್ಟವ್ಯಃ ಕಿಮಜ್ಞಾನಂ ಸಂಧಾನಕರಣೀ ತವ ।**
**ಕಿಂ ವಾ ದ್ರವತ್ವನಿಬಿಡತ್ವಾರ್ಹಸೀಸಾದಿಧಾತುವತ್ ॥ ೧೨೭ ॥**

ಯತಃ—ಯಾವ ಕಾರಣದಿಂದ, ಅಸಂಗಸ್ಯ—ಸಂಗರಹಿತನಾದ ಬ್ರಹ್ಮ ನಿಗೆ, ಸಂಗಃ—ಸಂಗವು (ಅನ್ಯವಸ್ತು ಸಂಗವು), ಅಜ್ಞಾನಂ ವಿನಾ—ಅಜ್ಞಾನ ವಿಲ್ಲದೇ, ನ ಯುಜ್ಯತೇ—ಕೂಡುವುದಿಲ್ಲವೋ, ಅತಃ—ಆದ್ದರಿಂದ, ಸಾರ್ವಜ್ಞ್ಯಂ ಅಪಿ – ಸರ್ವಜ್ಞತ್ವವೂ, ಅಜ್ಞಾನಾಪೇಕ್ಷಂ – ಅಜ್ಞಾನವನ್ನು ಅಪೇಕ್ಷಿಸುತ್ತದೆ (ಅಜ್ಞಾನಸಾಧಕವಾಗಿದೆ), ಇತಿ—ಹೀಗೆಂದು, ಯನ್ಮತಂ—ಯಾರ ಅಭಿಪ್ರಾ- ಯವೋ (ಯಾವ ಮತಾನುಯಾಯಿಯೋ), ಸಃ—ಆತನು, ಪ್ರಷ್ಟವ್ಯಃ— ಪ್ರಶ್ನಿಸಲ್ಪಡಬೇಕು; (ಏನೆಂದರೆ), (ಅನ್ಯವಿಷಯ, ಅನ್ಯವಸ್ತುಸಂಗವನ್ನು ದೊರಕಿಸುವುದೆಂಬ ಈ ಅಜ್ಞಾನವು), ತವ – ನಿನ್ನ (ನಿನ್ನ ಮತದಲ್ಲಿ),

---

ಇತರ ಸರ್ವಜಗತ್ತನ್ನೂ ಸದಾ ನೋಡಿ ತಿಳಿಯುತ್ತಿರುವವನೇ ಸರ್ವಜ್ಞನು; ಎಲ್ಲಿ ಜ್ಞಾನವೋ ಅಲ್ಲಿ ಆಗಲೇ ಅಜ್ಞಾನವೂ ಇರಲಾರದೆಂಬುದು ಯುಕ್ತಿ ಸಿದ್ಧವು; ಆದ್ದರಿಂದ ಬ್ರಹ್ಮನಲ್ಲಿ ಮಾಯಾ ಇರಲು ಸಾಧ್ಯವಿಲ್ಲ (೧೨೫). ಬ್ರಹ್ಮನು ಅಸಂಗನೆಂದು (ಯಾವುದೇ ವಸ್ತುವಿನ ಸಂಗವಿಲ್ಲದವನೆಂದು) ಶ್ರುತಿಯು ಹೇಳುತ್ತದೆ; ಸರ್ವಜ್ಞನಾದ ಬ್ರಹ್ಮನಿಗೆ ವಿಷಯಸಂಗವೇ ಅಜ್ಞಾನ ದಿಂದಾಗುತ್ತದೆ; ಈ ಅಜ್ಞಾನದ ವಿನಹ ಸರ್ವಜ್ಞತ್ವವೂ ಬ್ರಹ್ಮನಿಗೆ ಕೂಡು ವುದಿಲ್ಲ (ಜ್ಞಾನವೆಂಬ ಧರ್ಮವೇ ಬ್ರಹ್ಮನಿಗೆ ಸಿದ್ಧಿಸುವುದಿಲ್ಲ); ಹೀಗೆ ಬ್ರಹ್ಮನು ಸರ್ವಜ್ಞನೆನ್ನಬೇಕಾದರೆ, ಅಜ್ಞಾನದಿಂದ ಹೊಂದಿಸಲ್ಪಡುವ ವಿಷಯ (ವಸ್ತು) ಜ್ಞಾನವೇ ಕಾರಣವು; ಸರ್ವಜ್ಞತ್ವವು ಅಜ್ಞಾನವನ್ನು ಅಪೇಕ್ಷಿಸು

*

ಅಜ್ಞಾನಂ—ಅಜ್ಞಾನವು, ಸಂಧಾನಕರಣೀ—(ಕತ್ತರಿಸಲಾದ ದೇಹದ ಎರಡು ಭಾಗಗಳನ್ನು ಸೇರಿಸಿ ಮೊದಲಿನಂತೆ ಮಾಡುವ ಔಷಧವಿಶೇಷವು) ಸಂಧಾನ ಕರಣಿಯು, ಕಿಂ—ಆಗಿರುವುದೋ ? ವಾ—ಅಥವಾ, ಕಿಂ—ಏನು, ದ್ರವತ್ವ ನಿಬಿಡತ್ವಾರ್ಹಸೀಸಾದಿಧಾತುವತ್—ದ್ರವತ್ವ ನಿಬಿಡತ್ವಗಳಿಂದ ಇರಲು ಅರ್ಹ ವಾದ (ಕಂಚು ಮೊದಲಾದ ಪಾತ್ರೆಗಳ ಎರಡು ತುಂಡುಗಳನ್ನು ಸೇರಿಸಿ ಬೆಸಿಗೆ ಹಾಕಲು, ಮೊದಲು ಕರಗಿಸಿ ಹೊಯ್ದು ನಂತರ ಗಟ್ಟಿಯಾಗುವ) ಸೀಸ ಮೊದಲಾದ ಲೋಹದಂತೆಯೋ ? (ಅಸಂಗನೆಂಬ ಬ್ರಹ್ಮನಿಗೂ ವಸ್ತು ಗಳಿಗೂ ಸಂಬಂಧವನ್ನುಂಟುಮಾಡುವುದೆಂಬ ಅಜ್ಞಾನವು ಈ ಎರಡು ಪ್ರಕಾರ ದಲ್ಲಿ ಯಾವ ರೀತಿಯಿಂದ ಸಂಗವನ್ನುಂಟುಮಾಡುತ್ತದೆ? ಎಂದು ಪ್ರಶ್ನಿಸ ಬೇಕು).

**ವ್ಯಾಪಿನೀ ಚಿನ್ನ ನೇತವ್ಯಾ ನಾऽನೇತವ್ಯಾ ಚ ಕೇನಚಿತ್ ।**
**ಅತಃ ಸ್ವತಸ್ತತ್ತದರ್ಥಸಂಗಸ್ತಸ್ಯಾ ಭವಿಷ್ಯತಿ ॥ ೧೨೮ ॥**

ಅಜ್ಞಾನವು ಈ ಸಂಧಿಕಾರ್ಯವನ್ನು ಮಾಡುವ ಅವಶ್ಯಕತೆ ಇಲ್ಲವೆನ್ನು ತ್ತಾರೆ :—

ಚಿತ್—ಬ್ರಹ್ಮಚೈತನ್ಯವು (ಬ್ರಹ್ಮಸ್ವರೂಪವು), ವ್ಯಾಪಿನೀ — ಸರ್ವತ್ರ ವ್ಯಾಪ್ತವಾದುದು (ಆಗಿದೆ); ನೇತವ್ಯಾ—(ಅನ್ಯತ್ರ) ತೆಗೆದುಕೊಂಡುಹೋಗ ಲ್ಪಡತಕ್ಕದ್ದು, ನ—ಅಲ್ಲ; ಕೇನಚಿತ್—ಯಾರಿಂದಲೇ ಆಗಲಿ, ಆನೇತವ್ಯಾ ಚ

---

ತ್ತದೆ; ಎಂಬೀ ಪ್ರಕ್ರಿಯೆಯನ್ನು ಮುಂದಿಟ್ಟು, ಬ್ರಹ್ಮನಲ್ಲಿ ಅಜ್ಞಾನದ ಸಂಬಂಧವಿದೆ ಎಂದರೆ, ಆತನ ನಿರಾಕರಣೆಗಾಗಿ ಅಜ್ಞಾನವೆಂಬುದು ಸಂಧಾನ ಕರಣಿಯಂತೆ ಕೆಲಸ ಮಾಡುವುದೋ ಅಥವಾ ಲೋಹದ ಪಾತ್ರೆಗೆ ಬೆಸಿಗೆ ಹಾಕಲು (ಎರಡು ತುಂಡುಗಳನ್ನು ಕೂಡಿಸಲು) ಉಪಯೋಗಿಸುವ ಸೀಸ ಮುಂತಾದ ಲೋಹದಂತೆ, ಮೊದಲು ದ್ರವ್ಯರೂಪದಿಂದ ಉಭಯ ತುಂಡು ಗಳನ್ನು ಸಂಧಾನಮಾಡಿಸಿ ನಂತರ ಗಟ್ಟಿಯಾಗುವುದರ ಮೂಲಕ ತನ್ನ ಕಾರ್ಯವನ್ನು ಮಾಡುವುದೋ ಎಂದು ಪ್ರಶ್ನಿಸಬೇಕು (೧೨೬—೧೨೭). ಬ್ರಹ್ಮಜ್ಞಾನಕ್ಕೂ (ಸ್ವರೂಪಕ್ಕೂ) ದ್ರವ್ಯಗಳಿಗೂ (ವಸ್ತುಗಳಿಗೂ), ಸಂಗ ವನ್ನು (ಸಂಪರ್ಕವನ್ನು) ಉಂಟುಮಾಡಲು, ಅಜ್ಞಾನದ ಅವಶ್ಯಕವಿಲ್ಲ;

—ತೆಗೆದುಕೊಂಡು (ಬೇರೆ ಕಡೆಯಿಂದ) ಇಲ್ಲಿಗೆ ತರಲ್ಪಡತಕ್ಕದ್ದು, ನ—ಅಲ್ಲ; ಅತಃ — ಆದ್ದರಿಂದ (ಸಕಲ ಮೂರ್ತದ್ರವ್ಯಸಂಗವುಳ್ಳದ್ದಾದ್ದರಿಂದ), ಸ್ವತಃ—ಸ್ವಭಾವದಿಂದಲೇ, ತಸ್ಯಾಃ—ಬ್ರಹ್ಮಚೇತನದ, ಸಂಗಃ—ಸಂಗವು (ಸಂಬಂಧವು), ಭವಿಷ್ಯತಿ—ಉಂಟಾಗುತ್ತದೆ (ಈ ಸಂಗವನ್ನು ಉಂಟುಮಾಡಲು ಅಜ್ಞಾನವು ಬೇಕಿಲ್ಲ).

**ಅಸಂಗತ್ವಶ್ರುತೇರ್ಭೀತಿಸ್ತವಾಪಿ ಚ ಮಮಾಪಿ ಚ ॥ ೧೨೯ ॥**

ಬ್ರಹ್ಮನಿಗೆ ಅಸಂಗವನ್ನು ಹೇಳುವ ಶ್ರುತಿಯು ಬಾಧಕವಾಗುತ್ತದೆಂದರೆ, ಅಜ್ಞಾನವು ಈ ಬಾಧಕವನ್ನು ಹೇಗೆ ಪರಿಹರಿಸಲು ಉಪಯೋಗವಾಗುತ್ತದೆ? ಎಂದು ಪ್ರಶ್ನಿಸಿ ಸಮಾಧಾನವನ್ನು ಹೇಳುತ್ತಾರೆ:—

ಅಸಂಗತ್ವಶ್ರುತೇಃ—ಅಸಂಗತ್ವವನ್ನು ಹೇಳುವ ಶ್ರುತಿಯಿಂದ, ಭೀತಿಃ—(ಬಾಧಕವೆಂಬ) ಭಯವು, ತವಾಪಿ ಚ — ನಿನಗೂ ಇದೆ; ಮಮಾಪಿ ಚ — ನನಗೂ ಇದೆ (ಆದರೆ ಅಜ್ಞಾನದಿಂದ ಆ ಭಾದವು ಪರಿಹಾರವಾಗುವುದಿಲ್ಲ).

**ಯದಿ ಸ್ವಭಾವತೋಽಸಂಗ ಇತ್ಯರ್ಥಃ ಸ್ಯಾಚ್ಛ್ರುತೇಸ್ತವ ।**
**ಮಮಾಪ್ಯುಪಾಧಿತೋಽಸಂಗ ಇತಿ ಸ್ಯಾದುಕ್ತಯುಕ್ತಿತಃ ॥ ೧೩೦ ॥**

ಶ್ರುತೇಃ—ಅಸಂಗಶ್ರುತಿಗೆ, ತವ—ನಿನಗೆ, ಸ್ವಭಾವತಃ—ಸ್ವಭಾವದಿಂದ (ಬ್ರಹ್ಮನು), ಅಸಂಗಃ—ಸಂಗರಹಿತನು, ಇತ್ಯರ್ಥಃ—ಎಂಬ ಅರ್ಥವು, ಸ್ಯಾತ್

---

ಬ್ರಹ್ಮಚೇತನವು ಸರ್ವತ್ರವ್ಯಾಪ್ತವಾಗಿದೆ; ಅದನ್ನು ಯಾರೂ (ಅಜ್ಞಾನವೇ ಆಗಲಿ) ಅನ್ಯತ್ರ ಒಯ್ಯುವಂತಿಲ್ಲ; ಬೇರೆ ಕಡೆಯಿಂದ ಇಲ್ಲಿಗೆ ತರಬೇಕಾಗಿಲ್ಲ; ಬ್ರಹ್ಮವಸ್ತುವಿಗೆ ಸಮಸ್ತ ಮೂರ್ತವಸ್ತುಗಳ (ದ್ರವ್ಯಗಳ) ಸಂಗವು ಸ್ವಾಭಾವಿಕವಾಗಿಯೇ ಉಂಟಾಗುತ್ತದೆ (೧೨೮). ಬ್ರಹ್ಮನಿಗೆ ಅಸಂಗತ್ವವನ್ನು ಹೇಳುವ ಶ್ರುತಿಭಯವು ನಿನಗೆ ಒಂದು ರೀತಿಯಿಂದ ಇರುವುದಾದರೆ, ಸರ್ವತ್ರ ವ್ಯಾಪ್ತನೆಂಬ ಯುಕ್ತಿಯಿಂದ ನನಗೂ ಅಶ್ರುತಿ ಭಯವಿಲ್ಲ; ನಿನ್ನ ಭೀತಿ ಮಾತ್ರ ಅಕಾರಣವಾದುದು; ಅಜ್ಞಾನವು ವಿಷಯ (ವಸ್ತು) ಸಂಗವನ್ನುಂಟು ಮಾಡಿದರೆ ಮಾತ್ರ ಬ್ರಹ್ಮನಿಗೆ ಸರ್ವಜ್ಞತ್ವವು ಸಿದ್ಧವಾಗುತ್ತದೆಂದು ತಿಳಿಯಲು ಯಾವ ಯುಕ್ತಿಯೂ (ಪ್ರಮಾಣವೂ) ಇರುವುದಿಲ್ಲ (೧೨೯). ಅಜ್ಞಾನವನ್ನು ಸಿದ್ಧಿಸಲಿಕ್ಕಾಗಿ, ಬ್ರಹ್ಮನು ಸ್ವಾಭಾವಿಕವಾಗಿ ಅಸಂಗನು; ಅಜ್ಞಾನವು

ಯದಿ—ಆಗುವುದಾದರೆ, ಮಮ ಅಪಿ—ನನಗೂ ಸಹ, ಉಪಾಧಿತಃ—ಕಾರಣವಿರುವುದರಿಂದ, ಉಕ್ತಯುಕ್ತಿತಃ—(ಬ್ರಹ್ಮಚೇತನವು ಸರ್ವತ್ರ ವ್ಯಾಪ್ತವೆಂಬ) ಈ ಮೊದಲು ಹೇಳಿದ ಯುಕ್ತಿಯಿಂದ, ಅಸಂಗಃ ಇತಿ ಸ್ಯಾತ್—(ಬ್ರಹ್ಮನು) ಸ್ವಾಭಾವಿಕ ಸಂಪರ್ಕವುಳ್ಳವನೆಂದೇ ಸಿದ್ಧವಾಗುತ್ತದೆ (ಅಸಂಗತ್ವವು ಉಭಯರಿಗೂ ಸಮಾನವೇ).

**ಕಿಂಚ ತ್ವದಜ್ಞಾನತೋಽಪಿ ಸಂಗಸ್ತಸ್ಯ ಕಥಂ ವದ ।**
**ಯದಸಂಗ ಇತಿ ಶ್ರುತ್ಯಾ ಸರ್ವಸಂಗೋ ನಿಷಿಧ್ಯತೇ ॥ ೧೩೧ ॥**

ಯತ್—ಯಾವ ಕಾರಣದಿಂದ, ಅಸಂಗ ಇತಿ ಶ್ರುತ್ಯಾ—(ಬ್ರಹ್ಮನು) ಅಸಂಗನೆಂದು ಹೇಳುವ ಶ್ರುತಿಯಿಂದ, ತಸ್ಯ—ಬ್ರಹ್ಮನಿಗೆ, ಸರ್ವಸಂಗಃ—ಸರ್ವಸಂಗವು (ಎಲ್ಲ ವಸ್ತುಸಂಗವು), ನಿಷಿಧ್ಯತೇ—ನಿಷೇಧಿಸಲ್ಪಡುತ್ತದೆಯೋ (ಇಲ್ಲವೆಂದು ಹೇಳುತ್ತದೆಯೋ), (ಆದ್ದರಿಂದ), ಕಿಂಚ—ಮತ್ತೇನೆಂದರೆ, ತಸ್ಯ—ಆ ಬ್ರಹ್ಮನಿಗೆ, ತ್ವದಜ್ಞಾನತಃ—ನಿನ್ನ ಅಜ್ಞಾನದಿಂದ, ಅಪಿ—ಆದರೂ, ಸಂಗಃ—ಸಂಗವು, ಕಥಂ—ಹೇಗೆ? (ಬ್ರಹ್ಮನಲ್ಲಿ ಅಜ್ಞಾನವಿದ್ದರೆ ತಾನೆ ಆತನಿಗೆ ಅನ್ಯವಸ್ತುಗಳ ಸಂಘಟನೆಯಾಗಬೇಕು), ವದ—ಹೇಳು.

---

ವಿಷಯ ಸಂಗವನ್ನು ಏರ್ಪಡಿಸಿ, ಸರ್ವಜ್ಞತ್ವವನ್ನು ಸಾಧಿಸುತ್ತದೆ? ಎಂದು ತಿಳಿಯುವೆಯಾದರೆ, ಬ್ರಹ್ಮನು ಅಸಂಗನೆಂದು, ಪೂರ್ವೋಕ್ತ (ಸರ್ವತ್ರ ವ್ಯಾಪ್ತನೆಂದ) ಯುಕ್ತಿಯಿಂದ (ಸರ್ವ ಸಂಗನಾದರೂ ಅಸಂಗನೆಂದು), ನಾನು ತಿಳಿಯುವೆನು; ಅಜ್ಞಾನವು ಆ ಸಂಗವನ್ನುಂಟುಮಾಡಬೇಕಾಗಿಲ್ಲ (೧೩೦). ಇದಿರಲಿ! ಶ್ರುತಿಯು ಬ್ರಹ್ಮನನ್ನು ಸರ್ವಸಂಗರಹಿತನೆಂದು ಹೇಳುವುದಿಲ್ಲವೇ? (ಹೇಳುತ್ತದೆ); ಹಾಗಾದರೆ, ನಿನ್ನಂತೆ ಅಜ್ಞಾನವಾದರೂ ಹೇಗೆ ಅನ್ಯ ವಿಷಯಗಳ ಸಂಗವನ್ನುಂಟುಮಾಡುತ್ತದೆ? (ಅಜ್ಞಾನವು ಬ್ರಹ್ಮನಲ್ಲಿದ್ದು ಅನ್ಯ ಸಂಘಟನೆಯನ್ನು ಮಾಡಿಸಬೇಕಲ್ಲವೇ? (ಸಂಧಾನಕರಣಿಯಂತೆ ಅಥವಾ ಸೀಸದ ಬೆಸುಗೆಯಂತೆ, ಮಧ್ಯದಲ್ಲಿದ್ದು ಸಂಗವನ್ನುಂಟುಮಾಡುವುದಲ್ಲ—ಅಜ್ಞಾನವು; ಎಂಬುದನ್ನು ಹಿಂದೆಯೇ ಬ್ರಹ್ಮನ ಸರ್ವತ್ರ ವ್ಯಾಪ್ತಿಯನ್ನು ಹೇಳಿ ಅಸಂಭಾವಿತವೆಂದು ಸೂಚಿಸಲಾಗಿದೆ) (೧೩೧).

**ಅಥಾಜ್ಞಾನಾನ್ಯಸಂಗೋ ನೇತ್ಯರ್ಥೇಽನರ್ಥಪರಂಪರಾ ।**
**ಯಾ ಶ್ರುತಿರ್ನಿರನಿಷ್ಟಂ ತಂ ನಿರವದ್ಯಂ ಚ ಶಂಸತಿ ।**
**ಮಹಾಶಕ್ತಿಮತಸ್ತಸ್ಯ ಸಾ ದೋಷಂ ಕಿಲ ಶೇಷಯೇತ್ ॥ ೧೩೨ ॥**

ಅಸಂಗಶ್ರುತಿಯು ಅಜ್ಞಾನದಿಂದ ಭಿನ್ನವಾದ (ಅನ್ಯವಾದ) ಅನ್ಯಸಂಗವನ್ನು ನಿಷೇಧಿಸುತ್ತದೆಂಬ ವಾದವನ್ನು ದೂಷಿಸುತ್ತಾರೆ:—

ಅಥ—ಮತ್ತು (ಅನ್ಯಪಕ್ಷವಾದವು), ಅಜ್ಞಾನಾನ್ಯಸಂಗಃ—ಅಜ್ಞಾನದಿಂದ ಬೇರೆ ಸಂಗವು (ಅಜ್ಞಾನವನ್ನು ಬಿಟ್ಟು ಇತರ ಸಂಗವು), ನ—ಇಲ್ಲ, ಇತ್ಯರ್ಥೇ—ಎಂದು ಅಸಂಗಶ್ರುತಿಯ ಅರ್ಥವಾದರೆ, ಅನರ್ಥಪರಂಪರಾ—ಅನರ್ಥಗಳ ಪರಂಪರೆಯು (ಒಂದರಮೇಲೊಂದು) (ಉಂಟಾಗುತ್ತದೆ) (ಏಕೆಂದರೆ), ಯಾ—ಯಾವ, ಶ್ರುತಿಃ—ಶ್ರುತಿಯು, ತಂ—ಬ್ರಹ್ಮನನ್ನು, ನಿರನಿಷ್ಟಂ—ಅಪ್ರಿಯರಹಿತನೆಂದೂ, ನಿರವದ್ಯಂ ಚ—ದೋಷರಹಿತನೆಂದೂ, ಶಂಸತಿ—ಸ್ತುತಿಸುತ್ತದೆಯೋ, ಸಾ—ಆ ಶ್ರುತಿಯು, ಮಹಾಶಕ್ತಿಮತಃ—ಅಚಿಂತ್ಯಾದ್ಭುತಶಕ್ತಿಯುಳ್ಳ, ತಸ್ಯ—ಬ್ರಹ್ಮನಿಗೆ, ದೋಷಂ—ಅಜ್ಞಾನರೂಪ ದೋಷವನ್ನು, ಶೇಷಯೇತ್ ಕಿಲ—ಉಳಿಸುವುದೇನು ? (ಅಸಂಗತ್ವವನ್ನು ಹೇಳುವ ಶ್ರುತಿಯು ಅಜ್ಞಾನಾನ್ಯಸಂಗರಹಿತನೆಂದು ಹೇಳುತ್ತದೆಂಬುದು ಯುಕ್ತಿವಿರುದ್ಧವೇ ಸರಿ).

**ಸರ್ವೇಶ್ವರತ್ವಕರ್ತೃತ್ವಸರ್ವವ್ಯಾಪಿತ್ವಪೂರ್ವಕಾನ್ ।**
**ಗುಣಾನ್ ಘೋಷಯಿತುಂ ಕಸ್ಮಾನ್ನಾದೋಷಂ ಶೇಷಯೇಜ್ಜಗತ್ ॥**

---

ಮತ್ತೇನೆಂದರೆ, ಅಜ್ಞಾನವು ತನ್ನಿಂದ ಭಿನ್ನವಾದ ಅನ್ಯವಸ್ತುಸಂಗವನ್ನು ಬ್ರಹ್ಮನಿಗೆ ಉಂಟುಮಾಡುವುದೆಂದರೆ ಅನರ್ಥ ಪರಂಪರೆಯುಂಟಾಗುತ್ತದೆ; ಅಸಂಗಶ್ರುತಿಯು, ಅಜ್ಞಾನವನ್ನು ಬಿಟ್ಟು ಅನ್ಯಸಂಗವನ್ನು ನಿಷೇಧಿಸುತ್ತದೆ ಎನ್ನುವುದು ಯುಕ್ತಿವಿರುದ್ಧವು. ಹಾಗಿದ್ದರೆ, 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಯಾವ ದೋಷಗಳೂ ಇಲ್ಲವೆಂದು ಹೇಳುವ ಶ್ರುತಿಗಳ ವಿರೋಧವು ಪ್ರಾಪ್ತವಾಗುತ್ತದೆ; ಅಜ್ಞಾನದ ಸಂಸರ್ಗವನ್ನೂ ಸ್ಪಷ್ಟವಾಗಿ ನಿಷೇಧಿಸಬೇಕಿತ್ತು; ಅಚಿಂತ್ಯ ಶಕ್ತ್ಯುಪೇತನೆಂದು ತಾನೇ ಹೇಳಿ, ಅವನಲ್ಲಿ ಅಸಂಗತ್ವವನ್ನು ಹೇಳುವ ಶ್ರುತಿಯು, ದೋಷವನ್ನು (ಅಜ್ಞಾನವೆಂಬ ದೋಷವನ್ನು) ಉಳಿಸುವುದೇ ? (ಸರ್ವಥಾ ಇಲ್ಲ) (೧೩೨). ಶ್ರುತಿಯು ಬ್ರಹ್ಮನಲ್ಲಿ,

ಸರ್ವೇಶ್ವರತ್ವಾದಿ ಮಹಾಗುಣಗಳನ್ನು ಬ್ರಹ್ಮನಲ್ಲಿ ಪೋಷಿಸುವ (ಇರುತ್ತವೆಂದು ಹೇಳುವ) ಶ್ರುತಿಯು, ಆತನಲ್ಲಿ ಯಾವ ದೋಷಕ್ಕೂ ಕಾರಣವಾಗದ (ದೋಷವನ್ನುಂಟುಮಾಡದ), ಕಿಂತು ಸೃಷ್ಟ್ಯಾದಿ ಮಹಿಮೆಗಳ ಸತ್ಯತೆಗೆ ಕಾರಣವಾಗುವ ಜಗತ್ತನ್ನೂ (ಉಳಿಸುವುದೇ) ಸತ್ಯವೆಂದು ಪುಷ್ಟೀಕರಿಸುವುದೇ ಉಚಿತವೆನ್ನುತ್ತಾರೆ:—

ಸರ್ವೇಶ್ವರತ್ವ ಕರ್ತೃತ್ವ ಸರ್ವವ್ಯಾಪಿತ್ವಪೂರ್ವಕಾನ್—ಸರ್ವದರ (ಎಲ್ಲ ವಸ್ತುಗಳ) ಈಶ್ವರತ್ವ (ಸ್ವಾಮಿತ್ವ) ಕರ್ತೃತ್ವ (ನಿಯಾಮಕತ್ವ) ಸರ್ವ ವ್ಯಾಪಿತ್ವ (ಎಲ್ಲವನ್ನೂ ಒಳಹೊರಗೆ ವ್ಯಾಪಿಸಿರುವಿಕೆ) ಮೊದಲಾದ, ಗುಣಾನ್—ಸದ್ಗುಣಗಳನ್ನು, ಪೋಷಯಿತುಂ—ಪುಷ್ಟೀಕರಿಸಲಿಕ್ಕಾಗಿ (ಜಗತ್ತು ಉಳಿದರೆ ತಾನೆ ಸರ್ವೇಶ್ವರತ್ವಾದಿಗಳು ದೃಢೀಕರಿಸಲ್ಪಡುತ್ತವೆ?), ಕಸ್ಮಾತ್ ಏಕೆ (ಯಾವ ಕಾರಣದಿಂದ), ಅದೋಷಂ—ದೋಷವನ್ನು ಬ್ರಹ್ಮನಲ್ಲಿ ತಂದು ಹೇರದ (ದೋಷಕಾರಣವಾಗದ), ಜಗತ್—ಜಗತ್ತನ್ನು, ನ ಶೇಷಯೇತ್—(ಸತ್ಯವೆಂದು ಹೇಳಿ) ಉಳಿಸುವುದಿಲ್ಲ? (ದೋಷಾಧಾಯಕ ಸಂಗವನ್ನು ಮಾತ್ರ ಅಸಂಗಶ್ರುತಿಯು ನಿರಾಕರಿಸುತ್ತದೆಯಲ್ಲದೇ, ಜಗತ್ತಿನ ಸಂಗವನ್ನಲ್ಲ).

**ಸ್ವಸಂಗವನ್ಮಂಗಲಾರ್ಥಂ ಸಂಗಮಂಗೀಕರೋತಿ ತತ್ ।**
**ಅಜ್ಞಾನದುಃಖಕರ್ಮಾದಿಲೇಪರೂಪಮಪಾಕರೋತ್ ॥ ೧೩೪ ॥**

ತತ್ (ತಸ್ಮಾತ್)—ಆದ್ದರಿಂದ, ಸ್ವಸಂಗವತ್—ತನ್ನೊಂದಿಗೆ (ಶ್ರುತಿಯೊಂದಿಗೆ) ಸಂಗ (ಪ್ರತಿಪಾದ್ಯ ಪ್ರತಿಪಾದಕರೂಪದ ಸಂಬಂಧವನ್ನು)

---

ಸರ್ವೇಶ್ವರತ್ವ, ಸರ್ವಕರ್ತೃತ್ವ, ಸರ್ವವ್ಯಾಪಿತ್ವಾದಿ ಸುಗುಣಗಳನ್ನು ತಾನೇ ಪ್ರತಿಪಾದಿಸುತ್ತಿರುವುದು; ಈ ಸದ್ಗುಣಗಳನ್ನು ಪುಷ್ಟೀಕರಿಸಲು ಅವಶ್ಯಕವಾದ ಜಗತ್ಸತ್ಯತ್ವವನ್ನು ರಕ್ಷಿಸಿ, ಜಗತ್ತಿನ ಸಂಗವು ಬ್ರಹ್ಮನಲ್ಲಿ ದೋಷಾಧಾಯಕವಲ್ಲವೆಂದು ಹೇಳಲು, ಅಸಂಗತ್ವವನ್ನು ಹೇಳುತ್ತದೆ—ದೋಷವನ್ನುಂಟುಮಾಡುವ ಸಂಗವನ್ನಲ್ಲ; ದೋಷಕಾರಣವಾಗದ ಜಗತ್ತನ್ನೇಕೆ ಉಳಿಸುವುದಿಲ್ಲ? (ಉಳಿಸಿಯೇ ಅಸಂಗನೆಂದು ಬ್ರಹ್ಮನನ್ನು ನಿರೂಪಿಸುತ್ತದೆ (೧೩೩). ಶ್ರುತಿಗೆ ಬ್ರಹ್ಮನೊಡನೆ, ಪ್ರತಿಪಾದ್ಯ ಪ್ರತಿಪಾದಕ ರೂಪದ ಸಂಗವಿದೆಯಷ್ಟೆ; ಅಸಂಗ ಶ್ರುತಿಯು ಇದನ್ನು ನಿಷೇಧಿಸುವುದೇ? (ಇಲ್ಲ); ಬ್ರಹ್ಮನಿಗೆ

ಹೊಂದಿರುವಂತೆ (ಅಜ್ಞಾನದಿಂದ ಅನ್ಯಸಂಗವಿಲ್ಲವೆಂದರೆ ಶ್ರುತಿಸಂಗವೂ ಇಲ್ಲದಂತಾಗುವುದಿಲ್ಲವೇ ?), ಮಂಗಲಾರ್ಥಂ–ಪರಮಮಂಗಲ (ಶ್ರುತಿ ಪ್ರತಿಪಾದ್ಯ ಮಹದಾದಿ ತತ್ತ್ವಗಳ ಆಧಾರನೆಂಬ)[1] ಗುಣಸಂಗವನ್ನು, ಅಂಗೀಕರೋತಿ–(ಅಸಂಗಶ್ರುತಿಯೂ) ಅಂಗೀಕರಿಸುತ್ತದೆ (ಒಪ್ಪಿಕೊಳ್ಳುತ್ತದೆ) ; ಅಜ್ಞಾನದುಃಖಕರ್ಮಾದಿಲೇಪರೂಪಂ–ಅಜ್ಞಾನ, ದುಃಖ, ಕರ್ಮ ಮೊದಲಾದವುಗಳ ಲೇಪವೆಂಬ (ಅಂಟಿಕೊಳ್ಳುವುದೆಂಬ — ಫಲಪ್ರಾಪಕವೆಂಬ) ದೋಷವನ್ನು (ನಿರವದ್ಯತ್ವ ಶ್ರುತಿಬಲದಿಂದ, ದೋಷರೂಪದ ಗುಣಸಂಗವಿಲ್ಲವನೆಂದು), ಅಪಾಕರೋತ್–(ಹೇಳಿ) ನಿರಾಕರಿಸುತ್ತದೆ.

**ಅಥವಾ ದುರ್ಜನೈಃ ಸಂಗಂ ಸ್ನೇಹರೂಪಂ ನಿಷೇಧತಿ ।**
**ಪ್ರಮಾತೃತ್ವಪ್ರಮೇಯತ್ವಸಂಗಂ ವಾ ತೈರ್ನ್ಯವಾರಯತ್ ।**
**ಅತಸ್ತ್ವಚ್ಛರಪಾತಸ್ಯ ಲಕ್ಷ್ಯಂ ವಕ್ಷೋಽಭವತ್ತವ ॥ ೧೩೫ ॥**

ಅಸಂಗಶ್ರುತಿಗೆ ಅರ್ಥಾಂತರವನ್ನು ಹೇಳುತ್ತಾರೆ :—

ಅಥವಾ – ಮತ್ತೂ (ಉಕ್ತಾರ್ಥದೊಂದಿಗೆ ಇದೂ), ದುರ್ಜನೈಃ – ತಮೋಯೋಗ್ಯ ಜೀವರಿಂದ, ಸ್ನೇಹರೂಪಂ–(ಗುಣವುಳ್ಳವನೆಂಬ ಪ್ರೀತಿ)

---

ಜಗನ್ಮೂಲಗಳಾದ ಪ್ರಾಕೃತ ಮಹದಾದಿಗುಣಗಳ ಸಂಗವೂ ಮಹಾಮಂಗಲ ಸ್ವರೂಪಳಾದ ಶ್ರೀ ಮಹಾಲಕ್ಷ್ಮೀದೇವಿಯ ನಿತ್ಯಸಂಗವೂ ಇರುತ್ತದೆಂದು ಅಸಂಗಶ್ರುತಿಯು ಅಂಗೀಕರಿಸುತ್ತದೆ; ಇದಲ್ಲದೇ, ಅಜ್ಞಾನ, ದುಃಖ, ಕರ್ಮಾದಿಗಳ ಲೇಪವನ್ನು ನಿಷೇಧಿಸುತ್ತದೆ; ನಿರನಿಷ್ಟ, ನಿರವದ್ಯತ್ವವನ್ನು ಪ್ರತಿಪಾದಿಸುವ ಶ್ರುತಿಯೂ ಗುಣಸಂಗವನ್ನು ನಿರಾಕರಿಸದೇ ದೋಷರೂಪದ ಗುಣಸಂಗವನ್ನು ಮಾತ್ರ ನಿಷೇಧಿಸುತ್ತದೆ (೧೩೪). ಮತ್ತು, ಅಯೋಗ್ಯ ತಮೋಜೀವರ ಸಂಗವನ್ನೂ ನಿಷೇಧಿಸುತ್ತದೆ, ಎಂದರೆ, ಜ್ಞಾತೃ ಜ್ಞೇಯ

---

1 'ಸರ್ವಸ್ಯ ವಶೀ ಸರ್ವಸ್ಯೇಶಾನಃ' ಇತ್ಯಾದಿ ಶ್ರುತಿಪ್ರತಿಪಾದ್ಯ ಪರಮಂಗಲ ಗುಣಗಳ ಸಂಗವನ್ನೂ, 'ಶ್ರೀ ಸದೋಪಾಸ್ಯಪಾದಾಬ್ಜಃ' ಇತ್ಯಾದಿ ಸ್ಮೃತ್ಯುಕ್ತ ಪರಮ ಮಂಗಲ ಮಹಾಲಕ್ಷ್ಮೀ ಸಂಗವನ್ನೂ, ಸ್ವಪ್ರತಿಪಾದ್ಯ, ಅಜ್ಞಾನ, ದುಃಖ, ಕರ್ಮಾದಿಗಳ ಲೇಪರಹಿತನೆಂಬ ಅಸಂಗವನ್ನೂ ಅಸಂಗಶ್ರುತಿಯು ಹೇಳುತ್ತದೆಂದು ತಿಳಿಯಬೇಕು.

ಸ್ನೇಹರೂಪದ, ಸಂಗಂ–ಸಂಬಂಧವನ್ನು, ನಿಷೇಧತಿ–(ಬ್ರಹ್ಮನಿಗೆ ಇಲ್ಲವೆಂದು) ನಿಷೇಧಿಸುತ್ತದೆ ; ವಾ–ಮತ್ತು, ಪ್ರಮಾತೃತ್ವಪ್ರಮೇಯತ್ವಸಂಗಂ–ಜ್ಞಾತೃಜ್ಞೇಯ (ತಿಳಿಯುವವನು ಮತ್ತು ತಿಳಿಯಲ್ಪಡುವವನು ಎಂಬ) ರೂಪದ ಸಂಗವನ್ನು (ಸಂಪರ್ಕವನ್ನು—ಸ್ನೇಹವನ್ನು), ತೈಃ–ಆ ದುರ್ಜನರಿಂದ, ನ್ಯವಾರಯತ್–(ಬ್ರಹ್ಮನಲ್ಲಿ) ನಿವಾರಿಸಿತು (ಅಸಂಗನೆಂಬುದರಿಂದ ನಿರಾಕರಿಸುತ್ತದೆ) ; ಅತಃ–ಆದ್ದರಿಂದ (ಈ ಅರ್ಥದಂತೆ), ತ್ವಚ್ಛರಪಾತಸ್ಯ–ನಿನ್ನ ಬಾಣವು ಬಡಿಯತಕ್ಕ (ಅಸಂಗಶ್ರುತಿಯಿಂದ ನಿನ್ನ ಪ್ರಕ್ರಿಯೆಯನ್ನು ಸಾಧಿಸುವುದೆಂಬ ಶರದ), ಲಕ್ಷ್ಯಂ – ಗುರಿಯು, ತವ ವಕ್ಷಃ – ನಿನ್ನ ಎದೆಯೇ, ಅಭವತ್ – ಆಯಿತು (ನಿನ್ನ ಎದೆಗೇ ಬಡಿದಂತಾಗಿ ವ್ಯರ್ಥವಾಯಿತು).

**ಕಿಂಚ ಸಾರ್ವಜ್ಞ್ಯಮಜ್ಞಾನಸಾಪೇಕ್ಷಮಿತಿ ಯದ್ವಚಃ ।**
**ಮೂಕೋಽಹಮಿತಿವತ್ತಚ್ಚ ವಿರುದ್ಧಮಿತಿ ಮೇ ಮತಿಃ ॥ ॥೧೩೬ ॥**

ಬ್ರಹ್ಮನ ಸರ್ವಜ್ಞತ್ವಕ್ಕೆ ಅಜ್ಞಾನವು ಅಪೇಕ್ಷಿತವಲ್ಲೆಂಬುದನ್ನು ಈ ಹಿಂದೆ ಸಮರ್ಥಿಸಿ, ಈಗ ಹಾಗೆ ಹೇಳುವುದು ಸ್ವವ್ಯಾಹತವೂ ಆಗಿರುವುದೆಂದು ತೋರಿಸುತ್ತಾರೆ :—

ಕಿಂಚ–ಅದೂ ಇರಲಿ, ಸಾರ್ವಜ್ಞ್ಯಂ–ಸರ್ವಜ್ಞತ್ವವು, ಅಜ್ಞಾನಸಾಪೇಕ್ಷಂ ಅಜ್ಞಾನವನ್ನು (ಅದರ ಸಹಾಯವನ್ನು) ಅಪೇಕ್ಷಿಸುತ್ತದೆ, ಇತಿ ಯದ್ವಚಃ–ಹೀಗೆಂಬ ನುಡಿಯೇ, ಅಹಂ ಮೂಕಃ – 'ನಾನು ಮೂಕನು', ಇತಿವತ್ – ಎಂಬಂತೆ, ತತ್ ಚ–ಅದೂ ಸಹ ವಿರುದ್ಧವೇ (ವ್ಯಾಹತವೇ), ಇತಿ–ಎಂದು, ಮೇ–ನನ್ನ, ಮತಿಃ–ನಿಶ್ಚಯವು.

---

(ತಿಳಿಯುವ ಜೀವ ಮತ್ತು ತಿಳಿಯಲ್ಪಡುವ ಬ್ರಹ್ಮ ; ಎಂಬ) ರೂಪದ ಸಂಬಂಧವನ್ನು ಅವರಿಂದ ನಿಷೇಧಿಸುತ್ತದೆ ; ತಮೋಯೋಗ್ಯರನ್ನು ಸ್ನೇಹದಿಂದ ಕಂಡು ಅನುಗ್ರಹಿಸಿ, ತನ್ನ ದರ್ಶನವನ್ನು ಎಂದೂ ಕೊಡುವುದಿಲ್ಲ; ಆದ್ದರಿಂದ ಅಸಂಗ ಶ್ರುತಿಯ ಬಲದಿಂದ ಬ್ರಹ್ಮನಲ್ಲಿ ಅಜ್ಞಾನವನ್ನು ಸಾಧಿಸುವೆನೆಂಬ ನಿನ್ನ ಬಾಣವು ನಿನ್ನ ಎದೆಗೇ ಬಡಿದು ವ್ಯರ್ಥವಾಯಿತು (೧೩೫). ಮತ್ತೇನೆಂದರೆ, ಬ್ರಹ್ಮನಿಗೆ ಸರ್ವಜ್ಞತ್ವವು ಸಿದ್ಧವಾಗಲು ಅಜ್ಞಾನವು ಅಪೇಕ್ಷಿತವೆಂದು ತಿಳಿಯುವುದೂ ಸ್ವವ್ಯಾಹತವು— 'ನಾನು ಮೂಕನು'

**ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ।**
**ಇತಿ ಭಾಗವತೋಕ್ತ್ಯಾ ಯಚ್ಚಿದಪ್ಯಜ್ಞಾನನಾಶಿನೀ ।**
**ಸ್ವರೂಪಜ್ಞಾನಮಪ್ಯಜ್ಞಾನಸ್ಯ ವೈರಿ ನ ಸಂಶಯಃ ॥ ೧೩೭ ॥**

ಸ್ವರೂಪಜ್ಞಾನಕ್ಕೂ ಅಜ್ಞಾನಕ್ಕೂ ವಿರೋಧವಿಲ್ಲದಿದ್ದರಿಂದ ಹೇಗೆ ವ್ಯಾಹತಿ ಎಂದರೆ ಹೇಳುತ್ತಾರೆ :—

ಮಾಯಾಂ—ಅವಿದ್ಯೆಯನ್ನು, ವ್ಯುದಸ್ಯ—ಕಳೆದುಕೊಂಡು (ತೊರೆದು), ಚಿಚ್ಛಕ್ತ್ಯಾ – ಚೇತನಶಕ್ತಿಯಿಂದ, ಕೈವಲ್ಯೇ ಆತ್ಮನಿ – ನಿತ್ಯಮುಕ್ತನಾದ ಭಗವಂತನಲ್ಲಿ, ಸ್ಥಿತಃ—ಇರುವ ಜೀವನು, ಇತಿ—ಎಂಬ, ಭಾಗವತೋಕ್ತ್ಯಾ—ಭಾಗವತ ವಚನದಿಂದ, ಚಿತ್ ಅಪಿ—ಸ್ವರೂಪಜ್ಞಾನವೂ, ಅಜ್ಞಾನನಾಶಿನೀ—ಅಜ್ಞಾನವನ್ನು ನಾಶಮಾಡುವುದೋ (ಮಾಡಲು ಸಮರ್ಥವೋ) (ಆದ್ದರಿಂದ), ಸ್ವರೂಪಜ್ಞಾನಂ ಅಪಿ—ಸ್ವರೂಪಜ್ಞಾನವೂ, ಅಜ್ಞಾನಸ್ಯ—ಅಜ್ಞಾನದ, ವೈರಿ—ವಿರೋಧಿಯು, ನ ಸಂಶಯಃ—ಸಂಶಯವಿಲ್ಲ.[1]

**ಸುಖಜ್ಞಾನೇ ಸತಿ ತದಾ ತದಜ್ಞಾನಂ ಚ ಕೋಽನ್ವಭೂತ್ ।**
**ಸತ್ಯಜ್ಞಾನೇಽನವಚ್ಛಿನ್ನಸುಖಂ ವಾ ಕೋಽನ್ವಭೂದ್ಭವೇತ್ ॥ ೧೩೮ ॥**

ಎಂದಂತೆ; ಸರ್ವಜ್ಞತ್ವ ಮತ್ತು ಅಜ್ಞಾನಗಳು ಪರಸ್ಪರ ವಿರುದ್ಧಗಳಲ್ಲವೇ ? (೧೩೬). ಶ್ರೀಮದ್ಭಾಗವತದಲ್ಲಿ, ಚೇತನನು ತನ್ನ ಸ್ವರೂಪಜ್ಞಾನಶಕ್ತಿಯಿಂದ, ಅವಿದ್ಯೆಯನ್ನು ತೊಲಗಿಸಿ, ಪರಮಾತ್ಮನಲ್ಲಿ ಸ್ಥಿರನಾಗುವನೆಂದು ಹೇಳಿರುತ್ತದೆ; ಇದರಿಂದಲೂ ಸ್ವರೂಪಜ್ಞಾನವು ಅಜ್ಞಾನ ನಾಶಕವೆಂದು ತಿಳಿದುಬರುತ್ತದೆ; ಆದ್ದರಿಂದ ನಿಸ್ಸಂಶಯವಾಗಿ ಚೇತನ ಸ್ವರೂಪಜ್ಞಾನದ ವಿರೋಧಿಯಾದುದ್ದು, ಅಜ್ಞಾನವು (೧೩೭). ಈ ಪ್ರಮೇಯವು ಅನುಭವ ಸಿದ್ಧವೂ ಆಗಿದೆ; ಸುಖದ ಜ್ಞಾನವಿದ್ದಾಗ, ಸುಖವನ್ನು ತಿಳಿಯೆನೆಂಬ ಅನುಭವ

---

1 ಅಲ್ಪಜ್ಞನಾದ ಜೀವಸ್ವರೂಪಜ್ಞಾನವೇ ಅಜ್ಞಾನನಾಶಕವಾಗಿರಲು ಸರ್ವಜ್ಞನಾದ ಪರಬ್ರಹ್ಮನ ಸ್ವರೂಪವು ಯಾವ ಅಜ್ಞಾನವನ್ನಾದರೂ ಪರಿಹರಿಸುವ ಸಾಮರ್ಥ್ಯವುಳ್ಳದ್ದೆಂದು ಕೈಮುತ್ಯದಿಂದ ಸಿದ್ಧವಾಗುತ್ತದೆ; 'ಯದ್ಭಾತಂ ನ ತದಜ್ಞಾತಂ' ಎಂಬ ನಿಮ್ಮ ಆಚಾರ್ಯರ ವಾಕ್ಯವನ್ನು ಸ್ಮರಿಸು—ಜ್ಞಾನ ಅಜ್ಞಾನಗಳು ಎಲ್ಲಿಯೂ, ಎಂದೂ ಏಕಕಾಲದಲ್ಲಿ ಒಟ್ಟಿ ಇರಲಾರವು; ಮುಂದಿನ ಶ್ಲೋಕದಲ್ಲಿ ಇದರ ವಿವರಣೆಯನ್ನು ಕಾಣುವಿರಿ.

ಸ್ವರೂಪಜ್ಞಾನವು ಅಜ್ಞಾನಕ್ಕೆ ವಿರೋಧಿಯಲ್ಲವೆಂಬುದು ಅನುಭವ ಸಿದ್ಧವೂ ಆದುದೆನ್ನುತ್ತಾರೆ :—

ಸುಖಜ್ಞಾನೇ ಸತಿ – ಸುಖದ ಜ್ಞಾನವು ಇರುತ್ತಿರಲು, ತದಾ—ಆಗ, ತದಜ್ಞಾನಂ – ಸುಖದ ಅಜ್ಞಾನವು (ಸುಖವನ್ನು ತಿಳಿಯುವುದಿಲ್ಲವೆಂದು), ಕಃ—ಯಾರು, ಅನ್ವಭೂತ್—ಅನುಭವಿಸುತ್ತಾನೆ ? (ಯಾರೂ ಇಲ್ಲ ; ಸುಖ ಜ್ಞಾನವು ಸಾಕ್ಷಿಯಿಂದ ಗ್ರಾಹ್ಯವು—ಅದೇ ಸ್ವರೂಪಜ್ಞಾನವು ; ಸುಖಜ್ಞಾನ ವಿರುವಾಗಲೇ ಸುಖವನ್ನು ತಿಳಿಯೆನೆಂಬ ಅನುಭವವೂ ಆಗಲು ಶಕ್ಯವಿಲ್ಲ) ; ಅಜ್ಞಾನೇ ಸತಿ – ಅಜ್ಞಾನವಿರುವಾಗ (ಸಂಸಾರದಲ್ಲಿ), ಅನವಚ್ಛಿನ್ನಸುಖಂ ವಾ—ಪೂರ್ಣಸುಖವನ್ನೇ (ಅಮಿಶ್ರಿತ ಪೂರ್ತಿಸುಖವನ್ನು), ಕೋನ್ವಭೂತ್— ಯಾರು ಅನುಭವವುಳ್ಳವನು, ಭವೇತ್—ಆಗಬಹುದು ? (ಯಾರೂ ಇಲ್ಲ) (ಅಜ್ಞಾನವು ಸುಖಜ್ಞಾನವನ್ನು ವಿರೋಧಿಸದಿದ್ದರೆ, ಕೇವಲ ಸುಖಾನುಭವವೂ ಸಂಸಾರಾವಸ್ಥೆಯಲ್ಲಿ ದೊರೆಯಬೇಕಾಗುತ್ತದೆ).

**ಯದ್ಜ್ಞಾತಂ ನ ತದಜ್ಞಾತಮಿತಿ ಯತ್ತತ್ವದೀಪನೇ ।**
**ಸ್ವಯಮುಪ್ಯಾಹ ಸಾರ್ವಜ್ಞಾಜ್ಞತ್ವೇ ತದ್ದೂರದೂರಗೇ ॥ ೧೩೯ ॥**

ತತ್ವದೀಪನೇ—ತತ್ವದೀಪನಗ್ರಂಥದಲ್ಲಿ, ಯದ್ಜ್ಞಾತಂ—ಯಾವುದು ತಿಳಿ ಯಲ್ಪಟ್ಟಿರುವುದೋ, ತತ್ – ಅದು, ಅಜ್ಞಾತಂ ನ – ತಿಳಿಯದಿರುವುದಲ್ಲ

---

ವನ್ನು ಯಾರು ಹೊಂದುತ್ತಾರೆ ? (ಯಾರೂ ಇಲ್ಲ); ಸುಖವು ಸಾಕ್ಷಿ ಗ್ರಾಹ್ಯವು—ಅದೇ ಸ್ವರೂಪಜ್ಞಾನವೆಂಬುದು ; ಅಜ್ಞಾನವಿರುವಾಗ, ಸಂಸಾರ ದೆಶೆಯಲ್ಲಿ ಪೂರ್ಣ ಸುಖಾನುಭವವು (ಅಮಿಶ್ರಿತ ಕೇವಲ ಸುಖಾನುಭವವು) ಯಾರಿಗೂ ಬರುವುದಿಲ್ಲ; ಈ ಅನುಭವದಿಂದಲೂ, ಸುಖದ ಜ್ಞಾನವನ್ನು ಅದರ ಅಜ್ಞಾನವು ವಿರೋಧಿಸುತ್ತದೆಂದು ತಿಳಿಯಬಹುದಾಗಿದೆ (೧೩೮). ತತ್ವದೀಪನದಲ್ಲಿ ನಿಮ್ಮ ಶಂಕರಾಚಾರ್ಯರು ಜ್ಞಾನವಿರುವಲ್ಲಿ ಅಜ್ಞಾನ ವಿರುವುದಿಲ್ಲವೆಂಬರ್ಥವನ್ನು, ಸ್ಪಷ್ಟವಾಗಿ ಹೇಳಿದ್ದಾರೆ—'ಯದ್ಜ್ಞಾತಂ ನ ತದಜ್ಞಾತಂ' ಯಾವುದು ತಿಳಿದಿದೆಯೋ ಅದರ ಅಜ್ಞಾನವು ಜ್ಞಾನದಲ್ಲಿರು ವುದಿಲ್ಲ ; ಎಂದು ಸಾಕ್ಷೀಸಿದ್ಧವಾದ ಅನುಭವವನ್ನೇ ಹೇಳಿರುವರು; ಆದ್ದರಿಂದ ಸರ್ವಜ್ಞತ್ವ ಮತ್ತು ಅಜ್ಞಾನಗಳು ಪರಸ್ಪರ ವಿರೋಧಿಸುತ್ತವೆ—ಒಟ್ಟಿಗಿರಲು

(ಜ್ಞಾನದಲ್ಲಿ ಜ್ಞಾನಪ್ರಕಾಶವಿರಲು, ಅಜ್ಞಾನವೆಂಬ ಕತ್ತಲು ಅಲ್ಲಿರಲು ಶಕ್ಯ ವಿಲ್ಲ), ಇತಿ ಯತ್ – ಹೀಗೆಂಬುದನ್ನು, ಸ್ವಯಂ ಅಪಿ – ತಾವೇ (ನಿಮ್ಮ ಆಚಾರ್ಯರೇ), ಆಹ–ಹೇಳಿರುವರು; ತತ್–ಆದ್ದರಿಂದ, ಸಾರ್ವಜ್ಞ್ಯಾಜ್ಞತ್ವೇ–ಸರ್ವಜ್ಞತ್ವ ಮತ್ತು ಅಜ್ಞಾನಗಳು, ದೂರದೂರಗೇ–(ಪರಸ್ಪರ) ಬಹುದೂರ ವಿರುತ್ತವೆ (ಒಂದನ್ನೊಂದು ವಿರೋಧಿಸುತ್ತವೆ).

**ಅಜ್ಞತಾಽಖಿಲಸಂವೇತ್ತುರ್ಘಟತೇ ನ ಕುತಶ್ಚನ ।**
**ಇತ್ಯುಕ್ತಮತ ಏವಾರ್ಯೈಃ ಕಾರ್ಯಧುರ್ಯೈರ್ಮಹಾತ್ಮಭಿಃ ॥೧೪೦**

ಕಾರ್ಯಧುರ್ಯೈಃ – ಪರ ನಿರಾಕರಣಕಾರ್ಯದಲ್ಲಿ ಧುರಂಧರರಾದ, ಮಹಾತ್ಮಭಿಃ–ಮಹಾತ್ಮರಾದ, ಆರ್ಯೈಃ–ಶ್ರೀಮದಾಚಾರ್ಯರಿಂದ (ಜ್ಞಾನಿ ಶ್ರೇಷ್ಠರೂ, ಪೂಜ್ಯರೂ ಆದ ಶ್ರೀಮನ್ಮಧ್ವಾಚಾರ್ಯರಿಂದ), ಅತ ಏವ–ಆದ್ದರಿಂದಲೇ, ಅಖಿಲಸಂವೇತ್ತುಃ– ಸರ್ವಜ್ಞನಾದವನಿಗೆ, ಅಜ್ಞತಾ– ಅಜ್ಞಾನವು, ಕುತಶ್ಚನ – ಯಾವ ಕಾರಣದಿಂದಲೂ, ನ ಘಟತೇ – ಕೂಡುವುದಿಲ್ಲ (ಸಂಭಾವ್ಯವಲ್ಲ) ; ಇತಿ–ಎಂದು (ತಮ್ಮ ಉಪಾಧಿಖಂಡನ ಗ್ರಂಥದಲ್ಲಿ), ಉಕ್ತಂ–ಹೇಳಲ್ಪಟ್ಟಿದೆ.

**ಜ್ಞಾನೇ ಸತ್ಯೇವ ಚಾಜ್ಞಾನಂ ಯದೀದಂ ತರ್ಹಿ ಕಿಂ ನಞಾ ।**
**ನಾಮ್ನಿ ವಿಪ್ರತಿಪತ್ತಿಸ್ತೇ ಜಾನತಾಂ ಜ್ಞಾನಮೇವ ತತ್ ॥ ೧೪೧ ॥**

ಜ್ಞಾನೇ–ಸ್ವರೂಪಜ್ಞಾನವು, ಸತಿ ಏವ–ಇರುತ್ತಿದ್ದರೂ, ಅಜ್ಞಾನಂ ಚ–ಅಜ್ಞಾನವೂ, ಯದಿ–(ಅದರೊಂದಿಗೆ) ಇರುವುದಾದರೆ, ತರ್ಹಿ–ಆಗ, ನಞಾ ಕಿಂ–ನಕಾರದಿಂದೇನು ಪ್ರಯೋಜನ ? (ಏನೂ ಇಲ್ಲದಂತಾಗುತ್ತದೆ); ನಾಮ್ನಿ

---

ಶಕ್ಯವಿಲ್ಲ (೧೩೯). ಇದನ್ನೇ ನಮ್ಮ ಶ್ರೀಮದಾಚಾರ್ಯರೂ, ತಮ್ಮ ಉಪಾಧಿಖಂಡನವೆಂಬ ಗ್ರಂಥದಲ್ಲಿ 'ಅಜ್ಞತಾಽಖಿಲಸಂವೇತ್ತುರ್ಘಟತೇ ನ ಕುತಶ್ಚನ' – ಸರ್ವಜ್ಞನಿಗೆ ಅಜ್ಞಾನವು ಕೂಡುವುದೇ ಇಲ್ಲವೆಂದಿದ್ದಾರೆ; ಪರನಿರಾಕರಣಕಾರ್ಯಧುರಂಧರರಾದ ಲೋಕಪೂಜ್ಯರು ಆಡಿರುವ ಮಾತು ಗಳನ್ನು ಗೌರವಿಸುವುದುಚಿತವೇ ಸರಿ (೧೪೦). ಜ್ಞಾನವಿದ್ದರೂ ಬ್ರಹ್ಮನಲ್ಲಿ ಅಜ್ಞಾನವಿರಬಹುದೆಂದರೆ, 'ಅಜ್ಞಾನ'ವೆಂಬಲ್ಲಿ 'ನ' ಕಾರದ ಸಾರ್ಥಕ್ಯವೇ ಇಲ್ಲದಂತಾಗುತ್ತದೆ; ಅಕಾರವಾಚ್ಯನಾದ ಪರಮಾತ್ಮನ ( 'ಅ ಇತಿ ಬ್ರಹ್ಮ'

–ಅಜ್ಞಾನವೆಂಬ ನಾಮದಲ್ಲಿ (ಪದದಲ್ಲಿ), ತೇ–ನಿನ್ನ, ವಿಪ್ರತಿಪತ್ತಿಃ–ವಿರೋಧಾಭಿಪ್ರಾಯವು, ಜಾನತಾಂ–ಅಕ್ಷರಾರ್ಥಜ್ಞಾನವುಳ್ಳವರಿಗೆ, ತತ್–ಅಜ್ಞಾನಶಬ್ದವು, ಜ್ಞಾನಂ ಏವ–ಜ್ಞಾನವೇ ಆಯಿತು (ಅಕಾರವಾಚ್ಯನಾದ ಪರಮಾತ್ಮನ ಜ್ಞಾನವು ಅಜ್ಞಾನೆಂಬ ವ್ಯುತ್ಪತ್ತಿಯಿಂದ [ಅ ಇತಿ ಬ್ರಹ್ಮ ಇತಿ ಶ್ರುತೇಃ ಅಸ್ಯ–ಬ್ರಹ್ಮಣಃ, ಜ್ಞಾನಂ–ಅಜ್ಞಾನಂ] ತೋರಿದರೆ, ಬ್ರಹ್ಮನ ಸ್ವರೂಪಜ್ಞಾನವೆಂದೇ ಪ್ರಾಪ್ತವಾಯಿತು; ನಕಾರಾರ್ಥಕಃ–ಜ್ಞಾನರಾಹಿತ್ಯವನ್ನು ಹೇಳುವ ಅಜ್ಞಾನವು ಬ್ರಹ್ಮನಲ್ಲಿಲ್ಲವೆಂದೇ ಸಿದ್ಧವಾಗುವುದಲ್ಲವೇ ?)

**ಯದಿ ತನ್ಮಾನಸಂ ಜ್ಞಾನಂ ರುಣದ್ಧಿ ತವ ನಿಷ್ಕಲೇ ।**
**ನ ಬ್ರಹ್ಮಣಿ ಮನೋಽಪ್ಯಸ್ತಿ ತಸ್ಯಾಜ್ಞಾನಂ ತು ಕೇನ ತತ್ ॥ ೧೪೨ ॥**

(ಬ್ರಹ್ಮನ ಸ್ವರೂಪಜ್ಞಾನವನ್ನು ಅವಿದ್ಯೆಯು ವಿರೋಧಿಸುವುದಿಲ್ಲ;[1] ಮತ್ತೇನೆಂದರೆ, ಬ್ರಹ್ಮನ ಮಾನಸಿಕ ಜ್ಞಾನವನ್ನು ಮಾತ್ರ ವಿರೋಧಿಸುತ್ತದೆಂದರೆ, ಹೇಳುತ್ತಾರೆ :—

ಯದಿ–ಒಂದು ಪಕ್ಷ, ತನ್ಮಾನಸಂ ಜ್ಞಾನವು–ಬ್ರಹ್ಮನ ಮಾನಸಜ್ಞಾನವನ್ನು, (ಅಜ್ಞಾನವು), ರುಣದ್ಧಿ–ವಿರೋಧಿಸುತ್ತದೆಂದರೆ, ತವ–ನಿನ್ನ, ನಿಷ್ಕಲೇ – ಕಲಾರಹಿತನಾದ, ಬ್ರಹ್ಮಣಿ – ಬ್ರಹ್ಮನಲ್ಲಿ, ಮನಃ ಅಪಿ – (೫ ಜ್ಞಾನೇಂದ್ರಿಯಗಳು, ೫ ಕರ್ಮೇಂದ್ರಿಯಗಳು, ೧ ಮನಸ್ಸು ಮತ್ತು ೫ ಭೂತಗಳು, ಒಟ್ಟು ೧೬ ಪ್ರಾಕೃತಾಂಶಗಳು) ಮನಸ್ಸೂ ಸಹ, ನ ಅಸ್ತಿ–

---

ಎಂಬ ಶ್ರುತಿಯಿಂದ) ಜ್ಞಾನವೆಂಬ ಅರ್ಥವನ್ನು ತಿಳಿಯುವುದಾದರೆ, ಅಜ್ಞಾನವೆಂಬುದಕ್ಕೆ ಜ್ಞಾನವೆಂದೇ ಅರ್ಥವಾಯಿತು; ಬ್ರಹ್ಮನ ಸ್ವರೂಪ ಜ್ಞಾನದೊಡನೆ, ಜ್ಞಾನ ವಿರೋಧಿಯೆಂಬರ್ಥದ 'ಅಜ್ಞಾನ'ವಿಲ್ಲೆಂದೇ ಸಿದ್ಧವಾಗುತ್ತದೆಯಷ್ಟೆ (೧೪೧). ಬ್ರಹ್ಮನ ಸ್ವರೂಪ ಜ್ಞಾನವನ್ನು ಈ ಅಜ್ಞಾನವು ವಿರೋಧಿಸುವುದಿಲ್ಲ; ಕಿಂತು, ಬ್ರಹ್ಮನ ಮಾನಸಜ್ಞಾನವನ್ನು ವಿರೋಧಿಸುತ್ತದೆ ಎಂದು ತಿಳಿಯುವುದೂ ಸಲ್ಲುವ ಮಾತಲ್ಲ; ಏಕೆಂದರೆ, ಬ್ರಹ್ಮನು

---

1 ಸ್ವರೂಪಜ್ಞಾನವನ್ನು ಅಜ್ಞಾನವು ವಿರೋಧಿಸಲಾರದು (ಅದಿದ್ದಲ್ಲಿ ತಾನು ಇರಲಾರದು) ಮತ್ತು ಬ್ರಹ್ಮನಿಗೆ ಮಾನಸಜ್ಞಾನವಿಲ್ಲ; ಎರಡೂ ವಿಧದಿಂದ ಬ್ರಹ್ಮನಲ್ಲಿ ಅಜ್ಞಾನಕ್ಕೆ ಸ್ಥಾನವಿಲ್ಲ.

ಇರುವುದಿಲ್ಲ, ತತ್–ಆದ್ದರಿಂದ, ಕೇನ–ಯಾವ ಕಾರಣದಿಂದ, ತಸ್ಯ ಅಜ್ಞಾನಂ –ಅವನಲ್ಲಿರುವ ಅಜ್ಞಾನವು ?

**ಅಜ್ಞಾನಕಲ್ಪ್ಯಂ ಸರ್ವಂ ತೇ ಮನ ಆದಿ ಜಗತ್ತ್ರಯಂ ।**
**ಪ್ರಾಕ್ಸೃಷ್ಟೇರ್ನ ತದಜ್ಞಾನಂ ನಾಜ್ಞೋ ಭ್ರಾಂತೋಽಪಿ ಚಾಪರಃ ॥**

ತೇ–ನಿನಗೆ (ನಿನ್ನ ಮತದಲ್ಲಿ), ಮನ ಆದಿ ಸರ್ವಂ–ಮನ ಮೊದಲಾದ ಎಲ್ಲವೂ, ಜಗತ್ತ್ರಯಂ–ಮೂರು ಲೋಕಗಳು (ಸರ್ವಜಗತ್ತೂ), ಅಜ್ಞಾನ ಕಲ್ಪ್ಯಂ–ಅಜ್ಞಾನದಿಂದ ಕಲ್ಪಿತಗಳು; ಸೃಷ್ಟೇಃ ಪ್ರಾಕ್–ಸೃಷ್ಟಿಪೂರ್ವದಲ್ಲಿ, ತದಜ್ಞಾನಂ–(ಬ್ರಹ್ಮನಲ್ಲಿ ನೀನು ಅಂಗೀಕರಿಸುವ) ಅಜ್ಞಾನವೆಂಬುದು, ನ–ಇರಲಿಲ್ಲ (ಜ್ಞಾನ ವಿರೋಧಿಯಾದ ಅಜ್ಞಾನವು ಇರಲಿಲ್ಲ); (ಆದ್ದರಿಂದ) ಅಜ್ಞಃ – ಅಜ್ಞಾನಿಯೂ (ಜ್ಞಾನವಿರೋಧಿಯಾದ ಅಜ್ಞಾನವನ್ನುಳ್ಳವನು), ನ–ಅಲ್ಲ; ಭ್ರಾಂತಃ ಅಪಿ (ನ)–ಭ್ರಾಂತನೂ (ಅಜ್ಞಾನದಿಂದ ಉಂಟಾದ ಭ್ರಮೆಯುಳ್ಳವನೂ) ಅಲ್ಲ; ಅಪರಃ ಚ–ಬೇರೆಯೇ (ಸರ್ವಜ್ಞನೇ) ಆಗಿರ ಬೇಕು (ಅಂತೂ ಜಗತ್ತು ಬ್ರಹ್ಮನಿಂದ ಸೃಷ್ಟವಾದುದು, ಅಜ್ಞಾನಕಲ್ಪಿತವಲ್ಲ).

**ಸೃಜ್ಯಜೀವಸ್ಯ ಮನಸೋ ವೃತ್ತ್ಯಾ ನಾಶ್ಯತ್ವತೋ ಯದಿ ।**
**ತದಜ್ಞಾನೇ ತವ ಮತಂ ಯುಕ್ತಿರ್ನಾಂಗೀಕರೋತಿ ತತ್ ॥ ೧೪೪ ॥**

**ಅನ್ಯಜ್ಞಾನೇನಾನ್ಯನಿಷ್ಠಸ್ಯಾಜ್ಞಾನಸ್ಯಾನಿವರ್ತನಾತ್ ।**
**ಕಿಂ ದೇವದತ್ತಜ್ಞಾನೇನ ಯಜ್ಞದತ್ತಾಜ್ಞಾನತಾ ಗತಾ ॥ ೧೪೫ ॥**

---

ನಿಷ್ಕಲನಲ್ಲವೇ ? ನಿನ್ನಂತೆ, ಅವನಲ್ಲಿ ಷೋಡಶ (೧೬) ಕಲೆಗಳೆಂಬ ಪ್ರಾಕೃತಾಂಶಗಳ ಸ್ಪರ್ಶವಿಲ್ಲದ ಶುದ್ಧಸ್ವರೂಪನಲ್ಲವೇ ? (ಮನಸ್ಸು ಷೋಡಶ ಕಲೆಗಳಲ್ಲಿ ಒಂದು) ಆದ್ದರಿಂದ ಬ್ರಹ್ಮನಿಗೆ ಮನೋವೃತ್ತಿರೂಪದ ಜ್ಞಾನ ವೆಲ್ಲಿದೆ ? (೧೪೨). ಮನವೊದಲಾದ ಸರ್ವಜಗತ್ತು, ಜಗತ್ಸೃಷ್ಟಿಯ ಪೂರ್ವದಲ್ಲಿ ಇರಲಿಲ್ಲ ; ನಿನ್ನಂತೆ ಈ ಎಲ್ಲವೂ ಅಜ್ಞಾನಕಲ್ಪಿತಗಳು ; ಸೃಷ್ಟಿಗೆ ಪೂರ್ವದಲ್ಲಿ ಬ್ರಹ್ಮನಿಗೆ ಅಜ್ಞಾನವಿರಲಿಲ್ಲ ; ಮುಂದೆ ಇವುಗಳ ಕಲ್ಪನೆಯು ಹೇಗೆ ಕೂಡುತ್ತದೆ? ಆದ್ದರಿಂದ ಬ್ರಹ್ಮನು ಅಜ್ಞನೂ ಅಲ್ಲ; ಭ್ರಾಂತನೂ ಅಲ್ಲ–ಸರ್ವಜ್ಞನೇ ಸರಿ (೧೪೩). ಮುಂದೆ ಅಜ್ಞಾನದಿಂದ ಸೃಷ್ಟನಾಗಲಿರುವ (ಭಾವಿ) ಜೀವನ, ಮಾನಸಜ್ಞಾನದಿಂದ (ಮನೋಜನ್ಯ ಜ್ಞಾನದಿಂದ)

ಸೃಜ್ಯಜೀವಸ್ಯ–ಮುಂದೆ ಸೃಷ್ಟನಾಗಲಿರುವ ಜೀವನ, ಮನಸಃ–ಮನಸ್ಸಿನ, ವೃತ್ತ್ಯಾ–ವ್ಯಾಪಾರದಿಂದ (ಭಾವಿ ಜೀವನ ಅಂತಃಕರಣವೃತ್ತಿಯಿಂದ); ಯದಿ–ಒಂದು ಪಕ್ಷ, ನಾಶ್ಯತ್ವತಃ–ನಾಶವುಳ್ಳದ್ದಾದ್ದರಿಂದ ತದಜ್ಞಾನೇ–ನಾಶವಾಗುವ ಅಜ್ಞಾನದಲ್ಲಿ, ತವ ಮತಂ–ನಿನ್ನ ಅಭಿಪ್ರಾಯವಿದ್ದರೆ, (ಮನಃಪರಿಣಾಮರೂಪದ ಜ್ಞಾನದಿಂದ ನಾಶಹೊಂದುವುದರಿಂದ, ಆ ಜ್ಞಾನದಿಂದ ಬ್ರಹ್ಮನಲ್ಲಿರುವ ಅಜ್ಞಾನವೂ ನಾಶಹೊಂದಬಹುದೆಂದು ನಿನ್ನ ಅಭಿಪ್ರಾಯವಾಗಿದ್ದರೆ), ತತ್ – ಈ ವಾದವನ್ನು, ಯುಕ್ತಿಃ – ಯುಕ್ತಿಯು, ನ ಅಂಗೀಕರೋತಿ–ಒಪ್ಪುವುದಿಲ್ಲ ; ಅನ್ಯಜ್ಞಾನೇನ–ಮತ್ತೊಬ್ಬನ ಜ್ಞಾನದಿಂದ, ಅನ್ಯನಿಷ್ಠಸ್ಯ – ಬೇರೊಬ್ಬನಲ್ಲಿರುವ, ಅಜ್ಞಾನಸ್ಯ – ಅಜ್ಞಾನದ (ಅಜ್ಞಾನವು), ಅನಿವರ್ತನಾತ್–ತೊಲಗುವುದಿಲ್ಲವಾದ್ದರಿಂದ (ಬಿಟ್ಟು ಹೋಗುವುದಿಲ್ಲವಾದ್ದರಿಂದ), (ಯುಕ್ತಿಯು ಒಪ್ಪುವುದಿಲ್ಲ); ದೇವದತ್ತ ಜ್ಞಾನೇನ–ದೇವದತ್ತನ ಜ್ಞಾನದಿಂದ, ಯಜ್ಞದತ್ತಾಜ್ಞತಾ–ಯಜ್ಞದತ್ತನ ಅಜ್ಞಾನವು (ಅಜ್ಞತ್ವವು), ಗತಾ ಕಿಂ–ಪರಿಹಾರವಾಗುವುದೇನು ? (ಇಲ್ಲ) (ಭಾವಿ ಜೀವನಮನೋವೃತ್ತಿರೂಪದ ಜ್ಞಾನದಿಂದ, ಬ್ರಹ್ಮನ ಅಜ್ಞಾನದ ನಾಶವೇ ?).

**ಐಕ್ಯೇನ ತತ್ಸಮಾಧಾನಮಪಿ ದತ್ತೋತ್ತರಂ ತವ ।**
**ಐಕ್ಯೇ ಸತಿ ತದಜ್ಞಾನಂ ತತ್ಸಿದ್ಧೌ ಚ ತದೇಕತಾ ॥ ೧೪೬ ॥**

ಐಕ್ಯೇನ–(ಜೀವಬ್ರಹ್ಮರ) ಐಕ್ಯದಿಂದ, ತತ್ಸಮಾಧಾನಂ – ಅನ್ಯನಲ್ಲಿರುವ ಅಜ್ಞಾನದ ನಾಶವೆಂಬ ಪರಿಹಾರವು, ಅಪಿ–ಎಂದು ಆದರೂ, ತವ–ನಿನಗೆ, ದತ್ತೋತ್ತರಂ – ಉತ್ತರವು ಕೊಡಲ್ಪಟ್ಟಿದೆ (ಉತ್ತರ ಕೊಟ್ಟಂತೆ ಆಯಿತು—ದೇವದತ್ತನ ಜ್ಞಾನದಿಂದ ಯಜ್ಞದತ್ತನ ಅಜ್ಞಾನವು ಕಳೆಯುವುದಿಲ್ಲವೆಂಬ ಯುಕ್ತಿಯಿಂದಲೇ ಉತ್ತರಿಸಲಾಗಿದೆ); (ಏಕೆಂದರೆ) ಐಕ್ಯೇ ಸತಿ–

---

ಅಜ್ಞಾನವು ನಾಶಹೊಂದುತ್ತದೆಂಬ ಕಾರಣದಿಂದ, ಬ್ರಹ್ಮನ ಅಜ್ಞಾನವೂ ನಾಶವಾಗುವುದೆಂಬ ಅಭಿಪ್ರಾಯವೂ ಯುಕ್ತವಾಗುವುದಿಲ್ಲ; ಒಬ್ಬನ ಜ್ಞಾನದಿಂದ ಮತ್ತೊಬ್ಬನ ಅಜ್ಞಾನವು ನಾಶವಾಗಲಾರದು ; ದೇವತ್ತನ ಜ್ಞಾನದಿಂದ ಯಜ್ಞದತ್ತನಿಷ್ಠವಾದ ಅಜ್ಞಾನವು ನಾಶ ಹೊಂದುವುದಿಲ್ಲ (೧೪೪–೧೪೫). ಜೀವಬ್ರಹ್ಮರ ಐಕ್ಯದಿಂದ, ಎಂದರೆ, ಜೀವ ಬ್ರಹ್ಮರು ಅಭಿನ್ನರು (ಒಂದೇ)

ಜೀವಬ್ರಹ್ಮರ ಐಕ್ಯವಿದ್ದರೆ, ತದಜ್ಞಾನಂ–ಬ್ರಹ್ಮಾದಿಗಳಲ್ಲಿರುವ ಅಜ್ಞಾನವು (ಸಿದ್ಧವಾಗುತ್ತದೆ) ; ತತ್ಸಿದ್ಧೌ–ಅಜ್ಞಾನವು ಸಿದ್ಧವಾದರೆ, ತದೇಕತಾ–ಅವರ (ಜೀವಬ್ರಹ್ಮರ) ಐಕ್ಯವು ಸಿದ್ಧವಾಗುತ್ತದೆ (ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾದರೆ ಜೀವನಿಗೆ ಬ್ರಹ್ಮನಿಂದ ಐಕ್ಯವು ಸಿದ್ಧವಾಗುತ್ತದೆ).[1]

---

ಎಂಬುದು ನಿಶ್ಚಿತವಾದರೆ (ಸಿದ್ಧವಾದರೆ), ಜೀವನ ಅಜ್ಞಾನನಾಶದಿಂದ ಬ್ರಹ್ಮನ ಅಜ್ಞಾನನಾಶವಾಗಬಹುದೆಂಬ ಸಮಾಧಾನವು ದೊರೆಯಬಹುದು; ಆದರೆ ಜೀವಬ್ರಹ್ಮೈಕ್ಯವೇ ನಿಶ್ಚಿತವಲ್ಲ; ಜೀವಬ್ರಹ್ಮರು ಅಭಿನ್ನರೆಂಬ ಉಕ್ತಿಗೆ ಅನ್ಯೋನ್ಯಾಶ್ರಯ ದೋಷವು ತಗಲುತ್ತದೆ; ಏಕೆಂದರೆ ಜೀವರು ಬ್ರಹ್ಮನಿಂದ ಅಭಿನ್ನರಾದರೆ, ಬ್ರಹ್ಮನಲ್ಲಿ ಅಜ್ಞಾನವು ಸಿದ್ಧವಾಗುತ್ತದೆ (ಅಜ್ಞಾನದಿಂದ ಜೀವಭಾವವನ್ನು ಹೊಂದುತ್ತಾನೆನ್ನಬಹುದು) ; ಅಜ್ಞಾನವು ಸಿದ್ಧವಾದರೆ ಐಕ್ಯವು ನಿಶ್ಚಿತವಾಗುತ್ತದೆ; ಹೀಗೆಯೇ ಜೀವಬ್ರಹ್ಮರ ಐಕ್ಯವು ನಿಶ್ಚಿತವಾದರೆ ಜೀವನಲ್ಲಿರುವ 'ಅಹಮಜ್ಞಃ' (ನಾನು ಅಜ್ಞಾನಿಯು) ಎಂಬ ಅಜ್ಞಾನವು ಬ್ರಹ್ಮನಲ್ಲಿಯೂ ಇರುತ್ತದೆಂದು ನಿಶ್ಚಯಿಸಬಹುದು; ಬ್ರಹ್ಮನಲ್ಲಿ ಅಜ್ಞಾನವಿದ್ದರೆ ಮಾತ್ರ (ಜೀವಭಾವವನ್ನು ಹೊಂದುವನೆಂಬ ಕಾರಣದಿಂದ) ಜೀವಬ್ರಹ್ಮರು ಅಭಿನ್ನರೆಂದು (ಐಕ್ಯವು) ಸಿದ್ಧವಾಗುತ್ತದೆ; ಆದ್ದರಿಂದ ಅನ್ಯೋನ್ಯಾಶ್ರಯ ದೋಷವು ಹೇಗೂ ತಪ್ಪುವುದೇ ಇಲ್ಲ (೧೪೬).

---

1 ಜೀವ ಬ್ರಹ್ಮರು ಒಂದೇ ಎಂಬುದು ನಿಶ್ಚಿತವಾದರೆ ಅಹಮಜ್ಞಃ ಎಂಬ ಜೀವಾನುಭವದಿಂದ ಬ್ರಹ್ಮನಲ್ಲಿಯೂ ಅಜ್ಞಾನವಿರುತ್ತದೆಂದು ಹೇಳಬಹುದು; ಬ್ರಹ್ಮನಲ್ಲಿ ಅಜ್ಞಾನವಿರುತ್ತೆಂಬುದು ನಿಶ್ಚಿತವಾದರೆ ಅಜ್ಞಾನವು ಹೋದಾಗ ಅಜ್ಞಾನಕಲ್ಪಿತ ಜೀವಭಾವವೂ ಹೋಗಿ, ಜೀವನೇ ಬ್ರಹ್ಮನೆಂಬ ಐಕ್ಯ ನಿಶ್ಚಯವಾಗಬಹುದು; ಹೀಗೆ ಅನ್ಯೋನ್ಯಾಶ್ರಯ ದೋಷವು ತಗಲುತ್ತದೆ; ಬ್ರಹ್ಮನಲ್ಲಿರುವ ಅಜ್ಞಾನದಿಂದ ಜೀವಭಾವವು ಬಂದಿರುತ್ತದೆಂದು ನಿಶ್ಚಯವಾದರೆ ಜೀವಬ್ರಹ್ಮರ ಅಭೇದವು ಸಿದ್ಧವಾಗುತ್ತದೆ; ಜೀವಬ್ರಹ್ಮರ ಅಭೇದವು ಸಿದ್ಧವಾಗಿದ್ದರೆ (ನಿಶ್ಚಿತವಾದರೆ) ಅಜ್ಞಾನದಿಂದ ಬ್ರಹ್ಮನಿಗೆ ಜೀವಭಾವವು ಬಂದಿರುವುದೆಂದು ಸಿದ್ಧವಾಗುತ್ತದೆ; ಅಜ್ಞಾನವಿದ್ದರೆ ಐಕ್ಯ–ಐಕ್ಯವಿದ್ದರೆ ಅಜ್ಞಾನವೆಂಬ ಅನ್ಯೋನ್ಯಾಶ್ರಯ ದೋಷವು ಹೇಗೂ (ಅಜ್ಞಾನವು ಜೀವಾಶ್ರಿತವೆಂದರೂ) ತಪ್ಪುವುದಿಲ್ಲ.

**ಸ್ವಾಜ್ಞಾನಾದೇವ ತದ್ಬ್ರಹ್ಮ ಜೀವತಾಮೇತಿ ಚೇದ್ಧಿ ಸಾ ।**
**ಅತೋಽನ್ಯೋನ್ಯಾಶ್ರಯಾಚ್ಚಾತ್ರ ನಞರ್ಥೋಽ ನಾಶ್ಯತಾ ನ ತೇ ॥**

ಸಾ—ಆ ಏಕತ್ವವು (ಜೀವಬ್ರಹ್ಮರು ಒಂದೇ ಎಂಬುದು), ತತ್‌ಬ್ರಹ್ಮ—ಆ ಬ್ರಹ್ಮನು, ಸ್ವಾಜ್ಞಾನಾತ್ ಏವ—ತನ್ನಲ್ಲಿರುವ ಅಜ್ಞಾನದಿಂದಲೇ, ಜೀವತಾಂ—ಜೀವಭಾವವನ್ನು, ಏತಿ ಚೇತ್—ಹೊಂದುವನೆಂದರೆ, ಅತಃ—ಈ ಕಾರಣದಿಂದ, ಅನ್ಯೋನ್ಯಾಶ್ರಯಾತ್ ಚ—ಉಕ್ತ ಅನ್ಯೋನ್ಯಾಶ್ರಯ ದೋಷದಿಂದಲೂ, ತೇ—ನಿನ್ನ ಮತದಲ್ಲಿ, ನಾಶ್ಯತಾ—ನಷ್ಟಹೊಂದುವುದೆಂಬ, ನಞರ್ಥಃ—ನಞ ಎಂಬ ಉಪಸರ್ಗದರ್ಥವು, ನ—ಇರುವುದಿಲ್ಲ (ಎಂದರೆ ಉಪಸರ್ಗದಿಂದ ವಿರೋಧಿಸುವುದೆಂಬರ್ಥವು ಕೂಡುವುದಿಲ್ಲ; ಸರ್ವಜ್ಞತ್ವವನ್ನು ವಿರೋಧಿಸದೇ ಅಜ್ಞಾನವು ಇರಬಹುದೆಂಬುದೇ ನಿನ್ನ ಪ್ರಕ್ರಿಯೆಯು).

**ಕಥಮಾವರಣೇ ಸತ್ಯೇ ವಾನ್ಯಸ್ಯಾಪ್ಯಪರೋಕ್ಷಧೀಃ ।**
**ಜ್ಞಾನೋತ್ಪತ್ತಿವಿರೋಧ್ಯೇವ ಯಸ್ಮಾದಾವರಣಂ ವಿದುಃ ॥ ೧೪೮ ॥**

ಈ ಹಿಂದೆ ಜೀವನಿಷ್ಠ ಮನೋವೃತ್ತಿಜ್ಞಾನದಿಂದ ಬ್ರಹ್ಮನಿಷ್ಠ ಅಜ್ಞಾನದ ನಾಶವಿಲ್ಲೆಂದು ನಿರೂಪಿಸಿದರು; ಈಗ ಬ್ರಹ್ಮನು ಅಜ್ಞಾನದಿಂದ ಆವೃತನಾಗುತ್ತಿರಲು, ಜೀವನಿಗೆ (ಅಜ್ಞಾನ ಪರಿಹಾರಕವಾದ) ಜ್ಞಾನವೇ ಉತ್ಪನ್ನವಾಗಲವಕಾಶವಿಲ್ಲವೆನ್ನುತ್ತಾರೆ :—

ಆವರಣೇ—ಅಜ್ಞಾನದ ಆವರಣವು, ಸತ್ಯೇ ಅಪಿ—(ಬ್ರಹ್ಮನಿಗೆ) ಇರುತ್ತಿದ್ದರೂ, ಅನ್ಯಸ್ಯ ಅಪಿ—ಜೀವನಿಗೂ, ಅಪರೋಕ್ಷಧೀಃ—ಮಾನಸ ಅಪರೋಕ್ಷ

---

ಆ ಜೀವಬ್ರಹ್ಮೈಕ್ಯವು, ತನ್ನ (ತನ್ನಲ್ಲಿರುವ) ಅಜ್ಞಾನದಿಂದಲೇ ಬ್ರಹ್ಮನು ಜೀವಭಾವವನ್ನು ಹೊಂದುವುದರಿಂದ ಸಿದ್ಧಿಸುವುದೆಂದರೆ, ಉಕ್ತವಾದ ಅನ್ಯೋನ್ಯಾಶ್ರಯ ದೋಷದಿಂದಲೂ ಬ್ರಹ್ಮನಲ್ಲಿ ಜ್ಞಾನದೊಡನೆ ಅಜ್ಞಾನವೂ ಇರಬಹುದೆಂಬುದು ಮಾಯಾವಾದದ ಪ್ರಕ್ರಿಯೆಯಾದ್ದರಿಂದ ವಿರೋಧಾರ್ಥದ (ನಞ) ಉಪಸರ್ಗವು ಅಜ್ಞಾನ ಶಬ್ದದಲ್ಲಿ ವ್ಯರ್ಥವಾಗುವುದರಿಂದಲೂ ಸಿದ್ಧವಾಗುವುದಿಲ್ಲ (೧೪೭). ಬ್ರಹ್ಮನಿಗಿರುವುದೆಂದ ಅಜ್ಞಾನದ ಆವರಣವು ಇದ್ದರೂ ಜೀವನಿಗೆ ಮಾನಸಾಪರೋಕ್ಷವು ಹೇಗೆ ಸಿದ್ಧಿಸುತ್ತದೆ?

ಜ್ಞಾನವು, ಕಥಂ–ಹೇಗೆ? (ದೊರೆಯುವುದು ?); ಯಸ್ಮಾತ್–ಯಾವ ಕಾರಣ ದಿಂದ (ಏಕೆಂದರೆ), ಜ್ಞಾನೋತ್ಪತ್ತಿವಿರೋಧಿ ಏವ–(ಕತ್ತಲೆಯಲ್ಲಿ ಬೆಳಕು ಹರಿದುಬರದಂತೆ ಮಾಡುವುದೇ) ಜ್ಞಾನದ ಉತ್ಪತ್ತಿಯನ್ನು ವಿರೋಧಿಸುವುದೇ; ಆವರಣಂ–ಆವರಣವೆಂದು, ವಿದುಃ–(ವಿವೇಕಿಗಳು) ತಿಳಿಯುವರು. (ಬ್ರಹ್ಮನ ಆವರಣವಿರುವಪರ್ಯಂತ ಜೀವನಿಗೆ ಬ್ರಹ್ಮಾಪರೋಕ್ಷವೂ ಆಗುವಂತಿಲ್ಲವೆಂಬ ಭಾವ).

**ತದುತ್ಪತ್ತ್ಯವಿರೋಧೇ ತನ್ನಾಶ್ಯತಾಶಾಪಿ ಕಿಂ ಕೃತಾ ।**
**ಬಂಧಸ್ಯೈವ ಕುತೋ ನಾಶಸ್ತರ್ಹಿ ನಸ್ಯಾಚ್ಛ್ರುತೇರ್ಬಲಾತ್ ॥**

ತದುತ್ಪತ್ತ್ಯವಿರೋಧೇ–ಮಾನಸಜ್ಞಾನದ ಉತ್ಪತ್ತಿಯನ್ನು (ಬ್ರಹ್ಮನ ಆವರಕವಾದ ಅಜ್ಞಾನವು) ವಿರೋಧಿಸದಿದ್ದರೆ, ತನ್ನಾಶ್ಯತಾಶಾ ಅಪಿ–ಆ ಜ್ಞಾನ ದಿಂದ ಅಜ್ಞಾನದ ನಾಶವಾಗುವುದೆಂಬ ಆಶೆಯಾದರೂ, ಕಿಂ ಕೃತಾ–ಏನು ಮಾಡಿತು? (ಮಾಡುತ್ತದೆ–ಮಾಡೀತು?) (ಅಜ್ಞಾನವು ನಾಶವಾಗುವ ಮೊದಲೇ ಜ್ಞಾನದೊಡನೆ ಇರುವ ಅಜ್ಞಾನವು, ಸ್ವಾಭಾವಿಕ ವಿರೋಧವಿದ್ದಲ್ಲಿ ಜ್ಞಾನವನ್ನೇ ನಾಶಮಾಡೀತು; ಹಾಗೆ ವಿರೋಧವಿಲ್ಲದಿದ್ದಲ್ಲಿ ಮಾನಸಜ್ಞಾನವು ಅಜ್ಞಾನದ ನಾಶವನ್ನು ಹೇಗೆ ಮಾಡೀತು?); ಬಂಧಸ್ಯ–ಸಂಸಾರಬಂಧದ, ನಾಶಃ–ನಾಶವು (ಪರಿಹಾರವು–ಬಿಡುಗಡೆಯು), ಕುತಃ–ಯಾವ ಕಾರಣದಿಂದ,

---

ಕತ್ತಲೆಯಲ್ಲಿ ಬೆಳಕು ಪ್ರವೇಶಿಸದಂತೆ ವಿರೋಧಿಸುವುದೇ? (ತಡೆಯುವುದೇ) (ಅಜ್ಞಾನವು ಜ್ಞಾನವನ್ನು ನಿರೋಧಿಸುವುದೇ ಆವರಣದ ಕಾರ್ಯವೆಂದು ವಿವೇಕಿಗಳು ತಿಳಿಯುತ್ತಾರೆ); ಅಜ್ಞಾನದಿಂದ ಆವೃತನಾದ ಬ್ರಹ್ಮನೇ ಜೀವ ನಲ್ಲವೇ? ಸಿನ್ನಂತೆ? (೧೪೮). ಅಜ್ಞಾನದ ಆವರಕವಿದ್ದರೂ ಅದು ಮಾನಸ ಜ್ಞಾನದ ಉತ್ಪತ್ತಿಯನ್ನು ವಿರೋಧಿಸುವುದಿಲ್ಲವೆಂದರೆ, ಹಾಗೆ ಹುಟ್ಟಿದ ಮಾನಸಜ್ಞಾನವು ಅಜ್ಞಾನವನ್ನು ನಾಶಮಾಡುತ್ತದೆ ಎಂಬ ಆಶೆಗಾದರೂ ಅವಕಾಶವೆಲ್ಲಿರುತ್ತದೆ? ಏಕೆಂದರೆ ಅಜ್ಞಾನದೊಡನೆ ಇರುವ, ಹುಟ್ಟಿದ ಜ್ಞಾನವೂ ನಾಶವಾದೀತು; ಜ್ಞಾನಾಜ್ಞಾನಗಳಲ್ಲಿ ಪರಸ್ಪರ ಸ್ವಾಭಾವಿಕ ವಿರೋಧವಿದ್ದಲ್ಲಿ ಹೀಗಾಗದೇ ಗತ್ಯಂತರವಿಲ್ಲ; ವಿರೋಧವಿಲ್ಲದಿದ್ದಲ್ಲಿ ಜ್ಞಾನವು ಅಜ್ಞಾನವನ್ನು ಹೇಗೆ ನಾಶಮಾಡುವುದು? ನಾಶಮಾಡಲಿಕ್ಕೆ ವಿರೋಧವು ಅವಶ್ಯಕವಷ್ಟೆ; ಇದೂ ಅಲ್ಲದೇ ಜ್ಞಾನದಿಂದ ಸಂಸಾರಬಂಧವು ನಾಶವಾಗುತ್ತದೆಂದು ಹೇಳುವ

ನ ಸ್ಯಾತ್ – ಬ್ರಹ್ಮಜ್ಞಾನದಿಂದ ಆಗುವುದಿಲ್ಲ? (ಆಗುತ್ತದೆಯೇ ಸರಿ); ಶ್ರುತೇಃ – ಶ್ರುತಿಯ, ಬಲಾತ್ – ಆಧಾರದಿಂದ, (ಸ್ಯಾದೇವ – ಮೋಕ್ಷವೇ ಲಭಿಸುತ್ತದೆ).[1]

**ಅಜ್ಞಾನಮೇವ ಜ್ಞಾನೇನ ನಾಶ್ಯಂ ಬಂಧಸ್ತು ನೇತಿ ವಾಕ್ ।**
**ತದಾ ಸ್ಯಾದ್ಯದಿ ನಾಶಾಚ್ಚ ಪ್ರಾಕ್ತಯೋಃ ಸ್ಯಾದ್ವಿರುದ್ಧತಾ ॥೧೫೦॥**

ಅಜ್ಞಾನ ಜ್ಞಾನಗಳ ನಾಶ್ಯ ನಾಶಕಭಾವವು (ಸಂಬಂಧವು) ಪ್ರಸಿದ್ಧ ವಾದರೂ, ಅದನ್ನು ತಿರಸ್ಕರಿಸುವುದು ಪರನ ಇಚ್ಛೆಯು; ನಾಶ್ಯನಾಶಕ (ನಾಶಮಾಡಲ್ಪಡುವುದು ಮತ್ತು ನಾಶಮಾಡುವುದು) ರೂಪದಿಂದ ಭಿನ್ನವಾದ ವಿರೋಧವು ಇದ್ದರೆ ಮಾತ್ರ ಸಾಧ್ಯವಾದೀತು, ಅನ್ಯಥಾ ಅಲ್ಲವೆನ್ನುತ್ತಾರೆ :–

ಜ್ಞಾನೇನ – ಜ್ಞಾನದಿಂದ, ಅಜ್ಞಾನಂ ಏವ – ಅಜ್ಞಾನವೇ, ನಾಶ್ಯಂ– ನಾಶಮಾಡಲ್ಪಡುವುದು (ಆಗುತ್ತದೆ); ತು–ಆದರೆ, ಬಂಧಃ–ಸಂಸಾರಬಂಧವು, ನ ಇತಿ ವಾಕ್–ನಾಶವಾಗುವುದಿಲ್ಲವೆಂಬ ಮಾತು, ನಾಶಾತ್ ಚ–ನಾಶದಿಂದ, ಪ್ರಾಕ್–ಮೊದಲೇ, ತಯೋಃ–ಜ್ಞಾನಾಜ್ಞಾನಗಳಲ್ಲಿ, ವಿರುದ್ಧತಾ–ವಿರೋಧವು, ಯದಿ ಸ್ಯಾತ್–ಇರುವುದಾದರೆ, ತದಾ–ಆಗ, ಸ್ಯಾತ್–ನಿಶ್ಚಿತ (ಸತ್ಯ) ವಾಗಲಿ.[2]

---

ಶ್ರುತಿಬಲವಿರುವಾಗ, ಜ್ಞಾನದಿಂದ ಸಂಸಾರನಾಶವಾಗುವುದಿಲ್ಲ, ಮತ್ತೇನೆಂದರೆ ಅಜ್ಞಾನ ಮಾತ್ರ ಪರಿಹಾರವಾಗುವುದೆಂಬುದೂ ಯುಕ್ತವಾಗುವುದಿಲ್ಲ (೧೪೯). ಅಜ್ಞಾನವೇ ಕಾರಣವಾಗಿವುಳ್ಳ ಸಂಸಾರವು ಜ್ಞಾನದಿಂದ ನಾಶ ವಾಗುವುದಿಲ್ಲವೆಂಬುದು ಸಿದ್ಧವಾಗಬೇಕಾದರೆ (ನಿಶ್ಚಯಿಸಲು) ಜ್ಞಾನೋತ್ಪತ್ತಿ ಯನ್ನೇ ವಿರೋಧಿಸುವ ಶಕ್ತಿಯು ಅಜ್ಞಾನಕ್ಕೆ ಇರುವುದೆಂದು ಒಪ್ಪಬೇಕು— ಅನ್ಯಥಾ (ಜ್ಞಾನದಿಂದ) ಸಂಸಾರಬಂಧ ನಾಶವನ್ನು ಹೇಳುವ ಶ್ರುತಿಯು

---

1 'ದೃಷ್ಟ್ವೈವ ತಂ ಮುಚ್ಯತೇ' ಎಂದು ಬ್ರಹ್ಮದರ್ಶನದಿಂದಲೇ ಮೋಕ್ಷ ವೆಂದು ಶ್ರುತಿಯೂ ಹೇಳುತ್ತದೆ.

2 ಜ್ಞಾನೋತ್ಪತ್ತಿಯನ್ನೇ ಪ್ರತಿಬಂಧಿಸುವ ರೂಪದ ವಿರೋಧವೇ ಅಜ್ಞಾನಕ್ಕೆ ಇರುವುದೆಂದು ಹೇಳಬೇಕು; ಹಾಗಲ್ಲದಿದ್ದರೆ ಜ್ಞಾನದಿಂದ ಸಂಸಾರಬಂಧವೇ ನಾಶವಾಗು ವುದೆಂಬ ಶ್ರುತಿವಾಕ್ಯವು ಅಯುಕ್ತವಾಗುತ್ತದೆ.

**ಮನಸೋಽಹ್ಯಚಿದಂಶಸ್ತೇ ಘಟಪ್ರಾಯೋ ನ ನಾಶಕಃ ।**
**ಚಿದಂಶಸ್ಯ ಬಲಾನ್ನಾಶೇ ಕಥಂ ಬ್ರಹ್ಮಚಿತಿಸ್ಥಿತಿಃ ।**
**ಅತೋ ಬ್ರಹ್ಮಾಶ್ರಿತಾಜ್ಞಾನೇ ನಞಃ ಕಾರ್ಯಂ ನ ವಿದ್ಯತೇ ॥೧೫೧**

**ಅಸ್ಯ ವಿದ್ಯೇತಿ ವಿದ್ಯೈವ ತತ್ಪದೇನೋಚ್ಯತೇ ಹರೌ ।**
**ತದಧೀನಾ ರಮಾಚಾಭಿಮನ್ಯಮಾನಾಽಥವಾ ಜಡಾ ।**
**ತಾಭಿಃ ಸೃಷ್ಟಮಿದಂ ವಿಶ್ವಂ ಭ್ರಾಂತ್ಯುತ್ಥಂ ಕೇನ ಕಥ್ಯತಾಂ ॥೧೫೨॥**

ಪರನು ಬ್ರಹ್ಮನಲ್ಲಿ ಕಲ್ಪಿಸುವ ಅಜ್ಞಾನಕ್ಕೆ ಮಾನಸಜ್ಞಾನದಿಂದ ನಾಶ ವುಂಟೆಂಬುದನ್ನು ನಿರಾಕರಿಸುತ್ತಾರೆ:—

(ಮಾನಸಜ್ಞಾನವೆಂಬಲ್ಲಿರುವ) ಮನಸಃ—ಮನಸ್ಸೆಂಬ ಅಂಶಕ್ಕೆ, ತೇ—ನಿನ್ನ ಮತದಂತೆ, ಅಚಿದಂಶಃ ಹಿ—ಜಡಾಂಶವಷ್ಟೆ (ಮನಸ್ಸು ಜಡವಷ್ಟೆ); ಘಟಪ್ರಾಯಃ—ಘಟದಂತೆ, ನ ನಾಶಕಃ—ಅಜ್ಞಾನ ನಾಶಕಶಕ್ತಿಯಿರುವುದಿಲ್ಲ (ಆದ್ದರಿಂದ ಚಿದಂಶಯುಕ್ತವಾದ ಜ್ಞಾನಕ್ಕೆ ಅಜ್ಞಾನಪರಿಹಾರವನ್ನು ಹೇಳ ಹೇಳಬೇಕು); ಚಿದಂಶಸ್ಯ ಬಲಾತ್—ಬ್ರಹ್ಮನ ಚಿದಂಶದ ಸಾಮರ್ಥ್ಯದಿಂದ, ನಾಶೇ—ಅಜ್ಞಾನದ ನಾಶವನ್ನು ಹೇಳಿದರೆ, ಬ್ರಹ್ಮಚಿತಿಸ್ಥಿತಿಃ—(ಪ್ರತಿಯೋಗಿಯಾದ ಅಜ್ಞಾನವೇ ಇಲ್ಲದಂತಾಗಿ) ಬ್ರಹ್ಮನ ಸ್ವರೂಪಜ್ಞಾನದ ಇರುವಿಕೆಯು, ಕಥಂ—ಹೇಗೆ? (ಕೂಡುತ್ತದೆ? ಅವನಲ್ಲಿ ಅಜ್ಞಾನವೆಲ್ಲಿಂದ ಬರುತ್ತದೆ?) ಅತಃ—ಆದ್ದರಿಂದ, ಬ್ರಹ್ಮಾಶ್ರಿತಾಜ್ಞಾನೇ—ಬ್ರಹ್ಮನಲ್ಲಿರುವುದೆಂಬ ಅಜ್ಞಾನದಲ್ಲಿ, ನಞಃ—ನಞ ಎಂಬೀ ಉಪಸರ್ಗದ, ಕಾರ್ಯಂ—ಕೃತ್ಯವು (ಸಾರ್ಥಕ್ಯವು), ನ ವಿದ್ಯತೇ—ಇರುವುದಿಲ್ಲ; ಪೂರ್ವೋಕ್ತ ಬ್ರಹ್ಮನಲ್ಲಿ ಪ್ರಯೋಗಿಸಲಾದ

---

ಅಯುಕ್ತವಾಗುತ್ತದೆ (೧೫೧). ಮಾನಸಜ್ಞಾನವು ಅಜ್ಞಾನವನ್ನು ಪರಿಹರಿಸುವುದೆಂಬುದೂ ಯುಕ್ತವಲ್ಲ; ಮಾನಸಜ್ಞಾನವು (ಮನಃ ಪರಿಣಾಮರೂಪದ ಜ್ಞಾನವು—ಬ್ರಹ್ಮವಿಷಯಃ ಜ್ಞಾನವು) ಜಡವೆಂದು ನಿನ್ನ ಮತ; ಮಾನಸಜ್ಞಾನದ ಅಚಿದಂಶಕ್ಕೆ ಅಜ್ಞಾನನಾಶಕ ಶಕ್ತಿ ಇರುವುದಿಲ್ಲ; ಚಿದಂಶಯುಕ್ತವಾದ ಜ್ಞಾನಕ್ಕೆ ಆ ಶಕ್ತಿ ಇರುತ್ತದೆನ್ನಬೇಕು; ಚಿದಂಶವೆಂಬುದು ಬ್ರಹ್ಮಸ್ವರೂಪಾತ್ಮಕವೇ; ಇದಕ್ಕೆ ಆ ಶಕ್ತಿ (ಅಜ್ಞಾನ ನಾಶಕಶಕ್ತಿ) ಯಿರುವುದಾದರೆ, ಬ್ರಹ್ಮನಲ್ಲಿ ಚಿದಂಶದ ಪ್ರತಿಯೋಗಿಯಾದ ಅಜ್ಞಾನವು ಇರಲಿಕ್ಕೆ

'ಅವಿದ್ಯಾ' ಪದದ ಅರ್ಥವನ್ನು ಸ್ಪಷ್ಟಗೊಳಿಸುತ್ತಾರೆ), ಅಸ್ಯ—ಅಕಾರವಾಚ್ಯನಾದ ಬ್ರಹ್ಮನ, ವಿದ್ಯಾ ಇತಿ—ವಿದ್ಯೆಯೆಂದು (ಜ್ಞಾನವೆಂದು), ಹರೌ—ಶ್ರೀಹರಿಯಲ್ಲಿ, ವಿದ್ಯಾ ಏವ—ವಿದ್ಯೆಯೇ, ತತ್ಪದೇನ—ಅವಿದ್ಯಾ ಪದದಿಂದ, ಉಚ್ಯತೇ—ಹೇಳಲ್ಪಡುತ್ತದೆ; ತದಧೀನಾ—ಆತನ ಅಧೀನಳಾದ, ರಮಾಚ—ಶ್ರೀ ಮಹಾಲಕ್ಷ್ಮೀದೇವಿಯೂ, **ಅಥವಾ,** ಅಭಿಮನ್ಯಮಾನಾ—ಆಕೆಯಿಂದ ಅಭಿಮನ್ಯಮಾನವಾದ (ಆಕೆಯೇ ನಿಯಾಮಕಳಾಗಿವುಳ್ಳ), ಜಡಾ — ಜಡವೂ (ಪ್ರಕೃತಿಯೂ) (ಹೇಳಲ್ಪಡುತ್ತದೆ) ('ಜಡ' ಶಬ್ದದಿಂದ ವಿದ್ಯೆಗೆ ಅಹರ್ನವಾದ ಜಡವೆಂಬರ್ಥವೂ ಅವಿದ್ಯಾಪದದಿಂದ ಬೋಧ್ಯವು; ಮತ್ತು 'ಅಭಿಮನ್ಯಮಾನಾ' ಶಬ್ದದಿಂದ ಅಭಿಮಾನಿ, ಅಭಿಮನ್ಯ ವಸ್ತುಗಳಲ್ಲಿ ಪ್ರಯೋಗಿಸಲ್ಪಡುವ ಪ್ರಕೃತಿಶಬ್ದವಾಚ್ಯಳಾದ ಲಕ್ಷ್ಮೀದೇವಿಯೆಂಬುದೂ ಸೂಚಿತವೆಂದು ತಿಳಿಯಬಹುದು); ತಾಭಿಃ[1]—ಆ ಮೂರರಿಂದ (ಶ್ರೀಹರಿ, ಲಕ್ಷ್ಮೀ ಮತ್ತು ಜಡಪ್ರಕೃತಿಗಳಿಂದ), ಇದಂ ವಿಶ್ವಂ — ಈ ಜಗತ್ತೆಲ್ಲವೂ, ಸೃಷ್ಟಂ—ಸೃಷ್ಟಿಸಲ್ಪಡುತ್ತದೆ; ಭ್ರಾಂತ್ಯುತ್ಥಂ—ಭ್ರಮಜನ್ಯವಾದುದು, ಕೇನ—ಯಾವ ಕಾರಣದಿಂದ, ಕಥ್ಯತಾಂ—ಹೇಳಲ್ಪಡಲಿ (ಹೇಳು—ಜಗತ್ತು ಸರ್ವಥಾ ಭ್ರಮಾತ್ಮಕವಲ್ಲ).

---

ಅವಕಾಶವಿಲ್ಲ; ಆದ್ದರಿಂದ 'ಬ್ರಹ್ಮಾಶ್ರಿತ ಅಜ್ಞಾನ'ವೆಂಬಲ್ಲಿ ನಞ ಉಪಸರ್ಗಕ್ಕೆ ಕೃತ್ಯವಿಲ್ಲ; 'ಅವಿದ್ಯಾಯಾಃ ದುರ್ಘಟತ್ವಂ' ಇತ್ಯಾದಿಗಳಲ್ಲಿ ಅಜ್ಞಾನವೆಂಬುದನ್ನೇ ಅವಿದ್ಯೆಯೆಂದೂ ಹೇಳಲಾಗಿದೆ; ಅವಿದ್ಯೆಯೆಂದರೆ ಅಕಾರವಾಚ್ಯನಾದ ಬ್ರಹ್ಮನ ವಿದ್ಯೆಯೇ ಹೇಳಲ್ಪಡುತ್ತದೆ; ಅವಿದ್ಯಾ ಪದದಿಂದ ಭಗವಂತನ ಅಧೀನಳಾದ ನಿತ್ಯವಿದ್ಯಾಸ್ವರೂಪಳಾದ ರಮಾದೇವಿಯೂ, ಆಕೆಯಿಂದ ಅಭಿಮನ್ಯಮಾನವಾದ ಜಡಪ್ರಕೃತಿಯೂ ಹೇಳಲ್ಪಡುತ್ತವೆ; ಲಕ್ಷ್ಮೀದೇವಿಯೂ, ಆಕೆಯಿಂದ ಅಭಿಮನ್ಯವಾದ ಜಡಪ್ರಕೃತಿಯೂ (ಜಗತ್ಸೃಷ್ಟಿಯ ಉಪಾದಾನಕಾರಣವಾದುದೂ) ಪ್ರಕೃತಿಶಬ್ದವಾಚ್ಯಗಳೇ — ಈ ಎಲ್ಲವೂ 'ಅವಿದ್ಯಾ' ಪದವಾಚ್ಯಗಳೇ; ಇವುಗಳಿಂದ ಸೃಷ್ಟವಾದ ಜಗತ್ತು ಭ್ರಮಜನ್ಯ

---

1 ಉತ್ಪತ್ತಿ, ನಿರೋಧ (ನಾಶ) ಮತ್ತು ಸ್ಥಿತಿ (ರಕ್ಷಣೆ) ಗಳು ಈ ಜಗತ್ತಿಗೆ ಅವಿದ್ಯೆಯಿಂದ ಸಂಭವಿಸುತ್ತವೆಂಬ ವಾಕ್ಯಗಳಿಗೂ ಸರಿಯಾದ ಅರ್ಥವನ್ನು ಅವಿದ್ಯಾ ಶಬ್ದನಿರ್ವಚನದಿಂದ ಇಲ್ಲಿ ನಿರೂಪಿಸಿದಂತಾಗಿದೆ.

**ಯನ್ಮಿಥ್ಯಾತ್ವಂ ಪರೋ ವಕ್ತಿ ಸ್ವಾಜ್ಞಾನಸ್ಯ ತಥೈವ ತತ್ ।**
**ಯಸ್ಮಾತ್ತದಸ್ಮದೀಶಾನೇ ನಾಭೂದಸ್ತಿ ಭವಿಷ್ಯತಿ ॥ ೧೫೩ ॥**

ಬ್ರಹ್ಮನಲ್ಲಿ ಪರನು ಕಲ್ಪಿಸುವ ಅಜ್ಞಾನವನ್ನು ಸತ್ಯವೆಂದು ಒಪ್ಪುವುದಿಲ್ಲ; ಭಾವರೂಪವಾದುದಾದರೂ ಮಿಥ್ಯೆಯು ಎನ್ನುತ್ತಾನೆ; ಹಾಗೆ ಹೇಳದಿದ್ದರೆ ಅದ್ವೈತಕ್ಕೆ (ಬ್ರಹ್ಮನೊಬ್ಬನೇ ಸತ್ಯನೆಂಬ ಅದ್ವೈತಕ್ಕೆ) ಭಂಗವುಂಟಾಗುತ್ತದೆ; ಈ ಪ್ರಮೇಯವೂ ನಮಗೆ ಅನುಕೂಲವೇ ಆಗುವುದೆನ್ನುತ್ತಾರೆ :—

ಸ್ವಾಜ್ಞಾನಸ್ಯ—ಬ್ರಹ್ಮನಲ್ಲಿ ಕಲ್ಪಿತವಾದ ಅಜ್ಞಾನಕ್ಕೆ, ಪರಃ – ಪರನು (ಮಾಯಾವಾದಿಯು), ಯತ್ – ಯಾವ ಕಾರಣದಿಂದ, ಮಿಥ್ಯಾತ್ವಂ – ಮಿಥ್ಯಾತ್ವವನ್ನು, ವಕ್ತಿ – ಹೇಳುವನೋ (ತಸ್ಮಾತ್ – ಆ ಕಾರಣದಿಂದ), ತಥಾ ಏವ – ಹಾಗೆಯೇ, ತತ್ – ಆ ಅಜ್ಞಾನವು, ಅಸ್ಮದೀಶಾನೇ – ನಮ್ಮ ಸ್ವಾಮಿಯಾದ ನಾರಾಯಣನಲ್ಲಿಯೂ, ನ ಅಭೂತ್—ಇರಲಿಲ್ಲ, (ನ) ಅಸ್ತಿ— ಇಲ್ಲ, (ನ) ಭವಿಷ್ಯತಿ—ಮುಂದೆ ಯಾವಾಗಲೂ ಇರುವುದಿಲ್ಲ (ತ್ರಿಕಾಲಗಳಲ್ಲಿ ಇಲ್ಲವೆಂಬ ನಿಷೇಧದ ಪ್ರತಿಯೋಗಿಯಾದುದು ನಾರಾಯಣನಲ್ಲಿ ಮೊಲದ ಕೊಂಬಿನಂತೆ ಎಂದೂ ಇರದದ್ದು ಆಗಿದೆ—ಮಿಥ್ಯಾತ್ವವು ನಾರಾಯಣನಲ್ಲಿ ಇಲ್ಲವೇ ಇಲ್ಲ).[1]

**ನಿರನಿಷ್ಟೋ ಹಿ ಸೋಽಸಂಗೋ ನಿರವದ್ಯಃ ಪರಃ ಪ್ರಭುಃ ।**
**ಅನೀದೃಗ್ಜೀವತಾ ತಸ್ಯ ನಾಜ್ಞಾನೇನ ನ ಕರ್ಮಣಾ ॥ ೧೫೪ ॥**

---

ವಲ್ಲ (೧೫೧–೧೫೨). ಬ್ರಹ್ಮನಲ್ಲಿರುತ್ತದೆಂಬ ಈ ಅವಿದ್ಯೆ ಅಥವಾ ಅಜ್ಞಾನವೂ ಮಾಯಾವಾದಿಗಳಂತೆ ಮಿಥ್ಯಾಭೂತವಾದುದೇ, ಸತ್ಯವಾದುದಲ್ಲ; ಈ ಅವಿದ್ಯೆಯೂ ನಮ್ಮ ಶ್ರೀ ನಾರಾಯಣನಲ್ಲಿ ಇಲ್ಲವೇ ಇಲ್ಲ—ಎಂದಿಗೂ ಇರುವುದಿಲ್ಲ; ಯಾವ ಪ್ರಕಾರದ ಮಿಥ್ಯಾತ್ವಕ್ಕೂ ಆತನಲ್ಲಿ ಎಡೆಯಿಲ್ಲ; ಆದ್ದರಿಂದ ಈ ಅವಿದ್ಯೆಯ ಮಿಥ್ಯಾತ್ವವು ನಮಗೂ ಸಮ್ಮತವೇ ಆಗಿ, ಅನುಕೂಲವೇ ಆಯಿತು (೧೫೩). ಪ್ರಭುವು ನಿರನಿಷ್ಟ, ನಿರವದ್ಯ, ಅಸಂಗನೆಂದು

---

1 'ನಾಸ್ತಿ ನಾಸೀನ್ನ ಭವಿಷ್ಯತಿ ಇತ್ಯಾಕಾರಕಜ್ಞಾನವಿಷಯತ್ವಂ ಮಿಥ್ಯಾತ್ವಂ' ಇಲ್ಲ—ಇರಲಿಲ್ಲ—ಇರುವುದಿಲ್ಲವೆಂಬ ವಿಧವಾದ ಜ್ಞಾನವಿಷಯವಾಗುವುದೇ ಮಿಥ್ಯಾತ್ವವೆಂದು ಮಾಯಾವಾದಿಗಳ ಮಿಥ್ಯಾತ್ವದ ಪರಿಷ್ಕಾರವಿದೆ.

**ಅಜ್ಞಾನಾಸಂಭವಾದೇವ ನಾಧ್ಯಾಸೋಽಪ್ಯಖಿಲೇಶ್ವರೇ ।**
**ಲೇಪಾಯೋಗ್ಯೇ ನಭೋದೇಶೇ ನ ಪಂಕೋ ನಾಪಿ ತನ್ಮಲಂ ॥೧೫೫॥**

ಅಜ್ಞಾನ ನಿರಾಕರಣದಿಂದ ಅದ್ವೈತವೂ ನಿರಸ್ತವಾಯಿತೆನ್ನುತ್ತಾರೆ:—

ಪರಃ ಪ್ರಭುಃ – ಸರ್ವೋತ್ತಮ ಸ್ವಾಮಿಯಾದ ನಾರಾಯಣನು, ನಿರನಿಷ್ಟಃ–ಅನಿಷ್ಟ (ಅಪ್ರಿಯ) ರಹಿತನು, ನಿರವದ್ಯಃ–ದೋಷರಹಿತನು; ಸಃ–ಅವನು, ಅಸಂಗಃ – ಲೇಪರಹಿತನು, ಹಿ–ಎಂದು ಶ್ರುತಿಸಿದ್ಧನಷ್ಟೆ; ತಸ್ಯ–ಆ ಬ್ರಹ್ಮನಿಗೆ, ಅನೀದೃಗ್ಜೀವತಾ–ಈ ವಿಧವಲ್ಲದ (ಸಾವದ್ಯಸಾನಿಷ್ಟಾದಿ) ಜೀವನವು, ಅಜ್ಞಾನೇನ–ಅಜ್ಞಾನದಿಂದ, ನ–(ಅಜ್ಞಾನವಶನಾಗಿ) ಇರುವುದಿಲ್ಲ (ಉಂಟಾಗುವುದಿಲ್ಲ–ಅಜ್ಞಾನವೆಂಬ ದೋಷರಹಿತನೆಂದು, ನಿರವದ್ಯತ್ವವನ್ನು ಶ್ರುತಿಯು ಹೇಳುವುದರಿಂದ); ಕರ್ಮಣಾ–ಕರ್ಮವಶದಿಂದಲೂ, ನ–(ಅಸಂಗನೆಂದು—ಲೇಪರಹಿತನೆಂದು ಹೇಳಲಾಗುವುದರಿಂದ) ಉಂಟಾಗುವುದಿಲ್ಲ; ಅಖಿಲೇಶ್ವರೇ – ಸರ್ವಸ್ವತಂತ್ರನಲ್ಲಿ, ಅಜ್ಞಾನಾಸಂಭವಾತ್ ಏವ–ಅಜ್ಞಾನವೇ ಕೂಡುವುದಿಲ್ಲವಾದ್ದರಿಂದ (ಘಟಿಸುವುದಿಲ್ಲವಾದ್ದರಿಂದ), ಅಧ್ಯಾಸಃ ಅಪಿ–(ಜಗತ್ತಿನ) ಆರೋಪವು (ಭ್ರಮೆಯೂ), ನ–ಉಂಟಾಗುವುದಿಲ್ಲ; ಲೇಪಾಯೋಗ್ಯೇ – ಲೇಪಕ್ಕೆ ಅನರ್ಹವಾದ (ಅಂಟಿಕೊಳ್ಳುವ ಸಂಭವವೇ ಇಲ್ಲದ), ನಭೋದೇಶೇ–ಆಕಾಶಪ್ರದೇಶದಲ್ಲಿ, ನ ಪಂಕಃ–ಕೆಸರು ಇಲ್ಲ, ಅಪಿ–ಮತ್ತು, ತನ್ಮಲಂ–ಅದರ ಕೊಳೆಯೂ (ಮಲವೂ), ನ–ಇಲ್ಲ.

**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ।**
**ಇತಿ ಗೀತಾವಚನತೋ ಯಃ ಸರ್ವಜ್ಞ ಇತಿ ಶ್ರುತೇಃ ॥ ೧೫೬ ॥**

---

ಶ್ರುತಿಸಿದ್ಧನಾಗಿದ್ದಾನೆ; ಈತನಿಗೆ ಅಜ್ಞಾನದಿಂದಾಗಲಿ, ಕರ್ಮಲೇಪರಹಿತನಾದ್ದರಿಂದ ಕರ್ಮಗಳಿಂದಾಗಲಿ ನಿರ್ದೋಷತ್ವ ವಿರುದ್ಧ ಜೀವಿತವು ಸಂಭವಿಸುವುದೇ ಇಲ್ಲ; ಅಜ್ಞಾನವು ಅಸಂಭವವಾದ್ದರಿಂದಲೇ ಆ ಮಹಾಸ್ವಾಮಿಯಲ್ಲಿ ಜಗತ್ತಿನ ಆರೋಪವೂ (ಭ್ರಮೆಯೂ) ಇರುವುದಿಲ್ಲ; ಲೇಪವಿಲ್ಲದ ಆಕಾಶದಲ್ಲಿ ಕೆಸರು ಅಥವಾ ಯಾವ ಮಲವೂ ಅಂಟಿಕೊಳ್ಳದಂತೆ ನಿತ್ಯನಿರ್ಲಿಪ್ತನಾಗಿ ಶುದ್ಧನಾಗಿರುವನು (೧೫೪–೧೫೫). 'ನಾನು ಎಲ್ಲವನ್ನೂ ತಿಳಿದಿರುವೆನು; ಹೇ ಅರ್ಜುನ! ನೀನು ಮಾತ್ರ ತಿಳಿಯದವನು; ಎಂದು ಶ್ರೀಕೃಷ್ಣನ ಗೀತಾ

**ಅಹಮಜ್ಞ ಇತಿ ಪ್ರೋಕ್ತಂ ತ್ವತ್ಪ್ರತ್ಯಕ್ಷಂ ನ ಮತ್ಪ್ರಭೋಃ ।**
**ಅನುಮಾಯಾಶ್ಚ ಬಾಧೋಽಭೂದಾಗಮೋಽನ್ಯಾರ್ಥಮಾಗಮತ್ ॥**

ಭಗವಂತನಲ್ಲಿ ಅಜ್ಞಾನವು ಇರುವುದು ಅಸಂಭಾವ್ಯವೆಂದು ಶ್ರುತಿ, ಸ್ಮೃತಿ ಮತ್ತು ಪ್ರತ್ಯಕ್ಷ, ಅನುಮಾನಗಳಿಂದ ಸಹ ಸಿದ್ಧವೆನ್ನುತ್ತಾರೆ :—

ಅಹಂ—ನಾನು (ಶ್ರೀಕೃಷ್ಣನು), ತಾನಿ—ನನ್ನ ಪೂರ್ವದ ಎಲ್ಲ ಜನ್ಮಗಳನ್ನೂ (ಅವತಾರಗಳನ್ನು ಅವುಗಳ ಎಲ್ಲ ವ್ಯಾಪಾರಗಳನ್ನು), ಸರ್ವಾಣಿ—ಎಲ್ಲವನ್ನೂ, ವೇದ—ತಿಳಿದಿರುವೆನು; ಪರಂತಪ—ಹೇ ಅರ್ಜುನ ! ತ್ವಂ—ನೀನು, ನ ವೇತ್ಥ—(ನಾನು ಸಾಕ್ಷಾತ್ತಾಗಿ ತಿಳಿದಿರುವಂತೆ) ತಿಳಿದಿರುವುದಿಲ್ಲ; ಇತಿ—ಹೀಗೆಂಬ, ಗೀತಾವಚನತಃ—ಗೀತಾವಚನದಿಂದ, (ಮತ್ತು) ಯಃ ಸರ್ವಜ್ಞಃ—ಯಾರು ಸರ್ವಜ್ಞನೋ (ಎಂದು ಬ್ರಹ್ಮಸ್ವರೂಪವನ್ನು ನಿರೂಪಿಸುವ), ಶ್ರುತೇಃ—ಶ್ರುತಿಯಿಂದಲೂ, ಅಹಮಜ್ಞಃ—'ನಾನು ಅಜ್ಞನು', ಇತಿ ಪ್ರೋಕ್ತಂ—ಎಂದು ಹೇಳಲ್ಪಡುವ, ತ್ವತ್ಪ್ರತ್ಯಕ್ಷಂ—ನಿನ್ನ ಪ್ರತ್ಯಕ್ಷವು, (ಮತ್ಪ್ರಭೋಃ) ಪ್ರಭೋಃ ಮಮ— ಸ್ವತಂತ್ರನೂ ಸರ್ವಜ್ಞನೂ ಆದ ನನಗೆ, ನ—ಇಲ್ಲವು; ಅನುಮಾಯಾಃ—(ಅಜ್ಞಾನಸಾಧಕ ಅನುಮಾನಗಳಿಗೆ, ಆಗಮಃ—(ನಿನ್ನ—ನೀನು ತೋರುವ) ಆಗಮವು (ಅನ್ಯಾರ್ಥವನ್ನು ಹೇಳುವುದೆಂದು ಯುಕ್ತಿಯಿಂದ ಸಾಧಿಸಲಾದ್ದರಿಂದ), ಬಾಧಃ ಅಭೂತ್ — ಬಾಧಕವಾಯಿತು; ಅನ್ಯಾರ್ಥಂ ಆಗಮತ್—ಬೇರೆ ಅರ್ಥವನ್ನೇ ಹೊಂದಿತು.

**ಅತೋ ಬ್ರಹ್ಮಾಶ್ರಿತಾಜ್ಞಾನಪಕ್ಷೋ ನಿರ್ಮೂಲ ಏವ ತೇ ।**
**ಅಜ್ಞಾನಂ ಬ್ರಹ್ಮಣಿ ನ ಚೇತ್ತತ್ರೇದಂ ಕಲ್ಪಿತಂ ಚ ನ ।**
**ಉಪಾದಾನಂ ತವಾಜ್ಞಾನಮುಪಾದೇಯಪ್ರದೇಶಿ ತತ್ ॥ ೧೫೮ ॥**

---

ವಚನವೂ, 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳೂ ಶ್ರೀಹರಿಯನ್ನು ಸರ್ವಜ್ಞನೆಂದೇ ಸಾರುತ್ತವೆ; 'ಅಹಮಜ್ಞಃ'—ನಾನು ಅಜ್ಞನೆಂಬ ಜೀವನ ಅನುಭವವು (ಸಾಕ್ಷಿಪ್ರತ್ಯಕ್ಷವು) ಪ್ರಭುವಿಗೆ ಇಲ್ಲವೇ ಇಲ್ಲ; ಬ್ರಹ್ಮನಲ್ಲಿ ಅಜ್ಞಾನವಿರುವುದೆಂಬಲ್ಲಿ ಪರನು ಪ್ರಯೋಗಿಸಿದ ಅನುಮಾನಗಳೆಲ್ಲವೂ ಬಾಧಿತವಾದವು; ಹೇಳಿದ ಆಗಮ ವಾಕ್ಯಗಳು ಅನ್ಯಾರ್ಥಗಳನ್ನು ಹೊಂದಿದವು; ಹೀಗೆ ಶ್ರುತಿ, ಸ್ಮೃತಿ, ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಬ್ರಹ್ಮನಲ್ಲಿ ಅಜ್ಞಾನವು ಅಸಂಭಾವಿತವೆಂದು ಸಿದ್ಧವಾಗುತ್ತದೆ (೧೫೬—೧೫೭). ಪ್ರತ್ಯಕ್ಷಾದಿ ಯಾವ

ಅತಃ—ಆದ್ದರಿಂದ (ಪ್ರತ್ಯಕ್ಷ ಮೊದಲಾದ ಯಾವ ಪ್ರಮಾಣವೂ ಇಲ್ಲದ್ದ ರಿಂದ ಮತ್ತು ಪ್ರಮಾಣಬಾಧಿತವಾದ್ದರಿಂದಲೂ), ಬ್ರಹ್ಮಾಶ್ರಿತಾಜ್ಞಾನಪಕ್ಷಃ—ಬ್ರಹ್ಮನನ್ನು ಅಜ್ಞಾನ ಆಶ್ರಯಿಸಿರುತ್ತದೆಂಬ ವಾದವು, ತೇ—ನಿನ್ನ ಮತದಲ್ಲಿ, ನಿರ್ಮೂಲ ಏವ—ನಿರಾಧಾರವಾದುದೇ ಸರಿ; ಬ್ರಹ್ಮಣಿ—ಬ್ರಹ್ಮನಲ್ಲಿ, ಅಜ್ಞಾನಂ—ಅಜ್ಞಾನವು, ನ ಚೇತ್ – ಇಲ್ಲವೆಂದಾದರೆ, ತತ್ರ – ಬ್ರಹ್ಮನಲ್ಲಿ, ಇದಂ—ಈ ಜಗತ್ತು, ಕಲ್ಪಿತಂ—ಕಲ್ಪಿತವಾದುದು (ಆರೋಪಿತವಾದುದು, ನ—ಅಲ್ಲವು; ತವ—ನಿನ್ನ ಮತದಲ್ಲಿ, ಉಪಾದಾನಂ ಅಜ್ಞಾನಂ—ಅಜ್ಞಾನವು ಉಪಾದಾನವು (ಜಗದಾರೋಪದ ಕಾರಣವು), ತತ್—ಆದ್ದರಿಂದ, (ಉಪಾದೇಯ ಪ್ರದೇಶಿ) ಉಪಾದೇಯಸ್ಯ—ಕಲ್ಪಿತವಾದುದರ, ಪ್ರದೇಶಿ—ಪ್ರದೇಶದಲ್ಲಿಯೇ ಇರಬೇಕಾದುದು (ಅವಶ್ಯಕವು).[1]

**ಅಜ್ಞಾನಾಪಗಮೇ ತತ್ತಚ್ಚೈತನ್ಯಂ ತಸ್ಯ ತಸ್ಯ ದೃಕ್ ।**
**ಇತ್ಯಾದಿ ಪ್ರಕ್ರಿಯಾ ಸರ್ವಾ ವಿಕ್ರಿಯಾಭೂತ್ತವಾಧುನಾ ॥ ೧೫೯ ॥**

---

ಪ್ರಮಾಣವೂ ಇಲ್ಲದೇ ಎಲ್ಲ ಪ್ರಮಾಣಗಳಿಂದ ಬಾಧಿತವೂ ಆದ್ದರಿಂದ ಬ್ರಹ್ಮನಲ್ಲಿ ಅಜ್ಞಾನವಿರುತ್ತದೆಂಬ ವಾದವು ನಿರಾಧಾರವಾದುದೇ ಸರಿ; ಅಜ್ಞಾನವೇ ಇಲ್ಲದಿರಲು, ಬ್ರಹ್ಮನಲ್ಲಿ ಈ ಜಗತ್ತು (ಜೀವಜಡಾತ್ಮಕವಾದ ಸರ್ವಜಗತ್ತು) ಆರೋಪಿತವೆಂಬುದೂ ಯುಕ್ತವಲ್ಲ (ಉಪಪನ್ನವಾಗುವುದಿಲ್ಲ); ಅಜ್ಞಾನ ಕಲ್ಪಿತವಾದುದು, ಜಗತ್ತು ಎಂದರೆ ಅಜ್ಞಾನವೂ ಜಗತ್ತೂ ಎರಡೂ ಏಕತ್ರ ಇರಬೇಕು; ಉಪಾದಾನ ಉಪಾದೇಯಗಳು (ಕಾರಣ ಕಾರ್ಯಗಳು) ಸಮಾನ ಪ್ರದೇಶದಲ್ಲಿರುವುವೆಂಬ ನಿಯಮವಿದೆ; ಉಪಾದಾನವಾದ ಅಜ್ಞಾನವೇ ಇಲ್ಲದಿರಲು ಕಲ್ಪಿತ ಜಗತ್ತು ಇಲ್ಲವೆಂದೇ ಸಿದ್ಧವಾಗುತ್ತದೆ (೧೫೮). ಇಷ್ಟು ಮಾತ್ರವಲ್ಲ; ಅದ್ವೈತಮತದಂತೆ ಕರ್ಮವ್ಯವಸ್ಥೆಯೂ ಇಲ್ಲದಂತಾಗುತ್ತದೆ;

---

1 ಮಣ್ಣು, ಉಪಾದಾನವು—ಗಡಿಗೆಯ ನಿರ್ಮಾಣಕ್ಕೆ ಕಾರಣವು; ಉಪಾದೇಯವು, ಎಂದರೆ ನಿರ್ಮಾಣವಾದ ಗಡಿಗೆಯು; ಉಪಾದಾನ ಉಪಾದೇಯಗಳು ಸಮಾನದೇಶದಲ್ಲಿರುವುವೆಂಬ ನಿಯಮವಿದೆ; ಬ್ರಹ್ಮನಲ್ಲಿ ಉಪಾದಾನವಾದ, ಜಗತ್ತಿನ ಆರೋಪಕ್ಕೆ (ಆರೋಪಿತ ಜಗತ್ತಿನ) ಕಾರಣವಾದ ಅಜ್ಞಾನವು ಇಲ್ಲದಿದ್ದರೆ ಆರೋಪಿಯಾದ (ತದಾರೋಪಿತ) ಜಗತ್ತು ಸಹ ಇಲ್ಲವೆಂದಾಯಿತು; ಅಜ್ಞಾನಾಭಾವದಿಂದ ಜಗತ್ತು ಆರೋಪಿತವೆಂಬ ಪ್ರಮೇಯವೂ ಬಿದ್ದುಹೋಯಿತು.

ಅಜ್ಞಾನವೇ ಕೂಡದಿರಲು ಕರ್ಮವ್ಯವಸ್ಥೆಯೇ ಅದ್ವೈತಮತದಂತೆ ಬಿದ್ದುಹೋಗುವುದೆಂಬ ಪ್ರಕ್ರಿಯೆಯನ್ನು ಸ್ಪಷ್ಟಗೊಳಿಸುತ್ತಾರೆ:—

ಅಜ್ಞಾನಾಪಗಮೇ—ಅಜ್ಞಾನವೇ ಇಲ್ಲದಂತಾಗಲು, ತತ್ತಚ್ಚೈತನ್ಯಂ—ಆಯಾ ಜೀವನು (ದೇಹಿಗಳು ಪ್ರತಿಯೊಬ್ಬನೂ), ತಸ್ಯತಸ್ಯ ದೃಕ್—(ಆಯಾ ದೇಹವೆಂಬ ಅಧಿಷ್ಠಾನದಲ್ಲಿರುವ ಚೈತನ್ಯವು) ತನ್ನ ತನ್ನ ಜ್ಞಾನಮಾತ್ರವುಳ್ಳವನು (ಘಟಾದಿ ವಸ್ತುಗಳಲ್ಲಿ ತೋರುವ ತನ್ನ ಅಜ್ಞಾನರೂಪದ ಆರೋಪಿತ ಜಗತ್ತಿನ ಭಾಗವನ್ನು ತಿಳಿಯುವನೆಂಬ), ಇತ್ಯಾದಿ—ಈ ಮೊದಲಾದ, ಸರ್ವಾ ಪ್ರಕ್ರಿಯಾ—ಎಲ್ಲ ನಿರೂಪಣೆಯೂ (ನಿರೂಪಣಾ ಕ್ರಮವೂ), ತವ—ನಿನ್ನ ಮತದಲ್ಲಿ, ಅಧುನಾ—ಈಗ (ಅಜ್ಞಾನವೇ ಇಲ್ಲವೆಂದಾದಮೇಲೆ), ವಿಕ್ರಿಯಾ—ವಿಕಾರಹೊಂದಿದುದು (ವ್ಯತ್ಯಸ್ತವಾದುದು), ಅಭೂತ್—ಆಯಿತು (ಲೋಕವ್ಯವಹಾರಗಳ ವ್ಯವಸ್ಥೆಯೇ ಕೆಟ್ಟುಹೋಯಿತು).

**ಕಿಂಚಾಹಮಜ್ಞ ಇತ್ಯೇವ ಹ್ಯಜ್ಞಾನಸ್ಯಾಕೃತಿಸ್ತವ ।**
**ಮಾಮಹಂ ನ ವಿಜಾನಾಮೀತ್ಯಾಕಾರಶ್ಚ ನಿಗದ್ಯತೇ ॥ ೧೬೦ ॥**

**ಏವಂ ಚಾಜ್ಞಾನವದ್ಬ್ರಹ್ಮ ನೈವ ವಿಶ್ವಭ್ರಮೋ ಭವೇತ್ ।**
**ಇದಂ ಜಾನಾಮೀತಿ ಸರ್ವಭ್ರಾಂತಿರ್ಯಸ್ಮಾತ್ ಪ್ರದೃಶ್ಯತೇ ॥೧೬೧॥**

**ಸರ್ವಂ ಜಾನಾಮಿ ಸರ್ವಂ ಚ ನ ಜಾನಾಮೀತಿ ಚೈಕದಾ ।**
**ವಿರುದ್ಧಾಕಾರಸಂಪತ್ತಿರನಾನುಭವಿಕೀ ಚಿತಃ ॥ ೧೬೨ ॥**

**ಅಥಾಜ್ಞಾನಸ್ಯಾಪಗಮೋ ಭ್ರಮತ್ವಂ ಯದಿ ಕಥ್ಯತೇ ।**
**ಅಜ್ಞಾನಕಲ್ಪಿತತ್ವೋಕ್ತಿರಯುಕ್ತಾಭೂತ್ತದಾ ತವ ॥ ೧೬೩ ॥**

---

ಆಯಾ ದೇಹಗಳೆಂಬ ಆಶ್ರಯಸ್ಥಾನಗಳಲ್ಲಿ (ಅಧಿಷ್ಠಾನಗಳಲ್ಲಿ)ರುವ ಚೈತನ್ಯವು ಘಟಾದಿ ವಸ್ತುಗಳಲ್ಲಿ ಪ್ರತಿಫಲಿಸುವುದೆಂಬ ಅಜ್ಞಾನರೂಪದ ಆರೋಪಿತ ಜಗತ್ತನ್ನು ಮಾತ್ರ ಗ್ರಹಿಸುವುದೆಂಬ ಮುಂತಾದ ಪ್ರಕ್ರಿಯೆಗಳೂ ವಿಕಾರ ಹೊಂದುತ್ತವೆ—ಬಿದ್ದುಹೋಗುತ್ತವೆ; ಅಜ್ಞಾನವೇ (ಮೂಲಕಾರಣವೇ) ಇಲ್ಲವಾಗಲು ಅದನ್ನು ಆಧರಿಸಿದ ಪ್ರಕ್ರಿಯೆಗಳೆಲ್ಲವೂ ನಿಲ್ಲಲಾರವೆಂದು ಹೇಳಬೇಕಾಗಿಲ್ಲವಷ್ಟೆ (೧೫೯). 'ಅಹಮಜ್ಞಃ' ಎಂಬ ಅನುಭವವು 'ನಾನು ನನ್ನನ್ನು—ನನ್ನ ಸ್ವರೂಪವನ್ನು ತಿಳಿಯೆನು' ಎಂದು ಸಾಧಿಸಬಹುದಲ್ಲದೇ,

ಕಿಂಚ—ಮತ್ತೂ ಏನೆಂದರೆ, ಅಹಮಜ್ಞಃ—ನಾನು ಅಜ್ಞನು, ಇತ್ಯೇವ ಹಿ—ಹೀಗೆಂದಷ್ಟೇ, ತವ—ನಿನ್ನ, ಅಜ್ಞಾನಸ್ಯ—ಅಜ್ಞಾನದ (ಅಜ್ಞಾನದ ತಿಳುವಳಿಕೆಯು), ಆಕಾರಃ—ರೂಪವು ; ಅಹಂ—ನಾನು, ಮಾಂ—ನನ್ನನ್ನು (ಅನ್ಯವನ್ನೂ), ನ ಜಾನಾಮಿ—ತಿಳಿಯುವುದಿಲ್ಲ, ಇತ್ಯಾಕಾರಶ್ಚ—ಈ ರೂಪ ದಿಂದ ಈ ಅಜ್ಞಾನವು ಇರುವುದೆಂದು, ನಿಗದ್ಯತೇ—ಹೇಳಲಾಗುತ್ತದೆ; ಏವಂ ಚ—ಹೀಗಿರುವುದರಿಂದ, ಅಜ್ಞಾನವತ್ ಬ್ರಹ್ಮ—ಅಜ್ಞಾನವುಳ್ಳವನು, ಬ್ರಹ್ಮನು (ತನ್ನನ್ನು ತಾನು ಬ್ರಹ್ಮನೆಂದು ತಿಳಿಯನು ಎಂದು ನಿಶ್ಚಯಿಸಬಹುದಲ್ಲದೇ), ವಿಶ್ವಭ್ರಮಃ—ಜಗತ್ತಿನ ಭ್ರಮೆಯು, ನೈವ—ಉಂಟಾಗಲಾರದು; (ಏಕೆಂದರೆ) ಇದಂ—ಈ ಜಗತ್ತನ್ನು, ಜಾನಾಮಿ—ತಿಳಿಯುತ್ತೇನೆ, ಇತಿ—ಹೀಗೆಂಬುದು, ಸರ್ವಭ್ರಾಂತಿಃ—ಸರ್ವಜಗತ್ತಿನ ಭ್ರಮೆಯು, ಯಸ್ಮಾತ್—ಯಾವ ಕಾರಣ ದಿಂದ, ಪ್ರದೃಶ್ಯತೇ—ಕಂಡುಬರುತ್ತದೆಯೋ (ಬ್ರಹ್ಮನು ಎಲ್ಲ ಜಗತ್ತನ್ನು ಭ್ರಾಂತಿಯೆಂದೇ ತಿಳಿಯುತ್ತಾನೆಂದು ಹೇಳಬೇಕು), ಸರ್ವಂ ಜಾನಾಮಿ—ಎಲ್ಲ ವನ್ನೂ ತಿಳಿಯುತ್ತೇನೆ, ಚ—ಮತ್ತು, ಸರ್ವಂ—ಎಲ್ಲವನ್ನೂ, ನ ಜಾನಾಮಿ— ತಿಳಿಯುವುದಿಲ್ಲ, ಇತಿ ಚ—ಹೀಗೆಂದೇ, ಚಿತಃ—ಬ್ರಹ್ಮಚೈತನ್ಯಕ್ಕೆ, ಏಕದಾ—

---

ಜಗತ್ತು ಭ್ರಮಾತ್ಮಕವೆಂದು ಸಾಧಿಸಲಾರದು ; ಜಗತ್ತಿನಲ್ಲಿ ಸರ್ವದೇಹಿಗಳೂ (ಅದ್ವೈತ ಜ್ಞಾನಿಗಳು) ಜಗತ್ತನ್ನು ಭ್ರಾಂತಿಯೆಂದೇ ತಿಳಿಯುತ್ತಾರೆ; 'ಎಲ್ಲ ವನ್ನೂ ತಿಳಿಯುತ್ತೇನೆ, ಎಲ್ಲವನ್ನೂ ತಿಳಿಯುವುದಿಲ್ಲ' ಎಂಬ ವಿರುದ್ಧಾಕಾರದ ಜ್ಞಾನವು ಜೀವರಿಗೆ (ಬ್ರಹ್ಮಚೈತನ್ಯಕ್ಕೆ) ಏಕಕಾಲದಲ್ಲಿ ಉಂಟಾಗುವುದಿಲ್ಲ; 'ಅಹಮಜ್ಞಃ ಮಾಮಹಂ ನ ಜಾನಾಮಿ' ಎಂಬ ಆಕಾರದ ಜ್ಞಾನದಲ್ಲಿ ತೋರುವ ಅಜ್ಞಾನದಿಂದ ಜಗತ್ತನ್ನು ಭ್ರಮಾತ್ಮಕವೆಂದು ಹೇಳಲು ಬರು ವುದಿಲ್ಲ; ಈ ರೂಪದ ಅಜ್ಞಾನವು ಪರಿಹಾರವಾದಮೇಲೆ (ಈ ಅಜ್ಞಾನದ ಜ್ಞಾನವಿಲ್ಲದಾಗ) ಜಗತ್ತು ಭ್ರಮಾತ್ಮಕವೆಂದು ತಿಳಿಯಬರುತ್ತದೆಂದರೂ ಯುಕ್ತವಾಗುವುದಿಲ್ಲ; ಏಕೆಂದರೆ ಆಗ 'ಜಗತ್ತು ಅಜ್ಞಾನಕಲ್ಪಿತವೆಂಬುದೇ ಯುಕ್ತವಾಗುವುದಿಲ್ಲ—ಅಜ್ಞಾನವೇ ಹೋದಮೇಲೆ ಉಪಾದೇಯವಾದ (ಕಲ್ಪಿತ) ಜಗತ್ತು ಇರಲಾರದು — ೧೫೭ನೇ ಶ್ಲೋಕಭಾಗವನ್ನು ಇಲ್ಲಿ ನೋಡಬಹುದು; ತನ್ನ ನಿಜಸ್ವರೂಪದ ಅಜ್ಞಾನವಿದ್ದಾಗ ಜಗತ್ತನ್ನು ಸತ್ಯ ವೆಂದೇ ತಿಳಿಯುತ್ತಾನೆ; ಆ ಅಜ್ಞಾನವು ಪರಿಹಾರವಾದಮೇಲೆ ಜಗತ್ತು

ಏಕಕಾಲದಲ್ಲಿ, ವಿರುದ್ಧಾಕಾರಸಂಪತ್ತಿಃ—ವಿರುದ್ಧರೂಪದ ಜ್ಞಾನಪ್ರಾಪ್ತಿಯು, ಅನಾನುಭವಿಕೀ—ಅನುಭವಸಿದ್ಧವಾದುದು ಅಲ್ಲ; ಅಥ—ಮುಂದೆ, ಅಜ್ಞಾನಸ್ಯ—ಅಜ್ಞಾನದಿಂದ, ಅಪಗಮೇ — ಪರಿಹಾರವಾದಾಗ, ಭ್ರಮತ್ವಂ — ಜಗತ್ತಿನ ಭ್ರಮೆಯು, ಯದಿ ಕಥ್ಯತೇ — (ಎಂದು) ಹೇಳುವುದಾದರೆ, ತದಾ—ಆಗ, ತವ—ನಿನ್ನ ಮತದಂತೆ, ಅಜ್ಞಾನಕಲ್ಪಿತತ್ವೋಕ್ತಿಃ—(ಭ್ರಮೆಯು) ಅಜ್ಞಾನ ಕಲ್ಪಿತವೆಂಬ ಮಾತು, ಅಯುಕ್ತಾಭೂತ್—ಯುಕ್ತವಾಗುವುದಿಲ್ಲ.

**ಅಜ್ಞಾನರೂಪಮೇವಾಸ್ಯ ಪ್ರಪಂಚಸ್ಯ ವಿಚಾರಣೇ ।**
**ವಕ್ತ್ಯನಾರೋಪಿತತತ್ತ್ವಾಖ್ಯಮಹಿಮಾನಂ ತತಃ ಸ್ಫುಟಂ ॥ ೧೬೪ ॥**

ತತಃ (ತಸ್ಮಾತ್)—ಈ ಕಾರಣದಿಂದ, ಅಸ್ಯ—ಈ, ಪ್ರಪಂಚಸ್ಯ ಅಜ್ಞಾನ ರೂಪಂ—ನಾನು ತಿಳಿಯೆನೆಂದು ತೋರುವ ಅಜ್ಞಾನದ ಸ್ವರೂಪವನ್ನು, ವಿಚಾರಣೇ—ವಿಮರ್ಶಿಸುತ್ತಿರಲು, ಸ್ಫುಟಂ — ಸುಸ್ಪಷ್ಟವಾಗಿ, ಅನಾರೋಪಿತ ತತ್ತ್ವಾಖ್ಯಮಹಿಮಾನಂ—(ಪ್ರಪಂಚದ ಮತ್ತು ಭಗವಂತನ) ಆರೋಪಿತವಲ್ಲದ (ಸತ್ಯರೂಪದ) ಮಹಿಮೆಯನ್ನು (ಅಪರಿಮಿತತ್ವ, ಸಾಕಲ್ಯೇನ ತಿಳಿಯಲಾರದೆಂಬ ಮುಂತಾದ ಮಹಿಮೆಯನ್ನು), ವಕ್ತಿ—ಹೇಳುತ್ತದೆ (ನನ್ನನ್ನು, ಜಗತ್ತನ್ನು ತಿಳಿಯಲಾರೆನೆಂಬ ಅಹಮಜ್ಞಃ ಎಂಬಲ್ಲಿ ತೋರುವ ಅಜ್ಞಾನದ ಅರ್ಥವನ್ನು ಹೀಗೆಂದೇ ಹೇಳುತ್ತದೆ).

**ವಿಷಯಾಶ್ರಿತಮಜ್ಞಾನಂ ಯದ್ಯಾವರಣಮಿಷ್ಯತೇ ।**
**ತರ್ಹ್ಯೇಕವೃತ್ತ್ಯಾ ತನ್ನಾಶೇ ಸರ್ವೈರ್ದೃಶ್ಯೇತ ವಸ್ತು ತತ್ ॥ ೧೬೫ ॥**

---

ಭ್ರಮಾತ್ಮಕವಾಗಿ ನಿಲ್ಲುತ್ತದೆಂಬುದು ಉಕ್ತ ರೀತಿಯಿಂದ ಅಯುಕ್ತವಾಗುತ್ತದೆ (೧೬೦—೧೬೩). 'ನಾನು ತಿಳಿಯೆನು' ಎಂಬಲ್ಲಿ ತೋರುವ ಅಜ್ಞಾನ ಸ್ವರೂಪವನ್ನು ವಿಮರ್ಶಿಸಿದರೆ ಈ ಪ್ರಪಂಚವು ಅನಾರೋಪಿತ ಸತ್ಯತ್ವವುಳ್ಳದ್ದೆಂಬ (ಸಾಕಲ್ಯೇನ—ಪೂರ್ಣವಾಗಿ ತಿಳಿಯಲಾಗದೆಂಬ ಮುಂತಾದ) ಮಹಿಮೆಯುಳ್ಳದ್ದೆಂದು (ಹೀಗೆಯೇ ನಾನು ಪರಮಾತ್ಮನನ್ನು ತಿಳಿಯೆನು—ಅವನ ವಿಷಯಕ ಅಜ್ಞಾನವುಳ್ಳವನು, ಎಂದರೆ ಅಪ್ರಮೇಯನೂ, ಅನಂತನೂ, ಅಚಿಂತ್ಯ ಶಕ್ತಿಯುಳ್ಳವನೂ ಇತ್ಯಾದಿ ಮಹಿಮೆಯನ್ನು ಪೂರ್ಣವಾಗಿ ತಿಳಿಯಲಾರನೆಂದೂ) ಹೇಳುತ್ತದೆಂದು ಸ್ಪಷ್ಟವಾಗುತ್ತದೆ (೧೬೪). ಅಜ್ಞಾನವು

'ಇದು ಬೆಳ್ಳಿಯು' ಎಂದು ತೋರುವ ಶುಕ್ತಿಯು ಅಜ್ಞಾನದ ಆವರಕ ಉಳ್ಳದ್ದು ; ಶುಕ್ತಿಯಿಂದ ಬೇರೆಯಲ್ಲದಂತೆ ಕೂಡಿಕೊಂಡಿರುವ ಚೈತನ್ಯವನ್ನು ಆಶ್ರಯಿಸಿದ ಅಜ್ಞಾನವೇ ಶುಕ್ತಿಯ ಆವರಕವಾದ ಅಜ್ಞಾನವು; ಈ ಆವರಕ ದಿಂದ ಶುಕ್ತಿಯ ಜ್ಞಾನವಾಗುವುದಿಲ್ಲ; ವಿಪರೀತವಾದ (ವಿರುದ್ಧವಾದ ಬೆಳ್ಳಿಯ) ಜ್ಞಾನವೇ ಉಂಟಾಗುತ್ತದೆ; ಈ ಪ್ರಕ್ರಿಯೆಯನ್ನು ವಿಮರ್ಶಿಸಿ ನಿರಾಕರಿಸುತ್ತಾರೆ :—

ವಿಷಯಾಶ್ರಿತಂ – ವಸ್ತುವನ್ನಾಶ್ರಯಿಸಿದ, ಅಜ್ಞಾನಂ – ಅಜ್ಞಾನವು, ಆವರಣಂ–ಆವರಕವು, ಯದಿ ಇಷ್ಯತೇ–(ಎಂದು) ಹೇಳುವುದಾದರೆ, ತರ್ಹಿ– ಆಗ, ಏಕವೃತ್ತ್ಯಾ – ಇದು ಶುಕ್ತಿಯು ಎಂಬ ಪ್ರತ್ಯಕ್ಷದಿಂದ, ತನ್ನಾಶೇ – ಶುಕ್ತಿಯ ಆವರಕವಾದ ಅಜ್ಞಾನವು ನಾಶವಾಗುತ್ತಿರಲು, ಸರ್ವೈಃ–ಎಲ್ಲರಿಂದ, ತತ್ ವಸ್ತು–ಆ ಶುಕ್ತಿಯು, ದೃಶ್ಯೇತ–(ಶುಕ್ತಿಯೆಂದೇ) ಕಾಣಲ್ಪಡುತ್ತದೆ.

**ವಿಷಯಾವರಕಂ ದೀಪಸ್ತಮಿಸ್ರಂ ನಾಶಯೇದ್ಯದಾ ।**
**ತದಾ ತದ್ವಸ್ತು ಸರ್ವೈಶ್ಚ ಸುವ್ಯಕ್ತಂ ಕಿಂ ನ ದೃಶ್ಯತೇ ॥ ೧೬೬ ॥**

ವಿಷಯಾವರಕಂ–ವಸ್ತುವನ್ನು ಆವರಿಸಿರುವ, ತಮಿಸ್ರಂ–ಕತ್ತಲೆಯನ್ನು, ದೀಪಃ–ದೀಪವು, ಯದಾ–ಯಾವಾಗ, ನಾಶಯೇತ್–ನಾಶಮಾಡುವುದೋ, ತದಾ – ಆಗ, ತದ್ವಸ್ತು – ಆ ವಸ್ತುವು (ಕತ್ತಲೆಯಿಂದ ಆವರಿಸಲ್ಪಟ್ಟಿದ್ದ ಪದಾರ್ಥವು), ಸರ್ವೈಃ – ಎಲ್ಲರಿಂದ, ಸುವ್ಯಕ್ತಂ ಚ – ಸ್ಪಷ್ಟವಾಗಿಯೇ, ದೃಶ್ಯತೇ ನ ಕಿಂ–ಕಾಣಲ್ಪಡುವುದಿಲ್ಲವೇ ? (ಕಾಣಲ್ಪಡುತ್ತದೆ).

---

ವಿಷಯವನ್ನು (ತಿಳಿಯಬೇಕಾದ ವಸ್ತುವನ್ನು) ಆಶ್ರಯಿಸಿರುವುದರಿಂದ ವಿಪರೀತ ಜ್ಞಾನವುಂಟಾಗುವುದೆಂದೂ, ಅಜ್ಞಾನದ ನಾಶವಾದೊಡನೆ ವಸ್ತು ಜ್ಞಾನವು ಸರ್ವರಿಗೂ ಆಗುವುದೆಂದು ಹೇಳಲಾಗುವ ಪ್ರಕ್ರಿಯೆಯನ್ನು ಇಲ್ಲಿ ವಿವರಿಸಲಾಗಿದೆ; ಶುಕ್ತಿಯಲ್ಲಿ ಬೆಳ್ಳಿಯೆಂಬ ವಿಪರೀತ (ವಿರುದ್ಧ) ಜ್ಞಾನ ವಾಗಲು ಅದನ್ನಾವರಿಸಿರುವ ಅಜ್ಞಾನವೇ ಕಾರಣ; ಈ ಅಜ್ಞಾನದ ಆವರಣವು ನಾಶವಾದಾಗ ಶುಕ್ತಿಯ ಜ್ಞಾನವಾಗುತ್ತದೆ (೧೬೫). ವಸ್ತು ವನ್ನು ಸುತ್ತಿಕೊಂಡಿರುವ ಕಗ್ಗತ್ತಲನ್ನು ದೀಪವು ನಾಶಮಾಡಿದಾಗ ಆ ವಸ್ತುವು ಸರ್ವರಿಗೆ ಸ್ಪಷ್ಟವಾಗಿ ಕಾಣುತ್ತದೆಯಷ್ಟೆ—ಅದರಂತೆ ಅಜ್ಞಾನದ ಆವರಣವು

**ಯದ್ಯಜ್ಞಾನಾಂತರಂ ತನ್ನ ಪುನರಾವರಣಂ ಭವೇತ್ ।**
**ತರ್ಹಿ ಕೇನಾಪಿ ತದ್ವಸ್ತು ನ ದೃಶ್ಯೇತಾಽಽವೃತತ್ವತಃ ॥ ೧೬೭ ॥**

ತತ್ (ತತ್ರ)–ಅಲ್ಲಿ (ಆ ಶುಕ್ತಿಯ ಆವರಕವಿದ್ದಲ್ಲಿ), ಅಜ್ಞಾನಾಂತರಂ–ಬೇರೊಂದು ಅಜ್ಞಾನವು, ಪುನರಾವರಣಂ–ಪುನಃ ಆವರಿಸುವುದು; ಯದಿ ನ ಭವೇತ್ – ಆಗದೇಹೋದರೆ (ಆವರಿಸದಿದ್ದರೆ), ತರ್ಹಿ – ಆಗ, ತದ್ವಸ್ತು–ಆ ವಸ್ತುವು, ಆವೃತತ್ವತಃ–(ಅಜ್ಞಾನದಿಂದ) ಆವರಿಸಲ್ಪಟ್ಟಿರುವುದರಿಂದ, ಕೇನಾಪಿ–ಯಾರಿಂದಲೂ, ನ ದೃಶ್ಯೇತ–ಕಾಣಲ್ಪಡಲಿಕ್ಕಿಲ್ಲ.

**ಯದಿ ಜ್ಞಾತೃವಿಭೇದೇನ ಕಲ್ಪ್ಯೇತಾವರಣಂ ಘಟೇ ।**
**ತದಾ ಹ್ಯದೃಷ್ಟಸ್ಯ ಬಹೋಃ ಕಲ್ಪ್ಯತ್ವಾತ್ಗೌರವಂ ಭವೇತ್ ॥ ೧೬೮ ॥**

ಘಟೇ–ಘಟಾದಿ ವಸ್ತುವಿನಲ್ಲಿ, ಜ್ಞಾತೃವಿಭೇದೇನ–ಅದನ್ನು ತಿಳಿಯುವ ವ್ಯಕ್ತಿಭೇದದಿಂದ, ಆವರಣಂ–ಅಜ್ಞಾನದ ಆವರಣವನ್ನು, ಯದಿ ಕಲ್ಪ್ಯೇತ–ಕಲ್ಪಿಸುವುದಾದರೆ (ಒಬ್ಬನಿಗೆ ಶುಕ್ತಿಯ ಜ್ಞಾನವಾದರೂ ಮತ್ತೊಬ್ಬನಿಗೆ ಇನ್ನೊಂದು ಅಜ್ಞಾನದ ಆವರಣದಿಂದ ರಜತವೇ ಕಾಣುವುದೆಂದೆನ್ನುವುದಾದರೆ, ಒಬ್ಬೊಬ್ಬನಿಗೆ ಒಂದೊಂದು ಆವರಣವೆಂದು ಚಿಂತಿಸಿದರೆ), ತದಾ–ಆಗ, ಅದೃಷ್ಟಸ್ಯ–ಕಾಣದಿರುವ (ಘಟವನ್ನು ಆವರಿಸುವ ಕತ್ತಲೆಯಂತೆ ಯಾರಿಗೂ ತೋರದ) ಆವರಣದ, ಬಹೋಃ – ಆಧಿಕ್ಯದ, ಕಲ್ಪ್ಯತ್ವಾತ್ – ಕಲ್ಪನೆಯುಂಟಾಗುವುದರಿಂದ, ಗೌರವಂ – ಕಲ್ಪನಾಗೌರವವು, ಭವೇತ್–ಪ್ರಾಪ್ತವಾಗುತ್ತದೆ.

---

ನಷ್ಟವಾದಾಗ ವಸ್ತುಜ್ಞಾನವು ದೊರೆಯುತ್ತದೆ (೧೬೬). ಒಂದು ಅಜ್ಞಾನಾವರಣವು ನಷ್ಟವಾದರೂ ಅಲ್ಲಿ ಮತ್ತೊಂದು ಅಜ್ಞಾನವು ಆವರಕವಾಗಿ ನಿಂತರೆ, ಆ ವಸ್ತುವು ಯಾರಿಂದಲೂ ಕಾಣಲ್ಪಡುವುದಿಲ್ಲ (೧೬೭). ಒಬ್ಬನಿಗೆ ಶುಕ್ತಿಯ ಜ್ಞಾನವಾಗಿ (ಅಜ್ಞಾನದಿಂದಾದ ವಿಪರೀತಜ್ಞಾನವು—ಬೆಳ್ಳಿಯೆಂಬ ಮಿಥ್ಯಾಜ್ಞಾನವು ಪರಿಹಾರವಾದಾಗ) ಬೇರೊಬ್ಬನಿಗೆ ಇನ್ನೂ ಬೆಳ್ಳಿಯೇ ತೋರುತ್ತಿದ್ದರೆ ಅಲ್ಲಿ ವ್ಯಕ್ತಿಭೇದದಿಂದ ಬೇರೊಂದು ಅಜ್ಞಾನದ ಆವರಣವನ್ನು ತಿಳಿಯಬೇಕಾಗುತ್ತದೆ; ಹೀಗೆ ಒಂದೇ ವಸ್ತುವಿಗೆ ಭಿನ್ನಭಿನ್ನಗಳಾದ ಅಜ್ಞಾನದ ಆವರಣವನ್ನು ತಿಳಿಯುವುದು ಯುಕ್ತವಲ್ಲ; ಏಕೆಂದರೆ ಒಂದು ಅಜ್ಞಾನದ

**ನ ಹಿ ತತ್ತದ್ಗೃಹಾಲೋಕೈರ್ನಾಶ್ಯತಾಮಿಸ್ರರಾಶಯಃ ।**
**ಘಟಾದಿಷು ಪ್ರದೃಶ್ಯಂತೇ ತತೋಽಪ್ರಾಮಾಣಿಕಂ ತ್ವಿದಂ ॥ ೧೬೯ ॥**

ತತ್ತದ್ಗೃಹಾಲೋಕೈಃ- (ಒಂದು ಘಟವನ್ನಾಚರಿಸಿದ) ಬೇರೆ ಬೇರೆ ಮನೆಗಳ ದೀಪಗಳಿಂದ, ನಾಶ್ಯತಾಮಿಸ್ರರಾಶಯಃ-ನಾಶವಾಗುವ ಕಗ್ಗತ್ತಲೆಗಳ ರಾಶಿಗಳು, ಘಟಾದಿಷು ನ ಹಿ ಪ್ರದೃಶ್ಯಂತೇ – ಘಟಾದಿ ವಸ್ತುಗಳಲ್ಲಿ ಕಾಣು ವುದಿಲ್ಲವಷ್ಟೆ (ಯಾವ ಒಂದು ದೀಪದಿಂದಲಾದರೂ ಆ ಘಟವು ಎಲ್ಲರಿಂದಲೂ ಕಾಣಲ್ಪಡುತ್ತದೆ); ತತಃ-ಆದ್ದರಿಂದ, ಇದಂ-ಈ ಪ್ರಕ್ರಿಯೆಯು (ಒಂದು ಪದಾರ್ಥವು ಒಬ್ಬನಿಗೆ ಕಂಡರೂ ಇನ್ನೊಂದು ಅಜ್ಞಾನದ ಆವರಣದಿಂದ ಮತ್ತೊಬ್ಬನಿಗೆ ಕಾಣುವುದಿಲ್ಲವೆಂಬ—ಜ್ಞಾತೃಭೇದದಿಂದ ಅಜ್ಞಾನಾವರಣ ಭೇದವನ್ನು ಹೇಳುವ ಪ್ರಕ್ರಿಯೆಯು), ಅಪ್ರಾಮಾಣಿಕಂ – ಪ್ರಮಾಣ ವಿಲ್ಲದ್ದು.[1]

**ಅತಃ ಪುಂಗತಮೇವೇದಂ ತಮಃ ಮರ್ತ್ಯಾ ಹಿ ತಾಮಸಾಃ ॥ ೧೭೦ ॥**

ಅತಃ-ಅಜ್ಞಾನವು ವಿಷಯವನ್ನು (ಪದಾರ್ಥವನ್ನು) ಆಶ್ರಯಿಸಿರು ವುದೆಂಬುದು ಅಪ್ರಮಾಣಿಕವಾದ್ದರಿಂದ, ಇದಂ-(ವಸ್ತುಜ್ಞಾನವನ್ನು ಪ್ರತಿ ಬಂಧಿಸುವ) ಈ, ತಮಃ-ಅಜ್ಞಾನವು, ಪುಂಗತಂ ಏವ – ಪುರುಷನಲ್ಲಿಯೇ

---

ಆವರಣವು ಹೋಗಿ ಮತ್ತೊಂದು ಆವರಣವು ಮುಸುಕಿದರೆ, ಆಗ ವಸ್ತುವು ಯಾರಿಗೂ ಕಾಣಲಾರದು; ಮತ್ತು ಘಟಾದಿ ವಸ್ತುಗಳಲ್ಲಿ ಈ ವಿಧವಾದ ಬಹು ಅಜ್ಞಾನದ ಆವರಣಗಳನ್ನು ತಿಳಿಯುವುದು, ಕಲ್ಪನಾಗೌರವವೆಂಬ ದೋಷಕ್ಕೆ ಕಾರಣವಾಗುತ್ತದೆ; ಹೀಗಲ್ಲದಿದ್ದರೆ ಅದೃಷ್ಟವಾದ ಕತ್ತಲೆಯಂತೆ ಘಟಾದಿ ವಸ್ತುವಿನ ನಿಜಸ್ವರೂಪವನ್ನು ಎಲ್ಲರಿಂದ ಮರೆಮಾಡುವ ಅಜ್ಞಾನದ ಬಹು ಆವರಣಗಳನ್ನು ಕಲ್ಪಿಸಬೇಕಾಗುತ್ತದೆ; ಹೀಗೆ ಕಲ್ಪಿಸುವುದು ಅಪ್ರಮಾಣಿಕ ವಾದುದು (೧೬೮-೧೬೯). ಆದ್ದರಿಂದ ಅಜ್ಞಾನವು ವಿಷಯಾಶ್ರಿತವಲ್ಲ; ಕಿಂತು ಪುರುಷಗತವಾದುದೇ ಸರಿ; ಯಾವ ಪುರುಷನಿಗೆ ಅಜ್ಞಾನವು ನಾಶವಾಗು ವುದೋ ಅವನಿಗೆ ಮಾತ್ರ ವಸ್ತುಜ್ಞಾನವಾಗುತ್ತದೆಂಬ ನಿಯಮವು ಆಗ

---

1 ಪ್ರಾಮಾಣಿಕವಾದ್ದರಿಂದ ಕಲ್ಪನಾಗೌರವವೆಂಬ ದೋಷವಿಲ್ಲ, ಎಂಬ ಪರನ ಆಶೆಯನ್ನು ಖಂಡಿಸಲು ಅಪ್ರಾಮಾಣಿಕವೆಂದು ಹೇಳಲಾಗಿದೆ.

ಇರುತ್ತದೆ—ವಸ್ತುವಿನಲ್ಲಿ ಅಲ್ಲ; ಮರ್ತ್ಯಾಃ–ಮನುಷ್ಯರೇ, ತಾಮಸಾಃ ಹಿ–ತಾಮಸರೆಂಬ ವ್ಯವಹಾರ ಪ್ರಸಿದ್ಧಿಯಿದೆಯಷ್ಟೆ (ಪುರುಷರಲ್ಲಿ ಅಜ್ಞಾನವಿರಬಹುದಲ್ಲದೇ ವಸ್ತುಗಳಲ್ಲಲ್ಲ).

**ಪುಂಸು ಕಾಚಾದಿದೋಷಾಶ್ಚ ಯತಃ ಸಂತಿ ಪೃಥಕ್ ಪೃಥಕ್ ।**
**ಅತೋ ನಾನಾತ್ವಮಪ್ಯೇಷಾಮನಾಯಾಸೇನ ಸಿದ್ಧ್ಯತಿ ॥ ೧೭೧ ॥**

ಅಜ್ಞಾನವು ಪುರುಷನಿಷ್ಠವೆಂಬಲ್ಲಿ ಕಣ್ಣಿನ ಕಾಚಾದಿ ದೋಷದಂತೆ, ಪ್ರತಿಪುರುಷವೈವಿಧ್ಯವು ಯಾವ ಕಲ್ಪನೆಯೂ ಇಲ್ಲದೆ ಸಿದ್ಧವಾಗುತ್ತದೆನ್ನುತ್ತಾರೆ :–

ಯತಃ–ಯಾವ ಕಾರಣದಿಂದ, ಪುಂಸು—ಪುರುಷರಲ್ಲಿ, ಪೃಥಕ್ ಪೃಥಕ್–ಬೇರೆಬೇರೆಯಾಗಿ, ಕಾಚಾದಿದೋಷಾಃ–ಕಾಚ (ಕಾಮಲಾದಿ) ಮುಂತಾದ ದೋಷಗಳು, ಸಂತಿ ಚ–ಇರುತ್ತವೆಯೋ, ಅತಃ–ಆ ಕಾರಣದಿಂದ, ಏಷಾಂ–ಅಜ್ಞಾನಗಳ, ನಾನಾತ್ವಂ ಅಪಿ–ಬಹುತ್ವವೂ (ಪ್ರತಿ ಪುರುಷಭಿನ್ನತ್ವವೂ), ಅನಾಯಾಸೇನ–ಆಯಾಸವಿಲ್ಲದೇ (ಯಾವ ಗೌರವಾದಿ ದೋಷಗಳಿಗೆ ಅವಕಾಶವಿಲ್ಲದೆ), ಸಿದ್ಧ್ಯತಿ–ಸಿದ್ಧಿಸುತ್ತದೆ.

**ನಾಶ್ಯನಾಶಕಯೋರ್ಜ್ಞಾನಾಜ್ಞಾನಯೋರೇಕದೇಶತಾ ।**
**ತಮಃ ಪ್ರಕಾಶವತ್ಸಿದ್ಧಾ ನಾಂಧಕಾರೋಽಪಿ ಚೇತನೇ ।**
**ದೀಪೋ ವಾ ಚೇತನಗತಸ್ತತಸ್ತೌ ಯತ್ರ ಕುತ್ರಚಿತ್ ॥ ೧೭೨ ॥**

ಅಜ್ಞಾನವು ಪುರುಷನಿಷ್ಠವೆಂಬಲ್ಲಿ ಯುಕ್ತಿಯನ್ನು ಹೇಳುತ್ತಾರೆ :—

ನಾಶ್ಯನಾಶಕಯೋಃ–ನಾಶ್ಯ (ನಾಶಹೊಂದಿಸಲಾಗುವ) ನಾಶಕ (ನಾಶಪಡಿಸುವ) ಗಳಲ್ಲಿ, ಜ್ಞಾನಾಜ್ಞಾನಯೋಃ–ಜ್ಞಾನ ಅಜ್ಞಾನಗಳಲ್ಲಿ, ಏಕದೇಶತಾ

---

ಮಾತ್ರ ಯುಕ್ತವಾಗುತ್ತದೆ; ಪುರುಷರೇ ಅಜ್ಞಾನಿಗಳೆಂಬ ವ್ಯವಹಾರವೂ ಇರುತ್ತದೆಯಲ್ಲದೇ ವಸ್ತುಗಳಲ್ಲ (೧೭೦). ಪುರುಷರಲ್ಲಿ ಕಾಚಕಾಮಲಾದಿ ದೃಷ್ಟಿದೋಷಗಳು (ಪ್ರತಿ ಪುರುಷರಲ್ಲಿ ಭಿನ್ನಭಿನ್ನನಾಗಿ) ವಿವಿಧವಾಗಿರುವುದು ಕಂಡುಬರುತ್ತದೆ; ಹೀಗೆಯೇ ಅಜ್ಞಾನವೂ (ಅಜ್ಞಾನದ ಆವರಣವೂ) ಪುರುಷಭೇದದಿಂದ ವಿವಿಧವಾಗಿರುತ್ತದೆಂದು ಯಾವ ದೋಷಕ್ಕೂ ಎಡೆಗೊಡದೆ ಅನಾಯಾಸವಾಗಿ ಸಿದ್ಧವಾಗುತ್ತದೆ (೧೭೧). ಯದ್ಯಪಿ, ಕತ್ತಲೆ ಬೆಳಕುಗಳು ವಿಷಯ (ವಸ್ತು) ವನ್ನಾಶ್ರಯಿಸಿರುವುದೆಂದು ಕಂಡುಬಂದರೂ ವಸ್ತುವೇ

–ಒಂದೇ ದೇಶದಲ್ಲಿರುವಿಕೆಯು, ತಮಃ ಪ್ರಕಾಶವತ್–ಕತ್ತಲೆ, ಬೆಳಕುಗಳಂತೆ, ಸಿದ್ಧಾ – ಸಿದ್ಧವಾದುದು; ಚೇತನೇ – ಚೇತನನಲ್ಲಿ, ಅಂಧಕಾರಃ ಅಪಿ – ಕಗ್ಗತ್ತಲೆಯೂ, ನ–ಇರುವುದಿಲ್ಲ; ದೀಪಃ ವಾ–ದೀಪವಾದರೂ, ಚೇತನಗತಃ –ಚೇತನನಲ್ಲಿರುವುದು, ನ–ಅಲ್ಲ; ತತಃ–ಆದ್ದರಿಂದ, ತೌ–ಕತ್ತಲೆ ಬೆಳಕುಗಳು, ಯತ್ರ ಕುತ್ರಚಿತ್ – ಎಲ್ಲಿಯೇ ಇರಲಿ (ಏಕದೇಶತ್ವವಿರುತ್ತದೆ) (ಎಂದರೆ, ಕತ್ತಲಿರುವಲ್ಲಿ ಬೆಳಕು ಬಂದರೆ ಮಾತ್ರ ವಸ್ತು ಕಾಣುತ್ತದೆ; ಕತ್ತಲೆಯಿದ್ದಲ್ಲಿ ಬೆಳಕಿನ ಪ್ರವೇಶಕ್ಕೆ ಅವಕಾಶವಿರುತ್ತದೆ).

**ಜ್ಞಾನಂ ತು ಜ್ಞಾತೃಪುಂಸ್ಯೇವ ತನ್ನಾಶ್ಯಾಜ್ಞಾನಮಪ್ಯತಃ ।**
**ವಕ್ತವ್ಯಂ ಜ್ಞಾತೃಪುರುಷೇ ಬ್ರಹ್ಮಣಿ ಸ್ಯಾತ್ಕಥಂ ವದ ॥ ೧೭೩ ॥**

ಜ್ಞಾನಂ ತು – ಜ್ಞಾನವಾದರೋ, ಜ್ಞಾತೃಪುಂಸಿ ಏವ – ತಿಳಿಯುವ ಪುರುಷನಲ್ಲಿ ಮಾತ್ರ (ಘಟಾದಿ ವಿಷಯಗಳಲ್ಲಲ್ಲ) (ವಿಷಯಗಳು ಜಡವಾದ್ದರಿಂದ ಜ್ಞಾನಾಶ್ರಯ ಯೋಗ್ಯತೆ ಇಲ್ಲ); ಅತಃ–ಜ್ಞಾನವು ಪುರುಷನಿಷ್ಠವಾದುದರಿಂದ, ತನ್ನಾಶ್ಯಾಜ್ಞಾನಂ – ಜ್ಞಾನದಿಂದ ನಾಶಹೊಂದುವ ಅಜ್ಞಾನವು, ಜ್ಞಾತೃಪುರುಷೇ–ತಿಳಿಯುವ ಪುರುಷನಲ್ಲಿಯೇ, ವಕ್ತವ್ಯಂ–ಹೇಳಲ್ಪಡತಕ್ಕದ್ದು (ಅಜ್ಞಾನವೂ ಅದೇ ಸ್ಥಲದಲ್ಲಿರಬೇಕೆಂಬ ನಿಯಮದಿಂದ, ಅಜ್ಞಾನವನ್ನು ಪುರುಷಗತವೆಂದೇ ಹೇಳಬೇಕು); ಬ್ರಹ್ಮಣಿ–(ನಾಶಕ ಜ್ಞಾನಪೂರ್ಣನಾದ)

---

ಅವುಗಳನ್ನಾಶ್ರಯಿಸಿರುತ್ತದೆಯಲ್ಲದೇ ಅವು ವಸ್ತುವಿನಲ್ಲಿಲ್ಲ; ಆದರೂ ಕತ್ತಲೆ ಪ್ರಕಾಶಗಳಲ್ಲಿ ನಾಶ್ಯನಾಶಕರೂಪದ ವಸ್ತುಸಂಬಂಧವಿದ್ದು, ಕತ್ತಲಿರುವಲ್ಲಿ ಬೆಳಕು ಪ್ರವೇಶಿಸುವಂತೆ ಏಕಸ್ಥಲದಲ್ಲಿರುವಿಕೆಯು, ಜ್ಞಾನಾಜ್ಞಾನಗಳಿಗೂ ನಾಶ್ಯನಾಶಕಭಾವವಿರುವುದರಿಂದ ತಿಳಿಯಬಹುದಾಗಿದೆ; ಚೇತನನಲ್ಲಿ ಕತ್ತಲೆಯಾಗಲಿ ಬೆಳಕಾಗಲಿ ಇಲ್ಲ; ಆದರೂ ಸದೃಶಸ್ಥಾನದಲ್ಲಿರುವ ಅಜ್ಞಾನ ಜ್ಞಾನಗಳು ಜೀವಗತವೆಂದೇ ತಿಳಿಯಬೇಕಾಗಿದೆ (೧೭೨). ಜ್ಞಾನವು ಜ್ಞಾತೃ (ತಿಳಿಯುವ) ಪುರುಷನಲ್ಲಿಯೇ ಇರುತ್ತದೆ; ಆದ್ದರಿಂದ ಜ್ಞಾನದಿಂದ ನಾಶ್ಯವಾದ (ನಷ್ಟಹೊಂದಲರ್ಹವಾದ) ಅಜ್ಞಾನವೂ ಪುರುಷನಲ್ಲಿಯೇ ಇರುತ್ತದೆಂದೇ ಹೇಳಬೇಕು; ಸರ್ವಜ್ಞನಾದ (ಪ್ರಕಾಶರೂಪನಾದ) ಭಗವಂತನಲ್ಲಿ ಕತ್ತಲೆಯಂತಿರುವ ಅಜ್ಞಾನವು ಹೇಗಿರುತ್ತದೆ? ಹೇಳು (ಶಕ್ಯವಿಲ್ಲ) (೧೭೩).

ಬ್ರಹ್ಮನಲ್ಲಿ, ಕಥಂ ಸ್ಯಾತ್–(ಅಜ್ಞಾನವು) ಹೇಗಿರುತ್ತದೆ? ವದ–ಹೇಳು (ಇರಲು ಶಕ್ಯವಿಲ್ಲ).[1]

**ಜ್ಞಾನಾಜ್ಞಾನೇ ಹಿ ಪುಂಧರ್ಮೌ ಪುಂಸ್ಥಾವೇವಾರ್ಥಸಾಧಕೌ ।**
**ಕಿಂ ನ ಪುಂನೇತ್ರಗಃ ಕಾಚೋ ಬಾಹ್ಯಾರ್ಥಾವರಣಕ್ಷಮಃ ।**
**ಅತಸ್ತವಾನುಮಾನಂ ಚ ಪರಕೈಂಕರ್ಯಮಾಚರೇತ್ ॥ ೧೭೪ ॥**

ಅಜ್ಞಾನವು ಪುರುಷನಿಷ್ಠವಾದರೂ, ಅದಕ್ಕೆ ಬಾಹ್ಯ ವಿಷಯಾವರಣತ್ವವು ಕೂಡುತ್ತದೆಂದು ದೃಷ್ಟಾಂತಮುಖದಿಂದ ಸಾಧಿಸುತ್ತಾರೆ :—

ಜ್ಞಾನಾಜ್ಞಾನೇ–ಜ್ಞಾನ ಮತ್ತು ಅಜ್ಞಾನಗಳೆರಡೂ, ಪುಂಧರ್ಮೌ ಹಿ –ಪುರುಷನಿಷ್ಠ ಧರ್ಮಗಳೇ ಸರಿ; ಪುಂಸ್ಥೌ ಏವ–ಪುರುಷನಲ್ಲಿದ್ದುಕೊಂಡೇ, ಅರ್ಥಸಾಧಕೌ–ವಿಷಯ (ವಸ್ತು) ಪ್ರಕಾಶನ ಮತ್ತು ವಸ್ತುವಿನ ಆವರಣಗಳೆಂಬ ಎರಡೂ ಫಲಗಳನ್ನು ಸಾಧಿಸುತ್ತವೆ (ಜ್ಞಾನರೂಪ ಪ್ರಕಾಶದಂತೆ ಅದರ ಪ್ರತಿಯೋಗಿಯಾದ ತಮಸ್ಸು ಸಹ [ಕತ್ತಲೆಯು] ಒಳಗಿದ್ದುಕೊಂಡೇ ಹೊರಗಿನ ಕಾರ್ಯವನ್ನು ಮಾಡುವುದೆಂದು ಸೂಚಿಸಲು, ಇಲ್ಲಿ ಅಜ್ಞಾನ

ಹೀಗೆ ಪುರುಷನಲ್ಲಿರುವ ಜ್ಞಾನಾಜ್ಞಾನಗಳು ಅಲ್ಲಿದ್ದುಕೊಂಡೇ ಬಾಹ್ಯವಸ್ತುಗಳ ಪ್ರಕಾಶನವನ್ನೂ (ವಸ್ತುಜ್ಞಾನವನ್ನೂ), ವಸ್ತುವಿನ ಆವರಣರೂಪದಿಂದ ಅದರ ಅಜ್ಞಾನವನ್ನೂ ಪುರುಷನಿಗೆ (ಜೀವನಿಗೆ) ಉಂಟುಮಾಡಲು ಸಮರ್ಥಗಳಾಗಿವೆ; ಹೇಗೆಂದರೆ, ಕಣ್ಣಿನಲ್ಲಿರುವ ಕಾಚಾದಿ ದೋಷವು, ಬಾಹ್ಯ ಪದಾರ್ಥದ ಆವರಣವನ್ನುಂಟುಮಾಡಿ ಅದರ ಅಜ್ಞಾನಕ್ಕೆ ಕಾರಣವಾಗುವಂತೆ ಪುರುಷನಿಷ್ಠ ಅಜ್ಞಾನದ ಕಾರ್ಯವೂ ಎಂದು ತಿಳಿಯಬೇಕು; ಅಜ್ಞಾನವು ಜೀವಾಶ್ರಿತವೆಂದು ಹೇಳುವ ಪರನ ವಾದವನ್ನು ಅಂಗೀಕರಿಸಲೇಬೇಕು; ಇದು ಪರದಾಸ್ಯವನ್ನು ಮಾಡಿದಂತೆ ಅಲ್ಲವೇ ? ಈ ಪ್ರಮೇಯವನ್ನು ವಿರೋಧಿಸಿ,

---

1 ಬ್ರಹ್ಮನು ಸರ್ವಜ್ಞನಾದ್ದರಿಂದ ನಾಶಕವಾದ ಜ್ಞಾನವಿರುವಲ್ಲಿಯೇ ಇರಬೇಕಾದ ಅಜ್ಞಾನವು ದೀಪದ ಬೆಳಕಿನಲ್ಲಿ ಕತ್ತಲೆಯು ಹೇಗಿರಬಲ್ಲದು? ಜೀವರಲ್ಲಿ ಜ್ಞಾನಾಜ್ಞಾನಗಳೆರಡೂ ಏಕತ್ರ ಇರುವುದು ಸಿದ್ಧವಾಗಿದ್ದರೂ, ಜೀವನು ಈಗ ಸರ್ವಜ್ಞನಲ್ಲದಿದ್ದರೂ ಅಜ್ಞಾನವನ್ನು ಕಳೆದುಕೊಂಡಮೇಲೆ ಮುಕ್ತಿಯಲ್ಲಿ ಯಥಾಯೋಗ್ಯ ಸರ್ವಜ್ಞನಾಗಿ ಅಜ್ಞಾನದ ಲೇಶವೂ ಇಲ್ಲದಂತಾಗುತ್ತಾನೆ; ಬ್ರಹ್ಮನಾದರೋ ನಿತ್ಯ ಸರ್ವಜ್ಞನು; ಆದ್ದರಿಂದ ಬ್ರಹ್ಮಾಶ್ರಿತ ಅಜ್ಞಾನಪಕ್ಷವು ನಿಲ್ಲತಕ್ಕದ್ದಲ್ಲ.

*

ದೊಂದಿಗೆ ಜ್ಞಾನವನ್ನೂ ಸೇರಿಸಿಕೊಂಡು ನಿರೂಪಿಸುತ್ತಿದ್ದಾರೆಂದು ತಿಳಿಯಬೇಕು); ಪುಂನೇತ್ರಗಃ – ಪುರುಷನ ಕಣ್ಣಿನಲ್ಲಿರುವ, ಕಾಚಃ–ಕಾಚವೆಂಬ ದೋಷವು, ಬಾಹ್ಯಾರ್ಥಾವರಣಕ್ಷಮಃ – ಶುಕ್ತಿ ಮೊದಲಾದ ವಸ್ತುವನ್ನು ಆವರಿಸಲು (ಆವರಣವಾಗಿದ್ದು ಕಾರ್ಯಮಾಡಲು) ಶಕ್ತವಾದುದು, ನ ಕಿಂ–ಅಲ್ಲವೇನು? ಅತಃ–ಆದ್ದರಿಂದ, ತವ–ನಿನ್ನ, ಅನುಮಾನಂ–ಅನುಮಾನವು[1],

---

ಅಜ್ಞಾನವು ವಿಷಯವನ್ನು (ಪದಾರ್ಥವನ್ನು) ಆಶ್ರಯಿಸಿರುವುದೆಂಬಲ್ಲಿ ನೀನು ಪ್ರಯೋಗಿಸುವ ಅನುಮಾನವೂ ವ್ಯರ್ಥವೇ ಆಗುತ್ತದೆ—ಅದರಿಂದ ನಿನ್ನ

---

1 'ಪ್ರಮಾಣಜ್ಞಾನಂ ಸ್ವಪ್ರಾಗಭಾವವ್ಯತಿರಿಕ್ತ ಸ್ವವಿಷಯಾವರಣ ಸ್ವದೇಶಗತ ಸ್ವನಿವರ್ತ್ಯವಸ್ತ್ವಂತರ ಪೂರ್ವಕಂ। ಅಪ್ರಕಾಶಿತಾರ್ಥಪ್ರಕಾಶಕತ್ವಾತ್। ಅಂಧಕಾರೇ ಪ್ರಥಮೋತ್ಪನ್ನ ಪ್ರದೀಪ ಪ್ರಭಾವತ್।'—ಎಂಬುದು, ಅಜ್ಞಾನವು ವಿಷಯವನ್ನಾಶ್ರಯಿಸಿರುತ್ತದೆ — ಜ್ಞಾತೃವನಲ್ಲ, ಎಂಬ ಪ್ರಮೇಯವನ್ನು ಸಾಧಿಸಲು ಪರನು ಪ್ರಯೋಗಿಸುವ ಅನುಮಾನವು; ಇದರ ಭಾವಾರ್ಥವು ಹೀಗಿದೆ;—'ಯಥಾರ್ಥಜ್ಞಾನವು ತನಗೆ ಮೊದಲಿರುವ ಜ್ಞಾನಾಭಾವದಿಂದ ಭಿನ್ನವಾದ, ತನ್ನ ವಿಷಯದ (ತಾನು ತಿಳಿಸಿಕೊಡುವ ಪದಾರ್ಥದ) ಆವರಣವಾಗಿದ್ದ, ತಾನಿದ್ದಲ್ಲಿಯೇ ಇರುವ (ಪ್ರಕಾಶವು ಬಿದ್ದಲ್ಲಿಯೇ ಮೊದಲಿಗೆ ಕತ್ತಲೂ ಇರುವುದಷ್ಟೆ), ತನ್ನಿಂದ ಪರಿಹೃತವಾಗುವ ಬೇರೆ ವಸ್ತುವಿನೊಡನೆ ಇರುವ ಅಜ್ಞಾನವನ್ನು ಪರಿಹರಿಸಿ, ಆವರೆಗೆ ಕಾಣದ ವಸ್ತುವನ್ನು ಪ್ರಕಾಶಗೊಳಿಸುತ್ತದೆ; ಕತ್ತಲಲ್ಲಿ ಮೊದಲು ತರಲಾದ ದೀಪಪ್ರಕಾಶದಂತೆ;' ಎಂಬುದಾಗಿದೆ. ಇದರಿಂದ ಜ್ಞಾನವಿದ್ದಲ್ಲಿ, ಅದಿದ್ದಲ್ಲಿ ಇದ್ದ ಒಂದು ಪದಾರ್ಥದ ಜ್ಞಾನವು ಉಂಟಾಗುತ್ತದೆಂದು ಸಿದ್ಧವಾಗುತ್ತದೆ; ಕತ್ತಲೆಯು ದೀಪದ ಪ್ರಾಗಭಾವದಿಂದ ಬೇರೆಯಾಗಿದೆ; ದೀಪದಿಂದ ನಾಶವಾಗತಕ್ಕದ್ದಾಗಿದೆ–ದೀಪವಿರುವ ಸ್ಥಲದಲ್ಲಿಯೇ ಇದ್ದುದು ಕತ್ತಲೆ; ಯಥಾರ್ಥಜ್ಞಾನವೂ ದೀಪದಂತೆ, ಹಿಂದೆ ತಿಳಿಯದ ಒಂದು ವಸ್ತುವನ್ನು ತಿಳಿಸುವುದರಿಂದ, ದೀಪದಂತೆ, ತನ್ನ ಪ್ರಾಗಭಾವದಿಂದ ಬೇರೆಯಾದ, ಜ್ಞಾನದಿಂದ ನಿವೃತ್ತವಾಗುವ, ಅಲ್ಲಿಯೇ ಇದ್ದ (ಅಜ್ಞಾನವೆಂಬ) ಒಂದು ಪದಾರ್ಥದಿಂದ ಕೂಡಿದ್ದಾಗಿದೆ; ಎಂದು ಅದ್ವೈತಿಗಳು ಸಾಧಿಸಲು ಯತ್ನಿಸುತ್ತಾರೆ. ಈ ಯತ್ನವು ದುಸ್ಸಾಧ್ಯವು; ಏಕೆಂದರೆ, ಬೆಳಕು ಬಿದ್ದಲ್ಲಿ ಕತ್ತಲೆಯಿದ್ದಂತೆ ಜ್ಞಾನವಿರುವಲ್ಲಿಯೇ ಅಜ್ಞಾನವೂ ಇರಬೇಕು; ದೀಪದಿಂದ ಪ್ರಕಾಶಿತವಾದ ವಸ್ತುವು ಕತ್ತಲೆಯಿಂದ ಆವೃತವಾಗಿತ್ತಲ್ಲದೇ ಅಜ್ಞಾನವೆಂಬ ಬೇರೊಂದು ಆವರಣದಿಂದೆಂಬುದಕ್ಕೆ ಈ ಅನುಮಾನವು ಸಾಧಕವಲ್ಲ; ದೀಪವು ಕತ್ತಲನ್ನು ಪ್ರಕಾಶಿಸುವುದಿಲ್ಲ; ಕಂತು ಅಲ್ಲಿದ್ದು ಅದರಿಂದ ಆವೃತವಾದ ವಸ್ತುವನ್ನು ಮಾತ್ರ; ಅಂತೂ ಯಥಾರ್ಥಜ್ಞಾನವನ್ನು ಪಕ್ಷವನ್ನಾಗಿಟ್ಟುಕೊಂಡು, ಜ್ಞಾನವಿದ್ದಲ್ಲಿ ಅಜ್ಞಾನವನ್ನು ಸಾಧಿಸುವ ಯುಕ್ತಿಯಿಂದ, ಸಿದ್ಧವಾದ ಅಜ್ಞಾನವು ಜ್ಞಾನಾಶ್ರಯನಾದ ಜೀವನಲ್ಲೇ ಇರುತ್ತದೆಂದು ಸಿದ್ಧವಾಯಿತು.

ಪರಕೈಂಕರ್ಯಂ—ಜೀವನಿಷ್ಠ ಅಜ್ಞಾನವನ್ನು ಹೇಳುವ ಪರನ ದಾಸ್ಯವನ್ನು (ಅಧೀನತ್ವವನ್ನು), ಆಚರೇತ್—ಒಪ್ಪಿ ನಡೆದುಕೊಳ್ಳಬೇಕು.

**ಸ್ವದೇಶಗತಮಜ್ಞಾನಂ ಪ್ರಮಾಣಜ್ಞಾನತಸ್ತವ ।**
**ಸಿದ್ಧ್ಯೇತ್ ಪ್ರಮಾತೃಪುರುಷೇ ಯತಃ ಸಿದ್ಧಮಭೂದ್ಬಲಾತ್ ।**
**ಪ್ರಮಾತಾ ಜೀವ ಏವೇತಿ ಜೀವಾಜ್ಞಾನಮಭೂದ್ಧಿ ತತ್ ॥ ೧೭೫ ॥**

ಪೂರ್ವಶ್ಲೋಕಾರ್ಥವನ್ನೇ ಉಪಪಾದಿಸುತ್ತಾರೆ :—

ಪ್ರಮಾಣಜ್ಞಾನತಃ – ಪ್ರಮಾಣಜ್ಞಾನದಿಂದ (ಪಕ್ಷವನ್ನಾಗಿ ಇಟ್ಟು ಕೊಂಡು), ಸ್ವದೇಶಗತಂ—(ಪ್ರಮಾಣ ಜ್ಞಾನಸಮಾನವಾದ) ತನ್ನ ದೇಶದಲ್ಲಿರುವ, ಅಜ್ಞಾನಂ—ಅಜ್ಞಾನವು, ತವ—ನಿನಗೆ, ಪ್ರಮಾತೃಪುರುಷೇ—ಪ್ರಮಾಣ ಜ್ಞಾನವುಳ್ಳ ಪುರುಷನಲ್ಲಿ, ಸಿದ್ಧ್ಯೇತ್ – ಸಿದ್ಧವಾಯಿತು; ಪ್ರಮಾವುಳ್ಳವನು ಪ್ರಮಾತಾ; ಆದ್ದರಿಂದ ಈ ಜ್ಞಾನವು ಜೀವನಿಷ್ಠವೆಂದೂ ಸೂಚಿಸಲಾಗಿದೆ), ಯತಃ – ಯಾವ ಕಾರಣದಿಂದ, ಸಿದ್ಧಂ – (ಅಜ್ಞಾನವು) ಸಿದ್ಧವಾದುದು, ಬಲಾತ್ ಅಭೂತ್—(ಅನುಮಾನಬಲದಿಂದಲೇ) ಆಯಿತೋ, ತತ್—ಆದ್ದರಿಂದ, ಪ್ರಮಾತಾ ಜೀವಃ ಏವ ಇತಿ—ಪ್ರಮಾಣಜ್ಞನು ಜೀವನೇ (ಆಗಿರುತ್ತಿರುವಾಗ), ಜೀವಾಜ್ಞಾನಂ—ಜೀವನಲ್ಲಿ (ಜೀವಾಶ್ರಿತವಾದ) ಅಜ್ಞಾನವೇ, ಅಭೂತ್—ಆಯಿತು.

**ಚಕ್ಷುಷಾ ಸನ್ನಿಕೃಷ್ಟಾರ್ಥಜ್ಞಾನಂ ಸ್ಯಾದಂತರೇವ ಹಿ ।**
**ಜಾನಾಮೀತ್ಯಾಂತರತ್ವಸ್ಯ ಸುಖಾದಾವಿವ ಸಿದ್ಧಿತಃ ॥ ॥ ೧೭೬ ॥**

---

ವಿರೋಧಿಯ ಪ್ರಮೇಯವೇ ಸಿದ್ಧವಾಗುತ್ತದೆ (೧೭೪). ಪ್ರಮಾಣಜ್ಞಾನವು ಪುರುಷನಲ್ಲಿರುವುದರಿಂದ ಅಲ್ಲಿಯೇ ಇರುವುದರಿಂದ ಅಜ್ಞಾನವೂ ಅಲ್ಲಿಯೇ (ಸಮಾನ ದೇಶದಲ್ಲಿ) ಇರುವುದೆಂದು ನಿನ್ನ ಅನುಮಾನದಿಂದಲೇ ಸಿದ್ಧವಾಯಿತು (ಅಂಧಕಾರದಲ್ಲಿ ಮೊದಲು ಉದಿತವಾದ ದೀಪ ಪ್ರಕಾಶದಂತೆ ಎಂಬ ಹಿಂದಿನ ಶ್ಲೋಕದ ಟಿಪ್ಪಣಿಯಲ್ಲಿ ವಿವರಿಸಲಾದಂತೆ); ಜ್ಞಾನವು ಜ್ಞಾತೃವಾದ ಜೀವನಲ್ಲಿಯೇ ಇರುತ್ತದೆಂದು ಅವಶ್ಯವಾಗಿ ಅಂಗೀಕರಿಸಬೇಕಾದ್ದರಿಂದ, ಅಜ್ಞಾನವೂ ಜೀವಾಶ್ರಿತವೆಂದು ಸಿದ್ಧವಾಗುತ್ತದೆ (೧೭೫). ಚಕ್ಷುರಿಂದ್ರಿಯವು (ಕಣ್ಣು) ಮನಸ್ಸಿನೊಡನೆ ವಸ್ತುಪರ್ಯಂತ ದ್ರವಿಸಿಹೋಗಿ

ಕಣ್ಣಿನ ಮೂಲಕ ಮನಸ್ಸಿನ ವೃತ್ತಿಯು ವಸ್ತುಪರ್ಯಂತ (ಪದಾರ್ಥದ ವರೆಗೆ) ಧಾವಿಸುವುದರಿಂದ, ಅಜ್ಞಾನವು ವಸ್ತುಸಮಾನ ದೇಶದಲ್ಲಿರುವುದೆಂಬ ಆಶೆಯನ್ನು ನಿರಾಕರಿಸುತ್ತಾರೆ :—

ಚಕ್ಷುಷಾ – ಕಣ್ಣಿನಿಂದ, ಸನ್ನಿಕೃಷ್ಟಾರ್ಥಜ್ಞಾನಂ – ಸಂಬಂಧವನ್ನು ಹೊಂದಿದ ವಸ್ತುಜ್ಞಾನವು, ಅಂತಃ ಏವ–ಜೀವನಲ್ಲಿಯೇ (ಮನಸ್ಸಿನಲ್ಲಿಯೇ), ಹಿ–ಉಂಟಾಗುವುದಷ್ಟೆ;[1] (ಇದು) ಜಾನಾಮಿ–ತಿಳಿಯುತ್ತೇನೆ, ಇತಿ–ಎಂಬುದರ, ಆಂತರತ್ವಸ್ಯ–ಅಂತರಂಗದ ಕ್ರಿಯೆ (ಅನುಭವ) ಎಂಬುದರ, ಸುಖಾದೌ ಏವ–'ನಾನು ಸುಖಿಯು' ಎಂಬ ಅನುಭವದಂತೆ, ಸಿದ್ಧಿತಃ – ಸಿದ್ಧಿಸುವುದರಿಂದಲೂ (ಗೊತ್ತಾಗುತ್ತದೆ).

**ಪರೋಕ್ಷಜ್ಞಾನಕರಣಾಜ್ಜ್ಞಾನಮಂತರ್ಭವೇದ್ಯಥಾ ।**
**ತಥಾಽಪರೋಕ್ಷಕರಣಾಜ್ಜ್ಞಾನಮಪ್ಯಂತರೇವ ಹಿ ॥ ೧೭೭ ॥**

ಪರೋಕ್ಷಜ್ಞಾನಕರಣಾತ್–(ಚಕ್ಷುರಾದಿ ಇಂದ್ರಿಯಗಳಂತೆ) ಬಾಹ್ಯ ಕಾರಣದಿಂದ, ಯಥಾ–ಹೇಗೆ, ಜ್ಞಾನಂ–ಜ್ಞಾನವು, ಅಂತಃ–ಒಳಗೆ (ಅಂತರಂಗದಲ್ಲಿ – ಮನೋದ್ವಾರಾ ಆತ್ಮನಿಗೆ), ಭವೇತ್ – ಉಂಟಾಗುವುದೋ, ತಥಾ–ಹಾಗೆಯೇ, ಅಪರೋಕ್ಷಜ್ಞಾನಕರಣಾತ್–ಅಪರೋಕ್ಷ ಜ್ಞಾನಸಾಧನದಿಂದಲೂ, ಜ್ಞಾನಂ–ಅಪರೋಕ್ಷಜ್ಞಾನವು, ಅಂತಃ ಏವ–ಅಂತರಂಗದಲ್ಲಿಯೇ

---

(ಹರಿದುಹೋಗಿ) ವಸ್ತುಜ್ಞಾನವನ್ನು ಜೀವನಲ್ಲಿಯೇ ಉಂಟುಮಾಡುತ್ತದೆ; ಇದನ್ನು ತಿಳಿಯುತ್ತೇನೆಂಬ ಅನುಭವವು ಸುಖಾದಿಗಳ ಅನುಭವದಂತೆ ಅಂತರಂಗಕ್ರಿಯೆಯು; ಆದ್ದರಿಂದ ಹೊರಗಿನ ಪದಾರ್ಥಜ್ಞಾನವೂ ಜೀವನೊಳಗೇ ಆಗುತ್ತದೆ (೧೭೬). ಪರೋಕ್ಷ ಜ್ಞಾನಸಾಧನಗಳಾದ ಚಕ್ಷುರಾದಿ ಇಂದ್ರಿಯಗಳು ಬಹಿರ್ವೃತ್ತಿಯುಳ್ಳವಾದರೂ, ಜನ್ಯಜ್ಞಾನವು ಹೇಗೆ ಜೀವನೊಳಗೇ ಆಗುವುದೋ ಹಾಗೆಯೇ ಬಾಹ್ಯಮನೋವೃತ್ತಿಯ ಅವಶ್ಯಕವೂ ಇಲ್ಲದ (ಮಾನಸ) ಪ್ರತ್ಯಕ್ಷ (ಅಪರೋಕ್ಷ ಜ್ಞಾನ) ವೂ ಅಂತರಂಗದಲ್ಲಿಯೇ

---

1 'ಆತ್ಮಾ ಮನಸಾ ಸಂಯುಜ್ಯತೇ ಮನ ಇಂದ್ರಿಯೇಣ ಇಂದ್ರಿಯಮರ್ಥೇನ' ಎಂಬ ಪ್ರಮಾಣದಿಂದ ಮನಸ್ಸೇ ಹೊರಗೆ ಹೋಗುವುದೆಂಬುದೂ ಪ್ರಾಮಾಣಿಕವೆಂದು ಸೂಚಿಸಲಾಗಿದೆ—'ಹಿ' ಶಬ್ದದಿಂದ.

ಉದಯವಾಗುತ್ತದೆ ; ಹಿ – ಇದೂ ಅನುಭವಸಿದ್ಧವೇ (ಆದರೂ ಪರೋಕ್ಷ ಜ್ಞಾನದಂತೆ, ಮನಸ್ಸು ಹೊರಗೆ ಹೋಗಬೇಕಾದ ಅವಶ್ಯಕವಿರುವುದಿಲ್ಲ— ಬಹಿರ್ಮನೋವೃತ್ತಿಯು ವ್ಯರ್ಥ).

**ಯದಿ ಶಬ್ದಸಹಾಯೇನ ಮನೋ ವೈಕುಂಠಮಾವಿಶೇತ್ ।**
**ಪುನರ್ನಿವೃತ್ತಿಶೂನ್ಯಂ ಸ್ಯಾದ್ದೀರ್ಘನಿದ್ರಾ ಭವೇತ್ತದಾ ॥ ೧೭೮ ॥**

ವೇದಾದಿ ಶಾಸ್ತ್ರಜನ್ಯ ಜ್ಞಾನದಲ್ಲಿಯೂ ಮನಸ್ಸಿನ ಬಹಿಃಪ್ರವೃತ್ತಿಯು ಕಂಡುಬರುವುದೆಂಬ ಮಂದಾಶಂಕೆಯನ್ನು ಪರಿಹರಿಸುತ್ತಾರೆ :—

ಶಬ್ದಸಹಾಯೇನ – ಶಾಸ್ತ್ರಗಳ ಸಹಾಯದಿಂದ, ಮನಃ – ಮನಸ್ಸು, ವೈಕುಂಠಂ—ವೈಕುಂಠದಲ್ಲಿರುವ ಭಗವಂತನನ್ನು, ಯದಿ ಆವಿಶೇತ್—ಪ್ರವೇಶಿಸುವುದೆಂದು ಹೇಳಿದರೆ (ತರ್ಹಿ—ಆಗ), ಪುನಃ—ಮತ್ತೆ, ನಿವೃತ್ತಿಶೂನ್ಯಂ ಸ್ಯಾತ್—ಹಿಂದಿರುಗಿ ಬರುವುದಿಲ್ಲವಾದ್ದರಿಂದ (ಕಣ್ಣು ವಸ್ತುವಿನವರೆಗೆ ಹೋಗಿ, ಅದರ ಜ್ಞಾನವನ್ನು ತಂದು, ಹಿಂದೆ ಬಂದು ಮನೋದ್ವಾರಾ ಆತ್ಮನಿಗೆ ಮುಟ್ಟಿಸುವಂತೆ, ವೈಕುಂಠವನ್ನು ಪುನರಾವೃತ್ತಿಶೂನ್ಯವೆಂದು ಹೇಳುವುದರಿಂದ ಶಬ್ದವು ತಿರುಗಿಬಾರದೇ), ದೀರ್ಘನಿದ್ರಾ—(ನಿನಗೆ) ಮರಣವೇ, ತದಾ—ಆಗ (ಹಾಗೆ ತಿಳಿಯುವುದರಿಂದ), ಭವೇತ್—ಉಂಟಾಗುತ್ತದೆ (ನಿರುತ್ತರನಾಗುವಿ).

**ಮನೋಯಾತ್ರಾ ತು ಜೀವಸ್ಯ ಯಾತ್ರಾಕಾಲೇ ಪರಂ ಭವೇತ್ ।**
**ಅಂತಃಕರಣಮೇವ ತಸ್ಮಾದಂತಃಕಾರ್ಯಕರಂ ಹಿ ತತ್ ॥ ೧೭೯ ॥**

---

ಉದಯಿಸುತ್ತದೆ (ಅಪರೋಕ್ಷ ಜ್ಞಾನಸಾಧನವಾದ ಅಂತಃಕರಣವೂ ಒಳಗೇ ಇದೆ) (೧೭೭). ಶಬ್ದಸಹಾಯದಿಂದ ಎಂದರೆ ವೇದಾದಿ ಶಾಸ್ತ್ರಶ್ರವಣಾದಿಗಳಿಂದ ಮನಸ್ಸು ವೈಕುಂಠಸ್ಥಿತನಾದ ಭಗವಂತನನ್ನು ಪ್ರವೇಶಿಸಿ, ಆತನ ಸಾಕ್ಷಾತ್ಕಾರವನ್ನು ದೊರಕಿಸುವುದೆಂಬ ಕಲ್ಪನೆಯು ಯುಕ್ತಿವಿರುದ್ಧವು ಮತ್ತು ಅಸಂಭಾವಿತವು; ಹಿಂದೆ ಹೇಳಿದಂತೆ ಅಪರೋಕ್ಷಜ್ಞಾನಪ್ರಾಪ್ತಿಗೂ ಮನಸ್ಸಿನ ಬಹಿಃಪ್ರವೃತ್ತಿಯು ಅವಶ್ಯಕವಲ್ಲ ; ವೈಕುಂಠನನ್ನು ವೈಕುಂಠದಲ್ಲಿ ಪ್ರವೇಶಿಸಿಯೇ ತಿಳಿಯಬೇಕಾಗಿಲ್ಲವಷ್ಟೆ ; ಮನಸ್ಸು ಹಾಗೆ ಪ್ರಯಾಣಮಾಡಿ ವೈಕುಂಠವನ್ನು ಸೇರಿದರೆ ಅಲ್ಲಿಂದ ಹಿಂದಿರುಗುವುದೆಂಬುದೇ ಇಲ್ಲವೆಂದು ಶಾಸ್ತ್ರಗಳೇ ಹೇಳುವುದರಿಂದ ಅದು ನಿನ್ನ ದೀರ್ಘನಿದ್ರೆಯೇ (ಮರಣವೇ) ಆಗುವುದಲ್ಲವೇ ? (ಉಪಹಾಸದ ನುಡಿಯಿದು) (೧೭೮). ಮನಸ್ಸಿನ ಯಾತ್ರೆಯು

ಅದೇ ವಿಷಯವನ್ನು ಉಪಪಾದನೆ ಮಾಡುತ್ತಾರೆ :—

ಜೀವಸ್ಯ – ಜೀವನ, ಮನೋಯಾತ್ರಾ ತು – ಮನಸ್ಸಿನ ಪ್ರಯಾಣ ವಾದರೋ (ಬಾಹ್ಯ ವಸ್ತುಗಳನ್ನು ತಿಳಿಯುವಾಗ ಮನಸ್ಸು ಚಕ್ಷುರಾದಿ ಇಂದ್ರಿಯಗಳೊಡನೆ ವಸ್ತುಪರ್ಯಂತ ಹೊರಗೆ ಪ್ರಯಾಣ ಮಾಡುವಂತೆ, ಶಾಸ್ತ್ರಗಳಿಂದ ಪರಮಾತ್ಮನನ್ನು ತಿಳಿಯಲು ವೈಕುಂಠದಲ್ಲಿರುವ ಭಗವಂತನನ್ನು ಅಲ್ಲಿಗೆ ಪ್ರಯಾಣಮಾಡಿ, ತಿಳಿಯುವುದಿಲ್ಲ), ಪರಂ—ಆದರೆ (ಮತ್ತೇನೆಂದರೆ), ಯಾತ್ರಾಕಾಲೇ – (ದೇಹದಿಂದ ಹೊರಗೆ) ಲೋಕಾಂತರಗಮನ ಕಾಲದಲ್ಲಿ, ಭವೇತ್—ಸಂಭವಿಸುತ್ತದೆ; ಏತಸ್ಮಾತ್—ಈ ಕಾರಣದಿಂದ (ಒಳಗೇ ಇದ್ದು ಜ್ಞಾನವನ್ನುಂಟುಮಾಡುವುದರಿಂದ), ಅಂತಃಕರಣಂ – (ಮನಸ್ಸಿಗೆ) ಅಂತಃ ಕರಣವೆಂಬ ನಾಮವೂ (ಇರುತ್ತದೆ) (ಬಾಹ್ಯಜ್ಞಾನವಿಷಯದಲ್ಲಿ ಮುಖ್ಯ ಹೇತುವಾದ ಚಕ್ಷುರಾದಿಗಳು ಬಾಹ್ಯಕರಣಗಳೆನಿಸುತ್ತವೆ—ಅಂತರಂಗಜ್ಞಾನ ವಿಷಯಕ ಸಾಧನವಾದ ಮನಸ್ಸು ಅಂತಃಕರಣವೆನಿಸುತ್ತದೆ);[1] ತತ್—ಆದ್ದರಿಂದ (ಅದು), ಅಂತಃಕಾರ್ಯಕರಂ—ಒಳಗೇ ಜ್ಞಾನಕಾರ್ಯ ಮಾಡತಕ್ಕದ್ದು.

---

(ದೇಹದಿಂದ ಲೋಕಾಂತರಗಮನವು) ಭಗವಂತನ ಪ್ರಾಪ್ತಿಗಾಗಿ, ಮರಣ ಕಾಲದಲ್ಲಿ ಮಾತ್ರ (ದೇಹಯಾತ್ರೆಯೆಂದೇ ಅದರ ನಾಮ); ಒಳಗೇ ಇದ್ದು ಜೀವನಿಗೆ ಜ್ಞಾನವನ್ನುಂಟುಮಾಡುವ ಸಾಧನ (ಕರಣ) ವಾದ್ದರಿಂದಲೇ ಅದು ಅಂತಃಕರಣವೆನಿಸುವುದು—ಅದರ ಕಾರ್ಯವು ಅಂತರಂಗದಲ್ಲಿಯೇ ನಡೆಯು

---

1 ಶಬ್ದರೂಪದ ಶ್ರವಣಾದಿಗಳಿಂದ ಹುಟ್ಟುವ ಜ್ಞಾನವು ಪರೋಕ್ಷವೇ ಆದರೂ ಶಬ್ದವನ್ನು ಅನುಸರಿಸಿ ಮನಸ್ಸು ಭಗವಂತನನ್ನು ವಿಷಯೀಕರಿಸಲು ವೈಕುಂಠ ಮೊದಲಾದ ಬಾಹ್ಯ ಸ್ಥಲಗಳಿಗೆ ಪ್ರಯಾಣಮಾಡುವುದಿಲ್ಲ; ಒಳಗೂ ಇರುವ ಭಗವಂತನ ಜ್ಞಾನವನ್ನು ಅಲ್ಲಿಯೇ ಉಂಟುಮಾಡುತ್ತದೆ; ಭಗವಂತನ ಅಪರೋಕ್ಷ (ಸಾಕ್ಷಾತ್) ಜ್ಞಾನವೂ ಮನಸ್ಸಿನಲ್ಲಿಯೇ ದೊರೆಯುವುದಲ್ಲದೇ, ಆಗ ಮನಸ್ಸು ವೈಕುಂಠಕ್ಕೆ ಯಾತ್ರೆ ಮಾಡಿ ಅಲ್ಲಿರುವ ವೈಕುಂಠನಾಮಕ ಶ್ರೀಹರಿಯನ್ನು ಪ್ರವೇಶಿಸುವುದಿಲ್ಲ; ಈ ದೇಹಕ್ಕೆ (ಅಥವಾ ಸದೃಶ ದೇಹಕ್ಕೆ) ಹಿಂದಿರುಗಿಬರದಂತೆ, ದೇಹಯಾತ್ರೆಯನ್ನು ಮಾಡಿದಾಗ ಮಾತ್ರ ಅದು ಸಂಭವಿಸುವುದೆಂಬುದನ್ನು ಉಪಯೋಗಿಸಿಕೊಂಡು, ಈ ವಿಷಯಕ ಪ್ರಮೇಯವನ್ನು ತಪ್ಪಾಗಿ ತಿಳಿಯುವ ಅದ್ವೈತಿಯನ್ನು ಉಪಹಾಸ ಮಾಡಿರುವರು— ಈ ಶ್ಲೋಕದಿಂದ.

**ಅತೋ ಜ್ಞಾನವದಜ್ಞಾನಮಾಂತರಂ ಸಾಕ್ಷಿಣೋ ಬಲಾತ್ ।**
**ಏಕದೇಶತ್ವಮನಯೋರ್ನಾಶ್ಯನಾಶಕಯೋರ್ಧ್ರುವಂ ॥ ೧೮೦ ॥**

ಅತಃ—ಆದ್ದರಿಂದ (ಜ್ಞಾನವು ಅಂತಃಕರಣಗತವಾದ್ದರಿಂದ), ಸಾಕ್ಷಿಣಃ ಬಲಾತ್—ಸಾಕ್ಷಿಜ್ಞಾನದ ಬಲದಿಂದ,[1] ಜ್ಞಾನವತ್—ಜ್ಞಾನದಂತೆ, ಅಜ್ಞಾನಂ—ಅಜ್ಞಾನವೂ, ಆಂತರಂ—ಅಂತರಂಗದಲ್ಲಿರುವುದೇ (ಆಗಿದೆ); ನಾಶ್ಯನಾಶಕಯೋಃ—ನಾಶ್ಯನಾಶಕಗಳಾದ, ಅನಯೋಃ—ಈ ಅಜ್ಞಾನ ಮತ್ತು ಜ್ಞಾನಗಳಿಗೆ, ಧ್ರುವಂ—ನಿಸ್ಸಂಶಯವಾಗಿ, ಏಕದೇಶತ್ವಂ—ಏಕದೇಶದಲ್ಲಿರುವಿಕೆಯೇ (ಒಂದೇ ಆಶ್ರಯಸ್ಥಾನವು ಕೂಡುತ್ತದೆ).

**ನ ಚೇದನ್ಯಾಶ್ರಿತಜ್ಞಾನಮನ್ಯಾಜ್ಞಾನಂ ನಿವರ್ತಯೇತ್ ।**
**ಅಜ್ಞಾನಮಪ್ಯಾಂತರಂ ತನ್ನ ಬಾಹ್ಯವಿಷಯಾಶ್ರಿತಂ ॥ ೧೮೧ ॥**

ನ ಚೇತ್—ಜ್ಞಾನಾಜ್ಞಾನಗಳಿಗೆ ಏಕದೇಶತ್ವವಿಲ್ಲದಿದ್ದರೆ (ಏಕಾಶ್ರಯವಿಲ್ಲದಿದ್ದರೆ), ಅನ್ಯಾಶ್ರಿತಜ್ಞಾನಂ – ಚೈತ್ರ (ಒಬ್ಬ) ನಲ್ಲಿರುವ ಜ್ಞಾನವು, ಅನ್ಯಾಜ್ಞಾನಂ – ಮೈತ್ರ (ಇನ್ನೊಬ್ಬ) ನಲ್ಲಿರುವ ಅಜ್ಞಾನವನ್ನು, ನಿವರ್ತಯೇತ್—ಕಳೆಯಲ್ಲಿ (ಪರಿಹರಿಸಲಿ); ತತ್ (ತಸ್ಮಾತ್)—ಆದ್ದರಿಂದ (ಒಬ್ಬನ ಜ್ಞಾನವು ಮತ್ತೊಬ್ಬನ ಅಜ್ಞಾನ ನಿವಾರಕವಲ್ಲವಾದರಿಂದ), ಅಜ್ಞಾನಂ ಅಪಿ—

---

ತ್ತದೆಯಷ್ಟೆ (೧೭೯). ಜ್ಞಾನವು ಹೀಗೆ ಅಂತಃಕರಣಗತವಾದ್ದರಿಂದ, ಅಜ್ಞಾನವೂ (ಏಕದೇಶದಲ್ಲಿರಬೇಕಾದ್ದರಿಂದ) ಅಂತಃಕರಣದಲ್ಲಿರುವುದೇ ಆಗಿದೆ; ಸಾಕ್ಷಿಜ್ಞಾನದಿಂದ (ಅನುಭವದಿಂದ) ಸಹ ಹೀಗೆಂದೇ ಸಿದ್ಧವಾಗುತ್ತದೆ; ನಾಶ್ಯನಾಶಕಗಳು ಏಕದೇಶದಲ್ಲಿರುತ್ತವೆಂಬ (ಒಂದೇ ಆಶ್ರಯಸ್ಥಾನವೆಂಬುದು) ಪ್ರಮೇಯವು ನಿಸ್ಸಂಶಯವಾದುದು (೧೮೦). ಒಬ್ಬನಲ್ಲಿರುವ ಜ್ಞಾನವು ಮತ್ತೊಬ್ಬನ ಅಜ್ಞಾನವನ್ನು ನಿವಾರಿಸುವುದಿಲ್ಲವಾದ್ದರಿಂದ ಸಹ ಜ್ಞಾನಾಜ್ಞಾನಗಳು ಏಕಾಶ್ರಯವುಳ್ಳವೆಂದು ಸಿದ್ಧವಾಗುತ್ತದೆ; ಹೀಗಿರುವುದರಿಂದ ಅಜ್ಞಾನವು ಬಾಹ್ಯವಿಷಯ (ಪದಾರ್ಥಗಳ) ಆಶ್ರಿತವೆಂಬುದು ಸರಿಯಲ್ಲ (೧೮೧).

---

1 'ಅಹಂ ಜಾನಾಮಿ' 'ನಾನು ತಿಳಿದಿರುತ್ತೇನೆ' ಎಂಬುದರಂತೆ, 'ಅಹಂ ನ ಜಾನಾಮಿ' 'ನಾನು ತಿಳಿಯುವುದಿಲ್ಲ' ಎಂಬ ಅನುಭವವೂ ಸಾಕ್ಷೀಗೋಚರವೇ ಆಗಿದೆ (ಜೀವನಿಷ್ಠವೇ—ಜೀವನಲ್ಲಿರುವುದೇ ಆಗಿದೆ).

ಅಜ್ಞಾನವೂ ಸಹ, ಆಂತರಂ–ಜೀವನಲ್ಲಿರುವುದೇ (ಆಗಿದೆ); ಬಾಹ್ಯವಿಷಯಾ ಶ್ರಿತಂ–ಹೊರಗಿನ ವಸ್ತುಗಳಲ್ಲಿರುವುದು, ನ ಹಿ–ಅಲ್ಲವೆಂಬುದು ಸಿದ್ಧ.

**ಅಹಮಜ್ಞ ಇತಿ ಹ್ಯಕ್ಷಂ ಜೀವಾಜ್ಞಾನಸ್ಯ ಸಾಧಕಂ ।**
**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಇತಿ ವೇದೇನ ಮಾಯೇಯಂ ಜೀವಗೈವೇತಿ ಗೀಯತೇ ॥ ೧೮೨ ॥**

ಅಹಂ–ನಾನು (ಸಾಕ್ಷಿಯು), ಅಜ್ಞಃ–ಅಜ್ಞನು, ಇತಿ ಹ್ಯಕ್ಷಂ–ಎಂಬ ಜ್ಞಾನವಾದರೋ, ಜೀವಾಜ್ಞಾನಸ್ಯ–ಜೀವನಲ್ಲಿರುವ ಅಜ್ಞಾನವನ್ನೇ ಸಾಧಿಸುತ್ತದೆ; ಅನಾದಿಮಾಯಯಾ – ಅನಾದಿಯಾದ ಅಜ್ಞಾನದಿಂದ, ಸುಪ್ತಃ – ಮಲಗಿರುವ (ಜ್ಞಾನರಹಿತನಾದ), ಜೀವಃ–ಜೀವನು, ಯದಾ–ಯಾವಾಗ, ಪ್ರಬುಧ್ಯತೇ – ಜ್ಞಾನಿಯಾಗುವನೋ (ಎಚ್ಚರಗೊಳ್ಳುವನೋ), ಇತಿ – ಇತ್ಯಾದಿಯಾಗಿ, ವೇದೇನ–ವೇದದಿಂದ, ಇಯಂ–ಈ, ಮಾಯಾ–ಅವಿದ್ಯೆಯು (ಅಜ್ಞಾನವು), ಜೀವಗಾ ಏವ – ಜೀವನಲ್ಲಿರುವುದೆಂದೇ, ಇತಿ – ಎಂದು, ಗೀಯತೇ – ಹೇಳಲ್ಪಡುತ್ತದೆ (ಈ ಶ್ರುತಿಯು ಈ ಹಿಂದೆ ಅಜ್ಞಾನವು ಬ್ರಹ್ಮಾಶ್ರಿತವೆಂಬುದಕ್ಕೆ ಬಾಧಕವೆಂದು ಉದಾಹೃತವಾಗಿದ್ದು, ಅದೇ ಶ್ರುತಿಯು ಅಜ್ಞಾನವು ಜೀವಾಶ್ರಿತವೆಂಬುದಕ್ಕೆ ಸಾಧಕವೆಂದು ಉದಾಹರಿಸಲಾಗಿರುವುದನ್ನು ಗಮನಿಸಬಹುದು).

**ಐಕ್ಯೇನ ಚ ಪ್ರಮಾಣಾನಾಮನ್ಯಥೀಕರಣಂ ವೃಥಾ ।**
**ಐಕ್ಯಾಸಿದ್ಧೇರಯುಕ್ತಂ ಚ ಪ್ರಮಾತಾ ಜೀವ ಏವ ಹಿ ।**
**ನ ಚೇತ್ಸರ್ವೈಕ್ಯತಃ ಸರ್ವಮಸ್ತ್ವನ್ಯಸ್ತಂ ಭವೇತ್ತವ ॥ ೧೮೩ ॥**

ಐಕ್ಯೇನ–ಜೀವಬ್ರಹ್ಮೈಕ್ಯದಿಂದ, ಪ್ರಮಾಣಾನಾಂ – ಪ್ರಮಾಣಗಳ, ಅನ್ಯಥೀಕರಣಂ – ಬೇರೆ (ಅರ್ಥ) ಯೋಜನೆಯು, ವೃಥಾ – ವ್ಯರ್ಥವು

---

ಅಹಮಜ್ಞಃ 'ನಾನು ಅಜ್ಞನು' ಎಂಬ ಜ್ಞಾನವೂ, ಜೀವನಲ್ಲಿಯೇ ಅಜ್ಞಾನವಿರುತ್ತದೆಂಬುದನ್ನೇ ಸಾಧಿಸುತ್ತದೆ; 'ಅನಾದಿ ಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ' ಎಂಬ ವೇದಪ್ರಮಾಣದಿಂದಲೂ ಮಾಯಾ ಶಬ್ದದಿಂದ ಹೇಳಲಾಗುವ ಅವಿದ್ಯೆಯು (ಅಜ್ಞಾನವು) ಜೀವಗತವೆಂದೇ ಸಿದ್ಧವಾಗುತ್ತದೆ (೧೮೨). ಜೀವಬ್ರಹ್ಮರ ಐಕ್ಯದಿಂದ ಅಜ್ಞಾನದ ಜೀವಾಶ್ರಯತ್ವವನ್ನು

(ಪ್ರಯೋಜನವಿಲ್ಲದ ಶ್ರಮಮಾತ್ರವು); ಚ–ಮತ್ತು, ಐಕ್ಯಾಸಿದ್ಧೇಃ–ಜೀವ ಬ್ರಹ್ಮರ ಐಕ್ಯವು (ಪ್ರಮಾಣಗಳಿಂದ) ಸಿದ್ಧವಾಗುವುದಿಲ್ಲವಾದ್ದರಿಂದ, ಅಯುಕ್ತಂ–ಯುಕ್ತಿವಿರುದ್ಧವೂ ಆಗಿದೆ; (ಆದ್ದರಿಂದ) ಪ್ರಮಾತಾ–ಜ್ಞಾತೃವು (ತಿಳಿಯುವವನು), ಜೀವಃ ಏವ ಹಿ–ಜೀವನೇ ಸರಿ (ಅದ್ವೈತದಂತೆ ಬ್ರಹ್ಮನು ಪ್ರಮೇಯನು; ಪ್ರಮಾತನಲ್ಲ—ಅವರಲ್ಲಿ ಕರ್ತೃ ಕರ್ಮ ಭಾವಗಳಿಗೆ ವಿರೋಧ ವಿದೆ); ನ ಚೇತ್–ಹಾಗಲ್ಲದಿದ್ದರೆ (ಜೀವಬ್ರಹ್ಮೈಕ್ಯವು ಅಪ್ರಮಾಣಿಕವೂ ಅಯುಕ್ತವೂ ಅಲ್ಲದಿದ್ದರೆ), ಸರ್ವೈಕ್ಯತಃ–(ಜಡಚೇತನಾದಿ) ಸಕಲ ವಸ್ತುಗಳೂ ಒಂದೇ ಎಂದಾಗುವುದರಿಂದ, ತವ–ನಿನಗೆ (ಅದ್ವೈತಿಗೆ), ಸರ್ವಂ–ಎಲ್ಲವೂ (ಪ್ರಮೇಯ ವಿಷಯಗಳೂ ಅಥವಾ ವ್ಯವಹಾರಗಳೂ), ಅಸ್ತವ್ಯಸ್ತಂ ಭವೇತ್–ಅಸ್ತವ್ಯಸ್ತವಾಗುತ್ತವೆ (ಅಸಿದ್ಧವೂ ವ್ಯತ್ಯಸ್ತವೂ ಆಗುತ್ತವೆ).

**ಅಜ್ಞಾನಂ ಜ್ಞಾತೃಪುಂನಿಷ್ಠಂ ಜ್ಞಾನೇನೈಕಾಶ್ರಯತ್ವತಃ ।**
**ಸುಖವದ್ದುಃಖವಚ್ಚೇತಿ ಹ್ಯನುಮಾಪ್ಯಸ್ತ್ಯಬಾಧಿತಾ ॥ ೧೮೪ ॥**

ಅಜ್ಞಾನವು ಜೀವಾಶ್ರಿತವೆಂಬಲ್ಲಿ ಪ್ರತ್ಯಕ್ಷವನ್ನೂ ಶ್ರುತಿಯನ್ನೂ ಹೇಳಿ, ಅನುಮಾನವನ್ನು ಹೇಳುತ್ತಾರೆ:—

ಅಜ್ಞಾನಂ–(ವಿವಾದ ವಿಷಯವಾದ) ಅಜ್ಞಾನವು, ಜ್ಞಾತೃಪುಂನಿಷ್ಠಂ–ಜ್ಞಾತೃಪುರುಷನಲ್ಲಿರುತ್ತದೆ; ಜ್ಞಾನೇನ–ಜ್ಞಾನದಿಂದ, ಏಕಾಶ್ರಯತ್ವತಃ–ಸಮಾನಾಶ್ರಯವುಳ್ಳದ್ದಾದ್ದರಿಂದ, ಸುಖವತ್–ಸುಖದಂತೆ, ದುಃಖವಚ್ಚ–ದುಃಖದಂತೆ ಸಹ; ಇತಿ–ಹೀಗೆಂಬ, ಅಬಾಧಿತಾ–ಬಾಧರಹಿತವಾದ,

---

ಸಮಾಧಾನಪಡಿಸಿಕೊಳ್ಳಬಹುದೆಂಬ (ಬ್ರಹ್ಮಾಶ್ರಿತವೆಂದು ತಿಳಿಯಬಹುದೆಂಬ) ಆಶೆಯೂ ವ್ಯರ್ಥವೇ ಸರಿ; ಅದ್ವೈತವು ಕರ್ತೃ ಕರ್ಮ ಭಾವಗಳಿಗೆ ವಿರೋಧ ವನ್ನು ಅಂಗೀಕರಿಸುವುದರಿಂದ, ಪ್ರಮೇಯನಾದ ಬ್ರಹ್ಮನಲ್ಲಿ ಪ್ರಮಾತೃತ್ವ ವನ್ನು, ಜೀವೈಕ್ಯದಿಂದಲೂ ಸಿದ್ಧಿಸಲು ಶಕ್ಯವಿಲ್ಲ; ಪ್ರಮಾತನು (ಜ್ಞಾತೃವು) ಜೀವನೇ ಆಗಿದ್ದಾನೆ; ಜೀವಬ್ರಹ್ಮರ ಐಕ್ಯದಿಂದ ಸ್ಪಷ್ಟ ಪ್ರಮಾಣಗಳನ್ನು ವಿರುದ್ಧಾರ್ಥಗಳಿಂದ ವ್ಯರ್ಥಗೊಳಿಸುವುದು ಉಚಿತವಲ್ಲ; ಐಕ್ಯವು ಪ್ರಮಾಣ ಸಿದ್ಧವೂ ಅಲ್ಲ; ಯುಕ್ತಿವಿರುದ್ಧವೂ ಆಗಿದೆ (೧೮೩). ಅಜ್ಞಾನವು ತಿಳಿಯುವ ಪುರುಷನಲ್ಲಿರುವುದೇ ಆಗಿದೆ; ಅಜ್ಞಾನವು ಜ್ಞಾನದಿಂದ ಸಮಾನವಾದ ಆಶ್ರಯ

ಅನುಮಾ ಅಪಿ – ಅನುಮಾನವೂ, ಅಸ್ತಿ ಹಿ – ಇರುತ್ತದೆ (ಅನುಭವಸಿದ್ಧವೂ ಆಗಿದೆ).

**ಮೃದಾದಿಕಮುಪಾದಾನಂ ಕಾರ್ಯೇ ಕಾರ್ಯೇ ಚ ವಿದ್ಯತೇ ।**
**ಅತೋ ಜಗತ್ಸರ್ಜನಾರ್ಥಮಪಿ ನಾಜ್ಞಾನಮಿಷ್ಯತೇ ॥ ೧೮೫ ॥**

ಕಾರ್ಯೇ ಕಾರ್ಯೇ ಚ–ಪ್ರತಿ ಕಾರ್ಯದಲ್ಲಿ, ಮೃದಾದಿಕಂ–ಮಣ್ಣು ಮುಂತಾದ, ಉಪಾದಾನಂ – ವಸ್ತು ನಿರ್ಮಾಣ ಕಾರಣವು, ವಿದ್ಯತೇ ಚ– ಇದ್ದೇ ಇರುತ್ತದೆ (ಆದಿಸೃಷ್ಟಿಯಲ್ಲಿ ಮೂಲಪ್ರಕೃತಿಯೂ, ಅವಾಂತರಸೃಷ್ಟಿಯಲ್ಲಿ–ಮಧ್ಯಕಾಲದ ವಿವಿಧವಸ್ತುಸೃಷ್ಟಿಯಲ್ಲಿ ಮೃದಾದಿ ಉಪಾದಾನಗಳೂ ಇರುತ್ತವೆ); ಅತಃ–ಆದ್ದರಿಂದ, ಜಗತ್ಸರ್ಜನಾರ್ಥಂ–ಜಗತ್ತಿನ ಸೃಷ್ಟಿಗಾಗಿ, ಅಪಿ – ಆದರೂ (ಅದ್ವೈತಿಗಳು ಹೇಳುವಂತೆ), ಅಜ್ಞಾನಂ – ಅಜ್ಞಾನವೆಂಬ ಉಪಾದಾನವು, ನ ಇಷ್ಯತೇ–ಅಪೇಕ್ಷಿತವಲ್ಲವು.

**ಮಾಯೀ ಮಾಯಾಧೀಶ್ವರತ್ವಾತ್ ಗೋಮಾನ್**
**ಗೋಪಾಲಕೋ ಯಥಾ ।**
**ತಸ್ಮಾದ್ಬ್ರಹ್ಮಾಶ್ರಿತಾಜ್ಞಾನಮಜ್ಞಾನಾದೇವ ವರ್ಣಿತಂ ॥ ೧೮೬ ॥**

ಗೋಮಾನ್–ಹಸುಗಳುಳ್ಳವನೆಂದು, ಯಥಾ–ಹೇಗೆ, ಗೋಪಾಲಕಃ– ಗೋಪಾಲಕನು (ಗೋವುಗಳ ಸ್ವಾಮಿಯು), ಕರೆಯಲ್ಪಡುವನೋ,

---

ಸ್ಥಾನವುಳ್ಳದ್ದಾದ್ದರಿಂದ ಪುರುಷಾಶ್ರಯದಲ್ಲಿರುವುದೇ ನಿಶ್ಚಯವು; ಈ ರೂಪದ ಬಾಧರಹಿತವಾದ ಅನುಮಾನವೂ ಇದನ್ನೇ ಸಾಧಿಸುತ್ತದೆ—ಪ್ರತ್ಯಕ್ಷ ಮತ್ತು ಶ್ರುತಿಗಳು ಮಾತ್ರವಲ್ಲ (೧೮೪). ಅದ್ವೈತಿಗಳು ಹೇಳುವಂತೆ ಜಗತ್ಸೃಷ್ಟಿಗೆ ಅಜ್ಞಾನವು ಉಪಾದಾನವೆಂಬುದೂ ಸರಿಯಲ್ಲ; ಜಗತ್ತಿನ ಆದಿ ಸೃಷ್ಟಿಗೆ ಮೂಲಪ್ರಕೃತಿಯೂ ಮಧ್ಯಂತರ ಸೃಷ್ಟಿಗೆ ಮೃದಾದಿ ಉಪಾದನಗಳೂ ಇದ್ದೇ ಇರುತ್ತವೆ; ಪ್ರತಿ ಕಾರ್ಯಗಳಿಗೂ ಉಪಾದಾನಕಾರಣಗಳು ಸಿದ್ಧವೇ ಇರುತ್ತವೆ; ಹೀಗಿರುವಾಗ ಅಜ್ಞಾನವು ಉಪಾದಾನವೆಂಬುದು ಯುಕ್ತವಾಗುವುದಿಲ್ಲ ಮತ್ತು ಹಾಗೆಂಬುದು ಅತ್ಯಂತ ಹಾಸ್ಯಾಸ್ಪದವೂ ಆಗಿದೆ–ಜಗತ್ಸೃಷ್ಟಿ ಕಾರ್ಯದಲ್ಲಿ ಅಜ್ಞಾನವು ಉಪಾದಾನವಾಗಲು ಅಪೇಕ್ಷಿತವಲ್ಲ (೧೮೫). ಬ್ರಹ್ಮನು ಮಾಯಾಧೀಶ್ವರನಾದ್ದರಿಂದ 'ಮಾಯೀ', ಮಾಯಾವುಳ್ಳವನೆಂದು

ಮಾಯಾಧೀಶ್ವರತ್ವಾತ್–ಮಾಯಾಧೀಶ್ವರನಾದ್ದರಿಂದ (ಮಾಯೆಯ ನಿಯಾಮಕ ಸ್ವಾಮಿಯಾದ್ದರಿಂದ), ಅಜ್ಞಾನಾತ್ ಏವ–ಪೂರ್ವಾಪರ ಪರಿಜ್ಞಾನವಿಲ್ಲದೇ, ಬ್ರಹ್ಮಾಶ್ರಿತಾಜ್ಞಾನಂ – ಬ್ರಹ್ಮಾಶ್ರಿತವಾದ ಮಾಯೆಯನ್ನು (ಅಜ್ಞಾನವೆಂದು), ವರ್ಣಿತಂ – ವರ್ಣಿತವಾದರೂ, ತಸ್ಮಾತ್ – (ಅಧೀಶ್ವರನೆಂಬ ಕಾರಣದಿಂದ), ಮಾಯೀ–'ಮಾಯೀ' ಎಂದು ಬ್ರಹ್ಮನು ಹೇಳಲ್ಪಡುವನು (ಹಿಂದೆ 'ಮಾಯಿನಂ ತು ಮಹೇಶ್ವರಂ' ಎಂಬ ಶ್ರುತಿಗೆ ಮಾಯಾಶಬ್ದವು ಪ್ರಕೃತಿಪರವೆಂದು ತೋರಿಸಿದ್ದರೂ, ಈಗ ಮಾಯಾ–ಅಜ್ಞಾನಪರವಾದರೂ ನಮಗೇನೂ ಅನಿಷ್ಟವಿಲ್ಲೆಂದು ದೃಷ್ಟಾಂತಮುಖದಿಂದ ಹೇಳಿರುವರು).

**ಜೀವಸ್ತು ಮಾಯಾಸುಪ್ತತ್ವಾನ್ನ ಸ್ವಾನಂದಾದಿವೀಕ್ಷತೇ ।**
**ಮಾಯಾಽಭಾವೇ ಸತೀಕ್ಷೇತ ತಸ್ಮಾಜ್ಜೀವಾಶ್ರಿತೈವ ಸಾ ॥ ೧೯೭ ॥**

ಜೀವಸ್ವರೂಪಭೂತವಾದ ಆನಂದಾದಿಗಳ ಅನುಭವ ಪ್ರತಿಬಂಧಕದ ಘಟನೆಗೆ ಮಾಯೆಯು (ಅಜ್ಞಾನವು) ಜೀವಾಶ್ರಿತವೆಂದು ತಿಳಿಯುವುದೇ ಯುಕ್ತವಾಗುತ್ತದೆನ್ನುತ್ತಾರೆ :—

ಜೀವಃ ತು – ಸಂಸಾರಿ ಜೀವನಾದರೋ, ಮಾಯಾಸುಪ್ತತ್ವಾತ್–ಮಾಯೆಯಿಂದ ನಿದ್ರಿಸುತ್ತಿರುವುದರಿಂದ, ಸ್ವಾನಂದಾದಿ–ತನ್ನ ಸ್ವರೂಪಸಿದ್ಧವಾದ ಆನಂದಾದಿಗಳನ್ನು, ನ ವೀಕ್ಷತೇ – ತಿಳಿಯುವುದಿಲ್ಲ (ಮಾಯಾಸುಪ್ತ

---

ಹೇಳಲ್ಪಡುತ್ತಾನೆ; ಗೋರಕ್ಷಕನು 'ಗೋಮಾನ್' ಗೋವುಳ್ಳವನೆಂದು ಕರೆಯಲ್ಪಡುವಂತೆ, ಬ್ರಹ್ಮನು ಅಜ್ಞಾನದ ಅಧೀಶ್ವರನಾಗಿರುವನಲ್ಲದೇ ಅಧೀನನಲ್ಲವೆಂದು ಈ ದೃಷ್ಟಾಂತದಿಂದಲೂ ತಿಳಿಯಬಹುದಾಗಿದೆ; ಪೂರ್ವೋತ್ತರ ಪರಿಜ್ಞಾನವಿಲ್ಲದೇ ಮಾಯಾ ಶಬ್ದಕ್ಕೆ 'ಮಾಯಿನಂ ತು ಮಹೇಶ್ವರಂ' ಎಂಬ ಶ್ರುತಿವಾಕ್ಯದಲ್ಲಿ ಈ ಹಿಂದೆ ನಿರೂಪಿಸಿದಂತೆ ಪ್ರಕೃತಿ ಎಂಬರ್ಥ ತಿಳಿಯದೇ ಅಜ್ಞಾನವೆಂಬರ್ಥವನ್ನು ತಿಳಿದರೂ ನಮಗೆ (ತತ್ವವಾದಿಗೆ) ಯಾವ ಅನಿಷ್ಟವೂ ಇಲ್ಲ; ಬ್ರಹ್ಮಾಶ್ರಿತವೆಂದು ಅಜ್ಞಾನವನ್ನು ನಿರೂಪಿಸಿದರೂ ಅಜ್ಞಾನದ ನಿಯಾಮಕ ಪ್ರಭುವೆಂಬುದರಿಂದ ಸಾರ್ಥಕವೇ ಆಗುತ್ತದೆ (೧೮೬). ಸಂಸಾರಿ ಜೀವನು ಮಾಯೆಯಿಂದ ನಿದ್ರಿಸುತ್ತಿರುವುದರಿಂದ, ತನ್ನ ಸ್ವರೂಪಸಿದ್ಧವಾದ

ನಲ್ಲದಿದ್ದರೆ ಸ್ವಾಭಾವಿಕವಾದ ಆನಂದಾದಿಯು ಅನುಭವಕ್ಕೆ ಬರುವುದಿಲ್ಲ); ಮಾಯಾಭಾವೇ ಸತಿ–ಅಜ್ಞಾನದ ಆವರಣವು ಇಲ್ಲದಾಗುತ್ತಿರಲು (ನಿವಾರಿತ ವಾಗುತ್ತಿರಲು, ಸಂಸಾರದಿಂದ ಬಿಡುಗಡೆಯಾಗುತ್ತಿರಲು), ಈಕ್ಷೇತ–ಅದರ (ಆನಂದಾದಿಯ) ಅನುಭವವನ್ನು ಪಡೆಯುತ್ತಾನೆ; ತಸ್ಮಾತ್–ಆದ್ದರಿಂದ, ಸಾ–ಆ ಮಾಯೆಯು (ಅವಿದ್ಯೆಯು), ಜೀವಾಶ್ರಿತಾ ಏವ – ಜೀವನಲ್ಲಿಯೇ ಇರುತ್ತದೆ.

**ಜೀವಸ್ವರೂಪಾನಂದಾದೀನಾಚ್ಛಾದಯತಿ ಕೇವಲಂ ।**
**ಅಹಮಿತ್ಯೇವ ತದ್ರೂಪಜ್ಞಾನೇನ ಪ್ರತಿಬಂಧಿಕಾ ।**
**ಇಮಂ ತು ನ ದಹೇತ್ಯುಕ್ತಂ ಮಂತ್ರಶಕ್ತ್ಯಾ ಯಥಾಽನಲಃ ॥ ೧೮೮ ॥**

ಅಜ್ಞಾನವು ಜೀವಸ್ವರೂಪವನ್ನು ಆಚ್ಛಾದಿಸಿದ್ದರೆ 'ಅಹಂ' ನಾನು ಎಂಬುದಾಗಿ ಆ ಸ್ವರೂಪದ ಅನುಭವವಾದರೂ ಹೇಗೆ? ಎಂದರೆ ಹೇಳುತ್ತಾರೆ:

(ಅಜ್ಞಾನವು) ಜೀವಸ್ವರೂಪಾನಂದಾದೀನ್-ಜೀವಸ್ವರೂಪದ (ಸ್ವಾಭಾವಿಕ) ಆನಂದಾದಿಗಳನ್ನು, ಕೇವಲಂ–ಕೇವಲವಾಗಿ (ಅವುಗಳನ್ನು ಮಾತ್ರ), ಆಚ್ಛಾದಯತಿ–ಮರೆಮಾಡುತ್ತದೆ; ಅಹಂ ಇತ್ಯೇವ – ನಾನೆಂಬ, ತದ್ರೂಪಜ್ಞಾನೇ – (ಜೀವನ) ಸ್ವರೂಪಜ್ಞಾನದಲ್ಲಿ, ಪ್ರತಿಬಂಧಿಕಾ – ಪ್ರತಿಬಂಧವನ್ನುಂಟುಮಾಡುವುದು, ನ – ಆಗುವುದಿಲ್ಲ; ಯಥಾ – ಹೇಗೆ, ಅನಲಃ – ಅಗ್ನಿಯು, ಮಂತ್ರಶಕ್ತ್ಯಾ–ಮಂತ್ರಬಲದಿಂದ (ಪ್ರತಿಬದ್ಧವಾಗಿ), ಇಮಂ ತು– ಈ ಒಬ್ಬ ಪುರುಷನನ್ನು, ನ ದಹ ಇತ್ಯುಕ್ತಂ–ದಹಿಸಬೇಡವೆಂದು ಹೇಳಲ್ಪಟ್ಟು

---

ಆನಂದಾದಿ ಗುಣಗಳ ಅನುಭವವು ಅವನಿಗಿರುವುದಿಲ್ಲ; ಮಾಯೆಯು ತೊಲಗಿದರೆ (ಸಂಸಾರದಿಂದ ಬಿಡುಗಡೆ ಹೊಂದಿದರೆ) ಆನಂದಾದಿಯ, ಅನುಭವವನ್ನು, ಆಗ, ಹೊಂದುತ್ತಾನೆ; ಆದ್ದರಿಂದ ಮಾಯೆಯು ಜೀವಾಶ್ರಿತವೇ ಆಗಿದೆ (ಜೀವನಲ್ಲಿಯೇ ಇರುತ್ತದೆ—ಬ್ರಹ್ಮನಲ್ಲಿ ಅಲ್ಲ) (೧೮೭). ಆದರೆ ಈ ಮಾಯೆಯು, ಆನಂದಾದಿ ಅನುಭವವನ್ನು ಪ್ರತಿಬಂಧಿಸಿದರೂ, 'ನಾನು' ಎಂಬ ಸ್ವರೂಪಜ್ಞಾನವನ್ನು ಪ್ರತಿಬಂಧಿಸುವುದಿಲ್ಲ; ಮಂತ್ರಶಕ್ತಿಯ ಬಲದಿಂದ, ಮಾಂತ್ರಿಕನು ಈತನನ್ನು ದಹಿಸಬೇಡವೆಂದರೆ, ಆ ವ್ಯಕ್ತಿಯನ್ನು ಬಿಟ್ಟು ಅನ್ಯವನ್ನು ಮಾತ್ರ ದಹಿಸುವಂತೆ, ಈ ಮಾಯೆಯಾದರೂ ಕೆಲಸ ಮಾಡುತ್ತದೆ

(ಸುಡದೆ ಬಿಡುವಂತೆ) (ಹಾಗೆ ಅಜ್ಞಾನವು ಆನಂದಾದಿಗಳನ್ನು ಮಾತ್ರ ಪ್ರತಿಬಂಧಿಸಿ, ಸ್ವರೂಪಾನುಭವವನ್ನು ಪ್ರತಿಬಂಧಿಸುವುದಿಲ್ಲ).

**ಸಾ ಸತ್ಯಾ ಪ್ರಕೃತೇರಂಶಭೂತಾ ಜೀವೇಷು ತಿಷ್ಠತಿ ॥ ೧೮೯ ॥**

ಸಾ – ಜೀವಾಚ್ಛಾದಿಕವಾದ ಆ, ಪ್ರಕೃತೇಃ – ಪ್ರಕೃತಿಯು, ಅಂಶಭೂತಾ–ಅಂಶವಾದ ಮಾಯೆಯು, ಸತ್ಯಾ–(ಪ್ರಕೃತ್ಯಂಶವಾದ್ದರಿಂದ), ಸತ್ಯವಾದುದು (ಆಗಿದ್ದು), ಜೀವೇಷು–ಜೀವರಲ್ಲಿ, ತಿಷ್ಠತಿ–ಇರುತ್ತದೆ.

**ನಾರಾಯಣಪ್ರಸಾದೇನ ಕಾಚಿದಕ್ಷಿಮಲೋಪಮಾ ।**
**ನಶ್ಯೇದ್ವಸ್ತ್ರಾವೃತಿಪ್ರಾಯಾ ಕಾಚಿಚ್ಛಾಪಸರೇತ್ತತಃ ॥ ೧೯೦ ॥**

ಮಾಯೆಯು (ಜೀವರಲ್ಲಿರುವುದು) ಜೀವಾಚ್ಛಾದಿಕಾ ಮತ್ತು ಪರಮಾಚ್ಛಾದಿಕಾ ಎಂದು ಎರಡು ವಿಧವಾಗಿರುತ್ತದೆ; ಅವುಗಳಲ್ಲಿ ಮೊದಲಿನದು ನಾಶವಾಗುತ್ತದೆ; ಮತ್ತೊಂದು ಮಗ್ಗಲಿಗೆ ಸರಿಸಲ್ಪಡುತ್ತದೆಂಬ ಪ್ರಮೇಯವನ್ನು ದೃಷ್ಟಾಂತಪೂರ್ವಕ ನಿರೂಪಿಸುತ್ತಾರೆ:—

ಕಾಚಿತ್–ಮಾಯಾಗಳಲ್ಲಿ (ಪ್ರಕೃತ್ಯಂಶಗಳಲ್ಲಿ) ಒಂದು (ಜೀವಾಚ್ಛಾದಿಕೆಯು), ಅಕ್ಷಿಮಲೋಪಮಾ–ಕಣ್ಣಿನ ದೃಷ್ಟಿಯನ್ನು ಪ್ರತಿಬಂಧಿಸುವ ಮಲದಂತೆ (ಕಣ್ಣಿಗೆ ಬರುವ ಪೊರೆಯಂತೆ) ಇರುತ್ತದೆ; (ಅದು) ನಾರಾಯಣಪ್ರಸಾದೇನ – ಶ್ರೀಹರಿಯ ಅನುಗ್ರಹದಿಂದ, ನಶ್ಯೇತ್ – ನಾಶವಾಗುತ್ತದೆ; ಕಾಚಿತ್–ಮತ್ತೊಂದು ಪರಮಾಚ್ಛಾದಿಕೆಯೆಂಬ ಅಜ್ಞಾನಾಂಶವು, ವಸ್ತ್ರ

---

–'ಅಹಂ' ಎಂಬ ಜ್ಞಾನವನ್ನು ನಿರೋಧಿಸುವುದಿಲ್ಲ (೧೮೮). ಈ ಮಾಯೆಯು ಸತ್ಯವಾದುದೇ—ಪ್ರಕೃತಿಯ ಅಂಶಭೂತವಾದುದು; ಜೀವರಲ್ಲಿಯೇ ಇರತಕ್ಕದ್ದು (೧೮೯). ಈ ಪ್ರಕೃತಿ ನಿರ್ಮಿತ ಮಾಯಾವರಣವು ಎರಡು ವಿಧವಾಗಿದೆ; ಒಂದು ಕಣ್ಣಿನಲ್ಲಿರುವ ಪೊರೆಯಂತೆಯೂ, ಮತ್ತೊಂದು, ಕಣ್ಣಮುಂದಿನ ಬಟ್ಟೆಯ ಪರದೆಯಂತೆಯೂ ಇದೆ; ಮೊದಲಿನದು ಸ್ವರೂಪಾನಂದಾದಿಯ ಅನುಭವವನ್ನು ತಿಳಿಯದಂತೆ (ಅನುಭವಕ್ಕೆ ಬರದಂತೆ ಮಾಡುತ್ತದೆ); ಎರಡನೆಯದು ಜೀವನಿಂದ ಭಗವಂತನನ್ನು ಮರೆಮಾಡುತ್ತದೆ; ಪರಮಾತ್ಮನು, ಜೀವನು ಮುಕ್ತನಾಗುವ ಕಾಲದಲ್ಲಿ, ಒಂದನೆಯದನ್ನು ನಾಶಗೊಳಿಸುತ್ತಾನೆ; ಎರಡನೆಯದಲ್ಲಿ ಓರೆಮಾಡಿ ತನ್ನ ದರ್ಶನಕ್ಕೆ ಅವಕಾಶ

ವೃತ್ತಿಪ್ರಾಯಾ–ಬಟ್ಟೆಯ ತೆರೆಯಂತೆ (ಪರದೆಯಂತೆ) ಅಡ್ಡವಾಗಿರುತ್ತದೆ; ತತಃ–ಕಣ್ಣುಮುಂದಿನಿಂದ, ಅಪಸರೇತ್–ಓರೆಯಾಗುತ್ತದೆ (ಸರಿಯುತ್ತದೆ); (ಮೊದಲಿನದು ಜೀವಸ್ವರೂಪದ ಆನಂದಾದಿಗಳನ್ನು ಮರೆಮಾಡಿರುತ್ತದೆ; ಎರಡನೆಯದು ಜೀವನಿಗೆ ಪರಮಾತ್ಮನನ್ನು ಮರೆಮಾಡಿರುತ್ತದೆ).[1]

**ಜೀವಸ್ಯಾಚ್ಛಾದಿಕಾ ತ್ವೇಕಾ ಪರಸ್ಯಾಚ್ಛಾದಿಕಾ ಪರಾ ।**
**ದ್ವಯಂ ಜೀವಗತಂ ನಿತ್ಯಂ ಹರಿಸ್ತೂಭಯಮೋಚಕಃ ॥ ೧೯೧ ॥**

ಏಕಾ – ಒಂದು (ಅಜ್ಞಾನಾವರಕಗಳೆರಡರಲ್ಲಿ ಒಂದು), ಜೀವಸ್ಯ–ಜೀವನ (ಜೀವಸ್ವರೂಪವನ್ನು), ಆಚ್ಛಾದಿಕಾ–ಮುಚ್ಚುವುದು; ಅಪರಾ–ಮತ್ತೊಂದು, ಪರಸ್ಯ – ಪರಮಾತ್ಮನ, ಆಚ್ಛಾದಿಕಾ – ಮರೆಮಾಡುವುದು

---

ವನ್ನುಂಟುಮಾಡುತ್ತಾನೆ(೧೯೦). ಈ ದ್ವಿವಿಧ ಆಚ್ಛಾದಕಗಳಿಂದ ನಡೆಯುವ ಕಾರ್ಯಾನುಸಾರವಾಗಿ, ಇವು, ಕ್ರಮವಾಗಿ ಜೀವಾಚ್ಛಾದಿಕಾ ಮತ್ತು

---

1 ಕಣ್ಣುಮುಚ್ಚಿಕೊಂಡವನು ಸ್ವದೇಹಪರದೇಹಗಳನ್ನೆರಡನ್ನೂ ಕಾಣದಿರುವಂತೆ, ಈ ಎರಡೂ ಆಚ್ಛಾದಿಕೆಗಳು ಜೀವಸ್ವರೂಪವನ್ನೂ ಮತ್ತು ಪರಮಾತ್ಮನನ್ನೂ ಪ್ರತಿಬಂಧಿಸುವುವು; ಈ ಎರಡೂ ದುಷ್ಟ ಪ್ರಕೃತ್ಯಂಶಗಳಿಂದ ನಿರ್ಮಿತವಾದ ಅಜ್ಞಾನಾವರಣಗಳು; ಶ್ರೀ ಭಾಗವತ ದಶಮಸ್ಕಂಧ ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಸಪ್ರಮಾಣವಾಗಿ ಹೀಗೆ ವಿವರಿಸಿದ್ದಾರೆ;—
'ಅಥಾನ್ಯೇ ಪ್ರಕೃತೀ ದುಷ್ಟೇ ನೃಣಾಂ ಪ್ರಾತಿಸ್ವಿಕಂ ಸ್ಥಿತೇ । ಸ್ವಗುಣಾಚ್ಛಾದಿಕಾ ತ್ವೇಕಾ ಪರಮಾಚ್ಛಾದಿಕಾ ಪರಾ । ಸ್ವಗುಣಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ । ವ್ಯಾಘುಟ್ಯ ಮೋಕ್ಷಪದವೀಂ ದದಾತಿ ಪುರುಷೋತ್ತಮಃ ॥' — (ಮಹಾತತ್ವವಿವೇಕ); ಇದರ ಭಾವಾರ್ಥವು ಹೀಗಿದೆ;—ಶ್ರೀ ಮೊದಲಾದವರಾದ ಚೇತನಪ್ರಕೃತಿಗಳನ್ನು ನಿರೂಪಿಸಿ ಎರಡು ದುಷ್ಟ ಪ್ರಕೃತಿಗಳೂ ಆ ದೇವಿಯರಿಂದಲೇ ಪ್ರೇರಿತವಾಗಿ, ಜೀವರ ಯೋಗ್ಯತೆಯನ್ನನುಸರಿಸಿ ಅಜ್ಞಾನದ ಆವರಣಗಳಾಗಿ ಕಾರ್ಯ ಮಾಡುತ್ತವೆ; (೧) ಸ್ವಗುಣಾಚ್ಛಾದಿಕಾ (ಜೀವಾಚ್ಛಾದಿಕಾ) ಮತ್ತು ಪರಮಾಚ್ಛಾದಿಕಾ ಎಂದು ಕರೆಯಲ್ಪಡುತ್ತವೆ; ಇವು ಪ್ರತಿ ಮನುಷ್ಯರಲ್ಲಿಯೂ ಇರುತ್ತವೆ; ೧ನೆಯದು ಜೀವರ ಆನಂದಾದಿ ಗುಣಗಳ ಜ್ಞಾನವನ್ನು ಪ್ರತಿಬಂಧಿಸುತ್ತದೆ; ೨ನೆಯದು ಜೀವರಿಗೆ ಪರಮಾತ್ಮಜ್ಞಾನಬಂಧಕವು; ಶ್ರೀಹರಿಯು ಅನಾದಿಯಿಂದ ಜೀವರಲ್ಲಿರುವ ಇವುಗಳಲ್ಲಿ ೧ನೇದನ್ನು ಸಂಹರಿಸಿ, ೨ನೇದನ್ನು ದೂರೀಕರಿಸಿ ಮೋಕ್ಷವನ್ನು ಕೊಡುತ್ತಾನೆ.

(ಒಂದು ಜೀವಾಚ್ಛಾದಿಕವೆಂದೂ, ಎರಡನೆಯದು ಪರಮಾಚ್ಛಾದಿಕವೆಂದೂ ಕರೆಯಲ್ಪಡುವುವು); ದ್ವಯಂ- ಈ ಎರಡು ವಿಧದ ಆವರಣಗಳೂ, ಜೀವಗತಂ- ಜೀವನಲ್ಲಿಯೇ ಇರುವುವು, ನಿತ್ಯಂ–ಮುಕ್ತಿಯವರೆಗೆ ಇರುತ್ತವೆ; ಹರಿಃ ತು– ಶ್ರೀಹರಿಯೇ, ಉಭಯಮೋಚಕಃ–ಎರಡನ್ನೂ, ಬಿಡಿಸುವವನು (ಪರಿಹರಿಸುವವನು).

**ಉಭಯೋಶ್ಚಾತಿದೂರಸ್ಥೋ ನ ಚೇತ್ತೇ ಮೋಚಯೇತ್ಕಥಂ ।**
**ನಿಗಡೇನ ನಿಬದ್ಧಾಂಘ್ರಿರ್ನ ಹಿ ರಾಜಾ ವಿಮೋಚಕಃ ॥ ೧೯೨ ॥**

ಉಭಯೋಃ–ಉಕ್ತವಾದ ದ್ವಿವಿಧ ಅಜ್ಞಾನಗಳ, ಅತಿದೂರಸ್ಥಃ–ಅತಿ ದೂರದಲ್ಲಿರುವವನು (ಸ್ಪರ್ಶರಹಿತನು), ನ ಚೇತ್–(ಭಗವಂತನು) ಅಲ್ಲದಿದ್ದರೆ, ಕಥಂ – ಹೇಗೆ, ಮೋಚಯೇತ್ – ಅವುಗಳನ್ನು ಬಿಡಿಸಬಹುದು? (ನಿಬದ್ಧನನ್ನು ಬಿಡಿಸುವವನು ಅಬದ್ಧನಾಗಿರಬೇಕು—ಅನ್ಯಥಾ ಶಕ್ಯವಿಲ್ಲ); ನಿಗಡೇನ – ಶೃಂಖಲೆಯಿಂದ (ಬಳೆಗಳಿಂದ), ನಿಬದ್ಧಾಂಘ್ರಿಃ – ಕಟ್ಟಲ್ಪಟ್ಟ ಪಾದವುಳ್ಳ (ಬಂಧಿತನಾದ), ರಾಜಾ–ರಾಜನು, ವಿಮೋಚಕಃ–ಮೋಚಕನು (ಅನ್ಯರನ್ನು ಬಿಡಿಸುವವನು), ನ ಹಿ–ಅಲ್ಲವಷ್ಟೆ.

**ಅಸ್ಮಿನ್ನರ್ಥೇ ಶ್ರುತಿರ್ಮಾನಂ ಪುರಾಣಾನಿ ಚ ಭೂರಿಶಃ ।**
**ಅನಿರ್ವಾಚ್ಯಾ ತು ಯಾ ಮಾಯಾ ಸಾಽನಿರ್ವಾಚ್ಯೈವ ಧೀಮತಾಂ॥**

---

ಪರಮಾಚ್ಛಾಧಿಕಾ ಎಂದು ಕರೆಯಲ್ಪಡುತ್ತವೆ; ಇವು ಜೀವರಲ್ಲಿ ಅನಾದಿಕಾಲದಿಂದ ಇರುತ್ತವೆ; ಉಭಯಮೋಚಕನೂ, ಶ್ರೀಹರಿಯೇ ಆಗಿದ್ದಾನೆ(೧೯೧). ಈ ಎರಡೂ ಆಚ್ಛಾದಕ ಪ್ರಕೃತ್ಯಾತ್ಮಕ ಮಾಯಾವರಣಗಳು ಭಗವಂತನಿಂದ ಬಹುದೂರದಲ್ಲಿವೆ (ಎಂದರೆ ಆತನನ್ನು ಸ್ಪರ್ಶಿಸುವುದಿಲ್ಲ); ಅವುಗಳಿಂದ ತಾನೂ ಬಂಧಿತನಾದರೆ ಭಗವಂತನು, ಜೀವರನ್ನು ಹೇಗೆ ಅವುಗಳಿಂದ ಮುಕ್ತರನ್ನಾಗಿ ಮಾಡಬಹುದು? ಸಂಕೋಲೆಯಿಂದ ಪಾದಗಳಲ್ಲಿ ಬಂಧಿತನಾದ ರಾಜನು ಬಂದಿಯನ್ನು ಕಾರಾಗೃಹದಿಂದ ಬಿಡಿಸಲು ಅಸಮರ್ಥನಾಗಿರುವಂತೆ ಭಗವಂತನಿಗೂ ಶಕ್ಯವಾಗಲಿಕ್ಕಿಲ್ಲ (೧೯೨). ಈ ಅರ್ಥವನ್ನು ನಿರೂಪಿಸುವ, ಎಂದರೆ ಮಾಯೆಯಿಂದ ಮಲಗಿ ನಿದ್ರಿಸುವವನು ಜೀವನು ಎಂದು ಮುಂತಾಗಿ ಹೇಳುವ ಶ್ರುತಿಗಳೂ, ಬಹು ಪುರಾಣ ವಾಕ್ಯಗಳೂ ಇರುತ್ತವೆ; ಇವುಗಳನ್ನು

ಅಸ್ಮಿನ್ ಅರ್ಥೇ—(ಮಾಯಾಮೋಚಕನೆಂಬ) ಈ ಅರ್ಥದಲ್ಲಿ, ಶ್ರುತಿಃ—ಶ್ರುತಿಯು (ಅನಾದಿಮಾಯಯಾ ಸುಪ್ತಃ ಯದಾ ಜೀವಃ....ಇತ್ಯಾದಿ), ಮಾನಂ—ಪ್ರಮಾಣವು, ಭೂರಿಶಃ—ಬಹು, ಪುರಾಣಾನಿ—(ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಇತ್ಯಾದಿ) ಪುರಾಣವಾಕ್ಯಗಳೂ (ಉದಹರಿಸಲ್ಪಟ್ಟಿವೆ); ಅನಿ-ರ್ವಾಚ್ಯಾ ತು – ಅನಿರ್ವಾಚ್ಯವೆಂದು (ಹೇಳಲಿಕ್ಕೆ ಬಾರದುದೆಂಬ), ಯಾ ಮಾಯಾ—ಯಾವ (ಅದ್ವೈತಿಯ) ಮಾಯವೋ, ಸಾ—ಅದು, ಧೀಮತಾಂ—ಜ್ಞಾನಿಗಳಿಗೆ, ಅನಿರ್ವಾಚ್ಯೈವ—ಹೇಳಲಿಕ್ಕೆ ಅಯೋಗ್ಯವೇ ಸರಿ (ಮನಸ್ಸಿನಲ್ಲಿ ಅದ್ವೈತ ರೀತಿಯಿಂದ ಭಾವಿಸುವುದೂ ಸಹ ಯಥಾರ್ಥಜ್ಞಾನವನ್ನು ಪ್ರತಿಬಂಧಿಸುತ್ತದೆ—ಅದರ ಕಲ್ಪನೆಯು ಅತ್ಯಂತ ಮೋಹಕವು).

**ಯೋ ಮಾಯಾಂ ವಕ್ತ್ಯಧೀಶಾನೇ ಸ ಪ್ರಷ್ಟವ್ಯಸ್ತ್ವಯೇಶಿತುಃ ।**
**ಭ್ರಮಃ ಸಂಪಾದ್ಯತೇ ನೇತಿ ನ ಚೇದ್ವಿದ್ಯೈವ ತಾಮಪಿ ॥ ೧೯೪ ॥**
**ನಿರಸ್ತಕುಹಕತ್ವೋಕ್ತ್ಯಾ ನೋರೀಚಕ್ರುಃ ಪರಂ ಹರೌ ।**
**ಅದ್ವೇತ್ವವಿದ್ಯೈವ ತಸ್ಮಾತ್ ಕಲ್ಪ್ಯೋಯಂ ಚ ವಿಕಲ್ಪಭೀಃ ॥ ೧೯೫ ॥**

---

ಈ ಹಿಂದೆ ಉದಾಹರಿಸಲಾಗಿದೆ; ಅದ್ವೈತಿಗಳು ಮಾಯೆಯನ್ನು ಸದಸತ್ತುಗಳಿಂದ ವಿಲಕ್ಷಣವೆಂದೂ, ಅದು ಅನಿರ್ವಾಚ್ಯ (ಹೀಗೆಂದು ಹೇಳಲಿಕ್ಕೆ ಬಾರದ ಸ್ವರೂಪವುಳ್ಳದ್ದೆಂದೂ ಹೇಳುತ್ತಾರೆ; ಮಾಯೆಯು ಜ್ಞಾನಿಗಳಿಗೂ ಅನಿರ್ವಾಚ್ಯವೇ ಆಗಿದೆ; ಹೇಳಲಿಕ್ಕೆ ಸಹ ಅಯೋಗ್ಯವಾದುದು; ಅದರ ಕಲ್ಪನೆಯೂ (ಅದ್ವೈತ ರೀತಿಯ ಭಾವನೆಯೂ) ಅತ್ಯಂತ ಮೋಹಕವು (ಯಥಾರ್ಥಜ್ಞಾನಪ್ರತಿಬಂಧಕವು) (೧೯೩). ಭಗವಂತನಲ್ಲಿ ಮಾಯೆಯು ಇರುತ್ತದೆಂದು ಹೇಳುವವನನ್ನು ಹೀಗೆ ಪ್ರಶ್ನಿಸಬೇಕು; ಆ ಮಾಯೆಯು ಭಗವಂತನಿಗೆ ಭ್ರಮೆಯನ್ನುಂಟುಮಾಡುತ್ತದೆಯೋ ಅಥವಾ ಇಲ್ಲವೋ, ಎಂದು; ಇಲ್ಲವೆಂದರೆ ಆ ಮಾಯೆಯನ್ನು ಮಂತ್ರೌಷಧಾದಿ ವಿದ್ಯೆಗಳಂತೆ ಭಗವಂತನಲ್ಲಿರುವ ಒಂದು ವಿದ್ಯೆಯೆಂದೇ ತಿಳಿಯಬೇಕು; ತಾನು ಭ್ರಮಿತನಾಗದೇ ಮಾಯೆಯಿಂದ ಜೀವರನ್ನು ಭ್ರಾಂತರನ್ನಾಗಿ ಮಾಡುತ್ತಾನೆಂದು ತಿಳಿಯಬೇಕು; ಹಾಗಾದರೆ ಜಗತ್ತೆಲ್ಲವೂ ಮಾಯಾಕಲ್ಪಿತವಾದ ಭ್ರಮೆಯೆನ್ನಬಹುದೇ ಎಂದರೆ, ಅದು ಯೋಗ್ಯವಲ್ಲ; ಐಂದ್ರಜಾಲಿಕನು ತೋರಿಸುವ

ಬ್ರಹ್ಮನಲ್ಲಿ ಅವಿದ್ಯೆಯನ್ನು ನಿರಾಕರಿಸಿ, ಮಾಯೆಯನ್ನು ನಿರಾಕರಿಸಲು ಮಾಯಾವಾದಿಯನ್ನು ಪ್ರಶ್ನಿಸುತ್ತಾರೆ :—

ಯಃ – ಯಾವನು (ಮಾಯಾವಾದಿಯು), ಮಾಯಾಂ – ಮಾಯೆಯನ್ನು, ಅಧೀಶಾನೇ–ಸ್ವಾಮಿಯಾದ ಭಗವಂತನಲ್ಲಿ, ವಕ್ತಿ–ಹೇಳುವನೋ, ಸಃ–ಆತನು, ಪ್ರಷ್ಟವ್ಯಃ – ಕೇಳಲ್ಪಡಬೇಕು; (ಏನೆಂತೆಂದರೆ), ತಯಾ–ಆ ಮಾಯೆಯಿಂದ, ಈಶಿತುಃ – ಭಗವಂತನಿಗೆ, ಭ್ರಮಃ – ಭ್ರಮೆಯು, ಸಂಪಾದ್ಯತೇ–ಹೊಂದಲ್ಪಡುವುದೋ, ನೇತಿ–(ಅಥವಾ) ಇಲ್ಲವೋ, ಇತಿ–ಎಂದು (ಕೇಳಬೇಕು); ನ ಚೇತ್–ಇಲ್ಲವೆಂದರೆ, (ಮಾಯೆಯು ಭ್ರಮವನ್ನುಂಟುಮಾಡದಿದ್ದರೆ), ತಾಂ ಅಪಿ–ಆದನ್ನೂ, ವಿದ್ಯಾ ಏವ–ಭಗವಂತನಲ್ಲಿರುವ ವಿದ್ಯೆಯೆಂದೇ [1] (ಪರವ್ಯಾಮೋಹಕವಾದ ಇಂದ್ರಜಾಲ ವಿದ್ಯೆಯಂತಿರುವ ಒಂದು ವಿದ್ಯೆಯೆಂದೇ) ತಿಳಿಯಬೇಕು (ಅಜ್ಞಾನದಂತೆ ಮಹಾದೋಷವಲ್ಲ; ಮಾಯಾವಿಯಾದ ಐಂದ್ರಜಾಲಿಕನು ತನ್ನಿಂದ ನಿರ್ಮಿತವಾದ ಮಾಯೆಯಿಂದ ತಾನು ಭ್ರಮಿಸದಂತೆ, ಈಶ್ವರನು ಭ್ರಮಿತನಾಗದೇ, ಮೋಹಿತರಾದ ಜೀವರು ಮಾತ್ರ ಭ್ರಮಿಸುತ್ತಾರೆ); (ಹೀಗೆಂದರೆ ಜಗತ್ತು ಮಾಯಾಕಲ್ಪಿತವೆಂದು ಏಕೆ ಅಂಗೀಕರಿಸುವುದಿಲ್ಲವೆಂದರೆ ಹೇಳುತ್ತಾರೆ); ನಿರಸ್ತಕುಹಕತ್ವೋಕ್ತ್ಯಾ–('ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ' ಎಂದು ಶ್ರೀ ಭಾಗವತದಲ್ಲಿ) ಕುಹಕ ವಿದ್ಯಾರೂಪದ ಮಾಯಾಖ್ಯ ವಿದ್ಯೆಯ ಪ್ರಭಾವವಿಲ್ಲೆಂದು ಭಾಗವತದಲ್ಲಿ ಹೇಳಿರುವುದರಿಂದ, ಹರೌ–ಶ್ರೀಹರಿಯಲ್ಲಿ, ಪರಂ–ಕೇವಲ ಅದನ್ನು ಸಹ, ನ ಉರೀಚಕ್ರುಃ – ಅಂಗೀಕರಿಸಲಿಲ್ಲ (ಅಜ್ಞಾನ, ಭ್ರಮಾತ್ಮಕ ಮಹಾದೋಷಪ್ರಾಪಕವಲ್ಲದಿದ್ದರೂ, ಕುಹಕತನವೆಂಬ ಅಲ್ಪದೋಷವನ್ನೂ ಹೇಳುವುದು ಉಚಿತವಲ್ಲೆಂದು ಅಂಗೀಕರಿಸಿರುವುದಿಲ್ಲ); ಆದ್ಯೇತು–ಮೊದಲಿನ ಭ್ರಮಸಂಪಾದಕ ಪಕ್ಷದಲ್ಲಿ, ಅವಿದ್ಯೈವ – ಮಾಯಾಶಬ್ದದಿಂದ ಅವಿದ್ಯೆಯೇ ಹೇಳಲ್ಪಡುತ್ತದೆ; (ಎಂದರೆ) ತಸ್ಮಾತ್ – ಆದ್ದರಿಂದ,

---

ಮಾಯಾಕಲ್ಪಿತ ವಸ್ತುಗಳು ನೋಡುವವರಿಗೆ ತೋರುತ್ತವೆಯಲ್ಲದೇ, ಐಂದ್ರಜಾಲಿಕನಿಗೆ ಕಾಣುವುದಿಲ್ಲ; ಹೀಗೆಯೇ ಜೀವರಿಗೆ ತೋರುವ ಜಗತ್ತು

---

1 ಮಂತ್ರ, ಔಷಧಾದಿಗಳಂತೆ ಇದೂ ಒಂದು ವಿದ್ಯೆಯೆಂದೇ ತಿಳಿಯಬಹುದು.

*

ಅಯಂ ಕಲ್ಪವು—ಈ ಅಭಿಪ್ರಾಯವು, ವಿಕಲ್ಪಭೀಃ—(ಅವಿದ್ಯೆಯು ಬ್ರಹ್ಮನಲ್ಲಿ ರಲು ಶಕ್ಯವಿಲ್ಲೆಂದು ಈ ಹಿಂದೆ ನಿರೂಪಿಸಿದ) ಬಹುವಿಕಲ್ಪಗಳ ಭಯದಿಂದ ಕೂಡಿದೆ. (ಕುತ್ಸಿತಭಾವವೆಂಬ ಅಲ್ಪದೋಷವೂ ಬ್ರಹ್ಮನಲ್ಲಿಲ್ಲವೆಂದು ಹೇಳುತ್ತಾರೆ).

**ಸ್ವದೋಷಾಚ್ಛಾದನಾಯಾಲ್ಪೋ ನಿರ್ದೋಷೇಷ್ವಪಿ ತಂ ವದೇತ್ ।**
**ಜೀವೇ ಸಂಭವದಜ್ಞಾನಂ ಬ್ರಹ್ಮಣ್ಯಪಿ ನ ಕಿಂ ಜಗುಃ ॥ ೧೯೬ ॥**

ಲೋಕನೀತಿಯಂತೆಯೂ ಭಗವಂತನಲ್ಲಿ ಅಜ್ಞಾನವನ್ನು ಹೇಳುವುದು ಯುಕ್ತವಲ್ಲವೆನ್ನುತ್ತಾರೆ :—

ಅಲ್ಪಃ—ಕ್ಷುದ್ರಮನುಷ್ಯನು (ಮೂರ್ಖನು), ಸ್ವದೋಷಾಚ್ಛಾದನಾಯ—(ತನ್ನ ಜಾರತ್ವಾದಿ) ದೋಷಗಳನ್ನು ಮುಚ್ಚಿಕೊಳ್ಳಲು, ತಂ—ಆ ದೋಷವನ್ನು, ನಿರ್ದೋಷೇಷು ಅಪಿ—ದೋಷವಿಲ್ಲದವರಲ್ಲಿ (ಸಾಧುಗುಣವುಳ್ಳವರಲ್ಲಿ), ವದೇತ್—ಹೇಳುತ್ತಾರೆ; ಜೀವೇ—ಜೀವನಲ್ಲಿ, ಸಂಭವದಜ್ಞಾನಂ—ಇರಲವಕಾಶವಿರುವ ಅಜ್ಞಾನವನ್ನು (ತನ್ನಲ್ಲಿರುವ ಅಜ್ಞಾನನಿಮಿತ್ತ ನೀಚತ್ವವನ್ನು ಪರಿಹರಿಸಿಕೊಳ್ಳಲು), ಬ್ರಹ್ಮಣಿ ಅಪಿ—ಬ್ರಹ್ಮನಲ್ಲಿ ಸಹ, ನ ಕಿಂ ಜಗುಃ—ಹೇಳಲಿಕ್ಕಿಲ್ಲವೇನು? (ಪ್ರಮಾಣಬಲದಿಂದ ಹಾಗೆ ಹೇಳಿದ್ದಲ್ಲ).

---

ಭ್ರಮಾತ್ಮಕವೆಂದು ತಿಳಿಯಲೂ ಬರುವುದಿಲ್ಲ; ಭಾಗವತದಲ್ಲಿ 'ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ' ಎಂದು ನಿತ್ಯದಲ್ಲಿ (ಎಂದೂ) ನಿರಸ್ತಕುಹಕನೆಂದು ಹೇಳಲಾಗಿದೆ; ಜೀವರಿಗೆ ಭ್ರಮೆಯನ್ನುಂಟುಮಾಡುವ ಕುಹಕ (ಕುತ್ಸಿತ) ಬುದ್ಧಿಯುಳ್ಳವನೂ ಅಲ್ಲ; (ಅವಿದ್ಯೆಯು) ಅಜ್ಞಾನವು ಭ್ರಮವನ್ನುತ್ಪಾದಿಸಲು ಭಗವಂತನಿಂದ ಉಪಯೋಗಿಸಲ್ಪಡುವುದೆಂಬ ಮಹಾದೋಷವಿಲ್ಲದಿದ್ದರೂ ಈ ಮೊದಲು ಬಹುಪರಿಯಿಂದ ಅವಿದ್ಯೆಯು ಬ್ರಹ್ಮನಲ್ಲಿರಲು ಶಕ್ಯವೇ ಇಲ್ಲವೆಂದು ಸಾಧಿಸಿರುವ ಯುಕ್ತಿಗಳಿಂದ ಭಯಪಟ್ಟು ಕ್ಷುದ್ರವಾದ (ಅತ್ಯಲ್ಪ—ಕುಹಕವೆಂಬ) ದೋಷವನ್ನು ಸಹ ಹೇಳುವುದಕ್ಕೆ ಪ್ರವೃತ್ತವಾಗುವುದಿಲ್ಲ (೧೯೪—೧೯೫). ಮೂರ್ಖನೊಬ್ಬನು ಜಾರತ್ವಾದಿ ತನ್ನಲ್ಲಿರುವ ದೋಷಗಳನ್ನು ಮುಚ್ಚಿಕೊಳ್ಳಲು ಅನ್ಯರಿಗೆ ದೋಷ ಕೊಡುತ್ತಾನೆ (ದೋಷವಿಲ್ಲದವರಲ್ಲಿ ಆರೋಪಿಸುತ್ತಾನೆ; ಅದರಂತೆ ಜೀವನು

**ಕಿಂ ಮಲೈಃ ಸಮಲಸ್ಯಾಸ್ಯ ನಿರ್ಮಲಸ್ಯ ಮಲಂ ಮಲಂ ।**
**ನೀಲಿಮಾ ದೂಷಣಂ ಭಾನೋಃ ಸ್ವರ್ಭಾನೋಃಸ್ತು ಸ ಭೂಷಣಂ ॥**

ಬ್ರಹ್ಮನಲ್ಲಿ ಹೀಗೆ ಅಜ್ಞಾನವನ್ನು ಹೇಳುವುದರಿಂದ ತೊಂದರೆಯೇನೆಂದರೆ, ಅದಕ್ಕೂ ಲೋಕನೀತಿ ವಿರೋಧವನ್ನು ತೋರಿಸುತ್ತಾರೆ :—

ಸಮಲಸ್ಯ–(ಕರ್ಮಲೇಪ, ದುಃಖಾದಿ) ದೋಷವುಳ್ಳ, ಅಸ್ಯ–ಜೀವನಿಗೆ, ಮಲೈಃ–(ಅಜ್ಞಾನ ಭ್ರಮಾದಿ) ಮಲಗಳಿಂದ (ಕಶ್ಮಲಗಳಿಂದ), ಕಿಂ–ಆಗಬೇಕಾದುದೇನು? ನಿರ್ಮಲಸ್ಯ–ಪರಿಶುದ್ಧನಾದ (ನಿಷ್ಕಲನಾದ) ದೋಷಗಂಧವಿಧುರನಾದ ಭಗವಂತನಿಗೆ, ಮಲಂ–(ಅಜ್ಞಾನ, ಕುಹಕತ್ವಾದಿ) ದೋಷವೂ, ಮಲಂ–ಕಶ್ಮಲವೇ ; ಭಾನೋಃ–ಸೂರ್ಯನಿಗೆ, ನೀಲಿಮಾ–ಕಪ್ಪುಬಣ್ಣವು, ದೂಷಣಂ–ನಿಂದಾಸ್ಪದವೇ ಸರಿ ; (ಅದೇ) ಸ್ವರ್ಭಾನೋಃ ತು–ರಾಹುವಿಗೆ, ಸಃ–ಆ ನೀಲಿಬಣ್ಣವು, ಭೂಷಣಂ ಅಸ್ತು–ಭೂಷಣವೇ ಆಗುತ್ತದೆ (ಶೋಭಿಸುತ್ತದೆ).

**ಸ್ವಯಂ ಹ್ಯಶಕ್ತಃ ಶಕ್ತಸ್ಯಾಪ್ಯಶಕ್ತಿಂ ಪ್ರಥಯೇತ್ಖಲಃ ।**
**ಸ್ವಜ್ಞಾನವದ್ಧರೇರ್ಜ್ಞಾನಂ ಕಿಂ ನಾಜ್ಞಾನಾನುಗಂ ಜಗೌ ॥ ೧೯೮ ॥**

---

ತನ್ನಲ್ಲಿರುವ ಅಜ್ಞಾನವನ್ನು ಪರಿಶುದ್ಧನಾದ ಬ್ರಹ್ಮನಲ್ಲಿ, (ಅಜ್ಞಾನನಿಮಿತ್ತಕ ನೀಚತ್ವವನ್ನು) ಸರ್ವೋತ್ಕೃಷ್ಟನಾದ ಶ್ರೀಹರಿಯಲ್ಲಿ ಆರೋಪಿಸುವುದು ಸಹಜವೇ ಆಗಿದೆ–ಹಾಗೆ ಮಾಡದೇ ಇರುವನೇ ? ಆದರೆ ಯಾವ ಪ್ರಮಾಣದ ಬಲವೂ ಇಲ್ಲದೇ ಹಾಗೆ ಮಾಡುತ್ತಾನೆ (೧೯೬). ಕುಹಕತ್ವರೂಪದ ಅಲ್ಪ ದೋಷವನ್ನು ಭಗವಂತನಲ್ಲಿ ಆರೋಪಿಸುವುದು ಮಹಾಪರಾಧವೆಂದು ತಿಳಿಯಬೇಕಾಗಿಲ್ಲವೆಂಬುದು ಯುಕ್ತವಲ್ಲ ; ಬಹುದೋಷಗಳುಳ್ಳ ಜೀವನಲ್ಲಿ ದೋಷವನ್ನು ಹೇಳುವುದಕ್ಕಿಂತ ಅತ್ಯಂತ ಪರಿಶುದ್ಧನಾದ ಬ್ರಹ್ಮನಲ್ಲಿ ಅಲ್ಪದೋಷವನ್ನು ಹೇಳುವುದು (ತಿಳಿಯುವುದೂ ಸಹ) ಮಹಾಪರಾಧವೇ ಆಗುತ್ತದೆ ; ಕಪ್ಪು ವರ್ಣದ ರಾಹುವಿನಲ್ಲಿ ನೀಲವರ್ಣವು (ಕಪ್ಪು ಬಣ್ಣವು) ದೋಷವಲ್ಲ ; ಆದರೆ ಸೂರ್ಯನಲ್ಲಿ ಅಲ್ಪ ನೀಲಿ ಬಣ್ಣವೂ ದೋಷವೆನಿಸುತ್ತದೆ ; ರಾಹುವಿನಲ್ಲಿ ಅದೇ ಭೂಷಣವೂ ಆಗುತ್ತದೆ (೧೯೭). ತಾನು ಅಶಕ್ತನಾಗಿದ್ದು ಶಕ್ತನಿಗೆ ಅಶಕ್ತಿಯನ್ನು ಹೇಳಿ ಪ್ರಸಿದ್ಧಗೊಳಿಸುವುದು (ಖಲನ) ದುಷ್ಟನ

ಭಗವಂತನಲ್ಲಿ ಜ್ಞಾನದೊಂದಿಗೆ ಅಜ್ಞಾನವೂ ಇರುವುದೆಂದು ತಿಳಿಯು ವುದೂ ಸಹ ಅನೀತಿಯ ಮಾರ್ಗವೆನ್ನುತ್ತಾರೆ :—

ಸ್ವಯಂ—ತಾನು (ಜೀವನು), ಅಶಕ್ತಃ—ಅಸಮರ್ಥನಾಗಿ (ಸಮುದ್ರ ವನ್ನು ದಾಟಲು ಶಕ್ತಿಯಿಲ್ಲದ ಕ್ಷುದ್ರ ಮರ್ಕಟದಂತೆ), ಶಕ್ತಸ್ಯ ಅಪಿ—ಸರ್ವ ಶಕ್ತನಾದ ಭಗವಂತನಿಗೆ ಸಹ, ಖಲಃ—ಮೂರ್ಖನು (ದುಷ್ಟನು), ಅಶಕ್ತಿಂ— ಅಶಕ್ತಿಯನ್ನು (ಶಕ್ತನಾದ ಹನುಮಂತನಿಗೂ ಸಮುದ್ರತರಣಶಕ್ತಿಯಿಲ್ಲವೆಂದು ಹೇಳುವಂತೆ), ಪ್ರಥಯೇತ್—ಕೂಗಿ ಪ್ರಸಿದ್ಧಪಡಿಸುತ್ತಾನೆ (ಸಮುದ್ರವನ್ನು ದಾಟಲು ಯಾರು ಶಕ್ತರು ? ರಾಮಾಯಣದ ಈ ಕಥೆಯು ಸುಳ್ಳೆಂಬುವಂತೆ); (ಇದರಂತೆ) ಸ್ವಜ್ಞಾನವತ್—(ಜೀವನು) ತನ್ನ ಜ್ಞಾನದಂತೆ (ಅಜ್ಞಾನ ದಿಂದಲೂ ಕೂಡಿರುವಂತೆ), ಹರೇಃ—ಭಗವಂತನ, ಜ್ಞಾನಂ - ಜ್ಞಾನವೂ, ಅಜ್ಞಾನಾನುಗಂ — ಅಜ್ಞಾನಸಹಿತವೆಂದು, ನ ಜಗೌ ಕಿಂ—ಹೇಳದಿರುವನೇ ? (ಹೇಳುವುದು ಮೂರ್ಖನಿಗೆ ಆಶ್ಚರ್ಯವಲ್ಲ) ಶ್ರೀಹರಿಯ ಜ್ಞಾನವು ಸರ್ವ ವಿಷಯಕವಾದ ಸಾರ್ವಕಾಲಿಕ ಸರ್ವಜ್ಞತ್ವ ವಿಶಿಷ್ಟವಾದುದು).

**ಅನೃತಂ ವದತೋ ವಾಕ್ಯಮಸಂಬದ್ಧಂ ಭವೇದ್ಧ್ರುವಂ ।**
**ಜ್ಞಾನಸ್ಯ ಸಹಕಾರ್ಯಸ್ಯ ಹಾನಿರ್ನಾವರಣೇ ಕಿಲ ॥ ೧೯೯ ॥**

ಬ್ರಹ್ಮನು ಅಜ್ಞಾನದಿಂದ ಆವೃತನೆಂಬ ಮಾಯಿಮತಪ್ರಭೇದವೂ ನೀತಿವಿರುದ್ಧವೆಂದು ಹೇಳುತ್ತಾರೆ :—

ಅನೃತಂ—ಸುಳ್ಳನ್ನು, ವದತಃ—ಹೇಳುವವನ (ಚೋರನ), ವಾಕ್ಯಂ— ಮಾತು (ವಿಚಾರಣಾಧಿಕಾರಿಗಳಿಗೆ ಹೇಳುವ ಮಾತುಗಳು), ಧ್ರುವಂ—ನಿಶ್ಚಯ

---

ಸ್ವಭಾವವು ; ಅಲ್ಪಕಪಿಯು ತಾನು ಸಮುದ್ರವನ್ನು ಲಂಘಿಸಲು ಆಗದೇ, ಹನುಮಂತನು ಹಾರುವುದೆಂದರೇನು ? ರಾಮಾಯಣದ ಈ ಭಾಗದ ಚರಿತ್ರೆ ಯನ್ನೇ ತಿರಸ್ಕರಿಸುವಂತೆ ಅಲ್ಪನಾದ ಜೀವನು, ತನ್ನ ಜ್ಞಾನವು ಅಜ್ಞಾನ ಸಹಿತವಾಗಿರುವುದರಿಂದ ಭಗವಂತನ ಜ್ಞಾನವೂ ಅಜ್ಞಾನಸಹಿತವೆಂದು ತಿಳಿಯುವುದು ಆಶ್ಚರ್ಯವಲ್ಲ—ಮೂರ್ಖತನವು ; ಶ್ರೀಹರಿಯು ನಿತ್ಯ ಸರ್ವಜ್ಞನು—ಅಲ್ಲಿ ಅಜ್ಞಾನಕ್ಕೆ ಅವಕಾಶವೆಲ್ಲಿ ? (ಇಲ್ಲವೇ ಇಲ್ಲ) (೧೯೮). ಸುಳ್ಳಾಡುವ ಮನುಷ್ಯನು ಅಸಂಬದ್ಧವಾಗಿ ಮಾತನಾಡುತ್ತಾನೆ; ಹಿಂದೆ

ವಾಗಿ, ಅಸಂಬದ್ಧಂ—ಅಸಂಬದ್ಧವಾದುದು (ಮೊದಲು ಒಂದು ಹೇಳಿ, ಕ್ರಮ ವಾಗಿ ಮುಂದೆ ಪ್ರಶ್ನಿಸುತ್ತಿರಲು ಅದಕ್ಕೆ ವಿರುದ್ಧವನ್ನೇ ಹೇಳುವಂತೆ), ಭವೇತ್ – ಆಗುತ್ತದೆ; ಸಹಕಾರ್ಯಸ್ಯ–(ವಸ್ತುಪ್ರಕಾಶನವೆಂಬ) ಕಾರ್ಯ ಸಹಿತವಾದ, ಜ್ಞಾನಸ್ಯ–ಜ್ಞಾನಕ್ಕೆ (ಭಗವಂತನ ಸ್ವರೂಪಭೂತವಾದ ನಿತ್ಯ ಜ್ಞಾನಕ್ಕೆ), ಆವರಣೇ–ಅವಿದ್ಯೆಯ ಆವರಣವು (ಸತ್ಯಪಿ–ಇದ್ದರೂ), ಹಾನಿಃ– ನಷ್ಟವು ಅಥವಾ ಕೊರತೆಯು, ನ ಕಿಲ–ಇಲ್ಲವೇನು? (ಆವರಣವು ಜ್ಞಾನ ಪ್ರತಿಬಂಧಕವಾದುದು—ಅದಿದ್ದರೂ ಜ್ಞಾನದಲ್ಲಿ ನ್ಯೂನತೆಯಿರುವುದಿಲ್ಲವೆಂಬ ಮಾಯಿಮತವೂ ದುರ್ನೀತಿರೂಪದ ನೀತಿವಿರೋಧವೇ ಆಗಿದೆ).

**ಸಕೃದ್ಭ್ರಷ್ಟಃ ಖಲಃ ಪಶ್ಚಾದ್ಭ್ರಷ್ಟತಾಯಾ ಬಿಭೇತಿ ಕಿಂ ।**
**ಸರ್ವಜ್ಞಾಜ್ಞಾನದೌರ್ಘಟ್ಯಂ ಕಿಂ ನಾಭಾಷತ ಭೂಷಣಂ ॥ ೨೦೦ ॥**

ಇದರಂತೆ ಅನ್ಯಾಭಿಪ್ರಾಯವೂ ನೀತಿವಿರುದ್ಧವೇ ಎನ್ನುತ್ತಾರೆ :—

ಸಕೃದ್ಭ್ರಷ್ಟಃ–ಒಂದಾವರ್ತಿ ಅನಾಚಾರದಿಂದ ಪತಿತನಾದ, ಖಲಃ– ದುಷ್ಟನು, ಪಶ್ಚಾತ್–ನಂತರ (ಪುನಃ), ಭ್ರಷ್ಟತಾಯಾಃ–(ಅನ್ಯ) ಅನಾ- ಚಾರದ ನಡವಳಿಕೆಯಿಂದ (ಭ್ರಷ್ಟತೆಯಿಂದ), ಬಿಭೇತಿ ಕಿಂ–ಹೆದರುವನೇನು? (ಇಲ್ಲ—ಮಾಂಸಭಕ್ಷಣವು ಭಿಕ್ಷುವಿಗೆ ಅನುಚಿತವು; ಮದ್ಯದ ವಿನಹ ಮಾಂಸ ಭಕ್ಷಣವೆಂದರೆ ಹೆದರುವನೇ ?—ಇಲ್ಲ) ; ಸರ್ವಜ್ಞಾಜ್ಞಾನದೌರ್ಘಟ್ಯಂ – ಸರ್ವಜ್ಞನಲ್ಲಿ ಅಜ್ಞಾನವೇ ದುರ್ಘಟವಾಗಿರಲು (ಕೂಡದಿರುವಾಗಿರಲು), ಆ ಅಜ್ಞಾನದ ದೌರ್ಘಟ್ಯವನ್ನು (ದುರ್ಘಟತ್ವವನ್ನು), ಭೂಷಣಂ–ಭೂಷಣ ವೆಂದು (ಶೋಭಿಸುವುದೆಂದು), ನ ಅಭಾಷತ ಕಿಂ – ಹೇಳಲಿಕ್ಕಿಲ್ಲವೇನು?

---

ನುಡಿದುದಕ್ಕೆ ವಿರೋಧವಾಗಿ ಮುಂದೆ ನುಡಿಯುತ್ತಾನೆ—ಸಂಶಯವಿಲ್ಲ ; ಅಪರಾಧಿಗಳನ್ನು ವಿಚಾರಮಾಡುವ ಅಧಿಕಾರಿಗಳ ಮುಂದೆ ನಿತ್ಯವೂ ನಡೆಯುವ ವಿಷಯವೇ ಆಗಿದೆ; ಭಗವಂತನ ವಸ್ತುಪ್ರಕಾಶನಕಾರ್ಯದಲ್ಲಿ ಸಮರ್ಥವಾದ ನಿತ್ಯಜ್ಞಾನಕ್ಕೆ ಅವಿದ್ಯಾವರಣವು ಇದ್ದರೂ ಜ್ಞಾನಕಾರ್ಯದಲ್ಲಿ ಯಾವ ನ್ಯೂನತೆಯೂ ಇಲ್ಲವೆಂಬುದೂ ಮಾಯಿಮತದ ನೀತಿವಿರುದ್ಧ ಪ್ರಕ್ರಿಯೆಯೇ ಆಗಿರುತ್ತದೆ (೧೯೯). ಒಂದಾವರ್ತಿ ಅನಾಚಾರದಿಂದ (ಭ್ರಷ್ಟ) ಪತಿತ ನಾದವನು ಅನ್ಯ ಅನಾಚಾರದಿಂದ ಪತಿತನಾಗುವೆನೆಂದು ಹೆದರುವನೇ ? ಇಲ್ಲ;

(ಹೇಳಲು ಹೆದರುವನೇ ?—ಇಲ್ಲ) ಭಗವಂತನಲ್ಲಿ ಅಜ್ಞಾನವನ್ನು ಹೇಳುವುದೇ ಮೊದಲಿನ ಸುಳ್ಳು; ಅದು ದೋಷವಲ್ಲ, ಕಿಂತು ಭೂಷಣವೆಂದು ಹೇಳುವುದು ಎರಡನೆಯ ಸುಳ್ಳು).

**ಮಮಾಹಂ ನ ವಿಜಾನಾಮಿ ಮಾಂ ಜಾನಾಮ್ಯಹಮಿತ್ಯಪಿ ।**
**ಸರ್ವಸ್ಯಾನುಭವಾತ್ ಸ್ವಸ್ಯ ವಿಷಯೋಽಪಿ ಸ್ವಯಂ ಭವೇತ್ ॥೨೦೦॥**

ಈಗ ಈಶ್ವರಜ್ಞಾನದಲ್ಲಿ ಕರ್ತೃ ಕರ್ಮ ಭಾವವಿರೋಧದಿಂದ ಸ್ವಾ-ವಿಷಯತ್ವವೆಂಬ (ತನ್ನನ್ನು ತಾನು ತಿಳಿಯುವ ವಸ್ತುವಾಗಲಾರನೆಂಬ) ದೂಷಣವು ಅಯುಕ್ತವೆಂದು ಹೇಳಿ, ಅದನ್ನು ಪರಿಹರಿಸುತ್ತಾರೆ :—

ಮಾಂ—ನನ್ನನ್ನು, ಅಹಂ—ನಾನು, ನ ವಿಜಾನಾಮಿ – ತಿಳಿಯುವುದಿಲ್ಲ (ಈ ರೂಪದ ಅಜ್ಞಾನವನ್ನು ತಿಳಿಯುವುದರಲ್ಲಿ—ಅಜ್ಞಾನದ ಜ್ಞಾನದಲ್ಲಿ ತನಗೆ ತಾನೇ ಕರ್ಮನೂ, ತಾನೇ ತಿಳಿಯುವ ಕರ್ತನೂ ಆಗಿರುತ್ತಾನೆ), ಅಪಿ—ಮತ್ತು, ಮಾಂ—ನನ್ನನ್ನು, ಅಹಂ—ನಾನು, ಜಾನಾಮಿ—ತಿಳಿಯುತ್ತೇನೆ, ಇತಿ—ಎಂಬುದಾಗಿ, ಸರ್ವಸ್ಯ – ಸರ್ವರ, ಅನುಭವಾತ್ – ಅನುಭವವಿರುವುದ ರಿಂದ, ಸ್ವಯಂ – ತಾನೇ, ಸ್ವಸ್ಯ – ತನಗೆ, ವಿಷಯಃ ಅಪಿ – ವಿಷಯನೂ (ತಿಳಿಯುವ ವಸ್ತುವೂ), ಭವೇತ್—ಆಗಿರುತ್ತಾನೆ (ಈ ವಿಧದ ಅನುಭವದಿಂದ ಕರ್ತೃ ಕರ್ಮಗಳೆರಡೂ ತಾವೇ ಆಗಿರಬಹುದೆಂದು ಸಿದ್ಧವಾಗುವುದನ್ನು ಅಪಲಾಪಮಾಡುವುದು—ತಿರಸ್ಕರಿಸುವುದು ಉಚಿತವಲ್ಲ).

---

ಸರ್ವಜ್ಞನಲ್ಲಿ ಅಜ್ಞಾನವೇ ದುರ್ಘಟವಾಗಿರುವಾಗ ಅದರ ದುರ್ಘಟತ್ವವೇ ಭೂಷಣವೆಂದು (ಶೋಭಿಸುವುದೆಂದು) ಹೇಳುವುದು ಸುಳ್ಳಿಗೆ ಮತ್ತೊಂದು ಸುಳ್ಳು ಸೇರಿಸಿದಂತೆ; ಭಿಕ್ಷುವಿಗೆ ಮಾಂಸಭಕ್ಷಣವೇ ನಿಷೇಧವಾಗಿರುವಾಗ ಮದ್ಯವಿಲ್ಲದೇ ಮಾಂಸವನ್ನು ಸೇವಿಸುವನೆಂದರೆ ಸಹಿಸುವನೇ ? ಇಲ್ಲ; ಹಾಗೆ ಬ್ರಹ್ಮನಲ್ಲಿ ಅಜ್ಞಾನವೆಂಬುದೇ ದೋಷವಾಗಿರುವಾಗ ಅದೇ ಭೂಷಣವೆನ್ನು ವುದು ಮತ್ತೊಂದು ಸುಳ್ಳನ್ನು ಹೊರಿಸಿದಂತಲ್ಲವೇ ? (೨೦೦). ನಾನು ನನ್ನನ್ನು ತಿಳಿಯುವುದಿಲ್ಲ ಮತ್ತು ನಾನು ನನ್ನನ್ನು ತಿಳಿಯುತ್ತೇನೆ, ಎಂಬೀ ಅನುಭವವು ಸರ್ವಾನುಭವಸಿದ್ಧವಾಗಿದೆ; ಹೀಗಿರಲು ಭಗವಂತನು ತನ್ನನ್ನು ತಾನು ತಿಳಿಯಲಾರನೆಂಬುದು ತೀರಾ ಅಯುಕ್ತವು; ಈಶ್ವರನ ಜ್ಞಾನವು,

**ಪರಸ್ಮಿನ್ಸಮವೇತಾ ಯಾ ಕ್ರಿಯಾ ತತ್ಫಲಶಾಲಿಯತ್ ।**
**ತತ್ಕರ್ಮೇತಿ ಹಿ ಭಾಟ್ಟೋಕ್ತಲಕ್ಷಣಾನುಪಪತ್ತಿತಃ ॥ ೨೦೨ ॥**
**ದೃಷ್ಟಾರ್ಥಸ್ಯ ಕಥಂ ತ್ಯಾಗೋ ವಕ್ತವ್ಯಂ ಲಕ್ಷಣಾಂತರಂ ।**
**ಕಿಂ ನು ಕಿಂಪುರುಷೋ ನಾಸ್ತಿ ಕಿಂನರೋ ವಾ ವಿಲಕ್ಷಣಃ ॥ ೨೦೩ ॥**

ಮೀಮಾಂಸಕನಾದ ಭಾಟ್ಟಮತೀಯನು ಹೇಳುವ ಕರ್ಮಲಕ್ಷಣವು ಕೂಡುವುದಿಲ್ಲವೆಂದು, ಕರ್ತೃ ಕರ್ಮ ಭಾವದ ವಿರೋಧದಿಂದ ಭಗವಂತನು ತನ್ನನ್ನು ತಾನು ತಿಳಿಯುವುದಿಲ್ಲವೆಂಬುದು ಯೋಗ್ಯವಲ್ಲವೆನ್ನುತ್ತಾರೆ :—

ಪರಸ್ಮಿನ್—ಬೇರೊಬ್ಬನಲ್ಲಿ, ಸಮವೇತಾ—ಕೂಡಿರುವ, ಯಾ ಕ್ರಿಯಾ—ಯಾವ ಕ್ರಿಯೆಯೋ (ಚಲನಾದಿ ಕ್ರಿಯೆಯೋ), ತತ್ಫಲಶಾಲಿ—ಅದರ ಫಲವುಳ್ಳದ್ದು (ತನ್ನಲ್ಲಿ ಆ ಫಲವು ತೋರುವುದು), ಯತ್—ಯಾವುದೋ, ತತ್—ಅದು, ಕರ್ಮ ಇತಿ—ಕರ್ಮವೆನಿಸುತ್ತದೆ ಎಂದು, ಭಾಟ್ಟೋಕ್ತಲಕ್ಷಣಾನುಪಪತ್ತಿತಃ—ಭಟ್ಟ ಶಾಸ್ತ್ರದಿಂದ ಹೇಳಲ್ಪಟ್ಟ ಕರ್ಮದ ಲಕ್ಷಣವು ಕೂಡುವುದಿಲ್ಲ

---

ಕರ್ತೃವೂ, ಕರ್ಮವೂ (ತಿಳಿಯಲ್ಪಡುವ ವಸ್ತುವೂ) ಆಗಿರುವನೆಂಬ ಅನುಭವ ಸಿದ್ಧವಾದ ಪ್ರಕ್ರಿಯೆಯನ್ನು ಅಪಲಾಪ ಮಾಡುವುದು ಸರ್ವಥಾ ಯೋಗ್ಯವೆನಿಸುವುದಿಲ್ಲ (೨೦೧). ಮೀಮಾಂಸಕ ಮತೀಯನ ಭಾಟ್ಟ ಶಾಸ್ತ್ರವು, ಒಬ್ಬನಲ್ಲಿರುವ (ಕರ್ತೃವಿನ) ಚಲನಾದಿ ಕ್ರಿಯೆಯ ಫಲವು ಅನ್ಯವಸ್ತುವಿನಲ್ಲಿ ತೋರುವುದಾದರೆ, ಆ ಅನ್ಯವಸ್ತುವೇ ಕರ್ಮವೆಂದು, ಕರ್ಮದ ಲಕ್ಷಣವನ್ನು ಹೇಳುತ್ತದೆ (ಕೊಡಲಿಯ ಚಲನಕ್ರಿಯೆಯು, ಕತ್ತರಿಸಲ್ಪಡುವ ಕಟ್ಟಿಗೆಯಲ್ಲಿ ತೋರುವಂತೆ ಕಾಣುವುದು ಕರ್ಮದ ಲಕ್ಷಣವು; ಎಂದರೆ ಕೊಡಲಿಯು ಕರ್ತೃ, ಕಟ್ಟಿಗೆಯು ಕರ್ಮ ಎಂಬಂತೆ); ಈ ಭಾಟ್ಟೋಕ್ತ ಕರ್ಮಲಕ್ಷಣವು ಅನುಪಪನ್ನವಾಗುವುದಿಲ್ಲ (ಸರಿಹೊಂದುವುದಿಲ್ಲ); ಅನುಭವಸಿದ್ಧವಾದುದನ್ನು ತ್ಯಜಿಸಲು ಬರುವುದಿಲ್ಲ—ಆದ್ದರಿಂದ ಭಾಟ್ಟನ ಕರ್ಮಲಕ್ಷಣವನ್ನೇ ಬದಲಿಸಿಕೊಳ್ಳಬೇಕಾಗುತ್ತದೆ (ಅಥವಾ ಬೇರೆ ಲಕ್ಷಣವನ್ನೇ ಹೇಳಬೇಕು); ದೇವಯೋನಿಯಲ್ಲಿ ಜನಿಸಿದ ಕಿಂಪುರುಷ ಮತ್ತು ಕಿನ್ನರರಿಗೆ ಕ್ರಮವಾಗಿ ಮನುಷ್ಯದೇಹವೂ, ಪಕ್ಷಿದೇಹವೂ ಇದ್ದರೂ ಉಭಯರಿಗೆ ಮನುಷ್ಯಮುಖವಿರುವುದರಿಂದ ಅವರನ್ನು ಮನುಷ್ಯರೆಂದು (ಮುಖಲಕ್ಷಣ ಮಾತ್ರದಿಂದ) ಹೇಳಲು

ವಾದ್ದರಿಂದ (ಹಿಂದಿನ ಶ್ಲೋಕದಲ್ಲಿ ಹೇಳಲಾದ, ನಾನು ನನ್ನನ್ನು ತಿಳಿಯು ತ್ತೇನೆ — ನಾನು ನನ್ನನ್ನು ತಿಳಿಯುವುದಿಲ್ಲವೆಂಬ ಉಭಯ ವಿಧವನ್ನು ಈ ಲಕ್ಷಣವು ವಿರೋಧಿಸುತ್ತದೆ) ಆದ್ದರಿಂದ, ದೃಷ್ಟಾರ್ಥಸ್ಯ–ಅನುಭವಸಿದ್ಧ ವಾದ ಅರ್ಥದ, ತ್ಯಾಗಃ–ತ್ಯಜಿಸುವಿಕೆಯು, ಕಥಂ–ಹೇಗೆ? (ಯುಕ್ತವಾಗು ತ್ತದೆ—ಆಗುವುದಿಲ್ಲ); ಲಕ್ಷಣಾಂತರಂ – ಬೇರೆ ಲಕ್ಷಣವು, ವಕ್ತವ್ಯಂ–ಹೇಳ ಲ್ಪಡಬೇಕು (ಭಾಟ್ಟನ ಲಕ್ಷಣವನ್ನೇ ಸರಿಪಡಿಸಿಕೊಳ್ಳುವುದು ಅವಶ್ಯಕವಾಗು ತ್ತದೆ) (ಹೀಗೆ ಮಾಡುವುದರ ಅವಶ್ಯಕತೆಯನ್ನು ದೃಷ್ಟಾಂತದಿಂದ ಸಮರ್ಥಿಸು ತ್ತಾರೆ); ಕಿಂಪುರುಷಃ–(ಕುದುರೆಯಂತೆ ಮುಖ, ಮನುಷ್ಯನಂತೆ ದೇಹವುಳ್ಳ) ಕಿಂಪುರುಷನೂ, ವಿಲಕ್ಷಣಃ – (ಹೀಗೆ) ವಿಲಕ್ಷಣನಾದ, ಕಿನ್ನರೋ ವಾ– (ಮನುಷ್ಯ ಮುಖ, ಪಕ್ಷಿಯಂತೆ ದೇಹವುಳ್ಳ) ಕಿಂನರೂ, ಕಿಂ ನು ನಾಸ್ತಿ– ಇಲ್ಲವೇನು? (ಇರುವರು—ಆದರೆ ದೇವಯೋನಿಯಲ್ಲಿ ಹುಟ್ಟಿದವರ ಲಕ್ಷಣ ವನ್ನು ಬೇರೆ ತಿಳಿಯಬೇಕಾಗುವುದಲ್ಲವೇ? ಮನುಷ್ಯ ಮುಖವಿದ್ದ ಮಾತ್ರಕ್ಕೆ ಮನುಷ್ಯರೆನ್ನಬಹುದೇ?) (ಭಗವಂತನ ಜ್ಞಾನರೂಪದ ಕ್ರಿಯಾಫಲವು— ಪರಿಣಾಮವು ತನ್ನ ಮೇಲೆ ಆಗದಿರುವ ಮಾತ್ರದಿಂದ ತನ್ನನ್ನು ತಾನು ತಿಳಿಯ ಲಾರನೆನ್ನಬಹುದೇ?).

**ಕರ್ಮತ್ವಸ್ಯಾನಿರುಕ್ತ್ಯಾ ಹಿ ದೃಶ್ಯಾಧ್ಯಾಸೋ ದೃಶೀರಿತಃ ।**
**ಪರೋಕ್ತಲಕ್ಷಣೇ ಭಕ್ತ್ಯಾ ತತ್ಕೃತೋಽಪ್ಯ ನಿರುಚ್ಯತೇ ॥ ೨೦೪ ॥**

ಕರ್ಮತ್ವಸ್ಯ–ಕರ್ಮಲಕ್ಷಣದ, ಅನಿರುಕ್ತ್ಯಾ–ಅಸ್ಪಷ್ಟ ನಿರೂಪಣೆಯಿಂದ (ಜ್ಞಾನಕ್ಕೆ ಜ್ಞೇಯದಿಂದ ವಿಷಯ ವಿಷಯೀ ಭಾವವು ಕೂಡುವುದಿಲ್ಲವೆಂಬುದ ರಿಂದ, ಭಾಟ್ಟ ಕರ್ಮಲಕ್ಷಣವನ್ನು ಅಂಗೀಕರಿಸದೇ ಬಿಟ್ಟು), ದೃಶಿ–(ಜ್ಞಾನಕ್ಕೆ ಅಧಿಷ್ಠಾನಭೂತನಾದ ಚೈತನ್ಯನಲ್ಲಿ) ಬ್ರಹ್ಮನಲ್ಲಿ, ದೃಶ್ಯಾಧ್ಯಾಸಃ–ಜಗತ್ತಿನ

---

ಬಾರದಂತೆ, ಭಾಟ್ಟಲಕ್ಷಣದಿಂದ ಕರ್ಮವನ್ನು ತಿಳಿಯಲು ಬಾರದು; ದೇವ ಯೋನಿಯ ಅನ್ಯಲಕ್ಷಣಗಳನ್ನು ಹುಡುಕುವಂತೆ, ಕರ್ಮಕ್ಕೆ ಅನ್ಯಲಕ್ಷಣವನ್ನು ತಿಳಿಯಬೇಕಾಗುತ್ತದೆ (೨೦೨–೨೦೩). ಭಾಟ್ಟಶಾಸ್ತ್ರದಲ್ಲಿ ಹೇಳಲಾದ ಕರ್ಮದ ಲಕ್ಷಣವನ್ನು ಅಂಗೀಕರಿಸದೇ ಅದ್ವೈತಶಾಸ್ತ್ರವು, ಬ್ರಹ್ಮನಿಗೆ ವಿಷಯ ಗಳಿಂದ ಸಂಬಂಧವನ್ನು (ಜ್ಞಾನಜ್ಞೇಯ ರೂಪ ಸಂಬಂಧವನ್ನು) ಹೇಳಲಿಕ್ಕೆ

(ಘಟಾದಿಗಳ) ಆರೋಪವು, ಈರಿತಃ ಹಿ–(ಅದ್ವೈತಶಾಸ್ತ್ರದಲ್ಲಿ) ಹೇಳಲಾಗು ವುದಷ್ಟೆ; ಅದ್ಯ–ಈಗ, ತತ್–ಕರ್ಮಲಕ್ಷಣವಿಷಯವು, ಪರೋಕ್ತಲಕ್ಷಣೇ–ಭಾಟ್ಟೋಕ್ತ ಕರ್ಮಲಕ್ಷಣದಲ್ಲಿ, ಭಕ್ತ್ಯಾ–ವಿಶ್ವಾಸದಿಂದ (ಅಭಿಮಾನದಿಂದ), ಕುತಃ – ಏಕೆ (ಏನು ಕಾರಣ), ನಿರುಚ್ಯತೇ – ವಿಮರ್ಶಿಸಲ್ಪಡುತ್ತದೆ? (ಪೂರ್ವೋತ್ತರ ವಿರೋಧ ಬರುವುದಿಲ್ಲವೇ ?).

**ಅಂತ್ಯಶ್ಚರಣಸಂಯೋಗೋ ಗ್ರಾಮೇಣ ಸಹ ಯೋ ಭವೇತ್ ।**
**ನ ತತ್ಫಲಮನುದ್ದೇಶಾತ್ ಕ್ರಿಯಾಯಾ ಬಹುದೂರತಃ ॥ ೨೦೫ ॥**

ಈಗ ಭಾಟ್ಟೋಕ್ತ ಕರ್ಮಲಕ್ಷಣಗಳ ದೋಷವನ್ನು ತೋರಿಸುತ್ತಾರೆ:

ಗ್ರಾಮೇಣ ಸಹ–(ಒಂದು ಗ್ರಾಮಕ್ಕೆ ಹೊರಟಿರುವ. ಕರ್ತನ ಗಮನ ರೂಪ ಕ್ರಿಯಾಫಲವು) ಗ್ರಾಮದೊಡನೆ, ಯಃ – ಯಾವ, ಅಂತಃ ಚರಣ ಸಂಯೋಗಃ–ಕಡೆಯ ಹೆಜ್ಜೆಯ ಸಂಬಂಧವು, ಭವೇತ್–ಉಂಟಾಗುವುದೋ, ತತ್–ಅದು, ಫಲಂ–ಗಮನಕ್ರಿಯಾ) ಫಲವನ್ನಾಗಿ, ಅನುದ್ದೇಶಾತ್–ಉದ್ದೇಶಿತ ವಲ್ಲವಾದ್ದರಿಂದ, (ಒಂದು ವೇಳೆ ಗ್ರಾಮವನ್ನು ಮುಟ್ಟುವುದೇ ಗಮನ ಕ್ರಿಯೆಯ ಫಲವೆಂದು ಭಾವಿಸಿದರೂ ಕಡೆಯ ಹೆಜ್ಜೆಯನ್ನು ಮೆಟ್ಟುವು ದೆಂಬುದು ಕರ್ತನಾದ ಪುರುಷನಲ್ಲಿಯೂ ಇದೆ—ಗ್ರಾಮದಲ್ಲಿ ಮಾತ್ರವಲ್ಲ;

---

ಬರುವುದಿಲ್ಲವೆಂದೇ, ಬ್ರಹ್ಮನಲ್ಲಿ ಜಗತ್ತು (ವಿಷಯಗಳು) ಆರೋಪಿತವೆಂದು ಕಲ್ಪಿಸುತ್ತದೆ; ಈಗ ಪುನಃ ಭಾಟ್ಟ ಕರ್ಮಲಕ್ಷಣವನ್ನೇ ಆಶ್ರಯಿಸಿ ಕರ್ತೃ ಕರ್ಮ ಭಾವವನ್ನು ನಿಷೇಧಿಸುತ್ತ, ಬ್ರಹ್ಮನು ತಾನೇ ತನ್ನನ್ನು ತಿಳಿಯಲಾರ ನೆಂದು ಸಾಧಿಸಲು ಹೊರಟಿರುವಿ; ಇದು ಪೂರ್ವಾಪರ ವಿರೋಧವಲ್ಲವೇ ? (೨೦೪). ಭಾಟ್ಟೋಕ್ತ ಕರ್ಮಲಕ್ಷಣವೇ ದೋಷಯುಕ್ತವೆಂದೂ ಕಂಡು ಬರುತ್ತದೆ; ಒಬ್ಬ ಪುರುಷನು ಯಾವುದೊಂದು ಗ್ರಾಮಕ್ಕೆ ಹೊರಟಿರುವನೆಂದು ತಿಳಿಯುವಾ; ಆತನ ಗಮನಕ್ರಿಯೆಯ (ನಡೆಯುವ ವ್ಯಾಪಾರದ) ಫಲವು ಗ್ರಾಮದೊಳಗೆ ಕಡೆಯ ಹೆಜ್ಜೆಯನ್ನಿಡಲು, ಅಲ್ಲಿರುವುದೆಂದು ಆ ಹೆಜ್ಜೆ ಇಡು ವುದನ್ನೇ, ಕ್ರಿಯಾಫಲ ಸಮೇತವಾದುದರಿಂದ ಕರ್ಮವೆನ್ನಲಾದೀತೇ? (ಇಲ್ಲ–ಗಮನಕ್ರಿಯೆಯ ಉದ್ದೇಶವು ಗ್ರಾಮವನ್ನು ಮುಟ್ಟುವುದು ಮಾತ್ರವಲ್ಲ; ಅಲ್ಲಿ ಧನಾದಿ ವಸ್ತು ಪ್ರಾಪ್ತಿ ಮುಂತಾದುದು ಗಮನಕ್ರಿಯೆಯ ಫಲವು (೨೦೫).

ಈ ರೂಪದ ಅತಿವ್ಯಾಪ್ತಿ ಪರಿಹಾರಕ್ಕಾಗಿಯೇ ಲಕ್ಷಣ ನಿರೂಪಣವಾಕ್ಯದಲ್ಲಿ 'ಪರಸಮವೇತ' ಎಂಬ ಶಬ್ದವೂ ಇದೆ); ಕ್ರಿಯಾಯಾಃ–ಗಮನಕ್ರಿಯೆಗೆ, ಬಹುದೂರತಃ–ಬಹುದೂರವಾದ್ದರಿಂದ, ನ–ಫಲವಲ್ಲ (ಗ್ರಾಮವನ್ನು ಸೇರುವುದರಲ್ಲಿ ಅನ್ಯ ಧನಾದಿಗಳನ್ನು ಹೊಂದುವ ಮುಂತಾದ ಫಲವಿರುತ್ತದೆ).

**ಗ್ರಾಮಂ ಪದಾ ಸ್ಪೃಷ್ಟುಮೇವ ನ ಹಿ ಕೋಽಪಿ ವ್ರಜೇತ್ ಪುಮಾನ್ ।**
**ಗ್ರಾಮಸ್ಥಧನಪೂರ್ವಾರ್ಥಪ್ರಾಪ್ತಿರೇವ ಪ್ರಯೋಜನಂ ॥ ೨೦೬ ॥**

ಅದನ್ನೇ ಸ್ಪಷ್ಟಗೊಳಿಸುತ್ತಾರೆ :—

ಗ್ರಾಮಂ–ಗ್ರಾಮವನ್ನು, ಪದಾ–ಕಾಲಿನಿಂದ (ಪಾದದಿಂದ), ಸ್ಪೃಷ್ಟುಂ ಏವ – ಸ್ಪರ್ಶಿಸಲು ಮಾತ್ರ, ಕಃ ಅಪಿ ಪುಮಾನ್ – ಯಾವ ಮನುಷ್ಯನೂ, ನ ವ್ರಜೇತ್ ಹಿ – ಹೋಗುವುದಿಲ್ಲವಷ್ಟೆ (ಬಹು ಶ್ರಮಸಾಧ್ಯವಾದ ಗಮನ ಕ್ರಿಯೆಗೆ ಗ್ರಾಮವನ್ನು ಪಾದದಿಂದ ಮುಟ್ಟುವುದೇ ಯಾರ ಉದ್ದೇಶ್ಯವೂ ಇರುವುದಿಲ್ಲ) ; ಗ್ರಾಮಸ್ಥಧನಪೂರ್ವಾರ್ಥಪ್ರಾಪ್ತಿಃ ಏವ – ಗ್ರಾಮದಲ್ಲಿರುವ ಧನಾದಿ ಪ್ರಯೋಜನ ಪ್ರಾಪ್ತಿಯೇ, ಪ್ರಯೋಜನಂ – ಫಲವಾಗಿರುತ್ತದೆ (ಆದ್ದರಿಂದ ಕ್ರಿಯಾಫಲವುಳ್ಳವನೆಂಬುದು ಕರ್ತನಿಗೇ ಸಲ್ಲುತ್ತದೆ–ಕರ್ಮಕ್ಕಲ್ಲ–ಹೀಗಿರಲು ಇದು ಕರ್ಮಲಕ್ಷಣವು ಹೇಗಾಗಬಲ್ಲದು; ಫಲವು ಉದ್ದೇಶಿತವಲ್ಲದೇ ಬಹು ದೂರದ ಸಂಬಂಧವಿರುವುದರಂದ ಲಕ್ಷಣವು ಅತಿವ್ಯಾಪ್ತವಾಗುತ್ತದೆ; ಆದ್ದರಿಂದಲೇ 'ಪರಸಮವೇತ ಕ್ರಿಯಾಫಲಶಾಲಿ' ಎಂದಿರುವರು).

**ನ ಚೇತ್ಪದೇ ಪದೇ ಪುಂಸಃ ಕ್ರಿಯಾಯಾ ಸ್ಯಾದ್ವಿಭಾಗವಾನ್ ।**
**ಪೂರ್ವಃ ಪ್ರದೇಶಃ ಸಂಯೋಗಶಾಲೀ ಸ್ಯಾದುತ್ತರೋಽಪಿ ಚ ॥ ೨೦೭॥**

---

ಕೇವಲ ತನ್ನ ಪಾದದಿಂದ ಗ್ರಾಮವನ್ನು ಸ್ಪರ್ಶಿಸಲಿಕ್ಕಾಗಿ ಯಾರೂ ಹೋಗುವುದಿಲ್ಲ; ಧನಾದಿ ವಸ್ತುಪ್ರಾಪ್ತಿಯೇ ಫಲವಲ್ಲವೇ ? ಆದ್ದರಿಂದ ಗಮನಕ್ರಿಯಾ ಫಲವುಳ್ಳವನು ಕರ್ತನಿಗೇ ಸಲ್ಲುತ್ತದೆಯಲ್ಲದೇ ಕರ್ಮಕ್ಕಲ್ಲ (೨೦೬). ಗಮನ ಕ್ರಿಯಾಜನ್ಯ ಪಾದಸಂಯೋಗವೇ (ಹೆಜ್ಜೆಯ ಸಂಬಂಧವನ್ನು ಹೊಂದುವುದೇ) ಕ್ರಿಯಾಫಲವೆಂದು ತಿಳಿಯುವುದಾದರೆ, ನಡೆದು ಹೋಗುವುದರಲ್ಲಿ ಇಡುವ ಪ್ರತಿ ಹೆಜ್ಜೆಯ ಸಂಯೋಗವುಳ್ಳ ಭೂಭಾಗಗಳೆಲ್ಲವೂ ಕರ್ಮಲಕ್ಷಣವುಳ್ಳವಾಗಿ, ನಡೆದುಬಂದ ಪೂರಾ ಮಾರ್ಗವನ್ನು ಕರ್ಮವೆನ್ನಬೇಕಾದೀತು ; ಆದರೆ

ಗ್ರಾಮವನ್ನು ಸೇರುವ ಉದ್ದೇಶವು ಬೇರೆ ಇದ್ದರೂ ಗಮನಕ್ರಿಯಾಜನ್ಯತ್ವವುಳ್ಳ ಪದಸಂಯೋಗವೇ ಕ್ರಿಯಾಫಲವಾಗಲಿ ಎಂದರೆ ಹೇಳುತ್ತಾರೆ:

ನ ಚೇತ್—ಧನಾದಿ ಪ್ರಾಪ್ತಿಯೇ ಉದ್ದೇಶಿಸಿದ ಫಲವಲ್ಲದಿದ್ದರೆ, ಪುಂಸಃ—ಪುರುಷನ, ಕ್ರಿಯಾಯಾಃ—ಗಮನಕ್ರಿಯೆಗೆ, ಪದೇ ಪದೇ – ಪ್ರತಿಯೊಂದು ಹೆಜ್ಜೆಯಲ್ಲಿ, ವಿಭಾಗವಾನ್ – ಫಲವಿಭಾಗದ ಸಂಬಂಧವುಳ್ಳದ್ದು, ಸ್ಯಾತ್—ಆಗಲಿ (ಆಗಬೇಕಾಗುತ್ತದೆ) ; ಪೂರ್ವಃ ಪ್ರದೇಶಃ – ಮೊದಲು ನಡೆದುಬಂದ ಭೂಪ್ರದೇಶವು (ಭೂಭಾಗವು), ಉತ್ತರಃ ಅಪಿ ಚ – ಉತ್ತರ (ಮುಂದಿನ ಭೂಭಾಗವೂ ಸಹ, ಸಂಯೋಗಶಾಲೀ – ಗಮನಕ್ರಿಯೆಯ ಫಲವುಳ್ಳದ್ದೇ, ಸ್ಯಾತ್—ಆಗಲಿ (ಕ್ರಿಯೆಯಿಂದುಂಟಾದ ಫಲವುಳ್ಳ ಪದಾರ್ಥವೇ ಕರ್ಮವೆಂದು ಲಕ್ಷಣವನ್ನು ಹೇಳಿರುವುದರಿಂದ, ಗಮನಕ್ರಿಯೆಯ ಫಲವು ಮೊದಲು ಮತ್ತು ನಂತರ ನಡೆದುಬಂದ ಪ್ರತಿಹೆಜ್ಜೆಯ ಭೂಭಾಗಕ್ಕೂ ಇರುತ್ತದೆಂದಾಗುತ್ತದೆ— ನಡೆದ ದಾರಿಯನ್ನೆಲ್ಲಾ ಕರ್ಮವೆನ್ನಬೇಕಾದೀತು—ಇದು ಅನುಭವವಿರುದ್ಧವು.

**ತ್ವದುಕ್ತಲಕ್ಷಣೇನ ಸ್ಯಾದ್ವಿಷಯತ್ವಂ ತಯೋರಪಿ ।**
**ಅತಃ ಸ್ವರೂಪಸಂಬಂಧವಿಶೇಷಃ ಸ ಹಿ ಕಶ್ಚನ ॥ ೨೦೮ ॥**

ತ್ವದುಕ್ತಲಕ್ಷಣೇನ – ನೀನು ಹೇಳಿದ ಕರ್ಮ (ವಿಷಯದ—ವಸ್ತುವಿನ) ಲಕ್ಷಣದಿಂದ, ತಯೋಃ ಅಪಿ—ಪೂರ್ವೋತ್ತರ (ಮೊದಲಿನ ಮತ್ತು ನಂತರದ) ಭೂಭಾಗಗಳಿಗೂ, ವಿಷಯತ್ವಂ – ಕರ್ಮತ್ವವು, ಸ್ಯಾತ್ – ಉಂಟಾಗಲಿ (ಉದ್ದೇಶಿತ ಫಲವಲ್ಲದ್ದರಿಂದ ಈ ಪ್ರದೇಶಗಳಿಗೆ ಫಲಸಂಯೋಗವಿಲ್ಲವೆಂದರೆ, ಕೊನೆಯ ಹೆಜ್ಜೆಗೂ [ಗ್ರಾಮದಲ್ಲಿ ಕಾಲಿಡುವ ಹೆಜ್ಜೆಗೂ] ಫಲಸಂಬಂಧವಿಲ್ಲದೇ ಹೋಗಲಿ) ; ಅತಃ—ಈ ಕಾರಣದಿಂದ (ಉಕ್ತಲಕ್ಷಣವು ಅನ್ಯತ್ರವಿಲ್ಲ

---

ಅನುಭವವು ವಿರುದ್ಧವಾಗಿದೆ (೨೦೭). ಎಲ್ಲ ಹೆಜ್ಜೆಗಳ ಭೂಪ್ರದೇಶಗಳಿಗೂ ಕರ್ಮತ್ವವು ಯುಕ್ತವಲ್ಲವೆಂದರೆ ಗ್ರಾಮವನ್ನು ಮುಟ್ಟಿಸುವ ಹೆಜ್ಜೆಯ ಭಾಗಕ್ಕೂ (ಗಮನಕ್ರಿಯಾಫಲ ಸಂಬಂಧವಿಲ್ಲದೇ) ಕರ್ಮತ್ವವಿಲ್ಲೆಂದೇ ಪ್ರಾಪ್ತವಾಗಲಿ; ಹೀಗೆ ಭಾಟ್ಟೋಕ್ತ ಲಕ್ಷಣಕ್ಕೆ ಎಲ್ಲ ಎಲ್ಲ ಹೆಜ್ಜೆಗಳ ಭೂಭಾಗಗಳಿಗೂ ಅನ್ವಯಿಸುವುದೆಂಬ ಅತಿವ್ಯಾಪ್ತಿಯೂ ಅಥವಾ ಕೊನೆಯ ಪಾದ ಭೂಮಿಗೆ ಮಾತ್ರ ಅನ್ವಯಿಸುವುದೆಂಬ ಅವ್ಯಾಪ್ತಿಯೂ ಉಂಟಾಗುವುದರಿಂದ

ದಿರುವುದರಿಂದ ಅಥವಾ ಎಲ್ಲ ಕಡೆ ಇರುವುದರಿಂದ—ಅವ್ಯಾಪ್ತಿ, ಅತಿವ್ಯಾಪ್ತಿಗಳು ಬರುವುದರಿಂದ), ಸಃ—ಆ ವಿಷಯ ವಿಷಯಿ ಭಾವಸಂಬಂಧವು, ಕಶ್ಚನ ಸ್ವರೂಪಸಂಬಂಧವಿಶೇಷಃ—(ಒಂದು ಪ್ರಕಾರದ) ಸ್ವರೂಪಸಂಬಂಧವಿಶೇಷವೇ (ಇರಬೇಕು) ; ಹಿ—ಇದು ಸ್ಪಷ್ಟವೇ ಆಗಿದೆ (ಒಂದು ವಸ್ತು ಜ್ಞಾನವಾದಾಗ, ಜ್ಞಾನದ ಕ್ರಿಯಾಫಲವೆಂದರೆ ಆ ವಸ್ತುವನ್ನು ಶಬ್ದಗಳಿಂದ ನಿರೂಪಿಸುವುದು—ಇದೇ ಜ್ಞಾತೃವಿನಲ್ಲಿಯೇ ಇರುತ್ತದೆ ; ವಸ್ತು (ವಿಷಯ ಅಥವಾ ಕರ್ಮದಲ್ಲಿ ಇರುವುದಿಲ್ಲವಷ್ಟೆ (ಆದ್ದರಿಂದ ಕ್ರಿಯಾಫಲಸಂಬಂಬಂಧವಿರುವುದೇ ಕರ್ಮಲಕ್ಷಣವೆಂಬುದು ಯುಕ್ತವಲ್ಲ).

**ಇತ್ಯೇವ ಸರ್ವಥಾ ವಾಚ್ಯಂ ನ ಚೇತ್ ಜ್ಞಾನಕ್ರಿಯಾಫಲಂ ।**
**ಅರ್ಥಾಭಿಲಪನಂ ಪುಂಸಿ ತಚ್ಛಾಲಿತ್ವಂ ಕಥಂ ಘಟೇ ॥ ೨೦೯ ॥**

ಉಕ್ತವಿಷಯವನ್ನು ವಿವರಿಸಿ ವಿಶದಗೊಳಿಸುತ್ತಾರೆ :—

ಇತ್ಯೇವ—ಸ್ವರೂಪಸಂಬಂಧವಿಶೇಷವನ್ನೇ (ಕರ್ತೃಕರ್ಮಗಳಲ್ಲಿ) ತಿಳಿಯಬೇಕೆಂದೇ, ಸರ್ವಥಾ ವಾಚ್ಯಂ—ಹೇಗಾದರೂ ಹೇಳಲೇಬೇಕು ; ನ ಚೇತ್—ಹಾಗಲ್ಲದಿದ್ದರೆ, ಜ್ಞಾನಕ್ರಿಯಾಫಲಂ—ಒಂದು ವಸ್ತುವನ್ನು ತಿಳಿಯುವುದೆಂಬ ಕ್ರಿಯೆಯ ಫಲವು, ಅರ್ಥಾಭಿಲಪನಂ—ಆ ವಸ್ತುವನ್ನು ಹೇಳುವುದೆಂಬ ಶಬ್ದ ಪ್ರಯೋಗರೂಪವಾದುದು, ಪುಂಸಿ—ಪುರುಷನಲ್ಲಿ (ಇರುತ್ತದೆ). ಘಟೇ—(ತಿಳಿಯಲ್ಪಟ್ಟ) ಘಟದಲ್ಲಿ, ತಚ್ಛಾಲಿತ್ವಂ—ಜ್ಞಾನಕ್ರಿಯೆಯ ಫಲವಾದ 'ಘಟ'ವೆಂಬ ಶಬ್ದಪ್ರಯೋಗವುಳ್ಳದ್ದೆಂಬುದುದು, ಕಥಂ—ಹೇಗೆ ? (ಕ್ರಿಯಾಫಲಶಾಲಿತ್ವಲಕ್ಷಣವು ಘಟದಲ್ಲಿಲ್ಲವಷ್ಟೆ) (ಆದ್ದರಿಂದ ಸ್ವರೂಪಸಂಬಂಧವಿಶೇಷ

---

ವಿಷಯ ವಿಷಯಿ ಭಾವಸಂಬಂಧವು ಒಂದು ವಿಧದ ಸ್ವರೂಪ ವಿಶೇಷಯುಕ್ತವಾಗಿರಬೇಕೆಂದು ತಿಳಿಯಬೇಕು (೨೦೮). ಒಂದು ವಸ್ತುವಿನ ಜ್ಞಾನವಾದಾಗ ಆ ಜ್ಞಾನರೂಪದ ಕ್ರಿಯಾಫಲವೆಂದರೆ, ತಿಳಿದ ವಸ್ತುವನ್ನು ಶಬ್ದಗಳಿಂದ ಹೇಳುವುದು; ಈ ಕ್ರಿಯಾಫಲಸಂಬಂಧವುಳ್ಳವನು ಜ್ಞಾತೃವೇ ಆದನಲ್ಲದೇ, ವಿಷಯ (ಕರ್ಮವಲ್ಲ) ತಿಳಿದ ವಸ್ತುವನ್ನು ಶಬ್ದಗಳಿಂದ ಹೇಳುವವನು ಪುರುಷನು; ವಸ್ತುಜ್ಞಾನವೆಂಬ ಕ್ರಿಯೆಯ ಫಲವಾದ ಈ ನಿರೂಪಣೆಯು, ತಿಳಿದ ಪುರುಷನಲ್ಲಿದೆ, ವಸ್ತುವಿನಲ್ಲಿ ಅಲ್ಲವೆಂಬುದು ಸ್ಪಷ್ಟವಿದೆ;

ವಿರುವಿಕೆಯೇ ವಿಷಯತ್ವದ (ಕರ್ಮದ) ಲಕ್ಷಣವೆಂದು ಅಂಗೀಕರಿಸಬೇಕು; ಅದು ಕರ್ತೃವಿನ ಕ್ರಿಯಾಸ್ವರೂಪದಲ್ಲಿ ಕೂಡುತ್ತದೆ; ಆದ್ದರಿಂದ ಜ್ಞಾನಕ್ಕೆ ಸ್ವಕರ್ಮಕತ್ವವು [ತನ್ನನ್ನೇ ತಾನು ತಿಳಿಯುವುದೆಂಬುದು] ಯುಕ್ತವೇ ಆಗುತ್ತದೆ).

**ಅತೀತಾನಾಗತೇ ಭಾವಾನ್ನಾರ್ಥಸ್ಥಾ ಜ್ಞಾತತಾಫಲಂ ।**
**ಜ್ಞಾನಸ್ಯ ವಿಷಯತ್ವಂ ತಜ್ಜ್ಞಾತತಾಸ್ಯಾನ್ನ ಚಾಪರಾ ॥ ೨೧೦ ॥**

ಜ್ಞಾನದ ಕ್ರಿಯಾ (ವ್ಯಾಪಾರದ) ಫಲವು ತಿಳಿಯುವುದೆಂಬ ಒಂದು (ಜ್ಞಾತತಾ) ಧರ್ಮರೂಪವಾದುದು; ಈ ಧರ್ಮವು ವಿಷಯದಲ್ಲಿ (ಘಟದಲ್ಲಿ) ರುವುದರಿಂದ ಲಕ್ಷಣವು ಅವ್ಯಾಪ್ತವಾಯಿತೆಂದು ತಿಳಿಯುವುದು ಸರಿಯಲ್ಲ; ಎಂದರೆ ಹೇಳುತ್ತಾರೆ:—

ಅತೀತಾನಾಗತೇ—ಭೂತ ಭವಿಷ್ಯಕಾಲದ ವಸ್ತುವಿನಲ್ಲಿ, ಅಭಾವಾತ್— (ಜ್ಞಾತತಾ—ತಿಳಿಯುವುದೆಂಬ ಧರ್ಮವು) ಇಲ್ಲದಿರುವುದರಿಂದ, ಜ್ಞಾತತಾಫಲಂ ಈ ಜ್ಞಾನಧರ್ಮವೆಂಬ ಫಲವು, ನ ಅರ್ಥಸ್ಥಾ—ವಿಷಯದಲ್ಲಿ (ತಿಳಿಯಲ್ಪಡುವ ವಸ್ತುವಿನಲ್ಲಿ) ಇರತಕ್ಕದ್ದಲ್ಲ (ಭೂತಭವಿಷ್ಯತ್ಕಾಲಗಳ ವಸ್ತುವನ್ನು ತಿಳಿಯುವ ಕ್ರಿಯೆಯಲ್ಲಿ ಜ್ಞಾನವು ತೊಡಗಿದಾಗ ಆ ವಸ್ತುಗಳೇ ಇರುವುದಿಲ್ಲ; ಆದ್ದರಿಂದ

---

ಘಟಾದಿ ವಸ್ತುವಿನಲ್ಲಿ ಹೇಗೆ ಬರುತ್ತದೆ? ಅದನ್ನು ಈ ಕರ್ಮಲಕ್ಷಣದಿಂದ ಗುರ್ತಿಸಲು ಬಂದೀತೇ? (೨೦೯). ಜ್ಞಾನವಿಷಯತ್ವವೆಂಬ ಲಕ್ಷಣವು ಘಟಾದಿ ವಸ್ತುವಿನಲ್ಲಿರುವುದೆಂಬುದು ಯುಕ್ತವಲ್ಲ; ಜ್ಞಾನರೂಪವಾದ ಕ್ರಿಯಾ ಫಲವು ಒಂದು ಸ್ವರೂಪಸಂಬಂಧವಿಶೇಷವೇ ಆಗಿರುವುದೆಂದು, ಈ ಹಿಂದೆ ಹೇಳಲಾಯಿತಷ್ಟೆ; ಆ ಸಂಬಂಧ ವಿಶೇಷವು ಶಬ್ದಪ್ರಯೋಗರೂಪದಿಂದಿದ್ದು, ಕರ್ತೃವಿನ (ಜ್ಞಾತೃವಿನ) ಲ್ಲಿಯೇ ಇರುವುದರಿಂದ, 'ಕ್ರಿಯಾಜನ್ಯ ಫಲಶಾಲಿ' ಎಂಬುದು ಕರ್ಮಲಕ್ಷಣವೆನ್ನಲು ಬರುವುದಿಲ್ಲ; ತಿಳಿಯಲ್ಪಡುವುದೆಂಬ ಧರ್ಮವು (ಜ್ಞಾತೃತ್ವವು) ಜ್ಞಾನದಲ್ಲಿರುವುದಲ್ಲದೇ, ತಿಳಿಯಲ್ಪಟ್ಟ ವಸ್ತುವಿನಲ್ಲಿ ಅಲ್ಲವೆಂಬುದೂ ಸ್ಪಷ್ಟವಿದೆ; ಹಾಗೆ ವಸ್ತುಗತವಾಗಿರುವುದಾದರೆ, ಭೂತ ಭವಿಷ್ಯತ್ಕಾಲದ ವಸ್ತುವನ್ನು ಗ್ರಹಿಸಿದಾಗ, ಜ್ಞಾತೃತ್ವವೆಂಬ ಜ್ಞಾನಕ್ರಿಯಾ ಫಲವು, ಆ ವಸ್ತುಗಳಲ್ಲಿ ಬರುವುದಿಲ್ಲವೆಂಬುದು ಸ್ಪಷ್ಟವಲ್ಲವೇ? (೨೧೦).

ಜ್ಞಾನಕ್ರಿಯಾಫಲವಾದ ಅದರ ಧರ್ಮವಿಶೇಷವು ವಿಷಯದಲ್ಲಿರುವುದು ಶಕ್ಯವಲ್ಲ); ತತ್ – ಆದ್ದರಿಂದ, ಜ್ಞಾತತಾ – ಜ್ಞಾತತ್ವ ಧರ್ಮವು, ಜ್ಞಾನಸ್ಯ– ಜ್ಞಾನದ, ವಿಷಯತ್ವಂ – ವಿಷಯವು, ಸ್ಯಾತ್–ಆಗುತ್ತದೆ; ನ ಚ ಅಪರಾ– ಬೇರೆಯಲ್ಲ (ತಿಳಿಯುವುದೆಂಬ ಧರ್ಮವು ಜ್ಞಾನಗತವಲ್ಲದೇ ವಸ್ತುಗತವಲ್ಲ).

**ಸಾ ಚ ನಾತ್ಮಾಶ್ರಯಾತ್ಕರ್ಮಲಕ್ಷಣಾಂತರ್ಗತಾ ಭವೇತ್ ।**
**ಕ್ಷುದ್ರರಜ್ಜೋರಭಾವೇನ ಲಬ್ಧಾ ಗೌಃ ಕಿಂ ವಿಸೃಜ್ಯತೇ ॥ ೨೧೧ ॥**

ಸಾ ಚ–ಆ ಜ್ಞಾತತೆಯಾದರೋ, ಕರ್ಮಲಕ್ಷಣಾಂತರ್ಗತಾ–ಕರ್ಮದ (ವಿಷಯದ) ಲಕ್ಷಣದಲ್ಲಿ ಸೇರಿದುದು, ಭವೇತ್–ಆಗುತ್ತದೆ; ಆತ್ಮಾಶ್ರಯತ್ವಾತ್–(ಜ್ಞಾನವಿಷಯತ್ವವೆಂಬುದು ಜ್ಞಾನಧರ್ಮವೇ ಆದ್ದರಿಂದ) ತನ್ನಲ್ಲಿ ತಾನೇ ಇರುವುದೆಂಬ ಕಾರಣದಿಂದಲೂ, ನ–ಕರ್ಮಲಕ್ಷಣದಲ್ಲಿ ಸೇರುವುದಿಲ್ಲವೆಂದಲ್ಲ (ಸೇರುತ್ತದೆ); (ಲಕ್ಷಣವನ್ನು ಕೂಡಿಸುವುದು ಕಷ್ಟವೆಂಬ ಕಾರಣದಿಂದ ಅನುಭವಸಿದ್ಧವಾದ ಅರ್ಥವನ್ನು ತ್ಯಜಿಸುವುದು ಯೋಗ್ಯವಲ್ಲವೆನ್ನುತ್ತಾ, ದೃಷ್ಟಾಂತವನ್ನು ಹೇಳುತ್ತಾರೆ); ಕ್ಷುದ್ರರಜ್ಜೋಃ – ಅಲ್ಪವಾದ ಹಗ್ಗದ ತುಂಡಿನ, ಅಭಾವೇನ – ಅಭಾವದಿಂದ (ದೊರೆಯದಿದ್ದ ಕಾರಣದಿಂದ), ಲಬ್ಧಾ ಗೌಃ – ದೊರೆತ (ದಾನವಾಗಿ ಬಂದ) ಹಸುವು, ವಿಸೃಜ್ಯತೇ ಕಿಂ– ತ್ಯಜಿಸಲ್ಪಡುವುದೇ ?–ಉಪಹಾಸವೆಂದು ತಿಳಿಯಬೇಕು) (ಬಂಧಕ ಹಗ್ಗದ ತುಂಡು ದೊರೆಯದಿದ್ದರೆ, ಹೊದ್ದ ವಸ್ತ್ರವನ್ನಾದರೂ ಬಿಗಿದು ತೆಗೆದೊಯ್ಯುವಂತೆ, ಅನುಭವವಿರುದ್ಧವಾಗಿ ಲಕ್ಷಣವು ಕೂಡುವುದಿಲ್ಲವೆಂದು, ಜ್ಞಾನವು ತನಗೆ ತಾನೇ ವಿಷಯವಾಗಬಹುದೆಂಬುದನ್ನು ತ್ಯಜಿಸದೇ ಅಂಗೀಕರಿಸಬೇಕು).

---

ಆದರೂ ಭಾಟ್ಟೋಕ್ತ ಕರ್ಮಲಕ್ಷಣದಲ್ಲಿ ಅದೂ ಅಂತರ್ಗತವಾಗುತ್ತದೆ; ಕರ್ಮಲಕ್ಷಣವನ್ನು ಕೂಡಿಸುವುದು (ಹೊಂದಿಸುವುದು) ಕಷ್ಟವೆಂಬ ಕಾರಣದಿಂದ, ಅನುಭವಸಿದ್ಧವಾದುದನ್ನು ತ್ಯಾಗಮಾಡುವುದು ಉಚಿತವಲ್ಲ; ದಾನವಾಗಿ ಬಂದ ಹಸುವನ್ನು, ಬಂಧನಕ್ಕೆ ಬೇಕಾದ ಸಣ್ಣ ಹಗ್ಗದ ತುಂಡು ದೊರೆಯಲಿಲ್ಲವೆಂದು ತ್ಯಜಿಸುವುದೇ ? ಹೊದ್ದ ವಸ್ತ್ರದಿಂದಾದರೂ ಕಟ್ಟಿಕೊಂಡು ತೆಗೆದುಕೊಂಡು ಹೋಗಬೇಕಲ್ಲವೇ ? ಹೀಗೆ, ಜ್ಞಾನವು ತನಗೆ ತಾನೇ ವಿಷಯವಾಗಬಹುದೆಂಬುದನ್ನು ತ್ಯಜಿಸದೇ ಅಂಗೀಕರಿಸುವುದೇ ಯೋಗ್ಯವು

**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ।**
**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಇತಿ ಗೀತಾ ವಿರೋಧಶ್ಚ ಸ್ವಾವೇದ್ಯತ್ವಮತೇ ಭವೇತ್ ॥ ೨೧೨ ॥**

ಗೀತಾವಾಕ್ಯದಿಂದ ಸಹ ಭಗವಂತನ ಸ್ವರೂಪಜ್ಞಾನಕ್ಕೆ ಸ್ವವಿಷಯಕತ್ವ ವನ್ನು ಉಪಪಾದಿಸುತ್ತಾರೆ :—

ಭಗವನ್—ಹೇ ಭಗವಂತನೇ ! ತೇ—ನಿನ್ನ, ವ್ಯಕ್ತಿಂ—ಮಹಿಮೆಯನ್ನು, ದೇವಾಃ—ದೇವತೆಗಳೂ, ದಾನವಾಃ—ದಾನವರೂ, ನ ವಿದುಃ ಹಿ—ತಿಳಿಯಲಾರ ರಷ್ಟೆ; ಪುರುಷೋತ್ತಮ—ಹೇ ಪುರುಷಶ್ರೇಷ್ಠ, ತ್ವಂ—ನೀನು, ಸ್ವಯಂ ಏವ—ತನಗೆ ತಾನೇ, ಆತ್ಮಾನಂ—ಸ್ವಸ್ವರೂಪವನ್ನು, ಆತ್ಮನಾ—ಸ್ವರೂಪಜ್ಞಾನದಿಂದ, ವೇತ್ಥ – ತಿಳಿಯುವಿ; ಇತಿ – ಹೀಗೆಂಬ, ಗೀತಾ ವಿರೋಧಃ ಚ – ಗೀತೆಯ ವಿರೋಧವೂ, ಸ್ವಾವೇದ್ಯತ್ವಮತೇ—ತನ್ನನ್ನು ತಾನು ತಿಳಿಯಲಾರನೆಂಬ ಮತ ದಲ್ಲಿ, ಭವೇತ್—ಉಂಟಾಗುತ್ತದೆ. (ಇಲ್ಲಿ ಸ್ವಯಂ ಏವ ಎಂಬುದರಿಂದ ತನಗೇ ಕರ್ತೃತ್ವವನ್ನೂ, ಆತ್ಮಾನಂ ಎಂಬುದರಿಂದ ತನಗೇ ಕರ್ಮತ್ವವನ್ನೂ ಆತ್ಮನಾ ಆತ್ಮಾನಂ ಎಂಬುದರಿಂದ, ಸ್ವರೂಪಭೂತವಾದ ಜ್ಞಾನಕ್ಕೆ ಸ್ವವಿಷಯತ್ವವೂ, ಹೇಳಲಾಗಿದೆ ಎಂಬುದು ಸ್ಪಷ್ಟವಿದೆ).

**ಯತೋಽತ್ರ ವಚನೈಃ ಸರ್ವೈಃ ಕರ್ತೃಕರ್ಮಕ್ರಿಯೈಕತಾ ।**
**ವಿಭಕ್ತೀನಾಂ ವಿಭಾಗೇನ ವ್ಯಕ್ತಮೇವ ಪ್ರದೃಶ್ಯತೇ ॥ ೨೧೩ ॥**

ಕರ್ತೃಕರ್ಮಕ್ರಿಯೈಕತಾ—ಕರ್ತೃ, ಕರ್ಮ ಮತ್ತು ಕ್ರಿಯೆಗಳ ಏಕತ್ವವು (ಕರ್ತನಿಗೆ ಕರ್ಮತ್ವ ಜ್ಞಾನ ಕ್ರಿಯಾ ವಿಷಯತ್ವವೂ), ಅತ್ರ—ಪೂರ್ವೋಕ್ತ

(೨೧೧). ಭಗವಂತನ ಸ್ವರೂಪಜ್ಞಾನವು, ಭಗವಂತನ ಸ್ವರೂಪವನ್ನು ತಾನೇ ತಿಳಿಯುವನೆಂದು ಶ್ರೀ ಭಗವದ್ಗೀತೆಯು ಹೇಳುತ್ತದೆ; ದೇವದಾನವರೂ ತಿಳಿಯಲಶಕ್ಯವಾದುದನ್ನು, ಭಗವಂತನ ಸ್ವರೂಪವು ಗ್ರಹಿಸುತ್ತದೆಯಲ್ಲವೇ ? ಹೇ, ಪುರುಷೋತ್ತಮ ! ನಿನ್ನ ಸ್ವರೂಪವನ್ನು, ನೀನೇ, ನಿನ್ನ ಜ್ಞಾನ ದಿಂದಲೇ ತಿಳಿಯುವಿ; ಎಂಬ ವಾಕ್ಯದ ವಿರೋಧವು, ತನ್ನನ್ನು ತಾನು ತಿಳಿಯಲಾರನೆಂಬ ಪ್ರಮೇಯವನ್ನು ಬಾಧಿಸುತ್ತದೆ (೨೧೨). ಪ್ರಥಮ, ದ್ವಿತೀಯ, ತೃತೀಯ ವಿಭಕ್ತಿಗಳಲ್ಲಿರುವ ಶಬ್ದಗಳಿಂದ, ಒಂದೇ ವಸ್ತುವಿಗೆ

ಗೀತಾವಾಕ್ಯದಲ್ಲಿ, ಯತಃ—ಯಾವ ಕಾರಣದಿಂದ, ಸರ್ವೈಃ ವಚನೈಃ—ಅಲ್ಲಿರುವ ಎಲ್ಲ ಶಬ್ದಗಳಿಂದ, ವಿಭಕ್ತೀನಾಂ – ವಿಭಕ್ತಿಗಳ, ವಿಭಾಗೇನ—ವಿಭಾಗದಿಂದ (ಪ್ರಥಮ ದ್ವಿತೀಯ ತೃತೀಯ ವಿಭಕ್ತಿಗಳಲ್ಲಿರುವ ಭಿನ್ನ ಪದ ನಿಷ್ಪವಾದ ಶಬ್ದ ಗಳಿಂದ),[1] ವ್ಯಕ್ತಂ ಏವ – ಸ್ಪಷ್ಟವಾಗಿಯೇ, ಪ್ರದೃಶ್ಯತೇ—(ಅದರಿಂದಲೇ) ತಿಳಿದುಬರುತ್ತದೆ.

**ಕಥಂ ಪುಂಕಲ್ಪನಾಮಾತ್ರಮೂಲಂ ಲಕ್ಷಣಮೇವ ತೇ ।**
**ಅನ್ಯಥೀಕುರುತೇ ಸರ್ವಸಂಮತಂ ಸ್ಪಷ್ಟಮಾಗಮಂ ॥ ೨೧೪ ॥**

ಸ್ಪಷ್ಟವಾಗಿರುವ ಗೀತಾವಾಕ್ಯವಿರುವುದರಿಂದ, ತನ್ನನ್ನು ತಾನೇ ತಿಳಿಯುವನೆಂಬುದರಲ್ಲಿ ಕರ್ತೃ ಕರ್ಮ ವಿರೋಧವಿಲ್ಲ; ಆದ್ದರಿಂದ ಭಾಟ್ಟೋಕ್ತ ಕರ್ಮಲಕ್ಷಣವನ್ನೇ ಉಪೇಕ್ಷಿಸಬೇಕೆನ್ನುತ್ತಾರೆ :—

(ಯಾವ ಕಾರಣದಿಂದ) ಸರ್ವಸಂಮತಂ—ಎಲ್ಲರಿಗೂ ಒಪ್ಪಿಗೆಯಾದ (ಸರ್ವರಿಂದ ಅಂಗೀಕೃತವಾದ), ಸ್ಪಷ್ಟಂ—ಸ್ಪಷ್ಟವಾದ, ಆಗಮಂ—ಗೀತಾ ವಚನವನ್ನು, ಅನ್ಯಥೀಕುರುತೇ – ವಿರೋಧಿಸುವುದೋ (ವ್ಯರ್ಥಗೊಳಿಸುವುದೋ), (ಆ ಕಾರಣದಿಂದ), ತೇ—ನಿನಗೆ, ಪುಂಕಲ್ಪನಾಮಾತ್ರಮೂಲಂ ಲಕ್ಷಣಂ—ಪುರುಷ (ಭಟ್ಟನಿಂದ) ಕಲ್ಪಿತವಾದುದನ್ನು ಆಧರಿಸಿದ (ಕರ್ಮ) ಲಕ್ಷಣವು, ಕಥಂ—ಹೇಗೆ? (ಅಂಗೀಕರಿಸುವುದು ಯೋಗ್ಯವಾಗುತ್ತದೆ?—ತ್ಯಾಜ್ಯವೇ ಸರಿ).

---

(ಭಗವಂತನಿಗೆ) ಕರ್ತೃತ್ವ, ಕರ್ಮತ್ವ, ಮತ್ತು ಕ್ರಿಯಾತ್ವಗಳೆಂಬುವು ಹೇಳಲ್ಪಟ್ಟಿವೆ; ಇದು ಸ್ಪಷ್ಟವಾಗಿರುವಾಗ, ಅದ್ವೈತವು ಹೇಳುವ ಪ್ರಮೇಯಕ್ಕೆ ವಿರೋಧವು ಅಪರಿಹಾರ್ಯವೇ ಆಗಿದೆ (೨೧೩). ಸ್ಪಷ್ಟವಾದ (ಆಗಮದ) ಸರ್ವಸಂಮತವಾದ ಶಾಸ್ತ್ರವಾಕ್ಯವನ್ನು ವ್ಯರ್ಥಗೊಳಿಸುವ, ಕಶ್ಚಿತ್ಪುರುಷನಿಂದ (ಭಟ್ಟನೆಂಬ ಪುರುಷನಿಂದ) ನಿರ್ಮಿತವಾದ ವಾಕ್ಯದ ಆಧಾರವು, ನಿನ್ನನ್ನು ಎಂದೂ ಸಮರ್ಥಿಸಲಾರದು (೨೧೪).

---

1 'ಸ್ವಯಂ, ಆತ್ಮಾನಂ, ಆತ್ಮನಾ' ಎಂಬ ಪ್ರಥಮಾದಿ ವಿಭಕ್ತಿಗಳಲ್ಲಿರುವ ಶಬ್ದಗಳಿಂದ ಕರ್ತೃತ್ವ (ತಾನು), ಕರ್ಮತ್ವ (ತನ್ನನ್ನು), (ತನ್ನಿಂದ) ಕ್ರಿಯಾತ್ವಗಳ ಏಕ ಚೇತನನಿಗೇ ಗೀತಾವಾಕ್ಯದಲ್ಲಿ ಹೇಳಿ, 'ವೇತ್ಥ'—ತಿಳಿದಿರುವಿ, ಎಂದು ಹೇಳಲಾಗಿದೆ.

**ಜ್ಞಾನಂ ಪ್ರತ್ಯಕ್ ಪರಾಕ್ ಜ್ಞೇಯಮಿತಿ ಬಾಹ್ಯಾರ್ಥಧೀಸ್ಥಲೇ ।**
**ನಾಂತರೇ ಯನ್ಮನೋಜ್ಞಾನೇ ಜ್ಞೇಯಂ ಪ್ರತ್ಯಕ್ ಪರಸ್ತ್ವನ ॥೨೧೫॥**

ಜ್ಞಾನವು ಒಳಗೂ, ಜ್ಞೇಯವು (ತಿಳಿಯಲ್ಪಡುವ ವಸ್ತು ಅಥವಾ ವಿಷಯವು) ಹೊರಗೂ ಇರುವ ನಿಯಮವಿರುವುದರಿಂದ ಆಂತರವಾದ ಜ್ಞಾನಕ್ಕೆ ವಿಷಯ ವಿಷಯಿ ಎಂಬೆರಡೂ ಭಾವಗಳು ಹೇಗೆ ಯುಕ್ತವಾಗುತ್ತದೆಂದರೆ, ಹೇಳುತ್ತಾರೆ :—

ಜ್ಞಾನಂ—ಜ್ಞಾನವು, ಪ್ರತ್ಯಕ್—ಒಳಗಿದ್ದು ಹೊರಗೆ ನೋಡತಕ್ಕದ್ದು, ಜ್ಞೇಯಂ—ವಸ್ತುವು (ವಿಷಯವು), ಪರಾಕ್—ಹೊರಗಿದ್ದು ಒಳಮುಖವುಳ್ಳದ್ದು (ಒಳಗಿನ ಜ್ಞಾನದಿಂದ ಗ್ರಹಿಸಲ್ಪಡತಕ್ಕದ್ದು); ಇತಿ—ಹೀಗೆ, ಬಾಹ್ಯಾರ್ಥಧೀಸ್ಥಲೇ – ಹೊರಗಿನ ಪದಾರ್ಥ (ಘಟಾದಿ) ಜ್ಞಾನ ಸ್ಥಲದಲ್ಲಿ, ಯನ್ಮನಃ—ಬಹಿರ್ಮುಖವಾದ ಯಾವ ಆಂತರ ಮನಸ್ಸು (ಇರುವುದೋ), ಆಂತರೇ ಜ್ಞಾನೇ—ಒಳಗಿನ ಜ್ಞಾನ ಮತ್ತು ಜ್ಞಾನವಿಷಯದಲ್ಲಿಯೂ ಸಹ, ನ—(ಅದು) ಪ್ರತ್ಯಕ್ ಮತ್ತು ಪರಾಕ್ತ್ವಗಳೆಂಬ ಭೇದವು, (ಯನ್ಮನೋಜ್ಞಾನೇ—ಮನೋವೃತ್ತಿರೂಪಜ್ಞಾನದಲ್ಲಿ ಯಾವುದೋ ಅದು—ಆ ಭೇದವು) ಇರುವುದಿಲ್ಲ).[1]

---

ಜ್ಞಾನವು ಆಂತರವು (ಒಳಗಿದ್ದು ಕ್ರಿಯಾಕರಣವುಳ್ಳದ್ದು); ಜ್ಞೇಯವು (ವಿಷಯವು—ತಿಳಿಯಲ್ಪಡುವ ವಸ್ತುವು) ಹೊರಗಿದ್ದು, ಒಳಗಿನ ಜ್ಞಾನದಿಂದ ಗ್ರಹಿಸಲ್ಪಡತಕ್ಕದ್ದು ; ಆದರೆ ಆಂತರವಾದ ಜ್ಞಾನದಲ್ಲಿ, ಹೊರಗೆ ಒಳಗೆಂಬ ಭೇದವು, ಮನೋವೃತ್ತಿ ಜ್ಞಾನದಲ್ಲಿರುವಂತೆ ಇರುವುದಿಲ್ಲ ; ವಿಷಯ ವಿಷಯಿ ಭಾವವಿರುವ ಎರಡು ವಸ್ತುಗಳಲ್ಲಿರಬೇಕೆಂಬ ಭೇದನಿಯಮವು, ಇಲ್ಲಿ ಅನ್ವಯಿಸುವುದಿಲ್ಲ (೨೧೫).

---

1 ಜ್ಞಾನರೂಪಗಳಲ್ಲದ ಜಡವಸ್ತುಜ್ಞಾನದಲ್ಲಿ, ಹೊರಗೆ ಒಳಗೆಂಬ, ಭೇದವು ಪ್ರಸಕ್ತವಾಗುತ್ತದೆ; ಒಂದಕ್ಕೇ (ಜ್ಞಾನಕ್ಕೇ) ಜ್ಞಾನತ್ವ ಜ್ಞೇಯತ್ವಗಳಿರುವಾಗ ಈ ನಿಯಮಕ್ಕೆ ಭಂಗ ಬರುತ್ತದೆ.

*

**ಜಡೇ ಜ್ಞಾನಾಸ್ವರೂಪತ್ವಾಜ್ಜ್ಞಾನಜ್ಞೇಯವಿಭಿನ್ನತಾ ।**
**ಜ್ಞಾನರೂಪೇ ತು ಕಿಂ ನ ಸ್ಯಾಜ್ಜ್ಞಾನತಾ ಜ್ಞೇಯತಾಪಿ ಚ ॥೨೧೬॥**

ಜ್ಞಾನಜ್ಞೇಯಗಳಿಗೆ (ಘಟಾದಿ ಜ್ಞಾನದಂತೆ) ಭೇದವು ಅವಶ್ಯಕವಾಗಿರುವಾಗ, ಅವುಗಳ ಏಕತ್ವವು ಹೇಗೆಂಬುದನ್ನು ವಿವರಿಸುತ್ತಾರೆ :—

ಜಡೇ—ಜಡವಸ್ತುಗಳಲ್ಲಿ (ಘಟಪಟಾದಿಗಳಲ್ಲಿ), ಜ್ಞಾನಾಸ್ವರೂಪತ್ವಾತ್—ಜ್ಞಾನರೂಪತ್ವವಿಲ್ಲದ್ದರಿಂದ, ಜ್ಞಾನಜ್ಞೇಯವಿಭಿನ್ನತಾ—ಜ್ಞಾನ ಜ್ಞೇಯಗಳ ಭೇದವು (ಇರುತ್ತದೆ); ಜ್ಞಾನರೂಪೇ ತು—ಜ್ಞಾನರೂಪದ (ಆತ್ಮಾದಿ) ವಸ್ತುವಿನಲ್ಲಿ, ಜ್ಞಾನತಾ – ಜ್ಞಾನತ್ವವೂ, ಜ್ಞೇಯತಾ ಅಪಿ – ಜ್ಞೇಯತ್ವವೂ (ತಿಳುವಳಿಕೆ ಮತ್ತು ತಿಳಿಯಲ್ಪಡುವ ವಸ್ತುವು, ಎರಡೂ), ಕಿಂ ನ ಸ್ಯಾತ್—(ಒಂದಕ್ಕೇ ಜ್ಞಾನತ್ವ ಜ್ಞೇಯತ್ವಗಳೆರಡೂ) ಏಕಾಗಬಾರದು? (ಜ್ಞಾನಸ್ವರೂಪದ ವಸ್ತುವಿಷಯಕ ಜ್ಞಾನದಲ್ಲಿ ಜ್ಞಾನ ಜ್ಞೇಯಗಳೆಂಬ ಭೇದಕ್ಕೂ ಭಂಗವೇ ಸರಿ).

**ಮನೋಽನುಮಿತ್ಯಾ ಮಾನಸ್ಯಾ ಕಿಂ ನಾನುಮಿಮತೇ ಬುಧಾಃ ।**
**ಜ್ಞಾನರೂಪಂ ತು ಯದ್ವಸ್ತು ಸ್ವೇನಾಪಿ ಜ್ಞೇಯಮೇವ ತತ್ ।**
**ಅತಃ ಸ್ವರೂಪವಿಜ್ಞಾನೇ ಸ್ವಯಮಾತ್ಮಾ ಪ್ರಕಾಶತಾಂ ॥ ೨೧೭ ॥**

ಆ ನಿಯಮಭಂಗವನ್ನು ನಿದರ್ಶನದಿಂದ ಸ್ಪಷ್ಟಗೊಳಿಸುತ್ತಾರೆ :—

ಬುಧಾಃ—ಜ್ಞಾನಿಗಳು (ವಿವೇಕಿಗಳು), ಮನಃ—ಮನಸ್ಸನ್ನು, ಮಾನಸ್ಯಾ—ಮನಸ್ಸಿನ, ಅನುಮಿತ್ಯಾ—ಅನುಮಿತಿಯಿಂದಲೇ (ಅನುಮಾನದಿಂದ ಹುಟ್ಟುವ

---

ಜಡವಸ್ತುವು ಜ್ಞಾನಸ್ವರೂಪವಾದುದಲ್ಲವಾದ್ದರಿಂದ ಜ್ಞಾನಜ್ಞೇಯಗಳ ಭೇದವು ಇರುತ್ತದೆ; ಜ್ಞಾನರೂಪವಾದ ಪದಾರ್ಥವನ್ನು ತಿಳಿಯುವುದರಲ್ಲಿ, ಜ್ಞಾನ ಜ್ಞೇಯಗಳಿಗೆ ಅಭಿನ್ನತೆಯು ಏಕೆ ಯುಕ್ತವಾಗುವುದಿಲ್ಲ? (೨೧೬). ವಿವೇಕಿಗಳು ಮನಸ್ಸಿನಿಂದ ಹುಟ್ಟುವ ಜ್ಞಾನದಿಂದಲೇ (ಅನುಮಿತಿಯಿಂದಲೇ—ಅನುಮಾನದಿಂದ ಸಿದ್ಧವಾದ ಜ್ಞಾನದಿಂದಲೇ), ಮನಸ್ಸೆಂಬ ಒಂದು ವಸ್ತುವು ಸರ್ವರಲ್ಲಿಯೂ ಇರುತ್ತದೆಯೆಂದು ತಿಳಿಯುವುದಿಲ್ಲವೇ? (ಆದರೆ ಆ ಮನಸ್ಸುಗಳನ್ನು ತಿಳಿಯುವುದಿಲ್ಲವಷ್ಟೆ—ಮನಸ್ಸಿನ ಅಸ್ತಿತ್ವವನ್ನು ತಿಳಿಯುತ್ತಾರೆ; ಇಲ್ಲಿ ಜ್ಞಾನರೂಪವಾದ ಮನಸ್ಸಿನಿಂದಲೇ ತಿಳಿಯುವುದಿಲ್ಲವೇ?) ಇಲ್ಲಿ

ಜ್ಞಾನದಿಂದಲೇ), ನ ಅನುಮಿಮತೇ ಕಿಂ–ಊಹಿಸಿ ತಿಳಿಯುವುದಿಲ್ಲವೇನು[1] ? (ತಿಳಿಯುತ್ತಾರಷ್ಟೆ) ; ತತ್ –ಆದ್ದರಿಂದ (ಜ್ಞಾನರೂಪವಾದ ಮನಸ್ಸನ್ನು ಜ್ಞಾನರೂಪದ ಮನಸ್ಸಿನಿಂದಲೇ ತಿಳಿಯುವುದರಿಂದ), ಜ್ಞಾನರೂಪಂ–ಜ್ಞಾನ ರೂಪವಾದ, ಯದ್ವಸ್ತು – ಯಾವ ವಸ್ತುವು, ಸ್ವೇನಾಪಿ – ತನ್ನಿಂದಲೇ, ಜ್ಞೇಯಂ ಏವ–ತಿಳಿಯಲ್ಪಡತಕ್ಕದ್ದೇ ಸರಿ, ಅತಃ–ಆ ಕಾರಣದಿಂದ, ಸ್ವರೂಪ ವಿಜ್ಞಾನೇ – ಸ್ವರೂಪವನ್ನು ತಿಳಿಯುವುದರಲ್ಲಿ, ಸ್ವಯಂ ಆತ್ಮಾ – ಆತ್ಮನಾದ ತಾನೇ, ಪ್ರಕಾಶತಾಂ–(ಜ್ಞಾನ ಜ್ಞೇಯ ಭೇದಭಂಗವಾದ್ದರಿಂದ) ಪ್ರಕಾಶಿತ ನಾಗಲಿ (ಪ್ರಕಾಶಿಸಲಿ—ತಿಳಿಯಲ್ಪಡಲಿ).

**ಶ್ರುತೇಃ ಸ್ಮೃತೇಃ ಕುತೋ ಬಾಧಃ ಕ್ರಿಯತೇಽನುಭವಸ್ಯ ಚ ।**
**ಯತಸ್ತದಾತ್ಮಾನಮೇವಾವೇದಿತ್ಯುಪನಿಷಜ್ಜಗೌ ॥ ೨೧೮ ॥**

ಶ್ರುತೇಃ–ಶ್ರುತಿಯು, ಸ್ಮೃತೇಃ– ಸ್ಮೃತಿಯು, ಚ–ಮತ್ತು, ಅನುಭವಸ್ಯ –ಅನುಭವದ, ಬಾಧಃ–ಅಪಲಾಪವು (ಅಥವಾ ಅನ್ಯಾರ್ಥಕಲ್ಪನವು), ಕುತಃ–

---

ಜ್ಞಾನ ಜ್ಞೇಯಗಳ ಭೇದಕ್ಕೆ (ಜ್ಞಾನ–ಮಾನಸಕ್ರಿಯೆ; ಜ್ಞೇಯ–ಜ್ಞಾನ ದಿಂದ ತಿಳಿಯಲ್ಪಡುವುದು ಜ್ಞೇಯ; ಅಥವಾ ವಸ್ತು, ವಿಷಯವು ಕರ್ಮ ವೆನಿಸುತ್ತದೆ) ಭಂಗ ಬಂದಿರುತ್ತದೆ; ಹೀಗಿರುವುದರಿಂದ ಜ್ಞಾನ ಜ್ಞೇಯಗಳಿಗೆ ಸರ್ವದಾ ಭೇದವಿರಬೇಕೆಂಬ ನಿಯಮವಿಲ್ಲದ್ದರಿಂದ, ಆತ್ಮನಾದ ತಾನೇ ತನ್ನನ್ನು ತಿಳಿಯುವುದರಲ್ಲಿ ಯಾವ ಬಾಧಕವೂ ಇರುವುದಿಲ್ಲ (೨೧೭). ಭಾಟ್ಟೋಕ್ತ ವೆಂಬ ಕರ್ಮಲಕ್ಷಣವನ್ನು ಆಶ್ರಯಿಸಿ, ಶ್ರುತಿ, ('ತದಾತ್ಮಾನಮೇವಾವೇತ್'

---

1 ಘಟಾದಿ ಜ್ಞಾನಕ್ಕೆ ಚಕ್ಷುರಾದಿ ಇಂದ್ರಿಯಗಳು ಕಾರಣವಾಗಿರುವಂತೆ, ಸುಖ ಜ್ಞಾನಾದಿಗಳ ಜ್ಞಾನಕ್ಕೆ ಸಾಧನವಾದ, ಆ ಜ್ಞಾನವನ್ನು ಗ್ರಹಿಸುವ ಮನಸ್ಸೆಂಬ ಅಂತ ರಿಂದ್ರಿಯವು ಸರ್ವರಲ್ಲಿ ಇರಬೇಕೆಂದು ಜ್ಞಾನಿಗಳು 'ಸುಖಾದಿಗಳ ಜ್ಞಾನವು ಇಂದ್ರಿಯ ಸಹಿತವಾಗಿರಬೇಕು, ಕ್ರಿಯಾಲಕ್ಷಣವುಳ್ಳದ್ದರಿಂದ ರೂಪಾದಿಗಳ ಜ್ಞಾನದಂತೆ' ಎಂಬ ಅನುಮಾನದಿಂದ ಊಹಿಸಿ ತಿಳಿಯುತ್ತಾರೆ; ಅನುಮಾನವು ಮನಸ್ಸಿನ ಕಾರ್ಯವು; ಅದರಿಂದ ಮನಸ್ಸಿರುತ್ತದೆಂದು ತಿಳಿಯಿತು—ಎಂದರೆ ಮನಸ್ಸಿನಿಂದ ಮನಸ್ಸನ್ನು ತಿಳಿ ದಂತಾಯಿತು; ಮನಸ್ಸು ಜ್ಞಾನರೂಪವಾದುದು; ಅದನ್ನು ಜ್ಞಾನರೂಪವಾದ ಮನಸ್ಸು ತಿಳಿಯಿತು; ಇದರಂತೆ ಜ್ಞಾನಸ್ವರೂಪನಾದ ಆತ್ಮನು ತನ್ನನ್ನು ತಾನೇ ಏಕೆ ತಿಳಿಯ ಬಾರದು? ಭೇದವಿರಬೇಕಾದ ಅವಶ್ಯಕವಿಲ್ಲೆಂಬುದಕ್ಕೆ ಈ ದೃಷ್ಟಾಂತವಾಗಿದೆ.

ಏತಕ್ಕೆ (ಯಾವ ಕಾರಣದಿಂದ), ಕ್ರಿಯತೇ–ಮಾಡಲಾಗುತ್ತದೆ? (ಏನೂ ಕಾರಣವಿಲ್ಲ); ಯತಃ – ಏಕೆಂದರೆ, 'ತದಾತ್ಮಾನಮೇವಾವೇತ್'–(ತತ್) ಆ ಬ್ರಹ್ಮನು, (ಆತ್ಮಾನಂ) ಸ್ವಸ್ವರೂಪವನ್ನೇ, (ಅವೇತ್) ತಿಳಿದನು, ಇತಿ– ಎಂದು, ಉಪನಿಷತ್–ವೇದವು, ಜಗೌ–ಹೇಳಿತು (ಹೇಳುತ್ತದೆ) (ಆದ್ದರಿಂದ ಶ್ರುತಿಯ ಬಾಧವೂ ಇಲ್ಲವೆಂಬುದು ಸ್ಪಷ್ಟವಾಯಿತು).

**ನ ಚೇದೇವಮಸಂಬದ್ಧಂ ವದತೋ ಮರಣೇ ಕಥಂ ।**
**ವಿಲಪೇತ್ ಪಟ್ಟಮಹಿಷೀ ಸ್ವೋರಸ್ತಾಡನಪೂರ್ವಕಂ ॥ ೨೧೯ ॥**

ಒಬ್ಬನಿಗೇ ಕರ್ತೃ ಕರ್ಮ ಭಾವವನ್ನು ಅಂಗೀಕರಿಸದವನಿಗೆ ಉಪಹಾಸ ರೂಪದ ಉತ್ತರವನ್ನು ಹೇಳುತ್ತಾರೆ:—

ನ ಚೇತ್–ಒಬ್ಬನಿಗೇ ಕರ್ತೃ ಕರ್ಮಭಾವವಿಲ್ಲದಿದ್ದರೆ, ಏವಂ–ಹೀಗೆ, ಅಸಂಬದ್ಧಂ–ಅಸಂಬದ್ಧವಾಗಿ, ವದತಃ–ನುಡಿಯುವವನಿಗೆ, ಮರಣೇ–ಮರಣ ವಾಗುತ್ತಿರಲು (ಅವನು ಮೃತನಾಗಲು), ಪಟ್ಟಮಹಿಷೀ–ಪಟ್ಟಮಹಿಷಿಯು (ಪ್ರಿಯ ಪತ್ನಿಯು), ಸ್ವೋರಸ್ತಾಡನಪೂರ್ವಕಂ–ತನ್ನ ಎದೆಯನ್ನು ಬಡಿದು ಕೊಳ್ಳುತ್ತ, ಕಥಂ–ಹೇಗೆ, ವಿಲಪೇತ್–ರೋದನಮಾಡುವಳು? (ತನ್ನ ಎದೆ ಯನ್ನು ತಾನೇ ಗುದ್ದಿಕೊಳ್ಳುವುದು, ಹೊಡೆಯುವವಳೂ, ಹೊಡೆಸಿಕೊಳ್ಳು ವಳೂ ಒಬ್ಬಳೇ ಆದ್ದರಿಂದ, ಸಾಧ್ಯವಾಗಲಾರದಷ್ಟೆ—ನೀನು ಮೃತನಾದಾಗ ಸಹ ಆಕೆಯು ರೋದನ ಮಾಡುವುದಿಲ್ಲವಷ್ಟೆ).

---

–ಬ್ರಹ್ಮನು ತನ್ನ ಸ್ವರೂಪವನ್ನು ತಾನೇ ತಿಳಿದನು'), ಸ್ಮೃತಿ (೨೧೩ನೇ ಶ್ಲೋಕದಲ್ಲಿ ವಿವರಿಸಿದ ಗೀತಾ ವಚನ) ಗಳನ್ನೂ, (ಹಿಂದಿನ ಶ್ಲೋಕದಲ್ಲಿ ನಿರೂಪಿತವಾದ) ಅನುಭವವನ್ನೂ, ತಿರಸ್ಕರಿಸಿ, ವ್ಯರ್ಥಗೊಳಿಸುವುದು ಯುಕ್ತ ವಾಗುವುದಿಲ್ಲ (೨೧೮). ಒಂದೇ ದೇಹದಲ್ಲಿ ಕರ್ತೃತ್ವ, ಕರ್ಮತ್ವಗಳೆರಡೂ ಇರುವುದು ಲೋಕದಲ್ಲಿ ಸಹ ಕಂಡಿದೆ; ನಿನ್ನ ಪ್ರಿಯ ಭಾರ್ಯಳು, ನೀನು ಮೃತನಾಗಲು, ಎದೆ ಬಡಿದುಕೊಂಡು ರೋದನ ಮಾಡುವುದಿಲ್ಲವೇ? ಹೊಡೆಸಿ ಕೊಳ್ಳುವುದೂ ಹೊಡೆಯುವುದೂ ಒಂದೇ ದೇಹದ ವ್ಯಾಪಾರವಲ್ಲವೇ? ಕರ್ತೃತ್ವ ಕರ್ಮತ್ವಗಳೆರಡೂ ಏಕತ್ರ ಇಲ್ಲದಿರುವುದಾದರೆ, ನಿನ್ನ ಭಾರ್ಯಳು ಅಳುವುದಿಲ್ಲವಷ್ಟೆ! (ಉಪಹಾಸದ ನುಡಿಯಿದು) (೨೧೯).

**ಅವಾಂತರವಿಶೇಷೇಣ ಯದ್ಯೇಕತ್ರಾಪಿ ತದ್ಭವೇತ್ ।**
**ಆತ್ಮಾಕರ್ಮಕ್ರಿಯಾಜ್ಞಾನಮಿತ್ಯತ್ರಾಪಿ ವಿಶೇಷಣೇ ।**
**ಅವಕಾಶೋಽಸ್ತಿ ಯಚ್ಛಬ್ದಾ ಅಪರ್ಯಾಯಾಸ್ತಯೋಃ ಸದಾ॥೨೨೦॥**

ಅವಾಂತರವಿಶೇಷೇಣ – (ಎದೆ ಬಡಿದುಕೊಳ್ಳುವುದರಲ್ಲಿ) ಹಸ್ತ, ಎದೆ, ಎಂಬ (ದೇಹದೊಳಗಿನ) ಸ್ಥಲವಿಶೇಷಗಳಿಂದ, ಯತ್–ಯಾವ ಕಾರಣದಿಂದ, ಏಕತ್ರಾಪಿ–ಒಂದೇ ದೇಹದಲ್ಲಿ, ತತ್–ಕರ್ತೃತ್ವ ಕರ್ಮತ್ವಗಳು, ಭವೇತ್–ಸಂಭವಿಸುವುವೋ, ಅತ್ರಾಪಿ – ಬ್ರಹ್ಮನಲ್ಲಿಯೂ ಸಹ, ಆತ್ಮಾಕರ್ಮಕ್ರಿಯಾ ಜ್ಞಾನಂ ಇತಿ–ಪರಮಾತ್ಮ (ಕರ್ತೃ), ಕರ್ಮ (ವಿಷಯ), ಅವುಗಳ ಜ್ಞಾನ (ಕ್ರಿಯಾ) ಎಂದು, ವಿಶೇಷಣೇ–ವಿಶೇಷವನ್ನು ತಿಳಿಯುವುದರಲ್ಲಿ, ಅವಕಾಶಃ–ಅವಕಾಶವು, ಅಸ್ತಿ–ಇರುತ್ತದೆ; ಯತ್–ಏಕೆಂದರೆ, ಶಬ್ದಾಃ–ಬ್ರಹ್ಮ, ಆತ್ಮ ಮೊದಲಾದ ಬ್ರಹ್ಮನನ್ನು ಹೇಳುವ ಶಬ್ದಗಳು, ಸದಾ – ಎಲ್ಲ ಕಾಲದಲ್ಲಿ, ತಯೋಃ–ಬ್ರಹ್ಮ ಮತ್ತು ಜ್ಞಾನಗಳ, ಅಪರ್ಯಾಯಾಃ–ಸಮಾನಾರ್ಥದಲ್ಲಿ ಪ್ರಯೋಗಿಸಲ್ಪಡುವ ಶಬ್ದಗಳಾಗಿರುವುದಿಲ್ಲ.[1]

---

ಒಂದೇ ದೇಹದಲ್ಲಿ ಎದೆ ಬಡಿದುಕೊಳ್ಳುವುದೆಂಬ ಕ್ರಿಯೆಯು ನಡೆದರೂ, ಹಸ್ತ, ವಕ್ಷಸ್ಥಲ ಇತ್ಯಾದಿ ಅವಾಂತರಭೇದವು ಕಂಡಿದೆಯಲ್ಲವೇ, ಎಂದು ಸಂಶಯಗೊಳ್ಳಲು ಕಾರಣವಿಲ್ಲ; ಏಕೆಂದರೆ, ಬ್ರಹ್ಮ, ಆತ್ಮ ಇತ್ಯಾದಿ ಬ್ರಹ್ಮ ವಾಚಕ ಶಬ್ದಗಳು, ಜ್ಞಾನ, ಜ್ಞಪ್ತಿ ಮುಂತಾದ ಜ್ಞಾನವಾಚಕ ಪರ್ಯಾಯ ಪದಗಳಲ್ಲ; ಯದ್ಯಪಿ, ಏಕದೇಹದ ಹಸ್ತಾದಿ ಸ್ಥಲವಿಶೇಷಗಳಂತೆ, ಅವಾಂತರ ಭೇದವಿಲ್ಲದೇ ಅತ್ಯಂತ ಅಭೇದವಾದವುಗಳು–ಬ್ರಹ್ಮ, ಆತನ ಕರ್ಮ ಮತ್ತು ಕ್ರಿಯೆಗಳು; ವಿಶೇಷ ಬಲದಿಂದ ಮಾತ್ರ ಇವು ಪ್ರತ್ಯೇಕವಾಗಿ ವ್ಯವಹರಿಸಲ್ಪಡು

---

[1] ಘಟ, ಕಲಶ, ಕರೀರ ಇತ್ಯಾದಿ ಶಬ್ದಗಳಂತೆ ಬ್ರಹ್ಮ, ಆತ್ಮ, ಜ್ಞಾನ, ಆನಂದ, ಇತ್ಯಾದಿ ಶಬ್ದಗಳು ಮುಖ್ಯಾರ್ಥದಲ್ಲಿ ಪರ್ಯಾಯ ಶಬ್ದಗಳೇ ಆಗಿದ್ದು ಬ್ರಹ್ಮ ನನ್ನೊಬ್ಬನನ್ನೇ ತಿಳಿಸಿದರೂ ಘಟ, ಪಟ, ಕುಡ್ಯ ಇತ್ಯಾದಿ ಭಿನ್ನ ಪದಾರ್ಥ ನಿರ್ದೇಶಕ ಶಬ್ದಗಳಂತೆ ಭಿನ್ನಾರ್ಥಗಳಲ್ಲಿಯೂ ಉಪಯೋಗಿಸಲ್ಪಡುತ್ತವೆ; ಅಭೇದವಿರುವಲ್ಲಿ ಭೇದವಿದ್ದಂತೆ ವ್ಯವಹರಿಸಲು ಅವಕಾಶವನ್ನು ಕೊಡುವ 'ವಿಶೇಷ'ವು ಪರಮಾತ್ಮನಲ್ಲಿದೆ. ಆದ್ದರಿಂದ ಕರ್ತೃತ್ವ ಕರ್ಮತ್ವಗಳೆರಡನ್ನೂ ವುಳ್ಳ, ಎದೆಬಡಿದುಕೊಳ್ಳುವ ದೃಷ್ಟಾಂತ ದಿಂದ, ಬ್ರಹ್ಮನಲ್ಲಿ ಎರಡೂ ಉಂಟೆಂದು ತಿಳಿಯಬಹುದು.

**ಮಾಮಹಂ ನ ವಿಜಾನಾಮೀತ್ಯತ್ರ ಕರ್ತೃತ್ವಕರ್ಮತೇ ।**
**ಯಥೈಕಸ್ಯ ತಥಾ ಕ್ವಾಪಿ ಕ್ರಿಯಾಕರ್ಮೈಕ್ಯಮುಚ್ಯತಾಂ ॥ ೨೨೧ ॥**

ಮನಸ್ಸಿನಿಂದ ಮನಸ್ಸನ್ನು ತಿಳಿಯುವುದೆಂಬ ದೃಷ್ಟಾಂತದಲ್ಲಿ, ಜ್ಞೇಯತ್ವ ಜ್ಞಾನತ್ವಗಳು ಕೂಡಬಹುದು; ಆದರೆ ಜ್ಞಾತೃತ್ವವೆಂಬ ಕರ್ತೃತ್ವವು ಆತ್ಮನಿಗೆ ಮಾತ್ರವಿರುತ್ತದೆಯಲ್ಲವೇ ? ಎದೆ ಬಡಿದುಕೊಳ್ಳುವುದೆಂಬ ದೃಷ್ಟಾಂತದಲ್ಲಿ ಕರ್ತೃತ್ವ ಕರ್ಮತ್ವಗಳು ಒಂದೇ ದೇಹಕ್ಕಿದ್ದರೂ ಕ್ರಿಯಾತ್ವವು ದೇಹಕ್ಕಿಲ್ಲ ವಷ್ಟೆ; ಬ್ರಹ್ಮನಲ್ಲಿ ಕರ್ತೃತ್ವ, ಕ್ರಿಯಾತ್ವ ಮತ್ತು ಕರ್ಮತ್ವಗಳೆಂಬ ಮೂರೂ ಏಕತ್ರ ಇರುತ್ತವೆಂದು ಹೇಗೆ ತಿಳಿಯಬಹುದೆಂಬ ಸಂಶಯಕ್ಕೆ ಹಿಂದಿನ ದೃಷ್ಟಾಂತಗಳನ್ನೂ ಮನಸ್ಸಿನಲ್ಲಿಟ್ಟು ಉತ್ತರವನ್ನು ಹೇಳುತ್ತಾರೆ :—

ಮಾಂ—ನನ್ನನ್ನು, ಅಹಂ — ನಾನು, ನ ವಿಜಾನಾಮಿ—ತಿಳಿಯುವುದಿಲ್ಲ ಎಂಬಲ್ಲಿ, ಕರ್ತೃತ್ವಕರ್ಮತೇ — (ಉಪಲಕ್ಷಣದಿಂದ) ಕರ್ತೃತ್ವ ಕರ್ಮತ್ವ ಕ್ರಿಯಾತ್ವಗಳು, ಯಥಾ—ಹೇಗೆ, ಏಕಸ್ಯ—ಒಬ್ಬ ಆತ್ಮನಿಗೆ (ಮಾಂ ಎಂದು ಕರ್ಮ, ಅಹಂ ಎಂದು ಕರ್ತೃ, ನ ಜಾನಾಮಿ ಎಂದು ಅಜ್ಞಾನವನ್ನು ಗ್ರಹಿಸುವ ಕ್ರಿಯೆಗಳು) ಸಂಭವಿಸುವುವೋ, ತಥಾ—ಹಾಗೆಯೇ, ಕ್ವಾಪಿ—ಮತ್ತೊಂದು ಅನುಭವದಲ್ಲಿಯೂ ('ಮಾಮಹಂ ಜಾನಾಮಿ' ಎಂಬಲ್ಲಿಯೂ),

---

ತ್ತವೆ; ಹೀಗೆ ಬ್ರಹ್ಮನಲ್ಲಿ ಉಪಚಾರವಲ್ಲದ (ಗೌಣವಲ್ಲದ) ಮುಖ್ಯ ಅಭೇದವು ಆತನ ಗುಣ ಕರ್ಮ ಕ್ರಿಯೆಗಳಲ್ಲಿ ತಿಳಿಯಲು, ವಿಶೇಷವೆಂಬ ಆತನಿಂದ ಅಭಿನ್ನ ವಾದ ಅಚಿಂತ್ಯಶಕ್ತಿಯು ಅವಕಾಶವನ್ನೀಯುತ್ತದೆ (೨೨೦). 'ಮಾಮಹಂ ನ ವಿಜಾನಾಮಿ' ಎಂಬಲ್ಲಿ ಕರ್ತೃತ್ವ (ಅಹಂ), ಕರ್ಮತ್ವ (ಮಾಂ), ಕ್ರಿಯಾತ್ವ (ನ ವಿಜಾನಾಮಿ) ಎಂಬ ಮೂರು ದೆಶೆಗಳೂ ಒಬ್ಬ ಚೇತನನಿಗೆ ಯುಕ್ತ ವಾಗುವಂತೆ 'ಮಾಮಹಂ ಜಾನಾಮಿ' ಎಂಬಲ್ಲಿ ನನ್ನನ್ನು (ಕರ್ಮತ್ವ) ನಾನು (ಕರ್ತೃತ್ವ) ಮತ್ತು ಜಾನಾಮಿ (ಕ್ರಿಯಾತ್ವಗಳು), (ನಾನು ನನ್ನನ್ನು ತಿಳಿಯು ತ್ತೇನೆಂದು, ಬ್ರಹ್ಮನು ತನ್ನನ್ನು ತಾನು ತಿಳಿಯುತ್ತಾನೆಂಬುದೂ ಯುಕ್ತ ವಾಗುತ್ತದೆಂದು ತಿಳಿಯಬಹುದಾಗಿದೆ—ಈ ಹಿಂದೆ ನಿರ್ದೇಶಿಸಿದ, ಮನಸ್ಸಿನಿಂದ ಮನಸ್ಸನ್ನು ತಿಳಿಯುವುದೆಂಬಲ್ಲಿ ಕರ್ತೃತ್ವ—ಕರ್ಮತ್ವಗಳನ್ನೂ, ಭಾರ್ಯಳು ಎದೆ ಬಡಿದು ರೋದಿಸುವ ದೃಷ್ಟಾಂತದಲ್ಲಿ ಕ್ರಿಯಾತ್ವ ಮತ್ತು ಕರ್ಮತ್ವ ಗಳನ್ನೂ ಮಾತ್ರ ತಿಳಿಯಬಹುದಾಗಿದೆ, ಎಂಬ ಸಂಶಯವು ಯುಕ್ತವಲ್ಲ)

ಕ್ರಿಯಾಕರ್ಮೈಕ್ಯಂ–ಕ್ರಿಯಾ, ಕರ್ಮ, ಕರ್ತೃಗಳ ಐಕ್ಯವು (ಒಂದೇ–ಒಬ್ಬ ಆತ್ಮನೇ ಆಗಿರುವನೆಂದು), ಉಚ್ಯತಾಂ–ಹೇಳಲ್ಪಡಲಿ (ಹೇಳಬೇಕು).[1]

---

ಭಗವಂತನಲ್ಲಿ ಈ ವಿವಿಧ ಅವಸ್ಥೆಗಳನ್ನು ವಿಶೇಷಬಲದಿಂದ ಮಾತ್ರ ವ್ಯವಹರಿಸಲಾಗುತ್ತದೆಂದೂ, ವಸ್ತುತಃ ಈ ಎಲ್ಲದರಿಂದ ಅತ್ಯಂತ ಅಭಿನ್ನವೇ ಆಗಿರುತ್ತಾನೆಂದೂ ಮರೆಯದಿರಬೇಕಾದುದು ಅತ್ಯವಶ್ಯಕವಾಗುತ್ತದೆ (೨೨೧).

---

1 'ಯುಷ್ಮದಸ್ಮತ್ ಪ್ರತ್ಯಯಗೋಚರಯೋರ್ವಿಷಯವಿಷಯಿಣೋಃ ತಮಃ ಪ್ರಕಾಶವತ್ ವಿರುದ್ಧಸ್ವಭಾವಯೋಃ ಇತರೇತರಭಾವಾನುಪಪತ್ತೌ', (ಭಾಷ್ಯವಾಕ್ಯ) ಮತ್ತು 'ಪ್ರತ್ಯಗ್ಭೂತಮಾತ್ಮತತ್ತ್ವಂ ಕಥಂ ಪರಾಗ್ಭೂತಂ ವಿಷಯತತ್ತ್ವಂ ಸ್ಯಾತ್' (ಎಂಬ ವಿವರಣ) ವಚನಗಳಿಂದ, 'ಕರ್ತೃಕರ್ಮಭಾವವಿರೋಧವು ತೋರುವುದರಿಂದ' ಎಂಬುದಕ್ಕೆ ಸಹ 'ಕ್ರಿಯಾಕರ್ಮವಿರೋಧ'ವೆಂದೇ ತಾತ್ಪರ್ಯವು; ಇದನ್ನು ಉಪಪಾದಿಸಲಿಕ್ಕಾಗಿಯೇ ಬಹು ದೃಷ್ಟಾಂತಗಳು ಉಕ್ತವಾಗಿವೆ; ಉದಾಹೃತ ಭಾಷ್ಯ ಮತ್ತು ವಿವರಣ ವಾಕ್ಯಗಳ ಭಾವಾರ್ಥ;—'ವಾದಿ ಪ್ರತಿವಾದಿಗಳಾದ ನಮ್ಮಿಬ್ಬರಿಗೂ ತಿಳಿದಿರುವ ವಿಷಯ ವಿಷಯಿಗಳಿಗೆ (ವಸ್ತು ಮತ್ತು ವಸ್ತುವನ್ನು ತಿಳಿದವನು) ಕತ್ತಲೆ ಬೆಳಕುಗಳಂತೆ ವಿರುದ್ಧಸ್ವಭಾವಗಳಿದ್ದು ಅನ್ಯೋನ್ಯವಾಗಿ ಅಭಿನ್ನಗಳಾಗಿರುವುದು ಕೂಡುವುದಿಲ್ಲ' ಮತ್ತು 'ಆತ್ಮತತ್ತ್ವವು ಒಳಗಿದೆ; ವಿಷಯವು (ವಸ್ತುವು) ಹೊರಗಿದೆ' ಇತ್ಯಾದಿಯಾದ ನಿರೂಪಣೆಯಲ್ಲಿ, ಕೇವಲ ಕರ್ತೃ ಕರ್ಮ ಭಾವದ ವಿರೋಧವು ಪ್ರಸಕ್ತವಾಗಿಲ್ಲ—ಮತ್ತೇನೆಂದರೆ, ಕ್ರಿಯಾಕರ್ಮಗಳೂ ವಿವಕ್ಷಿತವಾಗಿರುತ್ತೆಂದೇ ತಿಳಿಯಬೇಕೆಂದು ತೋರಿಸಲಿಕ್ಕಾಗಿ ಇಲ್ಲಿ ಮತ್ತು ಈ ಹಿಂದಿನ ಶ್ಲೋಕಗಳಲ್ಲಿ ಬಹು ದೃಷ್ಟಾಂತಗಳು ನಿರೂಪಿತವಾಗಿರುತ್ತವೆ. 'ಮಾಮಹಂ ನ ಜಾನಾಮಿ' ಎಂಬಲ್ಲಿ ಕರ್ತೃ ಕರ್ಮಗಳು ಮಾತ್ರವಲ್ಲದೇ ಕ್ರಿಯೆಯೂ (ನ ಜಾನಾಮಿ ಎಂಬುದರಿಂದ) ಹೇಳಲ್ಪಡುವಂತೆ, 'ಮಾಂ ಅಹಂ ಜಾನಾಮಿ' ಎಂಬಲ್ಲಿಯೂ ಈ ಮೂರನ್ನೂ ತಿಳಿಯಬೇಕಾದುದು ಅವಶ್ಯಕವಾಗಿರುವಂತೆ ಉಕ್ತಭಾಷ್ಯ ಮತ್ತು ವಿವರಣಗಳಲ್ಲಿ ಸಹ, ಕರ್ತೃ ಕರ್ಮಗಳಿಂದ ಕ್ರಿಯಾ ಕರ್ಮಗಳೂ ಹೇಳಲಾಗಿದೆ ಎಂದು ತಿಳಿಯಬೇಕು. ೨೧೭ ನೇ ಶ್ಲೋಕದಲ್ಲಿ ತೋರಿಸಿರುವ ದೃಷ್ಟಾಂತದಲ್ಲಿ (ಮನಸ್ಸಿನಿಂದ ಮನಸ್ಸನ್ನು ತಿಳಿಯುವುದೆಂಬಲ್ಲಿ) ಮನಸ್ಸಿಗೆ ಕರ್ತೃ ಕರ್ಮತ್ವಗಳು ತೋರುತ್ತದೆ; ಕೈಯಿಂದ ಎದೆ ಬಡಿದುಕೊಳ್ಳುವುದೆಂಬ ೨೧೯ ನೇ ಶ್ಲೋಕದಲ್ಲಿನ ದೃಷ್ಟಾಂತದಲ್ಲಿ ಕ್ರಿಯಾಕರ್ಮತ್ವಗಳು ದೇಹವೆಂಬ ಒಂದು ವಸ್ತುವಿನಲ್ಲಿ ತೋರುತ್ತದೆ; ಕರ್ತೃತ್ವವು ದೇಹಕ್ಕಿಲ್ಲವಷ್ಟೆ; ಕರ್ತೃ ಕರ್ಮ ಕ್ರಿಯಾತ್ವಗಳು ಮೂರೂ ಇರುವ, ಈ ಹಿಂದೆ ನಿರೂಪಿಸಿದ 'ಮಾಮಹಂ ನ ಜಾನಾಮಿ' ಎಂಬುದರಿಂದ, 'ಮಾಮಹಂ ಜಾನಾಮಿ' ಎಂಬಲ್ಲಿಯೂ ಮೂರನ್ನೂ ತಿಳಿದು ಬ್ರಹ್ಮನಿಗೆ ಕರ್ತೃತ್ವ ಕರ್ಮತ್ವಗಳೆರಡನ್ನೂ ತಿಳಿಯಲು ಬರುವುದೆನ್ನುತ್ತಾರೆ.

**ಅಭಿಧಾಖ್ಯಾಭಿಧೇಯತ್ವಮಭಿಧಾನಾಮ್ನಿ ಕಿಂ ನ ತೇ ।**
**ಪ್ರಮಾಣಸದಸತ್ತ್ವಾಭ್ಯಾಂ ವ್ಯವಸ್ಥಾ ಚ ಭವಿಷ್ಯತಿ ॥ ೨೨೨ ॥**

ಬೇರೆ ದೃಷ್ಟಾಂತವನ್ನೂ ಹೇಳುತ್ತಾರೆ :—

ಅಭಿಧಾಖ್ಯಾಭಿಧೇಯತ್ವಂ – ಅಭಿಧಾ ಎಂಬ ಹೆಸರಿನಿಂದ ವಾಚ್ಯತ್ವ ವನ್ನು, ಅಭಿಧಾನಾಮ್ನಿ–ಅಭಿಧಾ ಎಂಬ ನಾಮದಲ್ಲಿ, ತೇ–ನಿನ್ನ ಮತದಲ್ಲಿ, ಕಿಂ ನ–ಇಲ್ಲವೇನು ? (ಇದ್ದೇ ಇರುತ್ತದೆ); (ಅಭಿಧಾ ಎಂದರೆ ನಾಮ; ಅದು ತನ್ನ ಹೆಸರನ್ನೂ ಹೇಳುತ್ತ, ಅಭಿಧಾ ಶಬ್ದವಾಚ್ಯತ್ವವನ್ನೂ ಇತರ ಪದ ಗಳನ್ನೂ ಹೇಳುವಂತೆ (ನಾಮವಾಚಕವೂ ಆಗಿರುವಂತೆ) (ವಾಚಕತ್ವ ಮತ್ತು ವಾಚ್ಯತ್ವಗಳೆರಡೂ ಆ ಶಬ್ದಕ್ಕೆ ಇರುತ್ತದೆಯಷ್ಟೆ); (ಹಾಗೆಯೇ) ಇಲ್ಲಿಯೂ (ಬ್ರಹ್ಮವಿಷಯದಲ್ಲಿಯೂ), ಪ್ರಮಾಣಸದಸತ್ತ್ವಾಭ್ಯಾಂ – ಪ್ರಮಾಣವಿರು ವುದು ಅಥವಾ ಇಲ್ಲದಿರುವುದು ಎಂಬುದನ್ನನುಸರಿಸಿ (ಜ್ಞಾನಜ್ಞೇಯ ಎರಡೂ ತಾನೇ ಆಗಿರುವನೆಂದು), ವ್ಯವಸ್ಥಾ–ವ್ಯವಸ್ಥೆಯು, ಭವಿಷ್ಯತಿ ಚ–ಸಿದ್ಧವಾಗು ತ್ತದೆ.

**ಕಿಂ ಜ್ಞಾನಪದಜನ್ಯಂ ಯಜ್ಜ್ಞಾನಂ ಸ್ವವಿಷಯಂ ಚ ತತ್ ।**
**ನ ಹಿ ತಸ್ಯಾಪ್ಯವೇದ್ಯಸ್ಯ ವ್ಯವಹಾರೋ ಭವನ್ಮತೇ ॥ ೨೨೩ ॥**

ಕ್ರಿಯಾ ಕರ್ಮಗಳ ಐಕ್ಯವಿರುವ ಬೇರೆ ಸ್ಥಲವನ್ನೂ ನಿರ್ದೇಶಿಸುತ್ತಾರೆ:

ಜ್ಞಾನಪದಜನ್ಯಂ – ಜ್ಞಾನ ಪದದಿಂದ ಹುಟ್ಟಿದ, ಯತ್ ಜ್ಞಾನಂ– ಯಾವ ಜ್ಞಾನವೋ, ತತ್ – ಅದು, ಸ್ವವಿಷಯಂ – ಸ್ವ (ತನ್ನ) ವಿಷಯ ವಾದುದು, ನ ಕಿಂ–ಆಗುವುದೇ ಇಲ್ಲವೇ ? (ಜ್ಞಾನ ಸಾಮಾನ್ಯ ಪದವಾಚಕ

---

ಪ್ರಮಾಣಬಲದಿಂದ ಒಂದೇ ವಸ್ತು ಎರಡೂ ವಿಧದಲ್ಲಿ ತಿಳಿಯಲ್ಪಡ ಬಹುದೆಂಬಲ್ಲಿ ಈ ಮುಂದಿನ ದೃಷ್ಟಾಂತವನ್ನು ಗಮನಿಸಬಹುದು ; ಅಭಿಧಾ ಎಂಬ ಶಬ್ದವಿದೆ; ಅಭಿಧಾ ಶಬ್ದವಾಚ್ಯವಾದುದು ನಾಮವು (ಹೆಸರು); ಅಭಿಧಾ ಎಂದರೆ 'ಹೀಗೆಂದು ಅರ್ಥ' ಎಂಬಲ್ಲಿ ವಾಚಕತ್ವವೂ ಇದೆ ; ಹೀಗೆ ವಾಚ್ಯತ್ವ, ವಾಚಕತ್ವಗಳೆರಡನ್ನೂ ಸಂದರ್ಭಾನುಸಾರ ತಿಳಿಯುವಂತೆ, ಪ್ರಮಾಣಾನು ಸಾರವಾಗಿ ಬ್ರಹ್ಮನಿಗೆ ಜ್ಞಾನಜ್ಞೇಯತ್ವಗಳೆರಡನ್ನೂ ತಿಳಿಯಬಹುದು(೨೨೨). ಜ್ಞಾ ಪದದ ಅರ್ಥವಾದ ಜ್ಞಾನವನ್ನು ಜ್ಞಾನವು ತಿಳಿಯುವುದಿಲ್ಲವೇನು ?

ವಾದ ಜ್ಞಾನ ಶಬ್ದಕ್ಕೆ ಜ್ಞಾನ ಮಾತ್ರವಿಷಯಕ ಜ್ಞಾನವನ್ನುಂಟುಮಾಡು ವುದೆಂಬ ನಿಯಮವಿರುವುದರಿಂದ, ಅದರಿಂದ ಹುಟ್ಟಿದ ಜ್ಞಾನವೆಂಬ ವಸ್ತುವಿನ ಜ್ಞಾನವೂ ಉಂಟಾಗುವುದೆಂಬುದು ಸರ್ವರಿಂದ ಅಂಗೀಕೃತವಾಗಿರುವುದರಿಂದ ಜ್ಞಾನ ಶಬ್ದಬೋಧ್ಯವಾದ ಜ್ಞಾನರೂಪವೇ ಆದ ಆತ್ಮವಿಷಯಕವೂ ಆಗಬಹು ದಾಗಿದೆ);[1] ತಸ್ಯ ಅಪಿ–ಜ್ಞಾನಪದ ಜನ್ಯ ಜ್ಞಾನಕ್ಕೆ, ಅವೇದ್ಯಸ್ಯ–ತಿಳಿಯದ (ಬ್ರಹ್ಮನಂತೆ ಅವೇದ್ಯನಾದ ವಸ್ತುವಿನ), ವ್ಯವಹಾರಃ – ವ್ಯವಹಾರವು, ಭವನ್ಮತೇ – ನಿನ್ನ ಮತದಲ್ಲಿ, ನ ಹಿ–ಇಲ್ಲವಷ್ಟೆ (ಬ್ರಹ್ಮನ ವಿಷಯದಲ್ಲಿ ಸ್ವ ವಿಷಯತ್ವವೇ ಸ್ವಪ್ರಕಾಶತ್ವವೆಂದು ಅದ್ವೈತಿಗೂ ಅಭಿಮತವಾಗಬೇ ಕಲ್ಲವೇ ?).[2]

**ತತ್ರ ಸ್ವವಿಷಯತ್ವಂ ತತ್ಸ್ವಪ್ರಕಾಶತ್ವಮಾಗತಂ ।**
**ಜಡೇಪಿ ಕ್ವಚಿದೇವಂ ಚೇಚ್ಚೇತನೇಷು ಕುತೋ ನ ತತ್ ॥ ೨೨೪ ॥**

(ತಿಳಿಯುತ್ತದೆ); ಮಾಯಿ ಮತದಲ್ಲಿಯೂ ಜ್ಞಾನಪದ ಜನ್ಯ ಜ್ಞಾನಕ್ಕೆ ಅವೇದ್ಯತ್ವ ವ್ಯವಹಾರವು (ಬ್ರಹ್ಮನ ಸ್ವಾವೇದ್ಯತ್ವದಂತೆ) ಇರುವುದಿಲ್ಲವಷ್ಟೆ (೨೨೩). ಆದ್ದರಿಂದ ಜ್ಞಾನದಲ್ಲಿ ಸ್ವವಿಷಯತ್ವವೆಂಬ ಸ್ವಪ್ರಕಾಶತ್ವವು (ಉಂಟೆಂಬ ವ್ಯವಹಾರವು) ಬಲಾತ್ಕಾರವಾಗಿ (ಅನಿಚ್ಛಿತವಾದರೂ) ಒಪ್ಪ

---

1 ಬಹು ಪುರುಷಸಹಾಯವಿದ್ದರೂ ನಪುಂಸಕನಿಗೆ (ಪುಂಸ್ತ್ವವು) ಪುರುಷತ್ವವು ಹೇಗೆ ಉಂಟಾಗುವುದಿಲ್ಲವೋ ಹಾಗೆ, ಜ್ಞಾನವು ಬಹು ವಸ್ತುಗಳನ್ನು ಗ್ರಹಿಸಿದರೂ ಸ್ವವಿಷಯವೆಂಬ ಒಂದನ್ನು ಮಾತ್ರ ತಿಳಿಯದೆಂಬುದು ಅರ್ಥವಿಲ್ಲದ ಮಾತು; ಪ್ರತ್ಯಕ್ಷ ಯೋಗ್ಯವಾದ ಸ್ವಪ್ರಕಾಶತ್ವವನ್ನು ಬ್ರಹ್ಮನಿಗೆ ಹೇಳುವವನಾದರೂ ಸ್ವವಿಷಯಕ ಜ್ಞಾನವುಳ್ಳವನೆಂದು ಅಂಗೀಕರಿಸಬೇಕು; ಜ್ಞಾನಪದವು ಸ್ವವಿಷಯವನ್ನು (ಜ್ಞಾನ ಸ್ವರೂಪವೆಂಬ ತನ್ನನ್ನು ತಿಳಿಯುತ್ತದೆ—ಜ್ಞಾನವು ವಿಷಯೀಕರಿಸಿದ (ಅನ್ಯವನ್ನು) ಅನ್ಯವಸ್ತುಗಳನ್ನು ತಿಳಿಯುತ್ತದೆ ಎಂಬಂತೆ.

2 ಜ್ಞಾನಪದದಿಂದಾದ ಜ್ಞಾನವನ್ನು ಜ್ಞಾನವು ವಿಷಯೀಕರಿಸುತ್ತದೆಂದು ಎಲ್ಲರೂ ಅಂಗೀಕರಿಸುವರಷ್ಟೆ; ಬ್ರಹ್ಮನು ಅವೇದ್ಯನಾಗಿರುವಂತೆ ಜ್ಞಾನವೂ ಅವೇದ್ಯವೆಂದೂ, ಅದೇ ವ್ಯವಹಾರಕ್ಕೆ ವಿಷಯವಾಗುತ್ತದೆಂದೂ ಅದ್ವೈತಿಗಳೂ ಹೇಳುವುದಿಲ್ಲ; ಜ್ಞಾನ ಪದದಿಂದ ಉಂಟಾದ ಜ್ಞಾನದ ಜ್ಞಾನವೆಂದರೆ ಸ್ವಪ್ರಕಾಶತ್ವವೆಂಬುದಕ್ಕೆ ಸ್ವವಿಷಯತ್ವ ವೆಂದೇ ಅರ್ಥವು ಸಿದ್ಧವಾಗುತ್ತದೆ.

ತತ್—ಆದ್ದರಿಂದ, ತತ್ರ – ಜ್ಞಾನದಲ್ಲಿ, ಸ್ವವಿಷಯತ್ವಂ—ಸ್ವವಿಷಯತ್ವ ರೂಪದ, ಸ್ವಪ್ರಕಾಶತ್ವಂ—ಸ್ವಪ್ರಕಾಶತ್ವವು, ಆಗತಂ—(ಅವಶ್ಯ ಒಪ್ಪಬೇಕಾಗಿ) ಬಂದಿತು; ಜಡೇ ಅಪಿ—ಜಡ ಜ್ಞಾನದಲ್ಲಿಯೂ, ಕ್ವಚಿತ್—ಕೆಲವು ಕಡೆ, ಏವಂ ಚೇತ್ – ಹೀಗಿರುತ್ತಿರಲು, ಚೇತನೇಷು – ಚೇತನರಲ್ಲಿ, ತತ್—ಅದು (ಸ್ವ ವಿಷಯತ್ವರೂಪದ ಸ್ವಪ್ರಕಾಶತ್ವವು ), ಕುತಃ ನ – ಏಕೆ ಇರುವುದಿಲ್ಲ ? (ಯುಕ್ತವೇ ಆಗುತ್ತದೆ).

**ಯದಿ ಸ್ವಾವೇದ್ಯತಾಸ್ವಪ್ರಕಾಶತ್ವಮಿತಿ ಮನ್ಯಸೇ ॥ ೨೨೫ ॥**
**ತದಾ ವದಾಮ ಶಬ್ದಸ್ಯ ವಿರುದ್ಧಾರ್ಥಪರಿಗ್ರಹೇ ।**
**ಕೋ ಹೇತುರಿತಿ ಯದ್ಯೇಕಸ್ಯೈವ ಕರ್ತೃತ್ವಕರ್ಮತೇ ॥ ೨೨೬ ॥**
**ವಿರುದ್ಧೇ ಇತಿ ಭೀತೋಽಸಿ ಶಬ್ದಾಯೋಗ್ಯಾರ್ಥಕಲ್ಪನಾತ್ ।**
**ಕುತೋ ನ ಭೀಃ ಕಿಂ ಚ ಸಾ ಭೀರ್ಧಾವಂತಂ ತ್ವಾನುಧಾವತಿ॥೨೨೭॥**

ಸ್ವಾವೇದ್ಯತಾಸ್ವಪ್ರಕಾಶತ್ವಂ—ತನ್ನಿಂದ ತಿಳಿಯಲಾಗದ ಸ್ವಪ್ರಕಾಶತ್ವ ವನ್ನು, ಇತಿ—ಎಂದು, ಯದಿ ಮನ್ಯಸೇ—(ನೀನು) ತಿಳಿಯುವುದಾದರೆ, ತದಾ— ಆಗ, ಶಬ್ದಸ್ಯ – (ಸ್ವಪ್ರಕಾಶನೆಂಬ) ಶಬ್ದಕ್ಕೆ, ವಿರುದ್ಧಾರ್ಥಪರಿಗ್ರಹೇ – ('ಸ್ವಾವೇದ್ಯತ್ವೇ ಸತಿ ಅಪರೋಕ್ಷವ್ಯವಹಾರಯೋಗ್ಯತ್ವಂ ಸ್ವಪ್ರಕಾಶತ್ವಂ'—

---

ಬೇಕಾಗಿ ಬಂದಿತು; ಜಡಜ್ಞಾನದಲ್ಲಿಯೂ ಸ್ವವಿಷಯಕ ಜ್ಞಾನವೆಂಬ ಸ್ವಪ್ರಕಾಶತ್ವವು ಪ್ರಾಪ್ತವಾಗುತ್ತಿರಲು, ಸಾಕ್ಷಿಜ್ಞಾನದಲ್ಲಿ ಉಂಟೆಂದು ಅಂಗೀ ಕರಿಸಲೇಬೇಕಲ್ಲವೇ ? (ಹಾಗೆಯೇ ಸರಿ) (೨೨೪). ನೀನು (ಮಾಯಾ ವಾದಿಯು) ಸ್ವಾವೇದ್ಯತ್ವವನ್ನೇ (ತನ್ನನ್ನು ತಾನು ತಿಳಿಯಲಾರನೆಂಬುದನ್ನೇ) ಸ್ವಪ್ರಕಾಶತ್ವವೆಂದು ತಿಳಿಯುವುದಾದರೆ, ಶಬ್ದಬೋಧ್ಯವಾದ ಅರ್ಥಕ್ಕೆ ವಿರುದ್ಧವಾದ ಅರ್ಥವನ್ನು ಅಂಗೀಕರಿಸಲು ಏನು ಕಾರಣವೆಂದು ನಾವು (ತತ್ವವಾದಿಗಳು) ಕೇಳುತ್ತೇವೆ; ಕರ್ತೃತ್ವವೂ (ತಿಳಿಯುವ ಭಾವವೂ), ಕರ್ಮತ್ವವೂ (ತಿಳಿಯಲ್ಪಡುವಿಕೆಯೂ) ಒಬ್ಬನಲ್ಲಿ ವಿರೋಧವೆಂದು ಕಾರಣ ವನ್ನು ಹೇಳಿದರೆ, ಸ್ವಪ್ರಕಾಶನೆಂಬ ಪದದ ಅರ್ಥವನ್ನು ತ್ಯಜಿಸಿ ಅವೇದ್ಯತ್ವ ವನ್ನು ತಿಳಿಯುವುದರಲ್ಲಿ ಈ ವಿರೋಧದ ಭಯವಿರಲಿಲ್ಲವೇ ? ಎಂದೂ ಕೇಳು ತ್ತೇವೆ; ಹೀಗೆ ಭೀತನಾಗಿ ಬ್ರಹ್ಮನಿಗೆ ಸ್ವಾವೇದ್ಯತ್ವವನ್ನು ತಿಳಿದರೆ

ತನ್ನಿಂದ ತಿಳಿಯಲಾಗದಿದ್ದು, ಪ್ರತ್ಯಕ್ಷವ್ಯವಹಾರಯೋಗ್ಯವಾದುದು ಸ್ವಪ್ರಕಾಶತ್ವವು, ಎಂದು ಅದ್ವೈತಿಗಳ ಸ್ವಪ್ರಕಾಶತ್ವದ ಪರಿಷ್ಕಾರವಿದ್ದು, ವಿರುದ್ಧವಾದ ಅನ್ಯಾರ್ಥವನ್ನು – ಅಪ್ರಕಾಶತ್ವರೂಪದ ವಿರುದ್ಧಾರ್ಥವನ್ನೇ ಅಂಗೀಕರಿಸಲು, ಕೋ ಹೇತುಃ ಇತಿ–ಏನು ಕಾರಣವೆಂದು, ವದಾಮ–ಕೇಳುತ್ತೇವೆ; ಯದಿ–ಒಂದು ಪಕ್ಷ, ಏಕಸ್ಯ ಏವ–ಒಬ್ಬನಿಗೇ, ಕರ್ತೃತ್ವಕರ್ಮತೇ–ಕರ್ತೃತ್ವ ಕರ್ಮತ್ವಗಳು, ವಿರುದ್ಧೇ – ವಿರುದ್ಧವಾದವುಗಳು, ಇತಿ–ಎಂದು, ಭೀತಃ ಅಸಿ –ಭಯವುಳ್ಳವನಾದರೆ, ಶಬ್ದಾಯೋಗ್ಯಾರ್ಥಕಲ್ಪನಾತ್ – (ಸ್ವಪ್ರಕಾಶನೆಂಬ) ಶಬ್ದಕ್ಕೆ ಉಚಿತವಲ್ಲದ ಅರ್ಥವನ್ನು ಕಲ್ಪಿಸುವುದರಿಂದ (ಹೇಳುವುದರಿಂದ), ಕುತಃ–ಏಕೆ, ನ ಭೀಃ–ಭಯಪಡುವುದಿಲ್ಲ (ಭಯವಿಲ್ಲ); ಕಿಂಚ–ಮತ್ತೇನೆಂದರೆ, ಸಾ ಭೀಃ–ಆ (ಕರ್ತೃತ್ವ ಕರ್ಮತ್ವಗಳು ವಿರುದ್ಧವೆಂಬ) ಭಯವು, ಧಾವಂತಂ–ಓಡುತ್ತಿರುವ, ತ್ವಾ–ನಿನ್ನನ್ನು, ಅನುಧಾವತಿ–ಹಿಂದೆಯೇ ಬೆನ್ನುಹತ್ತುತ್ತದೆ (ಹೇಗೆಂಬುದನ್ನು ಮುಂದಿನ ಶ್ಲೋಕಗಳಿಂದ ತಿಳಿಯಿರಿ).

**ದೋಷೋಽಯಂ ಪರವೇದ್ಯತ್ವೇ ಸಮೋ ಯಸ್ಮಾದ್ವಿಚಾರಣೇ ।**
**ಆತ್ಮನೋ ವೃತ್ತಿವೇದ್ಯತ್ವೇ ಕರ್ತೃಕರ್ಮೈಕ್ಯಮಾಗತಂ ॥ ೨೨೮ ॥**
**ಸುಖಾದೇಃ ಸಾಕ್ಷಿವೇದ್ಯತ್ವೇ ಕ್ರಿಯಾಕರ್ತ್ರೈಕ್ಯಮಾಪತೇತ್ ।**
**ಕ್ರಿಯಾಕರ್ಮೈಕ್ಯಮಪ್ಯೇವಂ ನ್ಯಾಯಸಾಮ್ಯಾತ್ಕುತೋ ನ ತೇ ॥**

---

ಈ ಭಯವು, (ಕರ್ತೃ ಕರ್ಮತ್ವಗಳು ವಿರೋಧವೆಂಬ ಭೀತಿಯು) ಓಡುವ ನಿನ್ನನ್ನು ಬಿಡದೆ ಬೆನ್ನು ಹತ್ತುತ್ತದೆ (೨೨೫–೨೨೭). ಒಬ್ಬನಿಗೇ ಕರ್ತೃತ್ವ ಕರ್ಮತ್ವವೆಂಬ ದೋಷವು ಮಾನಸಿಕ ಜ್ಞಾನದಿಂದ ತಿಳಿಯಲಾಗುತ್ತದೆಂದರೆ, ಆಗಲೂ 'ಮನಸಾ ಅಹಂ ಮಾಂ ಜಾನಾಮಿ'–ಮನಸ್ಸಿನಿಂದ ನಾನು ನನ್ನನ್ನು ತಿಳಿಯುತ್ತೇನೆಂಬ ಜ್ಞಾನದಲ್ಲಿ ಆತ್ಮನಿಗೆ ಕರ್ತೃತ್ವ ಕರ್ಮತ್ವಗಳೆರಡೂ ಪ್ರಾಪ್ತವಾಗುತ್ತದೆ; ಮನೋವೃತ್ತಿಜ್ಞಾನದಿಂದ ಕರ್ತೃತ್ವ ಕರ್ಮತ್ವಗಳೆರಡೂ ತಿಳಿಯುವುದಿಲ್ಲ; ಮತ್ತೇನೆಂದರೆ ಸಾಕ್ಷಿಜ್ಞಾನದಿಂದ ತಿಳಿಯುತ್ತದೆಂದರೆ (ಸುಖಜ್ಞಾನಾದಿಗಳನ್ನು ಗ್ರಹಿಸುವ) ಸಾಕ್ಷಿಯು ಆತ್ಮರೂಪವೇ ಆದ್ದರಿಂದ ಕ್ರಿಯಾಕರ್ತೃತ್ವಗಳು ಒಬ್ಬನಲ್ಲಿ ಪ್ರಾಪ್ತವಾಗುತ್ತವೆ; ತಿಳಿಯುವುದೆಂಬ ಕ್ರಿಯೆಯೂ, ತಿಳಿಯುವನಾದ ಆತ್ಮನೂ(ಕರ್ತೃವೂ)ಒಬ್ಬನಲ್ಲಿ ಬಂದಂತಾಗುತ್ತದೆ; ಹೀಗೆಯೇ

ಅಯಂ ದೋಷಃ–ಒಬ್ಬನಿಗೇ ಕರ್ತೃ ಕರ್ಮತ್ವವೆಂಬ ದೋಷವು, ಪರವೇದ್ಯತ್ವೇ–(ಆತ್ಮಭಿನ್ನ) ಮನೋವೃತ್ತಿಯಿಂದ ತಿಳಿಯಲಾಗುತ್ತದೆಂದರೆ (ಹಾಗೆ ಹೇಳಿದಲ್ಲಿ), ಯಸ್ಮಾತ್–ಯಾವ ಕಾರಣದಿಂದ, ವಿಚಾರಣೇ–ವಿಮರ್ಶೆ ಮಾಡುವುದಾದರೆ, ಸಮಃ–ಸಮವಾಗುತ್ತದೆ; ಆತ್ಮನಃ–ಆತ್ಮನಿಗೆ, ಮನೋವೃತ್ತಿವೇದ್ಯತ್ವೇ–'ಮನಸಾ ಅಹಂ ಮಾಂ ಜಾನಾಮಿ'–ಮನಸ್ಸಿನಿಂದ ನಾನು ನನ್ನನ್ನು ತಿಳಿಯುತ್ತೇನೆಂಬ ಜ್ಞಾನದಲ್ಲಿ, ಕರ್ತೃಕರ್ಮೈಕ್ಯಂ–(ಬ್ರಹ್ಮನಿಗೆ) ಆತ್ಮನಿಗೆ (ಅಹಂ) ಕರ್ತೃ, (ಮಾಂ) ಕರ್ಮತ್ವಗಳೆರಡೂ, ಆಗತಂ – ಪ್ರಾಪ್ತವಾಯಿತು ; ಸುಖಾದೇಃ–ಸುಖಾದಿಗಳಿಗೆ, ಸಾಕ್ಷಿವೇದ್ಯತ್ವೇ–(ಮನೋವೃತ್ತಿಯಿಂದಲ್ಲದೇ) ಸಾಕ್ಷಿಯಿಂದ ವೇದ್ಯತ್ವವನ್ನು (ತಿಳಿಯಲ್ಪಡುವಿಕೆಯನ್ನು) ಹೇಳಿದರೆ, ಕ್ರಿಯಾಕರ್ತ್ರೈಕ್ಯಂ–ಕ್ರಿಯಾಕರ್ತೃತ್ವಗಳು ಒಬ್ಬನಲ್ಲಿ, ಆಪತೇತ್–ಬಂದೊದಗುತ್ತದೆ (ಸುಖಜ್ಞಾನವು ಸಾಕ್ಷಿರೂಪವೇ ಆದ್ದರಿಂದ—ಸಾಕ್ಷಿಯೂ ಆತ್ಮನೂ ಒಂದೇ ಆದ್ದರಿಂದ ಸುಖವನ್ನು ತಿಳಿಯುವುದೆಂಬ ಕ್ರಿಯೆಯೂ, ತಿಳಿಯುವವನಾದ ಆತ್ಮನೂ (ಕರ್ತೃವೂ) ಆದ್ದರಿಂದ ಕ್ರಿಯಾಕರ್ತೃತ್ವಗಳು ಏಕತ್ರ ಬಂದವು); ಏವಂ–ಹೀಗೆಯೇ, ಕ್ರಿಯಾಕರ್ಮೈಕ್ಯಂ ಅಪಿ–ಕ್ರಿಯಾ (ತಿಳಿಯುತ್ತೇನೆ) ಕರ್ಮ (ನನ್ನನ್ನು) ಗಳೆರಡೂ ಸಹ, (ಮತ್ತು ಸುಖಾನುಭವ ರೂಪದ ಕ್ರಿಯೆಯೂ) (ಏವಂ ಚ ಮೂರೂ), ನ್ಯಾಯಸಾಮ್ಯಾತ್–ಯುಕ್ತಿಸಾಮ್ಯದಿಂದ, ತೇ–ನಿನಗೆ, ಕುತಃ ನ–ಏಕೆ ಸಿದ್ಧಿಸುವುದಿಲ್ಲ ?

**ಕಿಂ ಚ ಸಾಕ್ಷ್ಯೇವ ವಿಷಯಾವಚ್ಛಿನ್ನಾಽಜ್ಞಾನದೃಕ್ ತ್ವಯಾ ।**
**ವಾಚ್ಯಾವಶ್ಯಂ ಯತೋ ವೃತ್ತಿನಾಶ್ಯಸ್ಯಾನ್ಯಾತ್ರ ನೈವ ದೃಕ್ ॥೨೩೦॥**

ಪರನ (ಎದುರುವಾದಿಯ) ಮುಖದಿಂದಲೇ ಚಿದ್ರೂಪನಾದ ಆತ್ಮನಿಗೆ ಸ್ವವಿಷಯತ್ವವನ್ನು (ತಾನೇ ವಿಷಯನಾಗಿ, ತನ್ನನ್ನೇ ತಿಳಿಯುವನೆಂಬುದನ್ನು) ಒಪ್ಪಿಸಲು ಮುಂದಿನ ಯುಕ್ತಿಗಳನ್ನು ಹೇಳುತ್ತಾರೆ :—

---

ನಾನು ನನ್ನನ್ನು ತಿಳಿಯುತ್ತೇನೆಂಬಲ್ಲಿ ಕ್ರಿಯಾ, ಕರ್ಮ, ಕರ್ತೃತ್ವಗಳು ಮೂರೂ ಒಬ್ಬ ಆತ್ಮನಲ್ಲಿ (ಯುಕ್ತಿಸಾಮ್ಯದಿಂದ) ಸಿದ್ಧವಾಗುವುದಿಲ್ಲವೇ ? (ಆಗುತ್ತದೆ) (೨೨೮–೨೨೯). ಮನೋವೃತ್ತಿಜ್ಞಾನದಿಂದ ಅಜ್ಞಾನದ ನಾಶವಾಗುವುದು; ಈ ಜ್ಞಾನಕ್ಕೆ ಅಜ್ಞಾನವಿಶಿಷ್ಟನಾದ ಆತ್ಮನಲ್ಲಿರುವ ಕೇವಲ

ಕಿಂಚ–ಮತ್ತೇನೆಂದರೆ, ಸಾಕ್ಷೀ ಏವ – ಸಾಕ್ಷಿಯೇ (ಸಾಕ್ಷಿರೂಪನಾದ ಆತ್ಮನೇ), ವಿಷಯಾವಚ್ಛಿನ್ನಾಜ್ಞಾನದೃಕ್ – (ನನ್ನನ್ನು ತಿಳಿಯುವುದಿಲ್ಲ ವೆಂಬಲ್ಲಿ) ವಿಷಯೀಭೂತನಾದ ಆತ್ಮನಿಂದ ವಿಶಿಷ್ಟವಾದ (ಸಹಿತವಾದ) ಅಜ್ಞಾನವನ್ನು ತಿಳಿಯುವವನೆಂದು, ತ್ವಯಾ – (ಮಾಯಾವಾದಿಯಾದ) ನಿನ್ನಿಂದ, ಅವಶ್ಯಂ ವಾಚ್ಯಾ–ಅವಶ್ಯವಾಗಿ ಹೇಳಲ್ಪಡಬೇಕಷ್ಟೆ (ಈ ಅಜ್ಞಾನದ ಜ್ಞಾನದಲ್ಲಿ (ನನ್ನನ್ನು ತಿಳಿಯೆನೆಂಬ ಜ್ಞಾನದಲ್ಲಿ), ಅಜ್ಞಾನವೆಂಬ ವಿಷಯವೂ ತದವಚ್ಛೇದಕ ಆತ್ಮಾ, ಎಂದರೆ ವಿಶೇಷಣನಾದ ಆತ್ಮನೂ, ಎರಡೂ ಸಾಕ್ಷಿ ಯಿಂದಲೇ ಗ್ರಹಿಸಲ್ಪಡಬೇಕಷ್ಟೆ) (ಆತ್ಮನ ಅಜ್ಞಾನ ಎಂಬಲ್ಲಿ ಅಜ್ಞಾನಕ್ಕೆ ಆತ್ಮನು ವಿಶೇಷಣನು); ಯತಃ – ಏಕೆಂದರೆ, ವೃತ್ತಿನಾಶ್ಯಸ್ಯ–ವೃತ್ತಿಜ್ಞಾನ ದಿಂದ (ಮನಃ ಪರಿಣಾಮರೂಪದ ಜ್ಞಾನದಿಂದ) ನಾಶವಾಗುವ ಅಜ್ಞಾನಕ್ಕೆ, ಅತ್ರ–(ಅಜ್ಞಾನವಿಶಿಷ್ಟನಾದ) ಆತ್ಮನಲ್ಲಿ, ಅನ್ಯಾ–(ಸಾಕ್ಷಿಯಿಂದ ಭಿನ್ನವಾದ ಮನೋವೃತ್ತಿರೂಪಜ್ಞಾನವು, ದೃಕ್ – ತಿಳಿಯುವುದು, ನೈವ–ಆಗುವುದೇ ಇಲ್ಲ.[1]

---

ಅಜ್ಞಾನವನ್ನು, (ಆತ್ಮನನ್ನು ಬಿಟ್ಟು) ಸಾಕ್ಷಿರೂಪ ಜ್ಞಾನವಿಲ್ಲದೇ, ತಿಳಿಯುವ ಸಾಮರ್ಥ್ಯವು ಉಂಟಾಗುವುದಿಲ್ಲವಾದ್ದರಿಂದ, 'ಅಹಂ ಮಾಂ ನ ಜಾನಾಮಿ' ಎಂಬ ಜ್ಞಾನದಲ್ಲಿರುವ, ಅಜ್ಞಾನವನ್ನು ಸಾಕ್ಷಿಯೇ ತಿಳಿಯಬೇಕಾಗುತ್ತದೆ; ಹೀಗೆ ಒಪ್ಪಿದರೆ, ಸಾಕ್ಷಿಯೇ ಆತ್ಮಸಹಿತವಾದ ಅಜ್ಞಾನವನ್ನು ತಿಳಿಯುವುದ ರಿಂದ, ಆತ್ಮ ಮತ್ತು ಅಜ್ಞಾನ, ಎರಡನ್ನೂ ಒಂದಿಗೇ ತಿಳಿಯುತ್ತಾನೆಂದು ಒಪ್ಪಿದಂತಾಗುತ್ತದೆ; ಸಾಕ್ಷಿಜ್ಞಾನವು, ಆತ್ಮನಿಂದ ಅಭಿನ್ನವಾದುದು; ಆದ್ದ ರಿಂದ ಆತ್ಮನು ತನ್ನನ್ನು ತಾನೇ ತಿಳಿಯುತ್ತಾನೆಂದೂ ಒಪ್ಪಿದಂತಾಗುತ್ತದೆ; ಅವಶ್ಯವಾಗಿ ಕರ್ತೃಕರ್ಮತ್ವಗಳೆರಡೂ ಒಬ್ಬನಲ್ಲಿರುವುವೆಂದೂ, ಸಹ ಪ್ರಾಪ್ತ ವಾಗುತ್ತದೆ (೨೩೦).

---

1 'ಮಾಂ ನ ಜಾನಾಮಿ' ಎಂಬ ಜ್ಞಾನದಲ್ಲಿ (ತಿಳುವಳಿಕೆಯಲ್ಲಿ) ಅಜ್ಞಾನವು ವಿಷಯು, ಆತ್ಮನು ವಿಶೇಷಣವಾಗಿರುತ್ತದೆ; 'ನನ್ನ ವಿಷಯಕ ಅಜ್ಞಾನವು ನನಗೆ ಇದೆ' ಎಂದರೆ ಅಜ್ಞಾನದೊಂದಿಗೆ ತದ್ವಿಶಿಷ್ಟನಾದ ಆತ್ಮನನ್ನೂ ತಿಳಿಯಬೇಕಷ್ಟೆ; ಈ ಜ್ಞಾನವು ಸಾಕ್ಷಿಗೇ (ಆತ್ಮನಿಗೇ) ಉಂಟಾಗುವುದೆಂದು ಮಾಯಾವಾದಿಯು ಅವಶ್ಯವಾಗಿ ಒಪ್ಪಲೇ ಬೇಕು. ವಿಶಿಷ್ಟದ ಜ್ಞಾನವು ವಿಶೇಷಣವನ್ನು ಬಿಟ್ಟು ಉಂಟಾಗಲು ಅವಕಾಶವಿಲ್ಲ;

**ವಿಷಯಶ್ಚ ಸ್ವಯಂ ತಸ್ಯ ಸ್ವಾವೇದ್ಯತ್ವೇ ಚ ಕೀರ್ತಿತೇ ।**
**ಅಜ್ಞಾನವೇದನಸ್ಯೈವ ಭವೇದತ್ಯಂತವೇದನಾ ।**
**ಅವಚ್ಛೇದಕದೃಗ್ವ್ಯಾಪ್ತಂ ಯತೋಽವಚ್ಛಿನ್ನದರ್ಶನಂ ॥ ೨೩೧ ॥**

ವಿಷಯಃ ಚ–ಅಜ್ಞಾನವಿಷಯನಾದರೋ, ಸ್ವಯಂ–ಆತ್ಮನೇ ; ತಸ್ಯ–ಆತನಿಗೆ, ಸ್ವಾವೇದ್ಯತ್ವೇ – ತಾನೇ ತಿಳಿಯದವನೆಂದು (ತನ್ನ ಜ್ಞಾನವಾಗಲಾರದೆಂದು), ಕೀರ್ತಿತೇ – ಹೇಳಿದರೆ, ಅಜ್ಞಾನವೇದನಸ್ಯ – ಅಜ್ಞಾನದ ಜ್ಞಾನಕ್ಕೆ (ಗ್ರಹಿಕೆಗೆ), ಏವ–ಅವಶ್ಯವಾಗಿ, ಅತ್ಯಂತವೇದನಾ–ಅತಿ ಸಂಕಟವು, ಭವೇತ್–ಉಂಟಾಗುತ್ತದೆ (ಉಕ್ತ ರೀತಿಯಿಂದ, ಅನ್ಯವಿಧದಿಂದ ತಿಳಿಯಲು ಮಾರ್ಗವಿಲ್ಲ) ; (ಏಕೆಂದರೆ), ಯತಃ – ಯಾವ ಕಾರಣದಿಂದ ಎಂದರೆ, ಅವಚ್ಛೇದಕದೃಗ್ವ್ಯಾಪ್ತಂ – ವಿಶೇಷಣದ ಜ್ಞಾನದಿಂದ ವ್ಯಾಪ್ತವಾದುದು (ಕೂಡಿಯೇ ಇರುವುದು), ಅವಚ್ಛಿನ್ನದರ್ಶನಂ–ವಿಶಿಷ್ಟದ (ವಿಷಯ ಅಥವಾ ವಸ್ತುವಿನ) ಜ್ಞಾನವು ; (ವಿಶೇಷಣಜ್ಞಾನವಿಲ್ಲದೇ ವಸ್ತುಜ್ಞಾನವೆಂಬುದಿಲ್ಲ).

---

ಅದೂ ಅಲ್ಲದೇ, ಅಜ್ಞಾನದ ವಿಷಯನಾದ ಆತ್ಮನು, ಸ್ವಯಂ ತನ್ನನ್ನು ತಾನು ತಿಳಿಯಲಾರನೆಂದರೆ, ಅಜ್ಞಾನದ ಜ್ಞಾನವು (ತನ್ನ ಅಜ್ಞಾನದ ತಿಳುವಳಿಕೆಯು) ತನಗೆ ಉಂಟಾಗುವುದು ಹೇಗೆಂಬುದನ್ನು ನಿರ್ವಹಿಸಬೇಕಾದ

---

ಆತ್ಮನನ್ನು ಬಿಟ್ಟು ಆತ್ಮನ ಅಜ್ಞಾನವನ್ನು ಮಾತ್ರ ತಿಳಿಯುವುದು ಹೇಗೆ? ಆತ್ಮಸ್ವರೂಪವೇ ಆದ ಸಾಕ್ಷೀಜ್ಞಾನವು 'ಆತ್ಮನ ಅಜ್ಞಾನ' ಎಂಬ ಜ್ಞಾನದಲ್ಲಿ ಕೂಡಿರುವ ಆತ್ಮ ಮತ್ತು ಅಜ್ಞಾನಗಳೆರಡನ್ನೂ ಏಕದಾ ಗ್ರಹಿಸುವುದಿಲ್ಲ ; ಮತ್ತೇನೆಂದರೆ, ಸಾಕ್ಷಿಯು ಅಜ್ಞಾನವನ್ನು ಮಾತ್ರ ಗ್ರಹಿಸುತ್ತದೆ—ಆತ್ಮನನ್ನಲ್ಲ ಎಂದರೆ, ಮಾನಸಿಕ (ವೃತ್ತಿ) ಜ್ಞಾನವು ಆತ್ಮನ ಯಥಾರ್ಥಸ್ವರೂಪದ ಜ್ಞಾನವನ್ನುಂಟುಮಾಡಿದಾಗ ಆತ್ಮನನ್ನು ಆಶ್ರಯಿಸಿದ ಅಜ್ಞಾನವು ಪರಿಹಾರವಾಗುವುದೆಂದು ಮಾಯಾಮತವಾದ್ದರಿಂದ ಅಜ್ಞಾನದಿಂದ (ಮಾನಸಜ್ಞಾನದಿಂದ) ಸ್ವರೂಪಜ್ಞಾನವಾಗಬಹುದಲ್ಲದೇ ಅಜ್ಞಾನದ ಪರಿಹಾರಕ್ಕೆ ಅವಕಾಶವಿಲ್ಲದಂತಾಗುತ್ತದೆ. ಆದ್ದರಿಂದ ಮನೋವೃತ್ತಿಜ್ಞಾನದಿಂದ ಸಹ ಆತ್ಮವಿಶಿಷ್ಟ ಅಜ್ಞಾನದ (ಎರಡರ) ಜ್ಞಾನವಾಗುವುದೆಂದೇ ಹೇಳಬೇಕು ; ಏವಂ ಚ 'ನನ್ನ ಅಜ್ಞಾನ'ದ ಜ್ಞಾನವೆಂಬ ಅನುಭವದಲ್ಲಿ ಸಹ 'ಆತ್ಮ'ನ ಜ್ಞಾನವಾಗುತ್ತದೆಂದು ಒಪ್ಪಲೇಬೇಕಾಗುತ್ತದೆ—ಎಲ್ಲ ಜ್ಞಾನವೂ ಸಾಕ್ಷಿಗ್ರಾಹ್ಯವೇ ಆದುದರಿಂದ ಕೇವಲ ಮನೋವೃತ್ತಿಜ್ಞಾನದಿಂದ ಆತ್ಮನ ಅಜ್ಞಾನದ ಜ್ಞಾನವಾಗುವುದಿಲ್ಲ.

**ಜ್ಞಾನರೂಪತ್ವತಃ ಕಿಂ ಸ್ಯಾತ್ತತ್ತದ್ಗೋಚರತಾಂ ವಿನಾ ।**
**ಘಟಜ್ಞಾನಂ ಜ್ಞಾನಮಿತಿ ಕಿಮನ್ಯವ್ಯವಹಾರಕೃತ್ ॥ ೨೩೨ ॥**

ಆತ್ಮನ ಜ್ಞಾನವಿಲ್ಲದಿದ್ದರೂ ಆತನಿಂದ ಕೂಡಿದ ಅಜ್ಞಾನಕ್ಕೆ ಜ್ಞಾನ ರೂಪವಿರುವುದರಿಂದ (ಅಜ್ಞಾನದ ಜ್ಞಾನವು ಜ್ಞಾನರೂಪವಾದುದರಿಂದ) ಜ್ಞಾನವ್ಯವಹಾರಾದಿಗಳು ಸಂಭವಿಸುತ್ತದೆಂದರೆ ಹೇಳುತ್ತಾರೆ :—

ತತ್ತದ್ಗೋಚರತಾಂ ವಿನಾ—ಆಯಾ ವಸ್ತುವಿನ (ವಿಷಯದ) ಗ್ರಹಣ ವಿಲ್ಲದೇ, ಜ್ಞಾನರೂಪತ್ವತಃ—(ಕೇವಲ) ಜ್ಞಾನರೂಪದ ಜ್ಞಾನದಿಂದ, ಕಿಂ ಸ್ಯಾತ್ — ಏನಾಗುತ್ತದೆ ? (ಯಾವ ವ್ಯವಹಾರವೂ ನಡೆಯುವುದಿಲ್ಲ) ; (ಏಕೆಂದರೆ), ಘಟಜ್ಞಾನಂ — ಘಟಜ್ಞಾನವು, ಜ್ಞಾನಂ ಇತಿ — ಜ್ಞಾನರೂಪ ವಾಗಿರುತ್ತೆಂಬ ಮಾತ್ರದಿಂದ (ಜ್ಞಾನದಿಂದ ವಿಷಯೀಕರಿಸಲಾದ ಘಟಾನ್ಯ ಪಟಾದಿಗಳಿಗೆ) ಅನ್ಯವ್ಯವಹಾರಕೃತ್ ಕಿಂ—(ಘಟಜ್ಞಾನವು ಪಟಾದಿ) ಅನ್ಯ ವಸ್ತುವ್ಯವಹಾರವನ್ನು ನಿರ್ವಹಿಸುವುದು ಆಗುವುದೇ ? (ಘಟವ್ಯವಹಾರಕ್ಕೆ

---

ಸಂಕಟವು (ಕಷ್ಟವು) ಪ್ರಾಪ್ತವಾಗುತ್ತದೆ; ಅನ್ಯರೀತಿಯಿಂದ ಆ ಜ್ಞಾನ ವುಂಟಾಗುವುದಕ್ಕೆ ಮಾರ್ಗವೇ ಇಲ್ಲ; ಏಕೆಂದರೆ, ವಿಶಿಷ್ಟದ ಜ್ಞಾನವು, ವಿಶೇಷಣಸಹಿತವಾಗಿ ಉಂಟಾಗುವುದೇ ನಿಯಮವು ; ವಿಶಿಷ್ಟಜ್ಞಾನವು (ವಸ್ತುಜ್ಞಾನವು) ವಿಶೇಷಣಜ್ಞಾನದಿಂದ ವ್ಯಾಪ್ತವಾಗಿರುತ್ತದೆ; (ವಸ್ತುಧರ್ಮ ವನ್ನು ಬಿಟ್ಟು, ವಸ್ತುವಿಲ್ಲ—ವಿಶಿಷ್ಟವೇ ವಸ್ತು, ವಿಶೇಷಣವೇ ಧರ್ಮವು ; ಮತ್ತು ಅವಿಚ್ಛಿನ್ನವೇ ವಿಶಿಷ್ಟವು—ವಿಶೇಷಣವೇ ಅವಚ್ಛೇದಕವು) (೨೩೧). ಜ್ಞಾನವು ಆಯಾ ವಸ್ತುಗಳನ್ನು ಗ್ರಹಿಸಿದ್ದರೆ ಮಾತ್ರ ವ್ಯವಹಾರೋಪಯೋಗಿ ಯಾಗುತ್ತದೆ; ಹಾಗಲ್ಲದೆ, ಕೇವಲ ಜ್ಞಾನವು ( ಜ್ಞಾನರೂಪದ ಜ್ಞಾನವು ) ಯಾವ ಉಪಯೋಗಕ್ಕೂ ಬರುವುದಿಲ್ಲ; ಘಟಜ್ಞಾನವು, ಘಟಜ್ಞಾನರೂಪ ಮಾತ್ರದಿಂದಿದ್ದರೆ, ಘಟಭಿನ್ನಗಳಾದ ಪಟಾದಿಗಳ ವ್ಯವಹಾರವನ್ನು ನಿರ್ವಹಿಸ ಲಾರದಷ್ಟೆ; ಹೀಗೆಯೇ, ಅಜ್ಞಾನದ ಜ್ಞಾನವು, ಕೇವಲ ಜ್ಞಾನರೂಪ ದಿಂದಿದ್ದು, ಸ್ವವಿಷಯದ ಜ್ಞಾನವೇ ಇಲ್ಲದಿದ್ದರೆ, ಅಜ್ಞಾನವನ್ನು ಗ್ರಹಿಸಿ ದಂತಾಗುವುದಿಲ್ಲ ; ಅದಿಲ್ಲದೆ, ಆ ಜ್ಞಾನವು ವ್ಯವಹಾರೋಪಯೋಗಿಯಾಗು ವುದಿಲ್ಲ (೨೩೨).

ಘಟಜ್ಞಾನವು ಹೇತು (ಕಾರಣ)ವಾಗುತ್ತದೆ; ತನಗೆ ಅವಿಷಯವಾದ ಪಟಾದಿ ವ್ಯವಹಾರ ಹೇತುವಾಗುವುದಿಲ್ಲವಷ್ಟೆ).[1]

**ಅತೋಽಜ್ಞಾನಂ ಸ್ವವಿಜ್ಞಪ್ತ್ಯೈ ಕ್ಷಿಪೇತ್ತತ್ಸ್ವಪ್ರಕಾಶತಾಂ ।**
**ಚಿತ್ರಮತ್ರಾಪಿ ತೇ ಬಾಣಸ್ತವ ಪ್ರಾಣಾಪಹಾರಕಃ ॥ ೨೩೩ ॥**

ಅತಃ—ಆದ್ದರಿಂದ (ಅವಚ್ಛೇದಕ—ವಿಶೇಷಣವಾದ ಆತ್ಮನ ಜ್ಞಾನವು—ಆತನೊಂದಿಗೆ ಅಜ್ಞಾನವನ್ನು ತಿಳಿಯಬೇಕಾದ್ದರಿಂದ), ಅಜ್ಞಾನಂ—(ನಿನಗೆ ಒಪ್ಪಿತವಾದ) ಭಾವರೂಪ ಅಜ್ಞಾನವು,[2] ಸ್ವವಿಜ್ಞಪ್ತ್ಯೈ – ತನ್ನ ಜ್ಞಾನವನ್ನುಂಟುಮಾಡುವುದಕ್ಕೆ, ತತ್ಸ್ವಪ್ರಕಾಶತಾಂ—ಸಾಕ್ಷಿಗೆ ಸ್ವವಿಷಯತ್ವವನ್ನು, ಕ್ಷಿಪೇತ್—ನಿರಾಕರಿಸುತ್ತದೆ (ಸಾಕ್ಷಿಗೆ ಅಜ್ಞಾನದ ಜ್ಞಾನವಾದರೂ, ಭಾವರೂಪದ್ದೆಂಬ ಅದು, ಸಾಕ್ಷಿಯ ಜ್ಞಾನವನ್ನೇ ನಿಷೇಧಿಸುತ್ತದೆ) ; ಚಿತ್ರಂ – ಆಶ್ಚರ್ಯವು ! ಅತ್ರಾಪಿ – ಇಲ್ಲಿ ಸಹ (ಸ್ವಪ್ರಕಾಶತ್ವ ವಿಷಯದಲ್ಲಿಯೂ), ತೇ ಬಾಣಃ—(ಅಭಿಮತವಾದ ಭಾವರೂಪ ಅಜ್ಞಾನವೆಂಬ) ನಿನ್ನ ಬಾಣವೇ, ತವ—ನಿನ್ನ, ಪ್ರಾಣಾಪಹಾರಕಃ – (ಪ್ರಾಣಸಮನಾದ) ಸ್ವಾವೇದ್ಯತ್ವವನ್ನು (ನಿನ್ನ ಜ್ಞಾನವನ್ನೇ) ಅಪಹರಿಸುವುದಾಯಿತು.

---

ಮಾಯಾವಾದಿಗೆ ಅಭಿಮತವಾದ ಅಜ್ಞಾನದ ವ್ಯಾಪಾರವು ವಿಚಿತ್ರವಾದುದು—ಹೀಗೆಂದು ಹೇಳಲಿಕ್ಕೆ ಬರದುದು; ಅವನಂತೆ ಅಜ್ಞಾನವು ಭಾವರೂಪವಾದುದು—ಅಭಾವರೂಪವಾದುದಲ್ಲ, ಆದರೂ ಬ್ರಹ್ಮನೊಬ್ಬನೇ ಸತ್ಯವೆಂಬ ಪ್ರಮೇಯವನ್ನು ವಿರೋಧಿಸುವುದಲ್ಲ; ಈ ಭಾವರೂಪ ಅಜ್ಞಾನವು,

---

1 ಹೀಗೆಯೇ ಬ್ರಹ್ಮನ ಅಜ್ಞಾನದ ಜ್ಞಾನವೂ (ಜೀವಭಾವದಿಂದಿರುವ ಆತ್ಮನೂ ಬ್ರಹ್ಮನೇ, ಅದ್ವೈತಿಗಳಂತೆ) ಜ್ಞಾನರೂಪವೇ ಆದರೂ ಸ್ವವಿಷಯಜ್ಞಾನವಿಲ್ಲದೇ ಸ್ವಾವಚ್ಛಿನ್ನ (ತಾನಿರುವ) ಅಜ್ಞಾನದ ವ್ಯವಹಾರಾದಿಯಲ್ಲಿ ಉಪಯೋಗವಾಗುವುದಿಲ್ಲವೆಂದು ತಿಳಿಯಬೇಕು—ಅಜ್ಞಾನದ ಜ್ಞಾನದಿಂದ, ಅಜ್ಞಾನದ ವ್ಯವಹಾರಗಳು ಅದರ ಧರ್ಮ, ಅದರ ಪರಿಹಾರ ಮೊದಲಾದವುಗಳನ್ನು ತಿಳಿದು ವ್ಯವಹರಿಸಲಿಕ್ಕೆ ಆ ಜ್ಞಾನವು ಅನುಪಯೋಗಿಯಾಗುತ್ತದೆ.

2 ಅದ್ವೈತಿಗೆ ಸಮ್ಮತವೆಂಬ ಭಾವರೂಪ ಅಜ್ಞಾನವು ಭಾವರೂಪವೆಂದರೂ ಬ್ರಹ್ಮನೊಬ್ಬನೇ ಸತ್ಯವೆಂಬ ಪ್ರಮೇಯವನ್ನು ವಿರೋಧಿಸದಂತಿರುವ 'ಭಾವರೂಪವಾದುದು'.

**ಕಿಂಚ ಪ್ರಾಗುಕ್ತದೃಷ್ಟಾಂತತ್ರಿತಯಂ ಚ ನ ವಿಸ್ಮರ ।**
**ಯತ್ರ ಕರ್ಮಕ್ರಿಯೈಕ್ಯಂ ಚ ಸಾಕ್ಷಾದೇವ ನಿದರ್ಶಿತಂ ॥ ೨೩೪ ॥**

ಕಿಂಚ–ಇನ್ನೂ ಏನೆಂದರೆ, ಪ್ರಾಗುಕ್ತದೃಷ್ಟಾಂತತ್ರಿತಯಂ–(ಈ ಹಿಂದೆ ಹೇಳಲಾದ)[1] ಮೊದಲಿನ ಮೂರು ದೃಷ್ಟಾಂತಗಳನ್ನು, ನ ವಿಸ್ಮರ ಚ–ಮರೆಯಲೇಬೇಡ; ಯತ್ರ – ಎಲ್ಲಿ (ಯಾವ ದೃಷ್ಟಾಂತಗಳಲ್ಲಿ), ಕರ್ಮಕ್ರಿಯೈಕ್ಯಂ ಚ–ಕರ್ಮ, ಕ್ರಿಯೆ (ಮತ್ತು ಕರ್ತೃ) ಗಳು ಒಬ್ಬನಿಗೆ ಸಂಭವಿಸುವುವೆಂಬುದು, ಸಾಕ್ಷಾತ್ ಏವ–ಸ್ಪಷ್ಟವಾಗಿಯೇ, ನಿದರ್ಶಿತಂ – ತೋರಿಸಲ್ಪಟ್ಟಿದೆ (ಆದ್ದರಿಂದ ಮರೆಯಬೇಡ).

---

ತನ್ನನ್ನು ತಿಳಿಯುವ ಸಾಕ್ಷಿಗೆ, ಸ್ವಯಂ ತನ್ನ ಸ್ವಪ್ರಕಾಶತ್ವವನ್ನು(ಸ್ವವಿಷಯತ್ವವನ್ನು—ತನ್ನನ್ನು ತಾನು ತಿಳಿಯುವ ಶಕ್ತಿಯನ್ನು) ನಿಷೇಧಿಸುತ್ತದೆ (ನಿರಾಕರಿಸುತ್ತದೆ); ಸಾಕ್ಷಿಯೇ 'ಅಹಂ ಮಾಂ ನ ಜಾನಾಮಿ' ಎಂಬ ಜ್ಞಾನವನ್ನು ಪಡೆಯಬೇಕಲ್ಲದೇ, ಮನೋವೃತ್ತಿಜ್ಞಾನವು ಆ ಜ್ಞಾನವನ್ನು ಹೊಂದಲಾರದೆಂದು ಈ ಹಿಂದೆ ಸಾಧಿಸಲಾದ ಪ್ರಮೇಯದಿಂದ ಪರ್ಯವಸಿತವಾಗುವ ಭಾವರೂಪಾಜ್ಞಾನದ ಮಹಿಮೆಯನ್ನು ಈ ಶ್ಲೋಕವು ನಿರೂಪಿಸುತ್ತದೆ; ಭಾವರೂಪ ಅಜ್ಞಾನವೆಂಬ ಮಾಯಾವಾದಿಯ ಬಾಣವೂ ಆತ್ಮನಿಗೆ ಸ್ವಾವೇದ್ಯತ್ವವನ್ನೇ ಅಪಹಾರ ಮಾಡುವುದರಿಂದ, ಪ್ರಾಣವನ್ನೇ ಅಪಹರಿಸಿದಂತಾಯಿತೆಂದು ಪರಿಹಾಸಮಾಡಲಾಗಿದೆ (೨೩೩). ಈ ಹಿಂದೆ ನಿರೂಪಿಸಲಾದ, ಮನಸ್ಸಿನಿಂದ ಮನಸ್ಸಿನ ಜ್ಞಾನದ ದೃಷ್ಟಾಂತವೇ ಮೊದಲಾದ (ವಾಚ್ಯತ್ವ ವಾಚಕತ್ವಗಳೆರಡನ್ನೂ ಸಾಧಿಸುವ 'ಅಭಿಧಾ' ದೃಷ್ಟಾಂತ ಮತ್ತು ಸ್ವವಿಷಯಕ ಜ್ಞಾನ ಸಾಧಕ ಜ್ಞಾನ ಪದದ ನಿದರ್ಶನವನ್ನು) ಮೂರೂ ದೃಷ್ಟಾಂತಗಳನ್ನು ಮರೆಯದೆ ನೆನಪಿಡಬೇಕು; ಅವುಗಳಿಂದ ಕರ್ತೃತ್ವ, ಕರ್ಮತ್ವ ಮತ್ತು ಕ್ರಿಯಾತ್ವಗಳು ಒಂದೇ ವಸ್ತುವಿನಲ್ಲಿರಬಹುದೆಂಬ ಪ್ರಮೇಯವು ಸಿದ್ಧವಾಗುತ್ತದೆ (೨೩೪).

---

1 ೨೧೭, ೨೨೨, ೨೨೩ ನೇ ಶ್ಲೋಕಭಾಗಗಳಲ್ಲಿ ನಿರೂಪಿತವಾದ ದೃಷ್ಟಾಂತಗಳನ್ನು ಮತ್ತೊಮ್ಮೆ ಇಲ್ಲಿ ನೋಡಿಕೊಳ್ಳುವುದರಿಂದ ವಾದವನ್ನು ಸ್ಪಷ್ಟವಾಗಿ ಅನುಸರಿಸಲು ಬಹು ಸಹಾಯಕವಾಗುತ್ತದೆ.

*

**ವೃಥಾ ವಾಗರ್ಥದಂಪತ್ಯೋರ್ನಾಯೋಗಾಯ ಮತಿಂ ಕುರು ॥೨೩೫**

ವೃಥಾ–ವ್ಯರ್ಥವಾಗಿ (ಯಾವ ಪ್ರಯೋಜನವೂ ಇಲ್ಲದೇ), ವಾಗರ್ಥರೂಪದಂಪತ್ಯೋಃ–ಶಬ್ದ ಮತ್ತು ಅರ್ಥಗಳೆಂಬ ದಂಪತಿಗಳ (ಗಂಡಹೆಂಡಿರಂತೆ ಸದಾ ಕೂಡಿಕೊಂಡೇ ಇರುವ ಪದ ಮತ್ತು ಪದಾರ್ಥಗಳ), ಅಯೋಗಾಯ–ವಿಯೋಗಕ್ಕಾಗಿ (ಸ್ವಪ್ರಕಾಶನೆಂಬ ಶಬ್ದಕ್ಕೆ, ಸ್ವ ಅವಿಷಯನೆಂಬ–ಸ್ವ ಅಪ್ರಕಾಶನೆಂಬ ಅರಸಿಕಾರ್ಥವನ್ನು ಹೇಳಿ, ಅವುಗಳ ವಿಘಟನೆಗಾಗಿ), ಮತಿಂ–ಮನಸ್ಸನ್ನು, ನ ಕುರು–ಮಾಡಬೇಡ.

**ಅತಃ ಸ್ವಾವೇದ್ಯತಾ ತ್ಯಾಜ್ಯಾ ಸ್ವವೇದ್ಯೋಽಪಿ ಭವೇತ್ ಪ್ರಭುಃ ।**
**ನ ಚೇತ್ ಸ್ವಾನಂದಾನುಭವೋ ಮುಕ್ತೌ ಮುಕ್ತಸ್ಯ ಕಿಂ ಬಲಾತ್ ॥**

ಅತಃ–ಶಬ್ದಾರ್ಥಗಳನ್ನು ವಿಘಟನೆ ಮಾಡುವುದು ದೋಷಹೇತುವಾದ್ದರಿಂದ, ಪ್ರಭುಃ–ಸಮರ್ಥನಾದ ಶ್ರೀಹರಿಯು (ಬ್ರಹ್ಮನು), ಸ್ವವೇದ್ಯಃ ಅಪಿ–ತನ್ನನ್ನು ತಾನು ತಿಳಿದವನೂ (ತನ್ನಿಂದ ತಾನು ತಿಳಿಯಲ್ಪಡುವವನೂ), ಅಪಿ–ಸಹ (ಸ್ವಭಿನ್ನ ಸರ್ವಜಗತ್ತನ್ನು ತಿಳಿಯುವವನು), ಭವೇತ್–ಆಗಿರುತ್ತಾನೆ; ಸ್ವಾವೇದ್ಯತಾ–ತನಗೆ ತಾನು ತಿಳಿಯದವನೆಂಬುದು, ತ್ಯಾಜ್ಯಾ (ಭವೇತ್)–ತ್ಯಜಿಸಲ್ಪಡಬೇಕು; ನ ಚೇತ್–ಹಾಗಲ್ಲದಿದ್ದರೆ (ಸಾಕ್ಷಿಜ್ಞಾನದಿಂದಲೂ ಆತ್ಮನನ್ನು ತಿಳಿಯದವನೆಂದರೆ), ಮುಕ್ತಸ್ಯ–ಮುಕ್ತನಿಗೆ (ಜೀವನಿಗೆ–ಬ್ರಹ್ಮನಿಗೆ), ಮುಕ್ತೌ–ಮುಕ್ತಿಯಲ್ಲಿ, ಸ್ವಾನಂದಾನುಭವಃ–ಸ್ವಾನಂದಾನುಭವರು (ಸ್ವಸ್ವರೂಪದ ಆನಂದದ ಅನುಭವವು), ಕಿಂ ಬಲಾತ್–ಯಾವುದರ ಬಲದಿಂದ ದೊರೆಯುತ್ತದೆ? (ಸಾಕ್ಷಿ ಅಥವಾ ಆತ್ಮಜ್ಞಾನಭಿನ್ನವಾದ

---

ಬ್ರಹ್ಮನು ಸ್ವಪ್ರಕಾಶನೆಂಬುದಕ್ಕೆ (ವೇದೋಕ್ತ ಮಹಿಮೆಗೆ) ಅಪ್ರಕಾಶನೆಂಬ (ತನ್ನನ್ನು ತಾನು ತಿಳಿಯಲಾರನೆಂಬ–ಸ್ವಾವಿಷಯತ್ವವೆಂಬ) ಅಸ್ವಾರಸ್ಯವಾದ ಅರ್ಥವನ್ನು ಕಲ್ಪಿಸಿ ಶಬ್ದ ಮತ್ತು ಅರ್ಥಗಳೆಂಬ ದಂಪತಿಗಳ ವಿಯೋಗಕ್ಕಾಗಿ ಮನಸ್ಸು ಮಾಡಬೇಡವೆಂದು ಹೇಳಿ, ದಂಪತಿಗಳ ವಿಯೋಗದಷ್ಟೇ ಪಾಪಕರವೆಂದೂ ಸೂಚಿಸಲಾಗಿದೆ (೨೩೫). ಆದ್ದರಿಂದ ಸಮರ್ಥನಾದ ಶ್ರೀಹರಿಯು, ಸ್ವವೇದ್ಯನೇ ಆಗಿರುತ್ತಾನೆ; ಸ್ವಾವೇದ್ಯನೆಂಬ ದುರರ್ಥವನ್ನು ತ್ಯಜಿಸಬೇಕು; ಸಾಕ್ಷಿಯೂ (ಆತ್ಮಜ್ಞಾನವೂ) ತನ್ನನ್ನು ತಾನು ತಿಳಿಯನೆಂದರೆ,

ಇಂದ್ರಿಯಾದಿಗಳು ಯಾವುವೂ ಮುಕ್ತಿಯಲ್ಲಿ ಇರುವುದಿಲ್ಲವಲ್ಲ! ವೃತ್ತಿಜ್ಞಾನದಿಂದ ಎಂದು ಹೇಳಲು ಅವಕಾಶವೇ ಇಲ್ಲವಷ್ಟೆ!) (ಸಾಕ್ಷಿಜ್ಞಾನದಿಂದ ತನ್ನ ಸ್ವರೂಪದ ಆನಂದವೂ ವಿಷಯೀಕರಿಸಬೇಕಲ್ಲವೇ!).

**ಅತಃ ಸ್ವವಿಷಯೋ ಯಸ್ಯ ಪ್ರಕಾಶೋ ವಿದ್ಯತೇ ಸದಾ ।**
**ಸ ಏವ ಸ್ವಪ್ರಕಾಶಾಖ್ಯ ಇತಿ ಸರ್ವಂ ಸಮಂಜಸಂ ॥ ೨೩೭ ॥**

ಸ್ವಪ್ರಕಾಶನೆಂಬ ಶಬ್ದದ ಅರ್ಥವನ್ನು ಹೇಳಿ, ಈ ವಿಷಯದ ವಾದವನ್ನು ಉಪಸಂಹರಿಸುತ್ತಾರೆ:—

ಅತಃ–ಆದ್ದರಿಂದ, ಸ್ವವಿಷಯಃ–ಸ್ವವಿಷಯವು, ಸದಾ–ಎಲ್ಲ ಕಾಲದಲ್ಲಿ, ಪ್ರಕಾಶಃ–ಪ್ರಕಾಶವಾದುದು (ವಿಷಯವಾಗಿ), ವಿದ್ಯತೇ–ಇರುವುದೋ (ಆದ್ದರಿಂದಲೇ ಸ್ವಪ್ರಕಾಶನೆಂಬ ಶಬ್ದವಾಚ್ಯತ್ವವಿರುತ್ತದೆ), ಸ ಏವ–ಆತನೇ (ಸದಾ ತನಗೆ ತಾನೂ ವಿಷಯನೇ ಆಗಿರುವುದರಿಂದ), ಸ್ವಪ್ರಕಾಶಾಖ್ಯಃ–ಸ್ವಪ್ರಕಾಶನೆಂಬ ನಾಮವುಳ್ಳವನು; ಇತಿ–ಹೀಗೆ, ಸರ್ವಂ–ಎಲ್ಲವೂ, ಸಮಂಜಸಂ–(ತನ್ನ ಜ್ಞಾನಕ್ಕೆ ಬ್ರಹ್ಮನು ಅಗೋಚರನೆಂದು ಶ್ರುತ್ಯರ್ಥವನ್ನು ಸಂಕೋಚಮಾಡಿ ತಿಳಿಯುವುದು ಯುಕ್ತಿವಿರುದ್ಧವಾದ್ದರಿಂದ) ಯುಕ್ತಿಯುಕ್ತವೇ ಆಗಿದೆ.

---

ಮುಕ್ತನಿಗೆ ಮುಕ್ತಿಯಲ್ಲಿ, ಸ್ವಸ್ವರೂಪದ ಆನಂದಾನುಭವವು, ದೊರೆಯಲಾರದೆಂದಂತೆ, ಆಗುತ್ತದೆ; ಮುಕ್ತಿಯಲ್ಲಿ ಇಂದ್ರಿಯಾದಿ ವೃತ್ತಿಜ್ಞಾನದಿಂದ ಆನಂದಾನುಭವವೆಂದು ಹೇಳಲು, ಆಗ ವೃತ್ತಿಜ್ಞಾನವೇ ಇಲ್ಲವಷ್ಟೆ (೨೩೬). ಸ್ವವಿಷಯಜ್ಞಾನವು ಸರ್ವದಾ ಇರುವುದರಿಂದಲೇ ಬ್ರಹ್ಮನು ಸ್ವಪ್ರಕಾಶನೆಂಬ ಶಬ್ದವಾಚ್ಯನಾಗಿರುತ್ತಾನೆ; ಆದ್ದರಿಂದ ಆತ್ಮನು ತನಗೆ ತಾನು ವಿಷಯನೂ ಆಗಿರುತ್ತಾನೆಂಬ ಪ್ರಮೇಯವು, ಸರ್ವಯುಕ್ತಿಸಮಂಜಸವಾಗಿದೆ; ಶ್ರುತ್ಯರ್ಥವನ್ನು ಸಂಕೋಚಗೊಳಿಸಿ, ಬ್ರಹ್ಮನು ತನ್ನನ್ನು ತಾನು ತಿಳಿಯನೆಂಬ ಅರ್ಥವನ್ನು ಕಲ್ಪಿಸಿ, ಕರ್ತೃ ಕರ್ಮ ವಿರೋಧವೆಂಬುದನ್ನು ಆಧರಿಸಿ ಅಜ್ಞಾನವನ್ನಾಶ್ರಯಿಸಿದ ಬ್ರಹ್ಮನೇ ಜೀವಭಾವವನ್ನು ಹೊಂದಿರುವನೆಂದು ಮುಂತಾಗಿ, ಮಾಯಾವಾದಿ ನಿರ್ಮಿಸಿಕೊಂಡಿರುವ ಕಟ್ಟಡವು ಎಷ್ಟುಮಾತ್ರಕ್ಕೂ ನಿಲ್ಲತಕ್ಕದ್ದಲ್ಲ—ಅವನಂತೆಯೇ ವಸ್ತುತಃ ಆ ಕಟ್ಟಡವೂ ಇಲ್ಲ—ಎಲ್ಲವೂ ಕಲ್ಪಿತವೇ ಆಗಿದೆ (೨೩೭).

**ಮುಖೇನಾತಿಪ್ರಸನ್ನೋಽಪಿ ಹೃದಿ ಹಾಲಾಹಲೀ ಖಲಃ ।**
**ಜಲ್ಪತಃ ಸ್ವಪ್ರಕಾಶತ್ವಂ ಸ್ವಾವೇದ್ಯತ್ವಂ ಯತೋ ಹೃದಿ ॥ ೨೩೮ ॥**

ಮಾಯಾವಾದಿಗೆ ಅಭಿಮತವಾದ ಸ್ವಪ್ರಕಾಶತ್ವವು ನೀತಿವಿರುದ್ಧವೂ ಆದುದೆನ್ನುತ್ತಾರೆ :—

ಮುಖೇನ–ಮುಖದಿಂದ (ಮೇಲೆ ನೋಡಲು), ಅತಿಪ್ರಸನ್ನಃ ಅಪಿ–ಪ್ರಸನ್ನನಾದರೂ (ಶಾಂತನೆಂಬಂತೆ ಮಾತನಾಡಿದರೂ), ಖಲಃ–ದುಷ್ಟನು ಮಾಯಾವಾದಿಯು), ಹೃದಿ–ಹೃದಯದಲ್ಲಿ, ಹಾಲಾಹಲೀ – ಹಾಲಾಹಲ ವೆಂಬ ವಿಷಯವನ್ನುಳ್ಳವನು ; ಯತಃ–ಏಕೆಂದರೆ, ಸ್ವಪ್ರಕಾಶತ್ವಂ–(ಬ್ರಹ್ಮ ನಿಗೆ) ಸ್ವಪ್ರಕಾಶತ್ವವನ್ನು, ಜಲ್ಪತಃ–ನುಡಿಯುತ್ತಿದ್ದರೂ (ಕೇವಲ ತುಟಿಗಳಿಂದ ಉಚ್ಚರಿಸುತ್ತಿದ್ದರೂ), ಹೃದಿ–ಮನಸ್ಸಿನಲ್ಲಿ (ಅಂತರಂಗದಲ್ಲಿ), ಸ್ವಾವೇದ್ಯತ್ವಂ –ತನ್ನ ವಿಷಯವನ್ನೇ ತಿಳಿಯನೆಂಬ (ತನಗೆ ಅಪ್ರಕಾಶತ್ವವನ್ನೇ), ತಿಳಿದಿರು ವನು (ಶ್ರೀಹರಿಗೆ ಅಸಾರ್ವಜ್ಞತ್ವವನ್ನೇ ತಿಳಿದಿರುವನು).

**ಅನ್ಯಾನಜಾನನ್ನಪ್ಯಂಧೋ ಜಾನಾತ್ಯಹಮಿತಿ ಸ್ಫುಟಂ ।**
**ಸ್ವಪರಜ್ಞಾನಶೂನ್ಯೋಽಸೌ ಘುಟಃ ಸ್ಯಾದಥವಾ ಪಟಃ ॥ ೨೩೯ ॥**

ಮಾಯಾವಾದಿಯಂತೆ ಬ್ರಹ್ಮನು ಕೇವಲ ಅಸಾರ್ವಜ್ಞನಲ್ಲ; ಕಿಂತು ಘಟಾದಿಗಳಂತೆ ಜಡತ್ವವೂ ಬ್ರಹ್ಮನಿಗೆ ಬರುವುದರಿಂದ ಅತಿಶಯ ದೋಷ ವೆಂದು ಹೇಳುತ್ತಾರೆ :—

ಅಂಧಃ–ಕುರುಡನು, ಅನ್ಯಾನ್ – ಅನ್ಯರನ್ನು, ಅಜಾನನ್ನಪಿ–ತಿಳಿಯ ದಿದ್ದರೂ, ಅಹಂ ಇತಿ–ನಾನು ಎಂದು, ಸ್ಫುಟಂ–ಸ್ಪಷ್ಟವಾಗಿ, ಜಾನಾತಿ– (ತನ್ನನ್ನು) ತಿಳಿಯುತ್ತಾನೆ; ಅಸೌ–ಈ (ನಿತ್ಯಮುಕ್ತನೆಂಬ) ಪರಮಾತ್ಮನು ( ಮುಕ್ತಿದಶಾದಲ್ಲಿದ್ದರೂ ), ಸ್ವಪರಜ್ಞಾನಶೂನ್ಯಃ – ಸ್ವಪರಜ್ಞಾನರಹಿತನು

---

ತನ್ನನ್ನು ತಾನೇ ತಿಳಿಯನೆಂದು ಹೇಳಿ, ಶ್ರೀಹರಿಗೆ ಅಸಾರ್ವಜ್ಞತ್ವ ವನ್ನು ಹೇಳುವ ಮಾಯಾವಾದಿಯು, ತುಟಿಗಳಿಂದ ಮಾತ್ರ ಸ್ವಪ್ರಕಾಶನೆಂದು ಹೇಳುವನಲ್ಲದೇ ಹೃದಯದಲ್ಲಿ ಹಾಲಾಹಲ ವಿಷವನ್ನು ಧರಿಸಿರುವ ಖಲನಾಗಿರು ವನು—ವಸ್ತುತಃ ಶ್ರೀಹರಿದ್ವೇಷಿಯೇ ಆಗಿದ್ದಾನೆ (೨೩೮). ಇಷ್ಟುಮಾತ್ರ ವಲ್ಲ; ಹುಟ್ಟುಕುರುಡನು ಅನ್ಯರನ್ನು ತಿಳಿಯದಿದ್ದರೂ ತನ್ನನ್ನು ತಾನಾದರೂ

(ತನ್ನನ್ನೂ ತಿಳಿಯನು—ಅನ್ಯವನ್ನೂ ತಿಳಿಯನು) (ಮುಕ್ತನಾದ್ದರಿಂದ ಪರ ಜ್ಞಾನವಿಲ್ಲದವನು ; ಸ್ವ ಅವೇದ್ಯನಾದ್ದರಿಂದ ತನ್ನನ್ನು ತಿಳಿಯನು ; (ಹೀಗಿರು ವುದರಿಂದ) ಘಟಃ–ಘಟವೋ, ಅಥವಾ ಪಟಃ–ಅಥವಾ ಪಟ (ವಸ್ತ್ರವೋ), ಸ್ಯಾತ್–ಆಗಬೇಕಾಯಿತು).

**ಕಿಂ ಸ್ವಾದುನಾ ಗುಡೇನಾಪಿ ಯದ್ರಸೋ ನಾನುಭೂಯತೇ ।**
**ಕಿಂ ಸ್ವರೂಪಸುಖೇನ ಸ್ಯಾದ್ಯದಿ ತನ್ನಾನುಭೂಯತೇ ॥ ೨೪೦॥**

ಅನುಭವವಿಲ್ಲದ ಸ್ವರೂಪಸುಖವೂ ವ್ಯರ್ಥವೇ ಸರಿ, ಎನ್ನುತ್ತಾರೆ :—

ಯದ್ರಸಃ–ಯಾವುದರ ರಸವು, ನ ಅನುಭೂಯತೇ–ಅನುಭವಿಸಲ್ಪಡು ವುದೋ, ಸ್ವಾದುನಾ–ಸಿಹಿಯಾದ, ಗುಡೇನ ಅಪಿ–ಬೆಲ್ಲದಿಂದ ಸಹ, ಕಿಂ–ಏನು ಪ್ರಯೋಜನವು ? (ಏನೂ ಇಲ್ಲ); ಯದಿ–ಯಾವಾಗ, ತತ್ ನ ಅನುಭೂಯತೇ–ಅದು ಅನುಭವಿಸಲ್ಪಡುವುದಿಲ್ಲವೋ, (ಆಗ), ಸ್ವರೂಪಸುಖೇನ–ಸ್ವರೂಪಸುಖದಿಂದ, ಕಿಂ ಸ್ಯಾತ್–ಏನು ಪ್ರಯೋಜನ ? (ಅನುಭವಿಸಲಾಗದ ಸ್ವರೂಪಾನಂದವು ವ್ಯರ್ಥವೇ ಸರಿ ; ಮುಕ್ತಿಯನ್ನು ಯಾರೂ ಅಪೇಕ್ಷಿಸದಂತಾಗು ತ್ತದೆ).

---

ತಿಳಿದಿರುವನು ; ಸ್ವವಿಷಯಜ್ಞಾನವಿಲ್ಲದವನೆಂಬ ಬ್ರಹ್ಮನು ಕುರುಡನಿಗಿಂತ ಕನಿಷ್ಠನು ; ಘಟಪಟಗಳಂತೆ ಜಡನೆಂದೇ ಹೇಳಿದಂತಾಗುತ್ತದೆ ; (ಬ್ರಹ್ಮನು ಚಿದ್ರೂಪನೆಂಬುದೂ ಮಾಯಾವಾದಿಗೆ ಅಭಿಪ್ರೇತವಲ್ಲವೆಂದು ತಿಳಿಯಬೇಕಾಗುತ್ತದೆಯಲ್ಲವೇ?) ಸ್ವಜ್ಞಾನವಿಲ್ಲದಿದ್ದರೂ ಅನ್ಯರನ್ನಾದರೂ ತಿಳಿಯುವನೋ? ಎಂದರೆ ಅದೂ ಇಲ್ಲ ; ಮುಕ್ತನಾದ್ದರಿಂದ ಅನ್ಯಜ್ಞಾನವಿಲ್ಲ (ಮತ್ತೇನೆಂದರೆ ಅನ್ಯವೆಲ್ಲವೂ ಮಿಥ್ಯೆಯೇ ಆದ್ದರಿಂದ) ಸ್ವಪರ ಉಭಯ ಜ್ಞಾನಶೂನ್ಯವಾದ ಜಡನೆಂದೇ ಹೇಳಬೇಕಾಗುತ್ತದೆ (೨೩೯). ಬೆಲ್ಲದ ಸ್ವರೂಪವು ಸಿಹಿಯಾದ ಮಾತ್ರದಿಂದ ಪ್ರಯೋಜನವೇನು ? ಅದರ ರುಚಿ ಯನ್ನು ಅನುಭವಿಸಿದರಲ್ಲವೇ ಬೆಲ್ಲದ ಪ್ರಯೋಜನ ? ಅದರಂತೆ ಬ್ರಹ್ಮನು ಸುಖಸ್ವರೂಪನೆಂದರೆ ಮಾತ್ರ ಪ್ರಯೋಜನವಿಲ್ಲ ; ಅದರ ಅನುಭವವು ಆತನಿಗಿರಬೇಕು ; ಆತನ ಜ್ಞಾನಕ್ಕೆ ಸ್ವವಿಷಯತ್ವವಿಲ್ಲೆಂದು ಮಾಯಾ

**ಚೋರಸ್ಯ ಚೋರಃ ಶಿಷ್ಟೋಽಪಿ ಶಿಷ್ಟಶಿಷ್ಟಸ್ಯ ಕೇವಲಂ ।**
**ಸ್ವಾಜ್ಞಂ ತತ್ಕಿಲ ಸರ್ವಜ್ಞಂ ಮುಕ್ತಂ ಸ್ವಾನಂದಭೋಕ್ತೃ ಚ ॥೨೪೧॥**

ಶಿಷ್ಟಃ ಅಪಿ–ಯೋಗ್ಯನಾದರೂ (ಗುಣಾಢ್ಯನಾದರೂ), ಚೋರಸ್ಯ–ಕಳ್ಳನಿಗೆ, ಚೋರಃ–ಕಳ್ಳನೇ (ಚೋರನು ಶಿಷ್ಟನನ್ನು ತನ್ನಂತೆ ಚೋರನೆಂದೇ ತಿಳಿಯುತ್ತಾನೆ) ; ಶಿಷ್ಟಸ್ಯ–ಶಿಷ್ಟನಿಗೆ, ಕೇವಲಂ ಶಿಷ್ಟಃ–ಶಿಷ್ಟನು ಮಾತ್ರ ಶಿಷ್ಟನು; ಸರ್ವಜ್ಞಂ–ಸರ್ವಜ್ಞನೂ, ಮುಕ್ತಂ–ಮುಕ್ತನೂ, ಚ–ಮತ್ತು, ಸ್ವಾನಂದ-ಭೋಕ್ತೃ–ಸ್ವರೂಪಾನಂದವನ್ನು ಭೋಗಿಸುವವನೂ, ತತ್–(ಆದ) ಬ್ರಹ್ಮನು, ಸ್ವಾಜ್ಞಂ ಕಿಲ–ತನ್ನ ಜ್ಞಾನವಿಲ್ಲದವನಷ್ಟೇ (ತನ್ನಂತೆ ಮಾಯಾವಾದಿಯು ಬ್ರಹ್ಮನನ್ನು ಅಜ್ಞನೆಂದೇ ತಿಳಿಯುವನು).

**ಯದಿ ಸ್ವರೂಪವಿಜ್ಞಾನಂ ನೈವ ಸ್ವವಿಷಯಂ ಭವೇತ್ ।**
**ತದಾ ಸ್ವವ್ಯವಹಾರಶ್ಚ ಕಥಂ ತಸ್ಮಾದುದೀರ್ಯತಾಂ ॥ ೨೪೨ ॥**

ಯದಿ–ಒಂದು ಪಕ್ಷ, ಸ್ವರೂಪವಿಜ್ಞಾನಂ–(ಬ್ರಹ್ಮನ) ಸ್ವರೂಪ ಜ್ಞಾನವು (ಸರ್ವಜ್ಞತ್ವವು), ಸ್ವವಿಷಯಂ–ತನ್ನ ವಿಷಯಕವಾದುದು, ನೈವ ಭವೇತ್–ಆಗದಿದ್ದರೆ, ತದಾ–ಆಗ, ತಸ್ಮಾತ್–ಆ ಜ್ಞಾನದಿಂದ, ಸ್ವವ್ಯವಹಾರಃ ಚ–ತನ್ನ

---

ವಾದಿಯು ತಿಳಿಯುವುದರಿಂದ, ಆ ಸುಖಾನುಭವವು ತನಗಿಲ್ಲವೆಂದಾಯಿತು; ಅನುಭವವಿಲ್ಲದ ಸುಖಸ್ವರೂಪವು ವ್ಯರ್ಥವೇ ಸರಿ (೨೪೦). ಚೋರನು ಶಿಷ್ಟನನ್ನು (ಗುಣಾಢ್ಯನನ್ನು) ತನ್ನಂತೆ ಕಳ್ಳನೆಂದೇ ತಿಳಿಯುವಂತೆ, ಮಾಯಾವಾದಿಯೂ, ಸರ್ವಜ್ಞನೂ, ಮುಕ್ತನೂ, ಸ್ವಾನಂದ ಭೋಗಪೂರ್ಣನೂ ಆದ ಬ್ರಹ್ಮನನ್ನು ತನ್ನಂತೆ ಅಜ್ಞನೆಂದೇ ತಿಳಿಯುತ್ತಾನೆ; ಅಜ್ಞಾನದ ವಶನೆಂದು ತಿಳಿಯುವನೆಂಬುದು ಸ್ಪಷ್ಟವಿದೆ (೨೪೧). ಸ್ವರೂಪಸುಖದಂತೆ, ಸ್ವರೂಪ ಜ್ಞಾನವೂ ಸ್ವವಿಷಯಕವಲ್ಲವೆಂದರೆ, ಆ ಜ್ಞಾನದಿಂದ ಯಾವ ಪ್ರಯೋಜನವಿದೆ? ಯಾವ ವ್ಯವಹಾರವಾದರೂ ಹೇಗೆ ನಡೆಯುತ್ತದೆ? ನಡೆಯಲು ಅವಕಾಶವಿರುವುದಿಲ್ಲ (೨೪೨). ಘಟದ ಜ್ಞಾನವು ಮನಸ್ಸಿನಲ್ಲಿದ್ದರೆ, ಎಂದರೆ ಘಟವನ್ನು ಮನಸ್ಸು ವಿಷಯೀಕರಿಸಿದ್ದರೆ, ಘಟಸಂಬಂಧಿ ವ್ಯವಹಾರಕ್ಕೆ ಅದು (ಆ ಜ್ಞಾನವು) ಕಾರಣ

ವ್ಯವಹಾರವಾದರೂ, ಕಥಂ–ಹೇಗೆ, (ಸಾಧಿಸುತ್ತದೆ?), ಉದೀರ್ಯತಾಂ–ಹೇಳಲ್ಪಡಲಿ[1].

**ಘಟಜ್ಞಾನಂ ಮನೋರೂಪಂ ನ ಮನೋವ್ಯವಹಾರಕೃತ್ ।**
**ವಿಷಯಸ್ಯ ಘಟಸ್ಯೈವ ವ್ಯವಹಾರಕೃದಿಷ್ಯತೇ ॥ ೨೪೩ ॥**

ಸ್ವಾವೇದ್ಯನಾದರೂ, ಜ್ಞಾನರೂಪನಾದ್ದರಿಂದ ಸ್ವವ್ಯವಹಾರ ಕಾರಣನಾಗುತ್ತಾನೆಂದರೆ ಹೇಳುತ್ತಾರೆ :—

ಮನೋರೂಪಂ – ಮನೋರೂಪದ (ಮನಸ್ಸಿನಿಂದ ಗ್ರಹಿಸಲಾದ), ಘಟಜ್ಞಾನಂ–ಘಟದ ಜ್ಞಾನವು, ಮನೋವ್ಯವಹಾರಕೃತ್ ನ–(ಘಟಸಂಬಂಧಿ ವ್ಯವಹಾರಕ್ಕೆ ಕಾರಣವಾಗಬಹುದಲ್ಲದೇ) ಸ್ವಯಂ ಮನಸ್ಸಿನ ಸಂಬಂಧವಾದ ವ್ಯವಹಾರಕ್ಕೆ ಕಾರಣವಾಗುವುದಿಲ್ಲ; ವಿಷಯಸ್ಯ–(ಮನೋಜ್ಞಾನ) ವಿಷಯವಾದ, ಘಟಸ್ಯ–ಘಟಸಂಬಂಧಿಯಾದ, ವ್ಯವಹಾರಕೃತ್–ವ್ಯವಹಾರವನ್ನು ನಡೆಸುವುದು, ಇಷ್ಯತೇ–(ಎಂದು) ಕೂಡುತ್ತದೆ (ಹೇಳಬಹುದಾಗಿದೆ).

**ಅತಸ್ತದ್ವಿಷಯಜ್ಞಾನಮೇವ ತದ್ವ್ಯವಹಾರಕೃತ್ ।**
**ಜ್ಞಾನಸ್ವರೂಪತಾಮಾತ್ರಂ ವ್ಯವಹಾರೇಽಪ್ರಯೋಜಕಂ ॥ ೨೪೪ ॥**

ಅತಃ–ಆದ್ದರಿಂದ, ತದ್ವಿಷಯಜ್ಞಾನಂ ಏವ–ಯಾವ ವಸ್ತು ವಿಷಯಕ ಜ್ಞಾನವೋ, ಅದೇ, ತದ್ವ್ಯವಹಾರಕೃತ್–ಆ ಸಂಬಂಧಿ ವ್ಯವಹಾರಕ್ಕೆ ಹೇತುವಾಗಬಹುದಲ್ಲದೇ, ಮನಸ್ಸಿನ ವ್ಯವಹಾರಕ್ಕಲ್ಲ; ಮನಸ್ಸಿನಲ್ಲಿರುವ ಆ ಜ್ಞಾನದಿಂದ ಘಟಸಂಬಂಧವಾದ ವ್ಯವಹಾರವು ಸಾಧ್ಯವೆಂದು ಹೇಳಬಹುದು (೨೪೩). ಆದ್ದರಿಂದ ಜ್ಞಾನವು ಯಾವ ವಸ್ತುವನ್ನು ವಿಷಯೀಕರಿಸಿರುವುದೋ, ಆ ವಸ್ತು ವ್ಯವಹಾರಕ್ಕೆ ಆ ಜ್ಞಾನವು ಉಪಯೋಗವಾಗುತ್ತದೆ ; ಆದರೆ ಬ್ರಹ್ಮನ ಜ್ಞಾನವು,

---

1 'ಸ್ವಾವೇದ್ಯತ್ವೇ ಸತಿ ಅಪರೋಕ್ಷವ್ಯವಹಾರಯೋಗ್ಯತ್ವಂ ಸ್ವಪ್ರಕಾಶತ್ವಂ' ಎಂದು ಸ್ವಪ್ರಕಾಶತ್ವದ, ಮಾಯಾಮತದ ಪರಿಷ್ಕಾರವು ; ತನಗೆ ತಾನು ವಿಷಯನಾಗದೇ ಇರುತ್ತಿದ್ದು, ಅಪರೋಕ್ಷ ವ್ಯವಹಾರಕ್ಕೆ ಯೋಗ್ಯತೆ ಇರುವುದು, ಸ್ವಪ್ರಕಾಶತ್ವವು, ಎಂದು ಅದ್ವೈತಿಗಳ ವಿವರಣೆಯಿದೆ ; ಇದು ಯುಕ್ತವಲ್ಲವೆಂದು ಈ ಶ್ಲೋಕದಿಂದ ಸಾಧಿಸುತ್ತಾರೆ ; ಮುಂದಿನ ಶ್ಲೋಕವನ್ನು ನೋಡಿರಿ.

ವಾಗುತ್ತದೆ ; ಜ್ಞಾನಸ್ವರೂಪತಾಮಾತ್ರಂ – ಜ್ಞಾನಸ್ವರೂಪಮಾತ್ರವಿರುವುದು, ವ್ಯವಹಾರೇ – ವ್ಯವಹಾರದಲ್ಲಿ (ಅದರ ಸಾಕ್ಷಾತ್ಕಾರ, ಪ್ರಾಪ್ತಿ ಮೊದಲಾದ ವ್ಯವಹಾರದಲ್ಲಿ), ಅಪ್ರಯೋಜಕಂ–ಉಪಯೋಗಬೀಳುವುದಿಲ್ಲ.

**ಸುಖರೂಪತ್ವಮಪ್ಯೇವಂ ಮನಸಿ ವ್ಯಭಿಚಾರತಃ ।**
**ನ ಫಲಂ ಕಿಂತು ನಿರ್ದುಃಖಸುಖಸ್ಯಾನುಭವಃ ಫಲಂ ॥ ೨೪೫ ॥**

ಸುಖಾನುಭವವು (ಬ್ರಹ್ಮನಿಗೆ) ಇಲ್ಲದಿದ್ದರೂ, ಸುಖರೂಪನಾದ್ದರಿಂದ ಮೋಕ್ಷರೂಪ ಫಲವು ಲಭಿಸಬಹುದೆಂದರೆ ಹೇಳುತ್ತಾರೆ :—

ಸುಖರೂಪತ್ವಮಪಿ–ಸುಖರೂಪವುಳ್ಳವನೆಂಬುದೂ, ಮನಸಿ–ಮನಸ್ಸಿನಲ್ಲಿ, ವ್ಯಭಿಚಾರತಃ–ಫಲಾನುಭವವಿಲ್ಲದ ಕಾರಣದಿಂದ, ನ ಫಲಂ–ಮುಕ್ತಿಯಲ್ಲಿ ಫಲವಿಲ್ಲ ; (ಸುಖರೂಪನೆಂಬ ಜ್ಞಾನದಿಂದ ಅದರ ಫಲರೂಪದ ಸುಖಾನುಭವವು ಮನಸ್ಸಿನಲ್ಲಿ ಉಂಟಾಗಬೇಕಷ್ಟೆ–ಕೇವಲ ಜ್ಞಾನಮಾತ್ರದಿಂದ ಫಲವಿಲ್ಲ) ; ಕಿಂತು–ಮತ್ತೇನೆಂದರೆ, ನಿರ್ದುಃಖಸುಖಸ್ಯ–ದುಃಖಸ್ಪರ್ಶವಿಲ್ಲದ ಸುಖದ (ಆನಂದದ), ಅನುಭವಃ – ಅನುಭವವೇ, ಫಲಂ – ಫಲವಾಗಬೇಕು (ಅದಿಲ್ಲದೇ ಮೋಕ್ಷವು ಸರ್ವಾಪೇಕ್ಷಿತವಾದ ಪುರುಷಾರ್ಥವಾಗುವುದಿಲ್ಲ–ಬ್ರಹ್ಮನಿಗೇ ಆನಂದಾನುಭವವಿಲ್ಲದಿರುವಾಗ ಆತನು ಹೇಗೆ ನಿತ್ಯಮುಕ್ತನೆನಿಸಬಹುದು ?).

---

ಕೇವಲ ಜ್ಞಾನರೂಪದಿಂದಿರುತ್ತ, ಸ್ವವಿಷಯವನ್ನೇ (ತನ್ನನ್ನೇ) ಗ್ರಹಿಸಿರದಿದ್ದರೆ, ಅದು ಅಪ್ರಯೋಜಕವೇ ಸರಿ ; ಬ್ರಹ್ಮಸ್ವರೂಪದ ಸಾಕ್ಷಾತ್ಕಾರ, ಪ್ರಾಪ್ತಿ ಇತ್ಯಾದಿ ವ್ಯವಹಾರವನ್ನು ಅದರಿಂದ ನಿರೀಕ್ಷಿಸುವಂತಿಲ್ಲ (೨೪೪). ಈ ಹಿಂದೆ ಹೇಳಿದಂತೆ, ಬ್ರಹ್ಮನು ಸುಖರೂಪನೆಂದಮಾತ್ರಕ್ಕೆ ಅದರ ಅನುಭವವು ಬ್ರಹ್ಮನಿಗೇ ಇಲ್ಲದಿದ್ದರೆ, ಅದರಿಂದ, (ಸುಖರೂಪನೆಂಬ ಜ್ಞಾನದಿಂದ) ಯಾವ ವ್ಯವಹಾರವೂ ಸಿದ್ಧಿಸುವುದಿಲ್ಲ ; ಆದ್ದರಿಂದ, ಮುಕ್ತಿಯಲ್ಲಿ ಆ ಜ್ಞಾನವು ಯಾವ ಫಲವನ್ನೂ ಕೊಡುವುದಿಲ್ಲ—ಮನಸ್ಸಿನಲ್ಲಿ ಸುಖಾನುಭವವನ್ನೂ ಉಂಟುಮಾಡುವುದಿಲ್ಲ ; ದುಃಖಸ್ಪರ್ಶವಿಲ್ಲದ ಆನಂದಾನುಭವವು ಫಲವಾಗಬೇಕು ; ಬ್ರಹ್ಮನಿಗೆ ಆ ಆನಂದಾನುಭವವಿಲ್ಲದಿದ್ದರೆ ಆತನು ನಿತ್ಯಮುಕ್ತನು ಹೇಗೆ ? (೨೪೫). ಮುಕ್ತಚೇತನನಿಗೆ, ಸುಖರೂಪತ್ವ ಜ್ಞಾನರೂಪತ್ವಗಳಿದ್ದರೂ ಯಾವ ಫಲವೂ ಇಲ್ಲದಂತಾಗುತ್ತದೆ ;

**ತಥೈವ ಸುಖರೂಪತ್ವಂ ಜ್ಞಾನರೂಪತ್ವಮಾತ್ಮನಿ ।**
**ನ ಫಲಂ ಯನ್ಮನೋಬಾಹ್ಯಜ್ಞಾನರೂಪಂ ಸುಖಾತ್ಮಕಂ ॥ ೨೪೬ ॥**

ಆತ್ಮನಿ–ಮುಕ್ತನಾದ ಚೇತನನಲ್ಲಿ, ಜ್ಞಾನರೂಪತ್ವಂ–ಜ್ಞಾನರೂಪನೆಂಬ ಜ್ಞಾನವೂ, ತಥೈವ-ಹಾಗೆಯೇ, ಸುಖರೂಪತ್ವಂ-ಸುಖರೂಪನೆಂಬ ಜ್ಞಾನವೂ, (ಸುಖರೂಪನೆಂದು ತಿಳಿದರೂ ಆನಂದಾನುಭವವಿಲ್ಲದಂತೆ), ನ ಫಲಂ–(ಎರಡೂ ಮಿಳಿತವಾದರೂ), ಫಲವಿಲ್ಲ ; ಯತ್ – ಏಕೆಂದರೆ, ಮನಃ – ಮನಸ್ಸು, ಬಾಹ್ಯಜ್ಞಾನರೂಪಂ – ಹೊರಗಿನ ಪುಷ್ಪಾದಿ ವಿಷಯಗಳ ಜ್ಞಾನರೂಪವೂ, ಸುಖಾತ್ಮಕಂ–ಸುಖರೂಪವೂ (ಆಗಿರುತ್ತದೆ–ಆದರೆ ಸುಖದ ಅನುಭವ ಮಾತ್ರ ಇರುವುದಿಲ್ಲ) ; ಜ್ಞಾನರೂಪವಾದರೂ, ಸುಖವಿಷಯದ ಅನುಭವರಾಹಿತ್ಯದಿಂದ, ವ್ಯರ್ಥವಾಗುತ್ತದೆ–ಅಪುರುಷಾರ್ಥತೆಯು ಪ್ರಾಪ್ತವಾಗುತ್ತದೆ.)

**ಯಥಾ ಮಾನಸಸೌಖ್ಯಸ್ಯ ಸಾಕ್ಷಿಣಾನುಭವಃ ಫಲಂ ।**
**ಸಂಸಾರೇ ಮುಕ್ತಿಕಾಲೇ ಚ ಫಲಂ ವಾಚ್ಯಂ ತಥೈವ ಹಿ ॥ ೨೪೭ ॥**

ಸುಖಾನುಭವವೆಂಬ, ಸುಖದ ಫಲತ್ವಪ್ರಕಾರವನ್ನು ನಿರೂಪಿಸುತ್ತಾರೆ:—

ಯಥಾ–ಹೇಗೆ, ಸಂಸಾರೇ–ಸಂಸಾರಾವಸ್ಥೆಯಲ್ಲಿ, ಮಾನಸ ಸೌಖ್ಯಸ್ಯ–ಮನಸ್ಸಿನಲ್ಲಿರುವ ಸುಖಕ್ಕೆ, ಸಾಕ್ಷಿಣಾ–ಆತ್ಮನಿಂದ, ಅನುಭವಃ–ಅನುಭವಿಸುವುದೆಂಬುದು, ಫಲಂ–ಫಲವೋ (ಸಾಕ್ಷಿಯು ಅನುಭವಿಸದೇ, ಸುಖವು ಕೇವಲ

---

(ಸುಖರೂಪನು ನಿಜ, ಆದರೆ ಸುಖಾನುಭವವಿಲ್ಲ) ಎಂಬುದರಿಂದ ಮುಕ್ತಿಯು ಯಾರಿಂದಲೂ ಅಪೇಕ್ಷಿತವಾಗುವುದಿಲ್ಲ (ಪುರುಷಾರ್ಥತ್ವವೇ ಇಲ್ಲದಂತಾಗುತ್ತದೆ) ; ಸಂಸಾರಾವಸ್ಥೆಯೇ ಅಪೇಕ್ಷಣೀಯವೆಂದು ಪ್ರಾಪ್ತವಾಗುತ್ತದೆ (೨೪೬). ಸಂಸಾರಾವಸ್ಥೆಯಲ್ಲಿ ಸಹ, ಮಾನಸಸುಖವನ್ನು ಸಾಕ್ಷಿಯು ಅನುಭವಿಸಿದರೆ ಮಾತ್ರ ; ಆ ಸುಖದ ಪ್ರಯೋಜನವಲ್ಲವೇ ? (ಪುಷ್ಪಾದಿಗಳ ಪರಿಮಳವು ಮನಸ್ಸಿನಲ್ಲಿ ತುಂಬಿಕೊಂಡರೆ ಸಾಲದು—ಸಾಕ್ಷಿಯ ಅನುಭವಕ್ಕೆ ಬರಬೇಕಲ್ಲವೇ?) ಮುಕ್ತಿಯಲ್ಲಿಯೂ ಹಾಗೆಯೇ ಅನುಭವವಿಲ್ಲದ ಸುಖಜ್ಞಾನಾದಿಗಳು ಅಪ್ರಯೋಜಕಗಳೇ ಸರಿ ; ಮುಕ್ತಿಯಲ್ಲಿ ಸ್ವರೂಪಭೂತವಾದ ಆನಂದಾನುಭವವಿರುವುದೇ ಮುಕ್ತಿಯು (೨೪೭). ಶ್ರುತಿಯೂ ಹಾಗೆಯೇ ಹೇಳುತ್ತದೆ; ಸ್ವರೂಪಾನಂ

ಮನಸ್ಸಿನಲ್ಲಿದ್ದರೆ, ಅದು ಸುಖದ ಪ್ರಾಪ್ತಿಯೇ ಅಲ್ಲವೋ), (ಮಾನಸಿಕ ಸುಖದ ಸಾಕ್ಷಿಯ ಅನುಭವದಂತೆ), ತಥೈವ–ಹಾಗೆಯೇ, ಮುಕ್ತಿಕಾಲೇ–ಮುಕ್ತಿಯಲ್ಲಿ, ಫಲಂ–(ಸ್ವರೂಪಭೂತ ಸುಖವಿಷಯಕ ಅನುಭವವು, ಆತ್ಮನಿಗೆ), ವಾಚ್ಯಂ–ಹೇಳಲ್ಪಡಬೇಕು ; ಹಿ–(ಇದು ; ಎಂದರೆ ಸ್ವರೂಪದಲ್ಲಿ ಸುಖವಿರುವುದು ಮುಖ್ಯವಲ್ಲ–ಅದರ ಅನುಭವವೂ ಇರುವುದೇ ಮುಕ್ತಿಯೆಂದು) ಶ್ರುತಿಸಿದ್ಧವು.

**ನ ಚೇದಪುರುಷಾರ್ಥತ್ವಂ ಮುಕ್ತೇಃ ಸ್ಯಾದುಕ್ತವರ್ತ್ಮನಾ ।**
**ತಸ್ಮಾತ್ ಸ್ವರೂಪಾನಂದಸ್ಯ ನಾನುಭೂತಿಃ ಕಥಂ ತದಾ ॥ ೨೪೮ ॥**

ನ ಚೇತ್ – ಹೀಗೆ ಅಂಗೀಕರಿಸದಿದ್ದರೆ, ಉಕ್ತವರ್ತ್ಮನಾ – ಹೇಳಲಾದ ರೀತಿಯಿಂದ (ಮಾರ್ಗದಿಂದ), ಮುಕ್ತೇಃ–ಮೋಕ್ಷಕ್ಕೆ, ಅಪುರುಷಾರ್ಥತ್ವಂ–ಸರ್ವಾಪೇಕ್ಷಿತ ಫಲವಲ್ಲವೆಂದು, ಸ್ಯಾತ್–ಆಗುತ್ತದೆ ; ತಸ್ಮಾತ್–ಆದ್ದರಿಂದ, ಸ್ವರೂಪಾನಂದಸ್ಯ–ಸ್ವರೂಪದಲ್ಲಿರುವ ಆನಂದದ, ಅನುಭೂತಿಃ–ಅನುಭವವು, ತದಾ–ಆಗ, (ಮುಕ್ತಿಯಲ್ಲಿ), ಕಥಂ ನ–ಇಲ್ಲದಿರುವುದು ಹೇಗೆ ? (ಮುಕ್ತಿಯು ಪುರುಷಾರ್ಥವಾದರೆ, ಅನಂದಾನುಭವವಿಲ್ಲದಿರುವುದು ಸಾಧ್ಯವಿಲ್ಲ).

**ಸ್ವಗೋಚರತ್ವಮೇವಾತೋ ವಕ್ತವ್ಯಾ ಸ್ವಪ್ರಕಾಶತಾ ।**
**ಆನರ್ಥಕ್ಯಂ ನ ಚೇತ್ ಮುಕ್ತೇಃ ಸ್ವಪ್ರಕಾಶಪದಸ್ಯ ಚ ॥ ೨೪೯ ॥**

ಅತಃ – ಆದ್ದರಿಂದ (ಮುಕ್ತಿಗೆ ಪುರುಷಾರ್ಥತ್ವವು ಅವಶ್ಯವಾದ್ದರಿಂದ), ಸ್ವಗೋಚರತ್ವಂ – ಸ್ವವಿಷಯಕತ್ವವನ್ನು, ವಕ್ತವ್ಯಾ ಏವ – ಹೇಳಲೇಬೇಕು ;

---

ದಾನುಭವವಿಲ್ಲದಿದ್ದರೆ, ಅಂತಹ ಮುಕ್ತಿಯು ಪುರುಷಾರ್ಥವೇ ಅಲ್ಲ (ಯಾವ ಪ್ರಾಣಿಮಾತ್ರದಿಂದಲೂ ಅಪೇಕ್ಷಿತವಲ್ಲ) (೨೪೮). ಆದ್ದರಿಂದ ಮುಕ್ತಿಗೆ ಪುರುಷಾರ್ಥತ್ವವು ಸಿದ್ಧಿಸಲು, ಬ್ರಹ್ಮನು ಸ್ವಪ್ರಕಾಶನೆಂದರೆ, ತನ್ನ ಸ್ವರೂಪಭೂತಗಳಾದ ಸುಖಜ್ಞಾನಾದಿಗಳನ್ನು ತಾನು ತಿಳಿಯುವವನೆಂದೇ (ಅವುಗಳು ಸ್ವಗೋಚರಗಳಾದ ವಿಷಯಗಳೇ ಎಂದು) ಹೇಳಲೇಬೇಕು ; ಹಾಗೆ ಹೇಳಿದರೆ ಮಾತ್ರ ಮುಕ್ತಿಯು ಪ್ರಯೋಜನಶೂನ್ಯವೆಂಬುದನ್ನು ನಿವಾರಿಸಿದಂತಾಗುವುದಲ್ಲದೇ, ಸ್ವಪ್ರಕಾಶಪದಕ್ಕೆ ಯೋಗ್ಯವಾದ ಅರ್ಥವನ್ನು ತಿಳಿದಂತಾಗುತ್ತದೆ (೨೪೯). ಯಾರು ತನ್ನ ಸ್ವರೂಪವನ್ನು ತಿಳಿದಿರುವನೋ ಅವನೇ ಸ್ವಪ್ರಕಾಶನು

ನ ಚೇತ್–(ಸುಖಜ್ಞಾನಾದಿಗಳು ಸ್ವವಿಷಯಕಗಳಲ್ಲವೆಂದರೆ) ಹಾಗಲ್ಲದಿದ್ದರೆ, ಮುಕ್ತೇಃ – ಮುಕ್ತಿಗೆ, ಆನರ್ಥಕ್ಯಂ – ಅಪುರುಷಾರ್ಥತ್ವವೂ, (ಪ್ರಯೋಜನ ಶೂನ್ಯತ್ವವೂ), ಚ–ಮತ್ತು, ಸ್ವಪ್ರಕಾಶಪದಸ್ಯ (ಆನರ್ಥಕ್ಯಂ)–ಸ್ವಪ್ರಕಾಶ ಶಬ್ದಕ್ಕೆ ಪದಯೋಗ್ಯವಾದ ಅರ್ಥವಿಲ್ಲದಿರುವಿಕೆಯೂ (ಯೋಗ್ಯಾರ್ಥಶೂನ್ಯತ್ವವೂ ಪ್ರಾಪ್ತವಾಗುತ್ತದೆ).

**ಸ್ವಸ್ಯ ಪ್ರಕಾಶೋ ಯಸ್ಯ ಸ್ಯಾತ್ ಸ್ವಪ್ರಕಾಶಂ ತದೇವ ಹಿ ।**
**ಗೀತಾವಾಕ್ಯೇ ಕರ್ಮತಾಯಾ ವ್ಯಕ್ತೋಕ್ತಿಶ್ಚ ವಿರುಧ್ಯತೇ ।**
**ಹಾರ್ದಂ ಹಾಲಾಹಲಂ ತಸ್ಮಾತ್ ಸ್ವಸ್ಯೈವ ಕ್ಲೇಶಕಾರಕಂ ॥ ೨೫೦ ॥**

ಸ್ವಪ್ರಕಾಶ ಶಬ್ದಾರ್ಥವನ್ನೂ, ಪೂರ್ವೋಕ್ತ ಗೀತಾವಾಕ್ಯವನ್ನೂ ಮರೆಯ ಲಾಗದೆಂದು ಸ್ಮರಣೆಗೆ ತಂದುಕೊಡುತ್ತಾರೆ :—

ಯಸ್ಯ–ಯಾವುದಕ್ಕೆ, ಸ್ವಸ್ಯ ಪ್ರಕಾಶಃ–ತನ್ನ ಪ್ರಕಾಶವು (ಜ್ಞಾನಪೂರ್ಣ ವಾದ ಅನುಭವವು), ಸ್ಯಾತ್–ಉಂಟಾಗುವುದೋ, ತದೇವ–ಅದೇ, ಸ್ವಪ್ರಕಾಶಂ ಹಿ–ಸ್ವಪ್ರಕಾಶವೆನಿಸುತ್ತದಷ್ಟೆ ; (ತನ್ನನ್ನೇ ತಾನು ತಿಳಿಯದ ಜ್ಞಾನವು ಸ್ವಪ್ರಕಾಶ ವೆನಿಸಬಹುದೇ ?–ಇಲ್ಲ) ; ಗೀತಾವಾಕ್ಯೇ–ಗೀತಾವಾಕ್ಯದಲ್ಲಿ ('ಸ್ವಯಮೇವಾತ್ಮ-ನಾತ್ಮಾನಂ' ಎಂಬ ವಾಕ್ಯದಲ್ಲಿ), ಕರ್ಮತಾಯಾಃ–('ಆತ್ಮಾನಂ' ಎಂದು), ಕರ್ಮತ್ವದ, ವ್ಯಕ್ತೋಕ್ತಿಃ–ಸ್ಪಷ್ಟೋಕ್ತಿಯು, ವಿರುಧ್ಯತೇ ಚ–ವಿರುದ್ಧವೂ ಆಗುತ್ತದೆ ; ತಸ್ಮಾತ್ – ಆದ್ದರಿಂದ, ಹಾರ್ದಂ – (ನಿನ್ನ – ಮಾಯಾವಾದಿಯ) ಹೃದಯದ, ಹಾಲಾಹಲಂ-ಹಾಲಾಹಲ ವಿಷವು (ಮುಕ್ತಿಗೆ ಅಮುಕ್ತಿತ್ವ ಸಂಪಾದಕ

---

(ಸ್ವಸ್ಯ, ಪ್ರಕಾಶಃ, ಯಸ್ಯ, ಎಂದು ಆ ಪದದ ಯೌಗಿಕಾರ್ಥವೂ ಆಗಿದೆ) ; 'ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ' ಎಂಬ ಗೀತಾ ವಾಕ್ಯವೂ ತನಗೆ ತಾನೇ (ಕರ್ಮನೂ) ವೇದ್ಯನೂ ಆಗಿರುವನೆಂದು ಹೇಳುತ್ತದೆ ; ಹೀಗಿರಲು ಇದನ್ನು ವಿರೋಧಿಸುವ ಅರ್ಥವನ್ನು ಕಲ್ಪಿಸುವ ಹಾಲಾಹಲ ವಿಷವನ್ನು ಹೃದಯದಲ್ಲಿ ಧರಿಸಿದರೆ, ನಿನಗೇ (ಮಾಯಾವಾದಿಗೇ) ದುಃಖಕಾರಕವಾಗುತ್ತದೆ (೨೫೦). ಅಜ್ಞಾನ ಸಂಸಾರಾದಿ ದೋಷರಹಿತನಾದ ಬ್ರಹ್ಮನೇ ಪರಬ್ರಹ್ಮನು ; ಆತನೇ ನನ್ನ (ತತ್ವವಾದಿಯ) ಮಹಾಸ್ವಾಮಿಯಾದ ಶ್ರೀನಾರಾಯಣೇತ್ಯಾದಿ ನಾಮವುಳ್ಳ ಶ್ರೀವಿಷ್ಣುವು ; ಆತನೇ ನಿತ್ಯಶುದ್ಧನು—ನಿತ್ಯಮುಕ್ತನು ; ಗುಣ

ವಾದ್ದರಿಂದ), ಸ್ವಸ್ಯ ಏವ – ತನಗೇ (ನಿನಗೇ), ಕ್ಲೇಶಕಾರಕಂ – ದುಃಖಕಾರಕ ವಾಯಿತು.

**ನಿತ್ಯಶುದ್ಧಂ ತು ಯದ್ಬ್ರಹ್ಮ ಪರಬ್ರಹ್ಮ ತದೇವ ಹಿ ।**
**ನಿತ್ಯಶುದ್ಧಶ್ಚ ಭಗವಾನ್ನಿತ್ಯಮುಕ್ತೋ ಮಮ ಪ್ರಭುಃ ।**
**ಬಂಧಮೂಲೋ ಯತೋ ದೋಷೋ ಬಂಧಾಭಾವೇ ನ ಕಶ್ಚನ ॥**

ಶ್ರೀವಿಷ್ಣುನಾಮಕ ಪರಬ್ರಹ್ಮನನ್ನು ಶಬಲನೆಂಬ ಪರಬ್ರಹ್ಮನೆಂದು ಮಾಯಾವಾದಿಯು ಹೇಳುವುದನ್ನು ಯುಕ್ತಿಯಿಂದ ನಿರಾಕರಿಸುತ್ತಾರೆ:—

ಯದ್ಬ್ರಹ್ಮ–ಯಾವ ಬ್ರಹ್ಮನು, ನಿತ್ಯಶುದ್ಧಂ–ಅಜ್ಞಾನ ಸಂಸಾರಾದಿ ದೋಷಸ್ಪರ್ಶರಹಿತನೋ, ತದೇವ–ಅವನೇ, ಪರಬ್ರಹ್ಮ–ಪರಬ್ರಹ್ಮನು ; ಹಿ–ಹೀಗೆಂಬುದು ಶ್ರುತಿಸಿದ್ಧವು ; ಮಮ – ನನ್ನ (ತತ್ವವಾದಿಯ), ಪ್ರಭುಃ – ಜಗದೀಶ್ವರನು (ನಾರಾಯಣ, ವಿಷ್ಣು ಇತ್ಯಾದಿ ನಾಮಗಳಿಂದ ಪ್ರಸಿದ್ಧನಾದ ಮಹಾಸ್ವಾಮಿಯು), ಭಗವಾನ್–ಷಡ್ಗುಣಪೂರ್ಣನು, ನಿತ್ಯಮುಕ್ತಃ–ಎಂದೂ ಸಂಸಾರವಿಲ್ಲದ, ಚೇತನನು, (ಆದ್ದರಿಂದಲೇ), ನಿತ್ಯಶುದ್ಧಃ–ನಿತ್ಯಶುದ್ಧನು ; (ನಿತ್ಯಮುಕ್ತನಲ್ಲದವನು, ನಿತ್ಯಶುದ್ಧನಲ್ಲ) ; (ನಿತ್ಯಶುದ್ಧತ್ವವೆಂದರೆ ಅಜ್ಞಾನ ಭ್ರಮಾದಿ ದೋಷರಹಿತ ಚೇತನತ್ವವು) ; ಯತಃ–ಯಾವ ಕಾರಣದಿಂದ ಎಂದರೆ, ದೋಷಃ – ಯಾವುದೇ (ಅಜ್ಞಾನಾದಿ) ದೋಷವು, ಬಂಧಮೂಲಃ – ಸಂಸಾರ ಬಂಧವೇ ಕಾರಣವಾಗಿ ಉಳ್ಳದ್ದು ; ಬಂಧಾಭಾವೇ–ಸರ್ವದಾ ಸಂಸಾರರಹಿತ ನಾದರೆ, ನ ಕಶ್ಚನ–ಯಾವ ದೋಷವೂ ಎಂದೂ ಇಲ್ಲ.

---

ಪೂರ್ಣನು—ದೋಷದೂರನು ; ಶಬಲ ಬ್ರಹ್ಮ, ಶುದ್ಧ ಬ್ರಹ್ಮನೆಂಬ ವಿಶೇಷವು ಪರಬ್ರಹ್ಮನಲ್ಲಿಲ್ಲ ; ಅಜ್ಞಾನ ಭ್ರಮಾದಿದೋಷಗಳಿಂದ, ಸಂಸಾರಬಂಧಕ್ಕೊಳ ಗಾಗಿರುವ ಚೇತನನೇ ಅಶುದ್ಧನು, ನಿತ್ಯಶುದ್ಧನೂ ನಿತ್ಯಮುಕ್ತನೂ ಆದ ಚೇತನ ನೊಬ್ಬನೇ—ಆತನೇ ಪರಬ್ರಹ್ಮನು, (೨೫೧). ಹೇ ಮಾಯಾವಾದಿಯೇ ! ನಿನ್ನ ಬ್ರಹ್ಮನು ಸದಾ ಅವಿದ್ಯಾ (ಅಜ್ಞಾನ) ವೆಂಬ ದೋಷದಿಂದ ಕಲುಷಿತನು— ಅನಾದಿಕಾಲದಿಂದ, ಪ್ರತಿ ಪ್ರಾಣಿಯಲ್ಲಿರುತ್ತ ಸಂಸಾರದಲ್ಲಿ ಸುತ್ತುತ್ತಲಿರುವನು ; ಸಂಸಾರರೂಪದ ಪಂಕದಿಂದ ಸಹ ದೂಷಿತನಾಗಿದ್ದಾನೆ ; ಅವನು ಶುದ್ಧನೆಂಬುದು ಹೇಗೆ ಕೂಡುತ್ತದೆ ? ಅದು (ಹೀಗೆ ಸಂಸಾರದಲ್ಲಿ ಸುತ್ತುವ ಚೇತನವು) ಜೀವ

**ತವ ಬ್ರಹ್ಮತ್ವವಿದ್ಯಾಖ್ಯದೋಷೇಣ ಕಲಿಲಂ ಸದಾ ।**
**ಅನಾದಿಕಾಲಮಾರಭ್ಯ ದೇಹೇ ದೇಹೇ ಚ ಸಂಸರನ್ ॥ ೨೫೨ ॥**

**ಭವಪಂಕೇನ ಮಲಿನಂ ಕಥಂ ಶುದ್ಧಂ ಭವೇದ್ವದ ।**
**ಬ್ರಹ್ಮತ್ವಮಾಗ್ರಹಾದೇವ ಜೀವಚೈತನ್ಯಮೇವ ತತ್ ॥ ೨೫೩ ॥**

ಪರನ ಪ್ರಕ್ರಿಯೆಯಿಂದಲೇ ಆತನ ಪರಬ್ರಹ್ಮನಿಗೆ, ಪರಬ್ರಹ್ಮತ್ವವನ್ನು ನಿರಾಕರಿಸುತ್ತಾರೆ :—

ತವ – ನಿನ್ನ (ಮಾಯಾವಾದಿಯ), ಬ್ರಹ್ಮ ತು – ಬ್ರಹ್ಮನಾದರೋ, ಅವಿದ್ಯಾಖ್ಯ ದೋಷೇಣ–ಅವಿದ್ಯೆಯೆಂಬ ದೋಷದಿಂದ (ಅಜ್ಞಾನದೋಷದಿಂದ), ಸದಾ–ಸರ್ವದಾ[1], ಕಲಿಲಂ–ದೂಷಿತವಾಗಿದೆ (ಅಶುದ್ಧವಾಗಿದೆ) ; ಅನಾದಿಕಾಲಂ

---

ಚೇತನವು ; ನೀನು ಮಾತ್ರ, ಅದನ್ನೇ ದುರಾಗ್ರಹದಿಂದ ಬ್ರಹ್ಮ ಪಟ್ಟಕ್ಕೆ ಏರಿಸಿರುವಿ—ಅವನು ಹೇಗೆ ಬ್ರಹ್ಮನಾದಾನು ? (ಅಪೂರ್ಣನು ಎಂದಿಗೂ ಪೂರ್ಣನಾಗುವುದಿಲ್ಲ—ಬ್ರಹ್ಮನಂತೆ ಪರಿಪೂರ್ಣತ್ವವನ್ನು ಹೊಂದುವುದಿಲ್ಲ—ಸಂಸಾರವೆಂಬ ದೋಷದಿಂದ ಮುಕ್ತನಾಗಿ ಸ್ವರೂಪಸ್ಥಿತಿಯನ್ನು ಹೊಂದುವುದೇ ಅವನ ಸ್ವಯೋಗ್ಯಪೂರ್ಣತ್ವವು) (೨೫೨–೨೫೩). ಬಂಧವು (ಸಂಸಾರ ಬಂಧನವು) ಮಿಥ್ಯೆಯಾದ್ದರಿಂದ (ಸತ್ಯವಲ್ಲವಾದ್ದರಿಂದ), ಬದ್ಧನೆಂದೂ, ಶುದ್ಧನೆಂದೂ ಕರೆಯ

---

[1] ಮಾಯಾವಾದಿಗಳಲ್ಲಿ ಬಹುಜೀವ ವಾದಿಗಳು, ಏಕಜೀವವಾದಿಗಳೆಂಬ ಎರಡು ಪಕ್ಷಗಳಿವೆ ; ಅವುಗಳಲ್ಲಿ ಬಹುಜೀವ ವಾದಿ ಪಕ್ಷದ ಅಭಿಪ್ರಾಯವನ್ನು 'ಸದಾ' ಎಂಬುದರಿಂದ ಸೂಚಿಸಿರುತ್ತಾರೆ ; **ಮಾಯಾವಿಷ್ಟಬ್ರಹ್ಮನೇ ಈಶ್ವರನು**—ಈತನು ಮಾಯಾಮಯಗಳಾದ ಸರ್ವಜ್ಞತ್ವಾದಿಗಳುಳ್ಳವನಾಗಿ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ; ಜಗತ್ತು, ಸತ್–ಅಸತ್–ಸದಸತ್, ಯಾವುದೂ ಅಲ್ಲದ ಅನಿರ್ವಚನೀಯ ಮಿಥ್ಯಾವಸ್ತು—ಮಾಯೆಯೇ ಉಪಾದಾನ ಕಾರಣವಾಗಿವುಳ್ಳದ್ದು ; ಈಶ್ವರನು ಆಶ್ರಯವಾದ ಬ್ರಹ್ಮನನ್ನು ಯಥಾರ್ಥವಾಗಿ ತಿಳಿದಿರುವುದರಿಂದ ಅವನಿಗೆ ಮೋಹವಿಲ್ಲ—ಆದರೆ ಆರೋಪಿತ ಜಗತ್ತನ್ನು ನೋಡುತ್ತಾನೆ ; **ಅವಿದ್ಯಾವಿಷ್ಟಬ್ರಹ್ಮನೇ ಜೀವನು** ; ಕನ್ನಡಿಯಲ್ಲಿ ತೋರುವ ಮುಖದ ಪ್ರತಿಬಿಂಬವು ಉಪಾಧಿಗತ ದೋಷ (ಮಾಲಿನ್ಯಾದಿ) ವುಳ್ಳದ್ದಾಗುವಂತೆ, ಮಿಥ್ಯಾಭೂತವಾದ 'ಅಹಂಕಾರ'ವೆಂಬ ದ್ರವ್ಯವು ಆರೋಪಿಸಲ್ಪಟ್ಟಿದೆ ; ಈ ಅಹಂಕಾರವು ಕರ್ತೃತ್ವ, ಭೋಕ್ತೃತ್ವಾದಿ ಧರ್ಮಗಳುಳ್ಳದ್ದು ; ಅವಿದ್ಯಾ, ಅಹಂಕಾರಾದಿ ಆರೋಪಿತ ವಸ್ತುಗಳನ್ನು ನೋಡತಕ್ಕ ಪ್ರತ್ಯಗಾತ್ಮನು 'ಸಾಕ್ಷೀ' ಎಂದು ಕರೆಯಲ್ಪಡುತ್ತಾನೆ, ಸಾಕ್ಷಿತ್ವವೂ

ಆರಭ್ಯ–ಅನಾದಿಕಾಲದಿಂದ, ದೇಹೇ ದೇಹೇ ಚ–ಪ್ರತಿ ಪ್ರಾಣಿ ದೇಹದಲ್ಲಿ, ಸಂಸರನ್ – ಸಂಸಾರದಲ್ಲಿ ಸುತ್ತುವವನಾಗಿ, ಭವಪಂಕೇನ – ಸಂಸಾರವೆಂಬ ಕೆಸರಿಂದ, ಮಲಿನಂ–ಅಶುದ್ಧನಾದವನು[1], ಕಥಂ–ಹೇಗೆ ಶುದ್ಧಂ ಭವೇತ್–ಶುದ್ಧಬ್ರಹ್ಮನು ಆಗುತ್ತಾನೆ ? ವದ–ಹೇಳು (ಸರ್ವದಾ ಅಶುದ್ಧನೇ ಆಗಿರುವನು); ಬ್ರಹ್ಮತ್ವಂ–(ಆತನಿಗೆ) ಬ್ರಹ್ಮತ್ವವು, ಆಗ್ರಹಾತ್ ಏವ–(ನಿನ್ನ) ದುರಾಗ್ರಹ ಮಾತ್ರದಿಂದ ; ತತ್–ಅದು, ಜೀವಚ್ಚೈತನ್ಯಂ ಏವ – ಜೀವಚೇತನವೇ ಸರಿ (ಬ್ರಹ್ಮನಲ್ಲ).

---

ಲ್ಪಡುವವನು, ಒಬ್ಬ ಬ್ರಹ್ಮನೇ, ಎಂದು ಸಾಧಿಸುವ ನಿನ್ನ ಆಶೆಯು ವ್ಯರ್ಥ ವಾದುದು—ಫಲಿಸತಕ್ಕದ್ದಲ್ಲ ; ಏಕೆಂದರೆ ಶ್ರುತಿಯೇ ನಿನಗೆ ಸ್ಪಷ್ಟವಾದ ಉತ್ತರ ವನ್ನು ಹೇಳುತ್ತದೆ ; ಜೀವೇಶ್ವರರೆಂಬ ಎರಡು ಚೇತನಗಳೂ ಸರ್ವದಾ (ಮುಕ್ತಿ ಯಲ್ಲಿ ಸಹ) ಒಟ್ಟಿಗೆ ಇರತಕ್ಕವರು—ಪರಸ್ಪರ ಸಖರು—ಒಬ್ಬರನ್ನೊಬ್ಬರು

---

ಅವಿದ್ಯಾಕಲ್ಪಿತವೇ—ಸತ್ಯವಲ್ಲ ; ಈ ಮುಂತಾದ ಪ್ರಕ್ರಿಯೆಗಳುಳ್ಳ ಕೇವಲೈಕ್ಯವಾದವು, ಅವುಗಳನ್ನು ಸಾಧಿಸಲು ಬಳಸುವ ಯುಕ್ತಿಭೇದಗಳಿಂದ, ಇವರಲ್ಲಿ, ಏಕಜೀವ ವಾದ, ಬಹುಜೀವ ವಾದಗಳೆಂಬ ಒಳಪಂಗಡಗಳು ಏರ್ಪಟ್ಟಿವೆ ; ಬ್ರಹ್ಮನು ಅವಿದ್ಯಾವಶದಿಂದ ಜೀವನಾಗಿ, ಆ ಒಬ್ಬ ಜೀವನಿಂದ ಕಲ್ಪಿತವಾದುದು ಈ ವಿಶಿಷ್ಟ ಜಗತ್ತು ಎಂಬುವವರು ಏಕ ಜೀವ ವಾದಿಗಳು ; ಉಪಾಧಿಭೇದದಿಂದ ಒಬ್ಬ ಬ್ರಹ್ಮನೇ ಬಹು (ಅನಂತ) ಜೀವಭಾವವನ್ನು ಹೊಂದಿರುವನೆಂದು ಹೇಳುವವರು, ಬಹು ಜೀವವಾದಿಗಳು ; ಉಪಾಧಿನಾಶಹೊಂದಿದ ಜೀವನಿಗೆ (ಬ್ರಹ್ಮನಿಗೆ) ಮಾತ್ರ ಶುದ್ಧ ಬ್ರಹ್ಮತ್ವವು ಲಭ್ಯವಾಗುತ್ತದೆಂದು ಇವರು ತಿಳಿಯುವರು. ಇವರಲ್ಲಿ ಸಹ ಪ್ರಭೇದಗಳಿವೆ—ಇವುಗಳೆಲ್ಲದರ ವಿವರವಾದ ಖಂಡನೆಯನ್ನು ಶ್ರೀಮದಾಚಾರ್ಯರ ಶ್ರೀವಿಷ್ಣುತತ್ವನಿರ್ಣಯ ಗ್ರಂಥವನ್ನು, ಗುರುಮುಖದಿಂದ ಆಳವಾಗಿ ಅಭ್ಯಾಸಮಾಡಿ ತಿಳಿಯಬೇಕು.

---

[1] ವಿಭಕ್ತನಾದ ಬ್ರಹ್ಮನಿಗೆ ಸಂಸಾರವು ; ಅವಿಭಕ್ತಾಂಶಕ್ಕೆ ಶುದ್ಧತ್ವವಿದ್ದೇ ಇರುತ್ತದೆಂಬ ವಾದವೂ ಯುಕ್ತವಾಗುವುದಿಲ್ಲ ; ಕಾಲಿನಲ್ಲಿ ಮಾತ್ರ ನೋವು ಇರುವ ಮನುಷ್ಯನಿಗೆ, ಅನ್ಯತ್ರ ನೋವಿಲ್ಲವೆಂಬ ಕಾರಣದಿಂದ, ನೋವಿಲ್ಲದವನೆಂದು ಯಾರೂ ಹೇಳುವುದಿಲ್ಲವಷ್ಟೆ ; ತಾರ್ಕಿಕಮತದಂತೆ ಜೀವಚೇತನರು ವ್ಯಾಪ್ತರು ; ಏಕದೇಶದಲ್ಲಿ ಮಾತ್ರ ದೇಹವುಳ್ಳ ಚೇತನನಿಗೆ, ಸಂಸಾರಬಂಧವೆಂಬುದು ಹೇಗೆ ಹೇಳಲಿಕ್ಕೆ ಬರುವುದಿಲ್ಲ? ಆದ್ದರಿಂದ ಏಕ ದೇಶದಲ್ಲಿ ದೋಷವಿದ್ದರೂ ದೋಷಿಯೇ—ಶುದ್ಧವಾದ ಅಂಶಗಳೂ ಇರುವ ಮಾತ್ರದಿಂದ, ಆತನು ಶುದ್ಧನಾಗುವುದಿಲ್ಲ—ಶುದ್ಧನೆನಿಸುವುದಿಲ್ಲ.

**ಬಂಧಸ್ಯಾವಾಸ್ತವತ್ವೇನ ಬದ್ಧಂ ಶುದ್ಧಂ ತದೇವ ಚೇತ್ ।**
**ತವಾಶೇಯಂ ಶ್ರುತಿಸ್ತ್ವಾಹ ಸಖಾಯೌ ಸಯುಜೌ ಸದಾ ॥ ೨೫೪ ॥**
**ಖಗಾವಶ್ನದನಶ್ನಂತೌ ದೇಹೇ ದೇಹೇ ಕೃತಾಸ್ಪದೌ ।**
**ದ್ವಾಸುಪರ್ಣೇತ್ಯಾದಿರೂಪಾ ಸಾ ತವಾಶಾಲತಾಂ ದಹೇತ್ ॥ ೨೫೫ ॥**

ಪರನು ಹೇಳುವ ಮತ್ತೊಂದು ವಾದವನ್ನು, ಪೂರ್ವಪಕ್ಷರೂಪದಿಂದ ನಿರೂಪಿಸಿ, ಶ್ರುತಿವಿರುದ್ಧವೆಂದು ತೋರಿಸಿ ಪರಿಹರಿಸಿ, ನಿರಾಕರಿಸುತ್ತಾರೆ :—

ಬಂಧಸ್ಯ – ಸಂಸಾರಬಂಧಕ್ಕೆ, ಅವಾಸ್ತವತ್ವೇನ – ಮಿಥ್ಯಾಭೂತತ್ವವಿರುವುದರಿಂದ (ಮಿಥ್ಯಾಭೂತವಾದ ಬಂಧವನ್ನು ಆಶ್ರಯಿಸಿರುವುದರಿಂದ), ಬದ್ಧಂ– ಬದ್ಧನೂ, ಶುದ್ಧಂ–(ವಸ್ತುಸ್ಥಿತಿಯಂತೆ) ಶುದ್ಧನೂ, ತದೇವ ಚೇತ್–ಆ ಒಬ್ಬ ಬ್ರಹ್ಮನೇ ಎಂದರೆ, ಇಯಂ–(ಒಬ್ಬನಿಗೇ ಬದ್ಧತ್ವ ಶುದ್ಧತ್ವಗಳನ್ನು ಸಂಪಾದಿಸಬೇಕೆಂಬ) ಈ, ತವ ಆಶಾ–ನಿನ್ನ ಆಶೆಯು (ಕೇವಲ ಆಶಾಮಾತ್ರವು–ಫಲಿಸತಕ್ಕದ್ದಲ್ಲ); (ಏಕೆಂದರೆ), ಶ್ರುತಿಸ್ತು–ಶ್ರುತಿಯೇ, ಆಹ–(ನಿನಗೆ ಸ್ಪಷ್ಟೋತ್ತರವನ್ನು) ಹೇಳಿರುತ್ತದೆ; ಸಯುಜೌ–ಕೂಡಿರುವವರು, ಸದಾ–ಸರ್ವದಾ (ಮುಕ್ತಿಯಲ್ಲಿ ಸಹ–ಅಲ್ಲಿ ಸಾಯುಜ್ಯ ಮತ್ತು ಸಖ್ಯಗಳೂ ಏಕತ್ರ ಇರುತ್ತವೆ);[1] ಸಖಾಯೌ– ಸಖರಾಗಿರುವವರೂ, (ಆದ), ಖಗೌ – ಎರಡು ಪಕ್ಷಿಗಳು (ಚೇತನರು), ಕೃತಾಸ್ಪದೌ – ವಾಸವಾಗಿರುತ್ತ (ಪಕ್ಷಿಗಳು ತಮ್ಮ ಗೂಡಿನಲ್ಲಿಂಬಂತೆ), ಎಂದೂ ಬಿಟ್ಟಿರದವರು ; ಒಂದೇ ಗೂಡಿನಲ್ಲಿರುವ ಎರಡು ಪಕ್ಷಿಗಳಂತೆ ಒಂದೇ ದೇಹವನ್ನು (ಸಂಸಾರಾವಸ್ಥೆಯಲ್ಲಿ ಪ್ರಾಕೃತದೇಹವನ್ನೂ, ಮುಕ್ತಿಯಲ್ಲಿ ಅಪ್ರಾಕೃತ ಚೇತನಾತ್ಮಕ ಸ್ವರೂಪದೇಹವನ್ನೂ ) ಸದಾ ಆಶ್ರಯಿಸಿರುವವರು ; ಹೀಗೆ ಹೇಳುವ 'ದ್ವಾಸುಪರ್ಣಾ' ಎಂಬ ಶ್ರುತಿಯು, ಬದ್ಧತ್ವ ಶುದ್ಧತ್ವಗಳೆರಡನ್ನೂ ಬ್ರಹ್ಮನಿಗೇ ಸಂಪಾದಿಸುವ ನಿನ್ನ ಆಶೆಯೆಂಬ ಲತೆಯನ್ನು ದಹಿಸಿಬಿಡುತ್ತದೆ (೨೫೪–೨೫೫).

[1] ಮುಕ್ತಿಯಲ್ಲಿ ಮುಕ್ತರು, ಲೀಲೆಯಿಂದ ಇಚ್ಛಾನುಸಾರವಾದ ರೂಪಗಳನ್ನೂ ಚಿದಾತ್ಮಕ ದೇಹಗಳನ್ನೂ, ಬಹುಪರಿಯಿಂದ ಸ್ವೀಕರಿಸುವ ಶಕ್ತಿಯುಳ್ಳವರಾದ್ದರಿಂದ ಉಭಯರಿಗೆ ಸಮಾನವಾದ ('ಸಮಾನಂ ವೃಕ್ಷಂ' ಇತ್ಯಾದಿ) ದೇಹಾದಿಗಳೆಂಬುದೂ ಯುಕ್ತವೇ ಆಗುತ್ತದೆ ;

ಅಶ್ನದನಶ್ನಂತೌ [1]–ಫಲವನ್ನು ಭೋಗಿಸುವ ಮತ್ತು ಫಲಭೋಗವಿಲ್ಲದವುಗಳಾಗಿ (ಇರುತ್ತವೆ), ದ್ವಾಸುಪರ್ಣೌ [2]–ಈ ಎರಡು ಪಕ್ಷಿಗಳು, ಇತ್ಯಾದಿ ರೂಪಾ ಸಾ–

[1] ಬ್ರಹ್ಮನಿಗೆ, ಶುದ್ಧತ್ವ ಬದ್ಧತ್ವಗಳೆಂಬ ಎರಡು ವಿರುದ್ಧಾಕಾರಗಳಿಲ್ಲ ; ಶುಕ್ತಿಯನ್ನು ಶುಕ್ತಿ ಮತ್ತು ಶುಕ್ತಿ ರಜತಗಳೆಂಬ ದ್ವಿರೂಪವುಳ್ಳದ್ದೆಂದು ಯಾರೂ ಹೇಳುವುದಿಲ್ಲ ; ದ್ವಾಸುಪರ್ಣಾ ಸಯುಜಾ ಸಖಾಯಾ...' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಡುವ 'ಪಿಪ್ಪಲಂ 'ಸ್ವಾದ್ವತ್ತಿ' ಎಂಬುದೂ ಮುಕ್ತಜೀವನಿಗೂ ಅನ್ವಯಿಸುತ್ತದೆ ; (ಕರ್ಮಫಲವನ್ನು ಇಚ್ಛಿಸಿ ತಿನ್ನುತ್ತಾನೆಂದರೆ) ಅಪರೋಕ್ಷ ಜ್ಞಾನೋತ್ತರ ಕಾಲದ (ನಿವೃತ್ತಿ) ನಿಷ್ಕಾಮಕರ್ಮಗಳಿಗೆ ಮುಕ್ತಿಯಲ್ಲಿ ಆನಂದಾಭಿವೃದ್ಧಿಯೂ, (ತಮೋಯೋಗ್ಯರಿಗೆ, ಸಾಧನ ಪೂರ್ತಿಯಾದ ಕಾಲದ ನಂತರದ ಹರಿದ್ವೇಷಾದಿ ದುಷ್ಕರ್ಮಗಳ ಫಲವಾದ ಅಧಿಕ ದುಃಖವು ತಮಸ್ಸಿನಲ್ಲಿಯೂ) ಉಂಟೆಂದು ಪ್ರಮಾಣಗಳಿರುವುದರಿಂದ, ಈ ಪ್ರಸಕ್ತ ಶ್ರುತಿಯು, ಸಂಸಾರಿ ಜೀವರಿಗೆ ಅನ್ವಯಿಸಬಹುದೆಂಬ ಸಂಶಯವೂ ಯುಕ್ತವಲ್ಲ ; (ಸ್ವಾದು ಎಂಬುದು ಸುಖರೂಪರಾದ ಸುಜೀವರಿಗೆ ಮಾತ್ರ ಮುಕ್ತಿಯಲ್ಲಿ ಅನ್ವಯಿಸುತ್ತದೆ—ಸ್ವಾದು ಇವ ಎಂದಿಟ್ಟುಕೊಂಡು, ಸಂಸಾರದಲ್ಲಿ, ದುರ್ಜೀವರಿಗೆ ಲಭಿಸುವ ದುರ್ಭೋಗಗಳನ್ನು ರುಚಿಕರವೆಂದು ಭೋಗಿಸುವಂತೆ, ತಮಸ್ಸಿನಲ್ಲಿ, ಅವಶರಾಗಿ ದುಃಖಪ್ರದಗಳಾದ ದುರ್ಭೋಗಗಳನ್ನೇ ಭೋಗಿಸುತ್ತಾರೆಂಬ ವಿಶೇಷದೊಡನೆ, 'ಅಶ್ನನ್–ಅನಶ್ನನ್', ಭೋಗವುಳ್ಳ ಮತ್ತು ಭೋಗವಿಲ್ಲದ, ಎಂಬ ಶಬ್ದಗಳ ಅರ್ಥಗಳನ್ನು ಗ್ರಹಿಸಬೇಕು ; ಸಂಸಾರದಲ್ಲಿ ದುಃಖಮಿಶ್ರಿತ ಸುಖಗಳನ್ನೇ ಅಭಿಮಾನದಿಂದ ಸುಖವೆಂದು ಭ್ರಮಿಸಿ ಸುಜೀವರು ಸ್ವಾದುವೆಂದು ಭೋಗಿಸುತ್ತಾರೆ. ಅನಶ್ನನ್—ಈ ಉಭಯ ಜೀವರಂತೆ ಭೋಗವಿಲ್ಲದ–ಸ್ವಕರ್ಮ ಫಲಭೋಗ ಶೂನ್ಯನಾದ, ವಿವಿಧ ಸ್ವಸ್ವರೂಪಸುಖ ವಿಶೇಷಗಳನ್ನು ಮಾತ್ರ, ಸರ್ವದಾ (ಅವಸ್ಥಾಭೇದವಿಲ್ಲದೇ) ಭೋಗಿಸುವವನು, ಬ್ರಹ್ಮನು ; ಈ ಉಭಯರ (ಜೀವ, ಬ್ರಹ್ಮರ) ಭೇದವನ್ನು ಸ್ಪಷ್ಟವಾಗಿ ಈ ಶ್ರುತಿಯು ನಿರೂಪಿಸುತ್ತದೆ) ;

[2] 'ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ'—ಎಂಬುದು ಪೂರ್ಣ ಶ್ರುತಿವಾಕ್ಯವು ; 'ಎರಡು ಪಕ್ಷಿಗಳು ದೇಹವೆಂಬ ವೃಕ್ಷವನ್ನು ಆಲಿಂಗಿಸಿಕೊಂಡಿದ್ದಾರೆ ; ಜೀವನು ದೇಹದ (ವೃಕ್ಷದ) ಫಲವನ್ನು, ಕಹಿಯಾದುದನ್ನೇ ರುಚಿಕರವೆಂದು ತಿಳಿದು ತಿನ್ನುತ್ತಾನೆ ; ಈಶ್ವರನು ಪಾಪಫಲವನ್ನು (ದುಃಖವನ್ನು) ಮುಟ್ಟದೇ ಸದಾ ವಿರಾಜಿಸುತ್ತಾನೆ'—ಎಂಬುದು ಈ ವಾಕ್ಯದ ಭಾವಾರ್ಥ ; 'ಸುಪರ್ಣ' ಪದವು ಜೀವೇಶ್ವರರಿಬ್ಬರಿಗೂ ಅನ್ವಯಿಸುತ್ತದೆ ; ಮುಕ್ತಿಯಲ್ಲಿ ಈ ಶಬ್ದಾರ್ಥವಾದ ಪೂರ್ಣತ್ವವು ಯಥಾಯೋಗ್ಯವಾಗಿ ಉಭಯರಿಗೂ ಕೂಡುತ್ತದೆ ; ಈ ಕಾರಣದಿಂದಲೂ, ಈ ಶ್ರುತಿಗೆ ವ್ಯಾವಹಾರಿಕ ಭೇದ ಪರತ್ವವು ಸರ್ವಥಾ ಯುಕ್ತವಾಗುವುದಿಲ್ಲ.

ಹೀಗೆಂದು ಹೇಳುವ ಆ (ದ್ವಾಸುಪರ್ಣಾ) ಶ್ರುತಿಯು, ತವ–ನಿನ್ನ, ಆಶಾಲತಾಂ–(ಬದ್ಧತ್ವ ಶುದ್ಧತ್ವಗಳೆರಡೂ ಬ್ರಹ್ಮನಿಗೇ ಸಾಧಿಸಬೇಕೆಂಬ) ನಿನ್ನ ಆಶೆಯೆಂಬ ಬಳ್ಳಿಯನ್ನು, ದಹೇತ್–ಸುಟ್ಟುಹಾಕುತ್ತದೆ (ನಾಶಮಾಡುತ್ತದೆ).

**ಬಂಧಮಿಥ್ಯಾತ್ವತೋ ಮುಕ್ತಮಸ್ತು ಬದ್ಧಂ ಕಥಂ ಭವೇತ್ ।**
**ಶುಕ್ತೌ ರೂಪ್ಯತ್ವಮಿಥ್ಯಾತ್ವೇ ಶುಕ್ತಿತೈವ ನ ರೂಪ್ಯತಾ ॥ ೨೫೬ ॥**

ಬದ್ಧತ್ವ ಮುಕ್ತತ್ವಗಳು ಒಬ್ಬ ಬ್ರಹ್ಮನಿಗೇ ಎಂದು ಸಾಧಿಸುವ ನಿನ್ನ ಆಶೆಯು ವ್ಯರ್ಥವೆಂದು ಈ ಹಿಂದೆ ನಿರೂಪಿಸಿದುದನ್ನು, ಈಗ ಸ್ಪಷ್ಟಗೊಳಿಸುತ್ತಾರೆ :—

ಬಂಧಮಿಥ್ಯಾತ್ವತಃ – ಬಂಧವು ಮಿಥ್ಯೆಯೆಂಬುದರಿಂದ, ಮುಕ್ತಂ–(ಬ್ರಹ್ಮನು) ಮುಕ್ತನೆಂಬುದು, ಅಸ್ತು–ಇರಲಿ (ಆಗಲಿ) ; ಬದ್ಧಂ–ಬದ್ಧನೆಂಬುದು, ಕಥಂ–ಹೇಗೆ, ಭವೇತ್–ಆಗುತ್ತದೆ (ಆಗುವುದಿಲ್ಲ) ; ಶುಕ್ತೌ–ಶುಕ್ತಿಯಲ್ಲಿ, ರೂಪ್ಯತ್ವಮಿಥ್ಯಾತ್ವೇ–ಬೆಳ್ಳಿಯ ಭಾವವು, ಮಿಥ್ಯೆಯಾದರೆ, ಶುಕ್ತಿತಾ ಏವ–ಶುಕ್ತಿತ್ವವೇ (ಎಂದಾಯಿತು), ನ ರೂಪ್ಯತಾ–ರೂಪ್ಯತ್ವವು ಇಲ್ಲವಷ್ಟೆ !

**ವ್ಯಾವಹಾರಿಕತಾ ಯಾ ತೇ ರಾಜಖಡ್ಗಕ್ಷತಿರ್ಹಿ ಸಾ ।**
**ಮರಣೇ ನ ವಿಶೇಷೋಽಸ್ತಿ ಬದ್ಧತ್ವಂ ಗತಮೇವ ತೇ ॥ ೨೫೭ ॥**

ಬಂಧವು ಮಿಥ್ಯೆಯಾದರೂ, ಬಂಧವು ವ್ಯಾವಹಾರಿಕವೆಂಬ ವ್ಯವಸ್ಥೆಯಿಂದ ಯುಕ್ತವಾಗುತ್ತದೆಂದರೆ, ಹೇಳುತ್ತಾರೆ :—

ಯಾ–ಯಾವ, ತೇ–ನಿನ್ನ (ನಿನ್ನ ಮತದಂತೆ), ವ್ಯಾವಹಾರಿಕತಾ–(ಬ್ರಹ್ಮಜ್ಞಾನದಿಂದ ಬಾಧಿತವೆಂಬುದೇ) ವ್ಯಾವಹಾರಿಕತ್ವವೆಂಬುದೋ, ಸಾ–

---

ಬಂಧವು ಮಿಥ್ಯೆಯಾದರೆ, ಬ್ರಹ್ಮನು ಮುಕ್ತನಾಗಿರಲಿ ; ಬದ್ಧನು ಹೇಗಾಗುತ್ತಾನೆ ? (ಶಕ್ಯವಿಲ್ಲ) ; ಶುಕ್ತಿಯಲ್ಲಿ ರೂಪ್ಯತ್ವವು (ಬೆಳ್ಳಿಯ ಭಾವವು) ಮಿಥ್ಯೆಯಾದರೆ, ಶುಕ್ತಿಯು ಶುಕ್ತಿಯಾಗಿರುತ್ತದೆಯಲ್ಲದೇ ಬೆಳ್ಳಿಯಲ್ಲ—ರೂಪ್ಯತ್ವವು ಶುಕ್ತಿಗೆ ಇಲ್ಲವಷ್ಟೆ (೨೫೬). ಬಂಧವು ಮಿಥ್ಯೆಯಾದರೂ ಅದು ವ್ಯಾವಹಾರಿಕ ಬಂಧವೆಂಬ ವ್ಯವಸ್ಥೆಯಿಂದ, ಬಂಧವೂ ಬ್ರಹ್ಮನಿಗೆ ಯುಕ್ತವಾಗುತ್ತದೆಂಬುದು

ಅದು, (ಆ ವ್ಯಾವಹಾರಿಕತೆಯು)[1] ರಾಜಖಡ್ಗಕ್ಷತಿಃ ಹಿ–(ಮಿಥ್ಯಾರೋಪವು ನಾಶವಾಗುವುದು ನಿಜ, ಆದರೆ ತತ್ಕಾಲದಲ್ಲಿ ಅಲ್ಲವೆಂಬುದು) ರಾಜನ ಖಡ್ಗ ದಿಂದಾದ ಗಾಯವಿದ್ದಂತೆ; (ಬಾಧಜ್ಞಾನವೆಂಬುದು 'ನಾಸೀದಸ್ತಿ ಭವಿಷ್ಯತೀತಿ', ಇರಲಿಲ್ಲ–ಇಲ್ಲ–ಇರುವುದಿಲ್ಲವೆಂಬ ರೂಪವಾದುದೆಂದು ಹೇಳುವ ಮಾಯಾವಾದಿಗೆ), ಹಿ–ಆರೋಪಿತ ಬಂಧವು ಬ್ರಹ್ಮಜ್ಞಾನದಿಂದ ಹೋದರೇನು? (ರಾಜಖಡ್ಗದಿಂದ ಮರಣ ಬಂದ ಮಾತ್ರಕ್ಕೆ (ಮನುಷ್ಯಸಾಮಾನ್ಯನ ಖಡ್ಗದಿಂದಲ್ಲದಿದ್ದರೆ) ಮರಣ ದಲ್ಲೇನು ವಿಶೇಷವೆನ್ನುತ್ತಾರೆ); ಮರಣೇ–ಮರಣದಲ್ಲಿ, ವಿಶೇಷಃ–ವಿಶೇಷವು, ನ ಅಸ್ತಿ–ಇರುವುದಿಲ್ಲ; ತೇ–ನಿನ್ನ, ಬದ್ಧತ್ವಂ–ಬದ್ಧತ್ವವು, ಗತಂ ಏವ–ಬಿದ್ದೇ ಹೋಯಿತು; (ಶುಕ್ತಿಯು, ಎಲ್ಲ ಕಾಲದಲ್ಲಿ ಶುಕ್ತಿಯಾಗಿಯೇ ಇರುವುದಲ್ಲದೇ ರೂಪ್ಯತ್ವವು (ಬೆಳ್ಳಿಯಾಗುವುದೆಂಬುದು) ಇಲ್ಲವೇ ಇಲ್ಲವಷ್ಟೆ.

---

ಸ್ವರಸವಲ್ಲ—ಅರ್ಥವಿಲ್ಲದ ನುಡಿ; ಬ್ರಹ್ಮನ ಈ ಆರೋಪಿತ ಬಂಧವು, ಬ್ರಹ್ಮ ಜ್ಞಾನದಿಂದ ಬಾಧಿತವಾಗುವ ವ್ಯಾವಹಾರಿಕ (ತತ್ಕಾಲದಲ್ಲಿ ಶುಕ್ತಿಯ ರಜತತ್ವವು ಪರಿಹಾರವಾಗುವಂತಲ್ಲದೇ, ಬ್ರಹ್ಮಜ್ಞಾನವಾಗುವವರೆಗೆ ಇರುವ—ಬಹುಕಾಲೀನ ವಾದುದೆಂಬುದರಿಂದ ಯಾವ ಪ್ರಾಶಸ್ತ್ಯವೂ ಇರುವುದಿಲ್ಲ; ಆ ಬಂಧವು ಬಾಧ ಜ್ಞಾನದಿಂದ ನಷ್ಟವಾಗುತ್ತದೆಂಬುದೂ ಯುಕ್ತವಲ್ಲ; ವ್ಯಾವಹಾರಿಕವಾದುದು ವಸ್ತುತಃ ಇಲ್ಲವೇ ಇಲ್ಲ; ಬಾಧಜ್ಞಾನವು, ಇರಲಿಲ್ಲ—ಇಲ್ಲ—ಇರುವುದಿಲ್ಲವೆಂಬ ರೂಪವುಳ್ಳದ್ದೆಂದು ಹೇಳುವ ನಿನ್ನ ಬಂಧಪರಿಹಾರಕ ಜ್ಞಾನವು, ಬಂಧನಾಶಕ ಖಡ್ಗವಿದ್ದಂತೆ, ಎನ್ನುವಿಯಾದರೆ, ಮರಣವನ್ನುಂಟುಮಾಡುವ ಖಡ್ಗವು, ಸಾಮಾನ್ಯ ಪುರುಷನ ಖಡ್ಗವಾದರೇನು, ರಾಜ ಖಡ್ಗವಾದರೇನು; ಮರಣದಲ್ಲಿ ಯಾವ ವಿಶೇಷವಿಲ್ಲದಿರುವಂತೆ, ಬ್ರಹ್ಮಜ್ಞಾನದಿಂದ ಮಾತ್ರ ನಷ್ಟವಾಗುವ ಬಂಧ ವೆಂಬುದರ ವೈಶಿಷ್ಟ್ಯವೇನು? ಶುಕ್ತಿಯು, ಶುಕ್ತಿಯಾಗಿಯೇ ಇರುವಂತೆ (ಅದರ ಸ್ವರೂಪವು ಬದಲಾಗದಂತೆ) ಏಕಪ್ರಕಾರನಾಗಿಯೇ ಬ್ರಹ್ಮನಿರುವನಷ್ಟೆ; ಆದ್ದರಿಂದ ಮಿಥ್ಯಾಬಂಧವೆಂಬ ನಿನ್ನ ಮತವು ಬಿದ್ದುಹೋಯಿತು (೨೫೭). ಬದ್ಧತ್ವ

---

[1] ಬ್ರಹ್ಮನಲ್ಲಿ ಆರೋಪಿತವಾದ ಜೀವತ್ವವು ಬಹುಕಾಲೀನವಾದುದು—ಶುಕ್ತಿಯಲ್ಲಿ ತೋರುವ ರಜತದಂತೆ ತಾತ್ಕಾಲಿಕವಲ್ಲ; ಬ್ರಹ್ಮಜ್ಞಾನವಾದಾಗ ಜೀವಭಾವವು ನಷ್ಟವಾಗು ವುದರಿಂದ ವ್ಯವಹಾರಯೋಗ್ಯವಾದ (ಸತ್ಯತ್ವ) ಅವಸ್ಥೆಯೆಂದು ಮಾಯಾವಾದಿಗಳ ನಿರೂಪಣೆ.

**ಅತೋ ಬದ್ಧೋಽಪರಸ್ತಸ್ಮಾನ್ನಿತ್ಯಮುಕ್ತೋಽಪಿ ಚಾಪರಃ ।**
**ಇತ್ಯೇವ ಸರ್ವಥಾ ವಾಚ್ಯಮಿತ್ಥಂ ಸೂತ್ರಕೃದಾಹ ಹಿ ॥ ೨೫೮ ॥**

ಅತಃ – ಆದ್ದರಿಂದ (ಪರರೀತ್ಯಾ ಒಬ್ಬನಿಗೇ ಬದ್ಧತ್ವ ಮುಕ್ತತ್ವಗಳು ಕೂಡುವುದಿಲ್ಲವಾದ್ದರಿಂದ), ಬದ್ಧಃ – ಬದ್ಧನು, ಅಪರಃ – ಬೇರೇ ಜೀವನು) ; ತಸ್ಮಾತ್ – ಆದ್ದರಿಂದಲೇ, ನಿತ್ಯಮುಕ್ತಃ ಅಪಿ – ನಿತ್ಯಮುಕ್ತನೂ, ಅಪರಃ – ಅನ್ಯನೇ (ಪರಮಾತ್ಮನೇ) ; ಇತ್ಯೇವ – ಹೀಗೆಂದೇ (ಅನ್ಯಾರ್ಥಕ್ಕೆ ಅವಕಾಶವಿಲ್ಲದೇ ಅವಧಾರಣಯುಕ್ತವಾಗಿಯೇ, ಸರ್ವಥಾ–ಹೇಗಾದರೂ, ವಾಚ್ಯಂ– ಹೇಳಲ್ಪಡಬೇಕು ; ಇತ್ಥಂ–ಹೀಗೆಂದು, ಸೂತ್ರಕೃತ್ ಆಹ ಹಿ–ಸೂತ್ರಕಾರರು (ಬ್ರಹ್ಮಸೂತ್ರಕರ್ತೃ ಶ್ರೀ ಬಾದರಾಯಣರೇ) ಹೇಳಿರುವುದು (ಸ್ಪಷ್ಟವಿದೆ).

**ಆವಯೋಶ್ಚ ಮತೌ ದ್ವೌ ಸ್ಥಿತ್ಯದನಾಭ್ಯಾಮಿತೀರಿತೌ ॥ ೨೫೯ ॥**

ಆವಯೋಃ – (ವಾದಿಪ್ರತಿವಾದಿಗಳಾದ) ನಮ್ಮಿಬ್ಬರ, ದ್ವೌ – ಎರಡೂ, ಮತೌ–ಅಭಿಪ್ರಾಯಗಳು, ಸ್ಥಿತ್ಯದನಾಭ್ಯಾಂ[1]–ಸ್ಥಿತಿ (ಕರ್ಮಫಲವನ್ನಾಶ್ರಯಿಸದೇ ದೇಹದಲ್ಲಿರುವಿಕೆ) ಮತ್ತು ಅದನ (ಕರ್ಮಫಲಭೋಗ ಮಾಡುವುದು) ಎಂಬ ಎರಡು ಹೇತುಗಳಿಂದ, ಇತಿ ಈರೀತೌ–ಹೀಗೆಂದೇ (ಜೀವಬ್ರಹ್ಮರು ಉಭಯರೂ

---

ಮುಕ್ತತ್ವಗಳು ಒಬ್ಬನಿಗೇ ಕೂಡುವುದಿಲ್ಲವಾದ್ದರಿಂದ (ಪರನು ಹೇಳುವಂತೆ ಕೂಡುವುದಿಲ್ಲವಾದ್ದರಿಂದ), ಬದ್ಧನು ಬೇರೆಯೊಬ್ಬನು (ಜೀವನು) ; ನಿತ್ಯಮುಕ್ತನೂ ಅನ್ಯನೇ (ಪರಮಾತ್ಮನೇ) ; ಹೀಗೆಂದೇ ಸರ್ವಥಾ ಹೇಳಬೇಕು—ಸೂತ್ರಕಾರರೂ ಹೀಗೆಂದೇ ನಿರ್ಣಯಿಸಿ ಹೇಳಿದ್ದಾರೆ (೨೫೮). 'ಸ್ಥಿತ್ಯದನಾಭ್ಯಾಂ ಚ' ಎಂಬ ಸೂತ್ರದಲ್ಲಿ ವಾದಿಪ್ರತಿವಾದಿಗಳ (ನಮ್ಮಿಬ್ಬರ ಮತಗಳನ್ನು ವಿವೇಚಿಸಿ, ದೇಹದಲ್ಲಿರುವ ಜೀವಬ್ರಹ್ಮರಿಬ್ಬರೂ ಭಿನ್ನರೇ ಎಂದು ನಿರ್ಣಯಿಸಿದ್ದಾರೆ) (೨೫೯).

---

[1] 'ಸ್ಥಿತ್ಯದನಾಭ್ಯಾಂ ಚ'—ಎಂಬುದು ಪ್ರಸಕ್ತಸೂತ್ರವು ; ಇದರ ಅರ್ಥ:—ಚ– ಜೀವೇಶರಲ್ಲಿ ಐಕ್ಯವಿಲ್ಲ–ಅಭಿನ್ನರೆಂದು ಹೇಳಕೂಡದು ; ಸ್ಥಿತ್ಯದನಾಭ್ಯಾಂ—ಸ್ಥಿತಿ ಮತ್ತು ಅದನಗಳೆಂಬ ಹೇತುಗಳಿರುವುದರಿಂದ ; ಸ್ಥಿತಿ—ಕರ್ಮಫಲಭೋಗವಿಲ್ಲದೇ ಜೀವನೊಂದಿಗೆ ಇರುವುದು ; ಅದನ—ಕರ್ಮಫಲವನ್ನು ಭೋಗಮಾಡುವುದು ; 'ದ್ವಾಸುಪರ್ಣಾ' ಶ್ರುತಿಯಲ್ಲಿ, 'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ'—ಎಂಬುದಾಗಿ ಸೂತ್ರೋಕ್ತ ಹೇತುಗಳು ಉಕ್ತವಾಗಿವೆ.

*

ದೇಹದಲ್ಲಿದ್ದು ಭಿನ್ನಭಿನ್ನರಾಗಿದ್ದಾರೆಂದು) ಹೇಳಲ್ಪಡುವುದು (ಉಭಯರಿಗೂ ಅವಶ್ಯಕವೇ ಆದ್ದರಿಂದ), ಹೇಳಲ್ಪಟ್ಟಿವೆ.

**ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನತಸ್ತ್ವಿತಿ ।**
**ಸೂತ್ರಂ ವ್ಯಾಕುರ್ವತೋ ಜೀವಪರೌ ದ್ವೌ ಹೃದಿ ತೇ ಮತೇ ॥೨೬೦॥**

ಬೇರೆ ಸೂತ್ರವನ್ನು ಉದಹರಿಸುತ್ತಾರೆ :—

ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನತಃ – 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' ಎಂಬ ಸೂತ್ರದಿಂದ, ಇತಿ ತು–ಆದರೂ, ಸೂತ್ರಂ–ಈ ಸೂತ್ರವನ್ನು, ವ್ಯಾಕುರ್ವತಃ–ವ್ಯಾಖ್ಯಾನಮಾಡುವ, ತೇ–ನಿನ್ನ, ಮತೇ–ಮತದಲ್ಲಿ, ಜೀವಪರೌ–ಜೀವಪರಮಾತ್ಮರೆಂಬ, ದ್ವೌ–ಇಬ್ಬರು, ಹೃದಿ–ಹೃದಯದಲ್ಲಿರುವರೆಂದು, (ಅಭಿಪ್ರೇತರಾಗಿರುವರು).[1]

**ಸತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ ।**
**ಇತಿ ತ್ರಿಗುಣಶೂನ್ಯತ್ವಂ ಸ್ವಸ್ಯೋಕ್ತ್ವಾ ಹರಿರಂಜಸಾ ।**
**ಸ್ವಾಧೀನಗುಣತೋ ಬಂಧೋ ಜೀವಸ್ಯೈವೇತಿ ಶಂಸತಿ ॥ ೨೬೧ ॥**

'ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತೋ ಮೇ ನ ವಸ್ತುತಃ' ಎಂದು ಭಾಗವತದಲ್ಲಿ ಶ್ರೀಕೃಷ್ಣನು ತನಗೇ ಬದ್ಧತ್ವ ಮುಕ್ತತ್ವಗಳನ್ನು ಹೇಳಿರುವುದರಿಂದ,

---

ಮತ್ತು 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' ಎಂಬ ಸೂತ್ರವನ್ನು ವ್ಯಾಖ್ಯಾನಮಾಡುವಾಗ, ಹೃದಯದಲ್ಲಿರುವರೆಂದು ಅಲ್ಲಿ ಹೇಳಲಾದವರು. ಜೀವಪರಮಾತ್ಮರೆಂದು ಮಾಯಾಮತವೂ ಅಭಿಪ್ರಾಯಪಟ್ಟಿರುತ್ತದೆ (೨೬೦). ಶ್ರೀಭಾಗವತದಲ್ಲಿ ಶ್ರೀಕೃಷ್ಣನು, ಉದ್ಧವನಿಗೆ ಉಪದೇಶ ಮಾಡುತ್ತಾ, ಸತ್ವ,

---

[1] 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' ಎಂಬ ಸೂತ್ರದಲ್ಲಿ ಆತ್ಮ, ಅಂತರಾತ್ಮಗಳೆಂಬ ಶ್ರೀವಿಷ್ಣುವಿನ ಎರಡು ರೂಪಗಳು ಪ್ರಸಕ್ತನಾಗಿದ್ದರೂ, ಹೃದಯ ಗುಹೆಯಲ್ಲಿರುವವರು, ಜೀವಪರಮಾತ್ಮರೆಂಬುದಾಗಿ ಅದ್ವೈತಿಗಳು ವ್ಯಾಖ್ಯಾನ ಮಾಡಿರುವರು ; ಅದರಿಂದ ಸಹ ಜೀವಪರಮಾತ್ಮರು ಭಿನ್ನರೆಂದು, ಪರನ ಒಪ್ಪಿಗೆಯನ್ನೇ ಉಪಯೋಗಿಸಿಕೊಂಡು, ಯುಕ್ತಿಯನ್ನು ಮುಂದಿಡುತ್ತಿದ್ದಾರೆಂದು ತಿಳಿಯಬೇಕು ; ಸಾಂಖ್ಯರು ಹೃದ್ಗುಹೆಯಲ್ಲಿರುವ ಇಬ್ಬರನ್ನು ಬುದ್ಧಿ ಮತ್ತು ಜೀವರೆಂದು ಹೇಳುವುದನ್ನು, ಅದ್ವೈತಿಯು ನಿರಾಕರಿಸಿ, ಜೀವಪರಮಾತ್ಮರೆಂದು ಸಿದ್ಧಾಂತ ಮಾಡಿರುವನು.

ಶ್ರೀಕೃಷ್ಣನು ನಿತ್ಯಮುಕ್ತನೆಂಬುದು ಹೇಗೆ, ಎಂಬ ಶಂಕೆಯನ್ನು ಪರಿಹರಿಸಲು ಹೇಳುತ್ತಾರೆ :—

ಸತ್ವಂ ರಜಸ್ತಮ ಇತಿ ಗುಣಾಃ–ಸತ್ವ, ರಜ, ತಮಗಳೆಂಬ ಗುಣಗಳು, ಜೀವಸ್ಯ–ಜೀವನಿಗೆ, ಮೇ–ನನಗೆ, ನೈವ–ಇಲ್ಲವೆಂದೇ, ಇತಿ–ಎಂದು, (ಅದೇ 'ಪ್ರಕರಣದಲ್ಲಿ' ಏವ ಎಂಬ ಅವಧಾರಣದಿಂದ, ಸ್ಪಷ್ಟವಾಗಿ), ಗುಣಶೂನ್ಯತ್ವಂ–ಗುಣಸಂಬಂಧರಾಹಿತ್ಯವನ್ನು, ಸ್ವಸ್ಯ–ತನಗೆ, ಹರಿಃ–ಶ್ರೀಕೃಷ್ಣನು (ಉದ್ಧವನನ್ನು ಕುರಿತು), ಅಂಜಸಾ–ಸ್ಪಷ್ಟವಾಗಿ, ಉಕ್ತ್ವಾ–ಹೇಳಿ, (ವ್ಯಾವಹಾರಿಕ ಗುಣಗಳಿಗೆ ಪಾರಮಾರ್ಥಿಕವಾಗಿ ಇಲ್ಲವೆಂಬರ್ಥದ ಕುತ್ಸಿತ ಯೋಜನೆಯು ಅಂಜಸಾ (ಏವಕಾರ ಎಂಬುದರಿಂದ ಸೂಚಿತವಾಯಿತು) ; ಸ್ವಾಧೀನಗುಣತಃ–ತನ್ನ ಅಧೀನದಲ್ಲಿರುವ ಗುಣಗಳಿಂದ, ಬಂಧಃ–ಬಂಧನವು, ಜೀವಸ್ಯ ಏವ–ಜೀವನಿಗೆ ಮಾತ್ರವೆಂದು, ಶಂಸತಿ–ಘೋಷಿಸುತ್ತಾನೆ; (ನನಗೆ ಬಂಧಮೋಕ್ಷಗಳೆರಡೂ ಇಲ್ಲವೆಂದೂ ಮುಂದೆಯೂ ಪುನಃ ಹೇಳಿದ್ದಾನೆ–ಬಂಧಮೋಕ್ಷಗಳೆರಡೂ ಗುಣಾಧೀನಗಳೆಂದು ತಿಳಿಯಬೇಕು).

---

ರಜ, ತಮಗಳೆಂಬ ಪ್ರಾಕೃತ ಗುಣಸಂಗವು ಜೀವನಿಗೆ ಮಾತ್ರ—ತನಗೆ ಇಲ್ಲವೆಂದೂ ಹೇಳಿದ್ದಾನೆ; ಗುಣಗಳು ತನ್ನ ಸ್ವಾಧೀನವಾಗಿರಲು, ಅವು ತನ್ನನ್ನು ಹೇಗೆ ಬಂಧಿಸುತ್ತವೆ? ಜೀವನನ್ನು ಮಾತ್ರ ನನ್ನ ಇಚ್ಛೆಯಂತೆ ಬಂಧಿಸುತ್ತವೆಂದೂ ಹೇಳಿದ್ದಾನೆ (೨೬೧). ಬದ್ಧ ಮತ್ತು ಮುಕ್ತನೆಂಬ ನಾಮವು, ಗುಣಸಂಗದಿಂದ ಜೀವ[illegible]ಲ್ಲದೇ, ಸ್ವತಂತ್ರನಾದ ನನಗೆ ಇಲ್ಲವೇ ಇಲ್ಲ ; ಏಕೆಂದರೆ, ಸತ್ವಾದಿ ಗುಣಗಳು ಮಾಯಾನಾಮಕ ಪ್ರಕೃತಿಯೇ ಮೂಲವಾಗಿವುಳ್ಳವುಗಳು ; ಆ ಪ್ರಕೃತಿಯೇ ನನ್ನ ಅಧೀನವಾಗಿದೆ ; ಆದ್ದರಿಂದ ನನಗೆ ಗುಣಬಂಧವಾಗಲಿ, ಬಿಡುಗಡೆಯೆಂಬ ಮೋಕ್ಷವಾಗಲಿ, ಇಲ್ಲ ; ಜೀವನಲ್ಲಿಯೂ ಬದ್ಧತ್ವವು ಸ್ವಭಾವದಿಂದಲ್ಲ ; ಹೀಗೆಂಬುದು, 'ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತಃ' ಎಂಬ ಪೂರ್ವಾರ್ಧ ಶ್ಲೋಕದ ಅರ್ಥವು ; ನನ್ನ ಧನದಿಂದ ಜೀವಿಸುತ್ತಾನೆಂದರೆ, ನನ್ನ ಅಧೀನದಲ್ಲಿರುವ ಧನದಿಂದ, ಎಂದಂತೆ, ಗುಣತಃ ಎಂಬುದು, ಗುಣವು ನನ್ನ ಅಧೀನವೆಂಬರ್ಥವನ್ನು ಸೂಚಿಸುತ್ತದೆ ; ನನ್ನ ಅಧೀನವಾದ ಗುಣವು ; 'ನ ವಸ್ತುತಃ' ಎಂಬುದು, ಪಾರಮಾರ್ಥಿಕವಾಗಿ ಅಲ್ಲವೆಂಬ ಮಾಯಾವಾದಿಗೆ

**ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತೋ ಮೇ ನ ವಸ್ತುತಃ ।**
**ಗುಣಸ್ಯ ಮಾಯಾಮೂಲತ್ವಾನ್ನ ಮೇ ಬಂಧೋ ನ ಮೋಕ್ಷಣಂ ॥**

**ಮದಧೀನಗುಣಾಜ್ಜೀವೇ ಬದ್ಧಾಖ್ಯಾ ನ ಸ್ವಭಾವತಃ ।**
**ಇತಿ ಪೂರ್ವಾರ್ಧವಾಕ್ಯಾರ್ಥೋ ಮೇ ಧನಾಜ್ಜೀವತೀತಿವತ್ ॥೨೬೩॥**

ಉಪಯುಕ್ತ ಪ್ರಮೇಯವನ್ನು ಹೇಳಿ ಭಾಗವತ ಶ್ಲೋಕಾರ್ಥವನ್ನು ಹೇಳುತ್ತಾರೆ :—

ಬದ್ಧಃ—ಬದ್ಧನು, ಮುಕ್ತಃ—ಮುಕ್ತನು, ಇತಿ—ಎಂಬ, ಆಖ್ಯಾ—ಹೇಳಿಕೆಯು, ಗುಣತಃ—ಗುಣದಿಂದ (ಜೀವನಿಗೆ), ವಸ್ತುತಃ—ಸ್ವತಂತ್ರನಾದ, ಮೇ—ನನಗೆ, ನ—ಇಲ್ಲವು ; ಗುಣಸ್ಯ—ಗುಣಕ್ಕೆ, ಮಾಯಾಮೂಲತ್ವಾತ್—ಮಾಯೆಯೇ (ನನ್ನ ಅಧೀನವಾದ ಪ್ರಕೃತಿಯೇ) ಆಶ್ರಯವಾದ್ದರಿಂದ, ಮೇ—ನನಗೆ, ನ ಬಂಧಃ—ಬಂಧವಿಲ್ಲ, ನ ಮೋಕ್ಷಣಂ – ಆದರಿಂದ (ಗುಣಬಂಧದಿಂದ) ಬಿಡುಗಡೆಯೂ ಇಲ್ಲ ; ಮದಧೀನಗುಣಾತ್ – ನನ್ನ ಅಧೀನದಲ್ಲಿರುವ ಗುಣದಿಂದ, ಜೀವೇ—ಜೀವನಲ್ಲಿ, ಬದ್ಧಾಖ್ಯಾ—ಬದ್ಧನೆಂಬ ವ್ಯವಹಾರವು, ಸ್ವಭಾವತಃ—ಸ್ವಭಾವದಿಂದ, ನ—(ಜೀವನಿಗೂ) ಗುಣಸಂಪರ್ಕವಿಲ್ಲ ; ಇತಿ—ಹೀಗೆ, ಪೂರ್ವಾರ್ಧವಾಕ್ಯಾರ್ಥಃ—ಪೂರ್ವಾರ್ಧಶ್ಲೋಕದ (ಪೂರ್ವಪಕ್ಷದಲ್ಲಿ ಉದಾಹೃತವಾದ 'ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತಃ' ಎಂಬುದರ) ಅರ್ಥವು ; ಮೇ—ನನ್ನ, ಧನಾತ್—ಧನದಿಂದ, ಜೀವತಿ ಇತಿವತ್—ಜೀವಿಸುತ್ತಾನೆ, ಎಂದಂತೆ [1] ('ನ ವಸ್ತುತಃ'

---

ಇಚ್ಛಿತವಾದ ಅರ್ಥವನ್ನು ಹೇಳುವುದಿಲ್ಲ ; ಸ್ವಭಾವದಿಂದಲ್ಲ—ಆದರೆ ಗುಣದಿಂದ ಎಂಬ ಅರ್ಥವನ್ನೇ, 'ನ ಸ್ವಭಾವತಃ' ಎಂಬುದು, ನಿರ್ಣಯಿಸುತ್ತದೆ (೨೬೨—೨೬೩). ಗುಣಸಂಗದಿಂದ, ತನಗೇ ಬದ್ಧತ್ವ ಮುಕ್ತತ್ವಗಳು, ಎಂಬರ್ಥವು, ಶ್ರೀಕೃಷ್ಣನ ಅಭಿಪ್ರಾಯವಲ್ಲವೆಂಬುದು, ಉತ್ತರಾರ್ಧ ಶ್ಲೋಕದ ಕಡೆಯ ಚರಣವಾದ 'ನ ಮೇ ಬಂಧೋ ನ ಮೋಕ್ಷಣಂ' ಎಂಬುದರ ವಿಮರ್ಶೆಯಿಂದ ಸಹ

---

[1] ನನ್ನ ಧನದಿಂದ ಎಂದರೆ, ನನ್ನ ಅಧೀನವಾದ (ನನಗೆ ಸೇರಿದ) ಧನದಿಂದ—ಎಂದರ್ಥವೋ—ನನ್ನ ದೇಹವನ್ನು ಆಶ್ರಯಿಸಿದ ಧನದಿಂದ, ಎಂದಲ್ಲವೋ, ಹಾಗೆ (ಮೇ ಗುಣತಃ) ನನ್ನ ಅಧೀನವಾದ ಗುಣದಿಂದ ಬಂಧಿತನೆಂಬರ್ಥವೂ ಸೂಚಿತವಾಗುತ್ತದೆ ; ತನ್ನ ಅಧೀನವಾದ ಗುಣವು ತನ್ನನ್ನು ಬಂಧಿಸಲಾರದಷ್ಟೆ !

ಎಂಬುದಕ್ಕೆ ಮಾಯಾವಾದಿಗೆ ಇಚ್ಛಿತವಾದ ಅರ್ಥವು (ತತ್ವತಃ) ಪಾರಮಾರ್ಥಿಕ ವಾಗಿ (ಸತ್ಯವಾಗಿ) ಅಲ್ಲವೆಂಬುದಲ್ಲ ; 'ನ ಸ್ವಭಾವತಃ' ಎಂಬುದು ನಿರ್ಣೀತವಾದ ಅರ್ಥವಾಗಿದೆ—ಸ್ವಭಾವದಿಂದಲ್ಲ, ಆದರೆ, ಗುಣದಿಂದ, ಎಂಬುದು ಸರಿಯಾದ ಅರ್ಥವು).

**ಸ್ವಸ್ಯೈವ ಗುಣತೋ ಬಂಧ ಇತ್ಯರ್ಥಸ್ತೂಕ್ತವಾಕ್ಯತಃ ।**
**ಉತ್ತರಾರ್ಧೋತ್ತರಶ್ಲೋಕಪರ್ಯಾಲೋಚನಯಾ ಚ ನ ॥೨೬೪॥**

ಪ್ರತಿವಾದಿಯ ಅರ್ಥದ ದೋಷವನ್ನು ತೋರಿಸಿ, ಪುನಃ ಬೇರೆ ದೋಷ ಗಳನ್ನು ಹೇಳುತ್ತಾರೆ :—

'ಉಕ್ತವಾಕ್ಯತಃ—ಸತ್ವಂ ರಜಸ್ತಮ ಇತಿ ಗುಣಾಃ ಜೀವಸ್ಯೈವ ನ ಮೇ' ಎಂಬ ವಾಕ್ಯದಿಂದ, ಸ್ವಸ್ಯ ಏವ—ತನಗೇ, ಗುಣತಃ ಬಂಧಃ—ಗುಣದಿಂದ ಬಂಧವು, ಇತ್ಯರ್ಥಃ ತು—ಎಂಬ ಅರ್ಥವಾದರೋ, ಉತ್ತರಾರ್ಧೋತ್ತರ ಶ್ಲೋಕ ಪರ್ಯಾಲೋಚನಯಾ—'ನ ಮೇ ಬಂಧೋ ನ ಮೋಕ್ಷಣಂ' ಎಂಬ ಉತ್ತರಾರ್ಧ ಶ್ಲೋಕದ ಕೊನೆಯ ಚರಣದ ವಿಮರ್ಶೆಯಿಂದ, ನ—ಇಲ್ಲವೆಂದು ಸಿದ್ಧವಾಗುತ್ತದೆ.

**ಮಾಯಾಮೂಲಗುಣಾಭಾವಾನ್ನ ಮೇ ಮೋಕ್ಷೋ ನ ಬಂಧನಂ ।**
**ಇತ್ಯುತ್ತರಾರ್ಧೇ ಯತ್ ಕೃಷ್ಣಸ್ಯ ಸ್ವಬಂಧಂ ನಿಷೇಧತಿ ॥ ೨೬೫ ॥**

ಉತ್ತರಾರ್ಧ ಶ್ಲೋಕಾರ್ಥ ಪರ್ಯಾಲೋಚನೆಯ ಪ್ರಕಾರವನ್ನು ವಿವರಿಸು ತ್ತಾರೆ :—

---

ಸಿದ್ಧವಾಗುತ್ತದೆ (೨೬೪). ಮಾಯಾಮೂಲವಾದ ಗುಣಾಭಾವವನ್ನು (ಪ್ರಾಕೃತ ಗುಣಗಳ ಅಭಾವವನ್ನು) ತನಗೆ ಹೇಳಿಕೊಂಡು, (ಅತ ಏವ, ತಾನು ಅಪ್ರಾಕೃತ ಶರೀರಿ ಎಂಬುದನ್ನು ಸೂಚಿಸಿ) ನನಗೆ ಬಂಧವೂ ಇಲ್ಲ—ಗುಣಸಂಗದಿಂದ ಮೋಚನವೂ ಇಲ್ಲ, ಎಂದು ಉತ್ತರಾರ್ಧದಲ್ಲಿ ಹೇಳಿಕೊಂಡಿರುವುದರಿಂದ, ಶ್ರೀಕೃಷ್ಣನು ತನಗೆ ಬಂಧಮೋಕ್ಷಗಳನ್ನು ನಿಷೇಧಿಸಿರುವನೆಂದು ಸ್ಪಷ್ಟವಾಗು ತ್ತದೆ (೨೬೫). ಜೀವೇಶ್ವರರ ಮಧ್ಯೆ ಒಬ್ಬನಾದ ಜೀವನು, ನನ್ನ ಅಂಶನು (ಭಿನ್ನಾಂಶನು) ; ಅವನಿಗೇ ಅಜ್ಞಾನದಿಂದ ಅನಾದಿಯಾದ ಸಂಸಾರಬಂಧವೂ, ಮತ್ತು ಯಥಾರ್ಥಜ್ಞಾನ ನಿಶ್ಚಯದಿಂದ ಮೋಕ್ಷವೂ ಇರುತ್ತವೆಂದು ವಿಶ್ವಾಸ

*

ಮಾಯಾಮೂಲ ಗುಣಾಭಾವಾತ್[1]–ಪ್ರಕೃತಿಯೇ ಮೂಲವಾಗಿವುಳ್ಳ ಸತ್ವಾದಿಗುಣಗಳು (ಮಾಯಾರಹಿತನಾದ-ಅಪ್ರಾಕೃತ ಶರೀರನಾದ) ನನ್ನಲ್ಲಿ ಇರುವುದಿಲ್ಲವಾದ್ದರಿಂದ, ಮೇ–ನನಗೆ, ಬಂಧನಂ–ಗುಣಬಂಧನವು, ನ–ಇಲ್ಲ, ಮೋಕ್ಷಃ–ಅವುಗಳಿಂದ ಬಿಡುಗಡೆ ಎಂಬುದೂ ಇಲ್ಲ ; ಇತಿ–ಹೀಗೆ, ಉತ್ತರಾರ್ಧೇ–ಉತ್ತರಾರ್ಧ ಶ್ಲೋಕದಲ್ಲಿ, ('ಗುಣಸ್ಯ ಮಾಯಾಮೂಲತ್ವಾನ್ನ ಮೇ ಬಂಧೋ ನ

---

ಮಾಡಬೇಕು (೨೬೬). ಜೀವಚೇತನನು ನನ್ನ ಅಂಶದಿಂದ ಭಿನ್ನನಾಗಿರುವನು (ಸ್ವಾಂಶಭಿನ್ನನು) ; ಆದ್ದರಿಂದ ಭಿನ್ನಾಂಶನೆಂದು ಕರೆಯಲ್ಪಡುವನು ; ಸುಪರ್ಣಾ-ವೇತಾ ಸಯುಜಾ ಎಂಬಲ್ಲಿ ಪ್ರಸಕ್ತರಾದ ಎರಡು ಪಕ್ಷಿಗಳಲ್ಲಿ ಒಬ್ಬನಾದ ಜೀವನಿಗೆ

---

[1] ಯದ್ಯಪಿ ಮೂಲಭಾಗವತ ಶ್ಲೋಕದಲ್ಲಿ 'ಮಾಯಾಮೂಲತ್ವಾನ್ನ ಮೇ ಮೋಕ್ಷೋ ನ ಬಂಧನಂ...' ಎಂದಿದೆ ; ಮಾಯಾಮೂಲವಾದ ಗುಣಗಳ ಅಭಾವವನ್ನು ತನ್ನಲ್ಲಿ ಹೇಳಿಲ್ಲವೆಂದು ತೋರಬಹುದು ; ಹೀಗಿದ್ದರೂ 'ನ ಬಂಧನಂ' ಎಂದು ಬಂಧರಾಹಿತ್ಯವನ್ನು ಹೇಳಿರುವುದರಿಂದ, ಅರ್ಥತಃ ಗುಣಾಭಾವವೂ ಹೇಳಲ್ಪಟ್ಟಂತೆಯೇ ಆಗಿದೆ ; ಬಂಧವೇ ಇಲ್ಲದಿರಲು, ಮೋಕ್ಷ (ಅದರಿಂದ ಮೋಚನವೆಂಬುದು) ವೆಂಬುದು ಹೇಗೆ ಕೂಡುತ್ತದೆ ? ಬಂಧವೇ ಇಲ್ಲದಿರುವಾಗ, ಪ್ರಧ್ವಂಸವಿಲ್ಲೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲದಿದ್ದರೂ, ತನ್ನ ನಿತ್ಯಮುಕ್ತತ್ವವನ್ನು ಸುಸ್ಪಷ್ಟಗೊಳಿಸಲು, ಶ್ರೀಕೃಷ್ಣನು ಹೀಗೆ ಹೇಳಿಕೊಂಡಿರುವನೆಂದು ತಿಳಿಯಬೇಕು ; (೨೬೨) ನೇ ಶ್ಲೋಕದ ಅರ್ಥವಿಮರ್ಶೆಯನ್ನು ವ್ಯಾಖ್ಯಾನಕಾರರು ವಿಸ್ತಾರವಾಗಿ ಮಾಡಿದ್ದಾರೆ ; ಪೂರ್ವಾರ್ಧದಲ್ಲಿ ಹೇಳುವ, ಬದ್ಧಮುಕ್ತನೆಂಬ ನಾಮಗಳು ಜೀವನಿಗಲ್ಲದೇ ಶ್ರೀಕೃಷ್ಣನಿಗಲ್ಲ ; ಪೂರ್ವಾರ್ಧವನ್ನೂ ಶ್ರೀಕೃಷ್ಣನ ಪರವಾಗಿಯೇ ಎಂದು ತಿಳಿಯುವುದಾದರೆ, ನನಗೆ ಬಂಧಮೋಕ್ಷಗಳಿಲ್ಲವೆಂಬ ಉತ್ತರಾರ್ಧ ಶ್ಲೋಕದ ಶ್ರೀಕೃಷ್ಣನ ಮಾತಿನ ವಿರೋಧವುಂಟಾಗುತ್ತದೆ ; ಉತ್ತರಾರ್ಧಕ್ಕೆ ಪಾರಮಾರ್ಥಿಕವಾದ ಬಂಧಮೋಕ್ಷಗಳನ್ನು ತಿಳಿಯಬೇಕೆಂದರೆ, ಆ ಅರ್ಥವು ಪೂರ್ವಾರ್ಧದಿಂದಲೂ ಸಿದ್ಧವಾಗಿದ್ದು, ಪುನರುಕ್ತಿದೋಷವು ಪ್ರಾಪ್ತವಾಗುತ್ತದೆ ; ಮೇಲಾಗಿ, ಮಾಯಾವಾದದಂತೆ, ಪಾರಮಾರ್ಥಿಕ ಬಂಧಮೋಕ್ಷಗಳು ಜೀವನಿಗೂ ಇರುವುದಿಲ್ಲ ; ಗುಣವೇ ಮಿಥ್ಯಾವಾಗಿರುವಾಗ ಆ ಗುಣದಿಂದ ಬಂಧಮೋಕ್ಷಗಳ ಅಭಾವವನ್ನು ತನ್ನಲ್ಲಿ ಹೇಳಿಕೊಳ್ಳುವುದು ಕೂಡುವುದಿಲ್ಲ ; ಬಂಧಮೋಕ್ಷಗಳಲ್ಲಿ ಪಾರಮಾರ್ಥಿಕ, ಅಪಾರಮಾರ್ಥಿಕವೆಂಬ ಭೇದವನ್ನು ಕಲ್ಪಿಸಲು ಯಾವ ಪ್ರಮಾಣವೂ ಇಲ್ಲ ; ಈ ಅಶ್ರುತ ಕಲ್ಪನೆಯು ಅಪರಿಹಾರ್ಯವೂ ಆಗಿದೆ ; ಇದೂ ಅಲ್ಲದೆ, ಬಂಧಮೋಕ್ಷಗಳು ಜೀವನಿಗೆ ಮಾತ್ರವೆಂದು ಹೇಳುವ (ಭಾಗವತ) ಗ್ರಂಥಕರ್ತರಿಗೆ, ಒಬ್ಬ ಚೇತನನಿಗೇ, ವ್ಯಾವಹಾರಿಕತ್ವ ಪಾರಮಾರ್ಥಿಕತ್ವಭೇದದಿಂದ ಗುಣವತ್ವ ಮತ್ತು ಗುಣಾಭಾವಗಳನ್ನು ಹೇಳುವ, ಅಭಿಪ್ರಾಯವು ಸರಿಗಾಣುವುದಿಲ್ಲ.

ಮೋಕ್ಷಣಂ') ಯತ್–ಯಾವ ಕಾರಣದಿಂದ, ಕೃಷ್ಣಸ್ಯ–ಶ್ರೀಕೃಷ್ಣನಿಗೆ, ಸ್ವಬಂಧಂ–ಸ್ವಬಂಧವನ್ನು (ಶ್ರೀಕೃಷ್ಣನ ಬಂಧನವನ್ನು), ನಿಷೇಧತಿ–ನಿಷೇಧಿಸುತ್ತದೆಯೋ (ಆ ಕಾರಣದಿಂದ ಶ್ರೀಕೃಷ್ಣನಿಗೆ ಬಂಧಮೋಕ್ಷಗಳೆಂಬುವು ಇಲ್ಲ).

**ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ ।**
**ಬಂಧೋಽಸ್ಯಾಽವಿದ್ಯಯಾನಾದಿರ್ವಿದ್ಯಯಾ ಚ ತಥೇತರಃ ॥ ೨೬೬ ॥**

ಜೀವನಿಗೇ ಬಂಧಮೋಕ್ಷಗಳೆಂಬುದನ್ನು ವಿಶ್ವಾಸಮಾಡಿ ತಿಳಿಯೆಂದು ಮಾಯಾವಾದಿಗೆ ಪುನಃ ದೃಢ ನಿರ್ಣಯವನ್ನು ಹೇಳುತ್ತಾರೆ:—

ಮಹಾಮತೇ–ಹೇ ಪ್ರಾಜ್ಞ! (ಪಂಡಿತಂಮನ್ಯ!) ಮಾಯಾವಾದಿಯೇ! ಮಮಾಂಶಸ್ಯ–ನನ್ನ ಭಿನ್ನಾಂಶನಾದ, ಏಕಸ್ಯ ಜೀವಸ್ಯ–(ಜೀವೇಶ್ವರ ಮಧ್ಯದಲ್ಲಿ) ಒಬ್ಬನಾದ ಜೀವನಿಗೆ (ಸಮೂಹೈಕವಚನ–ಸರ್ವಜೀವರಿಗೆ), ಏವ–ಮಾತ್ರವೇ, ಏವಂ–ಹೀಗೆ (ಪೂರ್ವೋಕ್ತ ಬಂಧಮೋಕ್ಷಗಳು); ಅಸ್ಯ–ಈತನಿಗೆ, ಅವಿದ್ಯಯಾ–ಅಜ್ಞಾನದಿಂದ, ಅನಾದಿಃ–ಅನಾದಿಯಾದ, ಬಂಧಃ–ಬಂಧನವು, ಚ–ಮತ್ತು, ತಥಾ–ಹಾಗೆಯೇ, ವಿದ್ಯಯಾ–ಯಥಾರ್ಥಜ್ಞಾನದಿಂದ (ಅಥವಾ ಅಪರೋಕ್ಷ ಜ್ಞಾನದಿಂದ, ಸಾಧನ ಪರಿಪೂರ್ತಿಯಿಂದ), ಇತರಃ–ಮೋಕ್ಷವು, (ಇರುತ್ತವೆ).

---

ಮಾತ್ರ ಗುಣಬಂಧವೂ ಮತ್ತು ಅದರ ಬಿಡುಗಡೆಯೂ ಯುಕ್ತವಾಗುತ್ತದೆ (ಅನಾದಿಯಾದ ಅಜ್ಞಾನವು, ಗುಣಬಂಧನದ ಮುಖ್ಯ ಹೇತುವಾಗಿದೆ); ಗುಣಬಂಧಮೋಚನೆಯಿಂದ ಅಜ್ಞಾನವು ನಷ್ಟವಾಗಿ ಸ್ವಸ್ವರೂಪ ಪ್ರಾಪ್ತಿರೂಪದ ಮೋಕ್ಷವು ಲಭಿಸುತ್ತದೆ; ಮಹಾಸ್ವಾಮಿಯಾದ ತನಗೆ ಈ ಬಂಧಮೋಕ್ಷಗಳು ತನಗಿಲ್ಲವೆಂದು ಸ್ಪಷ್ಟವಾಗಿ ಹೇಳಿರುತ್ತಾನೆ (೨೬೭). 'ಬದ್ಧೋಮುಕ್ತ ಇತಿ ವ್ಯಾಖ್ಯಾ ಜೀವಸ್ಯೈವ....' ಇತ್ಯಾದಿ (ಭಾಗವತ) ಶ್ಲೋಕದಲ್ಲಿ 'ಜೀವಸ್ಯೈವ', ಎಂಬಲ್ಲಿ, ಜೀವನಿಗೇ ಎಂದು ಹಿಂದಿನ ಶ್ಲೋಕದಲ್ಲಿ ಬದ್ಧತ್ವ ಮುಕ್ತತ್ವಗಳನ್ನು ಹೇಳಿದ್ದಾರೆ; ಮುಂದಿನ 'ಏಕಸ್ಯೈವ ಮಮಾಂಶಸ್ಯ' ಎಂಬ ಶ್ಲೋಕದಲ್ಲಿ, 'ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ' ಎಂಬ, 'ಏವಂ' ಎಂದು ಅನುವಾದಾರ್ಥದ ಶಬ್ದವಿರುವುದರಿಂದ, ಹಿಂದಿನ ಶ್ಲೋಕದಲ್ಲಿ ಪ್ರಸಕ್ತಗಳಾದ ಬಂಧಮೋಕ್ಷಗಳುಳ್ಳವನೆಂಬ ವಿಶೇಷಣಗಳೊಂದಿಗೆ, ಇಲ್ಲಿಯೂ 'ಜೀವಸ್ಯ'

**ಸ್ವಭಿನ್ನಾಂಶಸ್ಯ ಜೀವಾಖ್ಯಖಗಸ್ಯೈಕಸ್ಯ ಕೇವಲಂ ।**
**ಬಂಧಶ್ಚ ಬಂಧಾನ್ಮೋಕ್ಷಶ್ಚ ನ ಸ್ವಸ್ಯೇತ್ಯಾಹ ಸ ಪ್ರಭುಃ ॥ ೨೬೭ ॥**

ಸ್ವಭಿನ್ನಾಂಶಸ್ಯ – (ಸ್ವಾಂಶಭಿನ್ನನಾದ) ಭಿನ್ನಾಂಶನಾದ[1], ಜೀವಾಖ್ಯ-ಖಗಸ್ಯ–ಜೀವನೆಂಬ, (ಸುಪರ್ಣಾವೇತೌ ಸಯುಜೌ ಎಂಬಲ್ಲಿ ಪ್ರಸಕ್ತನಾದ) ಪಕ್ಷಿಯ, ಏಕಸ್ಯ–ಒಬ್ಬನಿಗೆ, ಕೇವಲಂ–ಮಾತ್ರವೇ, ಬಂಧಃ–ಗುಣಬಂಧನವು, ಚ–ಮತ್ತು, ಮೋಕ್ಷಶ್ಚ–ಅದರಿಂದ ಮೋಚನವೂ (ಸ್ವಸ್ವರೂಪ ಪ್ರಾಪ್ತಿಯೂ), ನ ಸ್ವಸ್ಯ–ತನಗಲ್ಲವೆಂದು, ಸಃ ಪ್ರಭುಃ–ಆ ಮಹಾಸ್ವಾಮಿಯು, ಆಹ–ಹೇಳಿರುವನು.

**ಏವಮಿತ್ಯನುವಾದೇನ ಯಥಾ ಜೀವಸ್ಯ ಬದ್ಧತಾ ।**
**ಪೂರ್ವಶ್ಲೋಕೇಽಪಿ ಭವತಿ ತಥೈವಾರ್ಥಂ ವದೇದ್ಬುಧಃ ॥ ೨೬೮ ॥**

'ಏಕಸ್ಯೈವ ಮಮಾಂಶಸ್ಯ' ಎಂಬ (೨೬೬ನೇ) ಶ್ಲೋಕದ ಪೂರ್ವಶ್ಲೋಕವಾದ 'ಬದ್ಧೋ ಮುಕ್ತ ಇತಿ ವ್ಯಾಖ್ಯಾ ಜೀವಸ್ಯೈವ...' ಎಂಬುದರಿಂದ, ಎಂಬುದನ್ನು ಆಕರ್ಷಿಸಿ, ಅರ್ಥವನ್ನು ಹೇಳುವುದೇ ಯುಕ್ತವಾಗುತ್ತದೆ (೨೬೮). ಆದ್ದರಿಂದ ಈ ಎರಡು ಭಾಗವತ ಶ್ಲೋಕಗಳ ವಿಮರ್ಶೆಯಿಂದ, ಜೀವನಿಗೆ ಮಾತ್ರ ಬದ್ಧತ್ವ ಮತ್ತು ಮುಕ್ತತ್ವಗಳಿರುತ್ತವೆ—ಪರಮಾತ್ಮನಿಗೆ ನಿತ್ಯಮುಕ್ತತ್ವವೇ ಎಂದು ಸಿದ್ಧವಾಗುತ್ತದೆ ; 'ಬದ್ಧೋ ಮುಕ್ತ ಇತಿ ವ್ಯಾಖ್ಯಾ....' ಮತ್ತು 'ಏಕಸ್ಯೈವ

[1] ಸ್ವರೂಪಾಂಶತ್ವವೇ, ಹಿಂದಿನ ಶ್ಲೋಕದಲ್ಲಿ 'ಮಮಾಂಶಸ್ಯ' ಎಂಬುದರಿಂದ ಉದ್ದಿಷ್ಟವಾಗಿದ್ದರೆ, (೨೬೨ನೇ ಶ್ಲೋಕದಲ್ಲಿ) ಬಂಧಮೋಕ್ಷಗಳು, 'ನ ಮೇ' ನನಗಲ್ಲ, ಜೀವನಿಗೆ ಮಾತ್ರ, ಎಂಬ ವಿಭಾಗವು ಅಯುಕ್ತವಾಗುತ್ತದೆ ; ಭಿನ್ನಾಂಶನೆಂಬುದು, ಸಾರ್ವಕಾಲಿಕ ಸ್ವಭಿನ್ನಾಂಶತ್ವವನ್ನು ಹೇಳಿ, ಆನಂದಾದಿ ತನ್ನ ಸಾದೃಶ್ಯವು ಜೀವನಲ್ಲಿ ಅಸ್ವಾಭಾವಿಕವೆಂದು ತೋರಿಸುವ, ಹೇತುಸೂಚಕವು ; ಸ್ವರೂಪಾಂಶಗಳು, ಮತ್ಸ್ಯಾದಿ ಸಾಕ್ಷಾತ್ ಪರಮಾತ್ಮನ ಸ್ವರೂಪಗಳೇ—ಅನಂತಾಂಶಗಳುಳ್ಳ ಶ್ರೀಹರಿಯಲ್ಲಿ, ಅಂಶಗಳೂ, ಮೂಲರೂಪಗಳಂತೆ ಪೂರ್ಣಗಳೇ ಆಗಿವೆ—ಅತ್ಯಂತ ಅಭಿನ್ನಗಳೇ (ವಿಚಿತ್ರಶಕ್ತಿಯ ಪ್ರಭಾವದಿಂದ) ಆಗಿವೆ ; ಭಿನ್ನಾಂಶಗಳೆಲ್ಲವೂ ಅಲ್ಪರೂ, ಪ್ರತಿಬಿಂಬರೂ ಆದ ಜೀವರು ; ಪರಮಾತ್ಮನಿಂದ ಭಿನ್ನರೂ, ಪರಮಾತ್ಮನ ಅಂಶವುಳ್ಳವರೂ—ಅಂತರ್ಯಾಮಿಯಾಗಿ ಉಳ್ಳವರೂ ಆಗಿದ್ದಾರೆ ; ಈ ಅಂತರ್ಯಾಮಿಗಳಾದ ಪರಮಾತ್ಮನ ಅನಂತಾಂಶಗಳೂ, ಒಂದೊಂದೂ ಮೂಲರೂಪದಂತೆಯೇ ಪೂರ್ಣಗಳೇ ಆಗಿದ್ದರೂ, ಅಧಿಷ್ಠಾನಭೂತರಾದ ಜೀವರ ಯೋಗ್ಯತೆಯಷ್ಟೇ ಗುಣಪ್ರಕಾಶಕಗಳಾಗಿರುತ್ತವೆಂಬುದನ್ನು ಗಮನಿಸಬೇಕು.

'ಜೀವಸ್ಯ' ಎಂಬುದನ್ನು ಬಂಧಮುಕ್ತತ್ವಗಳುಳ್ಳವನೆಂಬ ವಿಶೇಷಣ ಸಹಿತವಾಗಿ, ಸೆಳೆದುಕೊಂಡು, ಅಭಿಪ್ರಾಯವನ್ನು ತಿಳಿಯುವುದರಲ್ಲಿ ಬೇರೆ ಯುಕ್ತಿಯನ್ನು ತೋರಿಸುತ್ತಾರೆ :—

ಏವಂ ಇತಿ ಅನುವಾದೇನ–ಏವಂ ಎಂದು ಅನುವಾದ ಮಾಡಿರುವುದರಿಂದ, ಯಥಾ–ಹೇಗೆ, ಜೀವಸ್ಯ–ಜೀವನಿಗೆ, ಬದ್ಧತಾ–ಬದ್ಧತ್ವವು, ಪೂರ್ವಶ್ಲೋಕೇಪಿ–ಹಿಂದಿನ ಶ್ಲೋಕದಲ್ಲಿಯೂ, (ಬದ್ಧೋ ಮುಕ್ತಃ ಇತ್ಯಾದಿ ಶ್ಲೋಕದಲ್ಲಿ), ಭವತಿ–ಇರುತ್ತದೆಯೋ, ತಥಾ ಏವ–ಅದಕ್ಕನುಸಾರವಾಗಿಯೇ, (ಹಾಗೆ ಬಂಧಮೋಕ್ಷಗಳುಳ್ಳ, ನನ್ನ ಅಂಶನಾದ ಜೀವನಿಗೇ ಎಂದು), ಅರ್ಥಂ–ಅರ್ಥವನ್ನು, ಬುಧಃ–ವಿವೇಕಿಯು, ವದೇತ್–ಹೇಳಬೇಕು.

**ಅತೋ ಜೀವಸ್ಯ ಬದ್ಧತ್ವಂ ಮುಕ್ತತ್ವಂ ಚ ಪರಾತ್ಮನಃ ।**
**ನಿತ್ಯಮುಕ್ತತ್ವಮೇವೇತಿ ಪದ್ಯದ್ವಂದ್ವೇನ ಸಿದ್ಧ್ಯತಿ ॥ ೨೬೯ ॥**

ಈ ವಿಮರ್ಶೆಯಿಂದ ಪರಮಾತ್ಮನ ನಿತ್ಯಮುಕ್ತತ್ವವೂ ಲಬ್ಧವಾಗುವುದೆನ್ನುತ್ತಾರೆ :—

ಅತಃ–ಆದ್ದರಿಂದ (ಬಂಧದ ಮತ್ತು ಕಾದಾಚಿತ್ಕಮೋಕ್ಷದ ಉಕ್ತಿ ಇರುವುದರಿಂದ – ಮೋಕ್ಷವು ಕಾಲವಿಶೇಷದಲ್ಲಿ ಮಾತ್ರ ದೊರೆಯುತ್ತದೆಂಬುದರಿಂದ), ಜೀವಸ್ಯ–ಜೀವನಿಗೇ, ಬದ್ಧತ್ವಂ–ಬದ್ಧತ್ವವೂ, ಚ ಮತ್ತು, ಮುಕ್ತತ್ವಂ–ಮುಕ್ತತ್ವವೂ, ಪರಾತ್ಮನಃ – ಪರಮಾತ್ಮನಿಗೆ, ನಿತ್ಯಮುಕ್ತತ್ವಂ ಏವ – ನಿತ್ಯಮುಕ್ತತ್ವವೇ (ಎಂದೂ ಬದ್ಧತ್ವವಿಲ್ಲವೆಂಬುದು), ಇತಿ–ಎಂಬುದು, ಪದ್ಯದ್ವಂದ್ವೇನ–

---

ಮಮಾಂಶಸ್ಯ ...' ಎಂಬ ಈ ಎರಡು ಶ್ಲೋಕಗಳಿಂದ, ಸಂಶಯವಿಲ್ಲದಂತೆ, ಪರಮಾತ್ಮನಿಗೆ ಎಂದೂ ಬದ್ಧತ್ವವಿಲ್ಲೆಂದು ಸಿದ್ಧವಾಗುವುದರಿಂದ, ನಿತ್ಯಮುಕ್ತನೆಂಬುದೇ ಸಮರ್ಥಿತವಾಗುತ್ತದೆ (೨೬೯). ಇದೇ ಪ್ರಮೇಯದ ದಾರ್ಢ್ಯಾರ್ಥವಾಗಿ, ಭಾಗವತದ ಮುಂದಿನ ಎರಡು ಶ್ಲೋಕಗಳೂ, 'ದ್ವಾಸುಪರ್ಣಾ....' 'ಶ್ರುತ್ಯರ್ಥವನ್ನೇ ಪ್ರತಿಪಾದಿಸುತ್ತವೆ'; ಪ್ರಾಣಿದೇಹವೆಂಬ ಗೂಡಿನಲ್ಲಿ, ನಿತ್ಯವೂ ಒಟ್ಟಿಗೇ ಇರುವ ಎರಡು ಪಕ್ಷಿಗಳು (ಜೀವ ಮತ್ತು ಈಶ್ವರರೆಂಬ ಪಕ್ಷಿಗಳು) ವಾಸ ಮಾಡಿಕೊಂಡಿರುತ್ತವೆ; ಅವುಗಳಲ್ಲಿ ಒಂದಾದ ಜೀವಪಕ್ಷಿಯು, ಕರ್ಮಫಲವನ್ನು (ಸುಖದುಃಖರೂಪದ ಫಲವನ್ನು) ಭೋಗಿಸುತ್ತದೆ; ಈಶ್ವರ ಪಕ್ಷಿಯು ಕರ್ಮ

ಹಿಂದೆ ಹೇಳಿದ ಎರಡೂ ಭಾಗವತ ಶ್ಲೋಕಗಳಿಂದ, (‘ಬದ್ಧೋ ಮುಕ್ತ ಇತಿ ವ್ಯಾಖ್ಯಾ’ ಮತ್ತು ‘ಏಕಸ್ಯೈವ ಮಮಾಂಶಸ್ಯ’ ಎಂಬೆರಡು ಶ್ಲೋಕಗಳಿಂದ), ಸಿದ್ಧ್ಯತಿ–ಸಿದ್ಧವಾಗುತ್ತದೆ.

**ಸಖಾಯೌ ದ್ವೌ ಸುಪರ್ಣೌ ಚ ದೇಹನೀಡಕೃತಾಸ್ಪದೌ ।**
**ಖಾದತ್ಯೇಕಃ ಪಿಪ್ಪಲಾನ್ನಂ ನಿರನ್ನೋಽಪ್ಯನ್ಯ ಈಶ್ವರಃ ॥ ೨೨೦ ॥**
**ಬಲೇನ ಭೂಯಾನ್ ಸ ವಿಭುರ್ನಿತ್ಯಮುಕ್ತಸ್ತತೋ ಪರಃ ।**
**ಜೀವೋ ಬದ್ಧೋಽವಿದ್ಯಯಾಂಧಃ ಪೂರ್ವೋ ವಿದ್ಯಾಮಯಃ ಕಿಲ ॥**
**ಇತಿ ಪೂರ್ವೋಕ್ತಮೇವಾರ್ಥಂ ಸ್ಪಷ್ಟಮಾಹ ಪುನಃ ಪ್ರಭುಃ ।**
**ಅತಃ ಪೂರ್ವೋಕ್ತವಾಕ್ಯಾರ್ಥೋಽಪ್ಯಸ್ಮದುಕ್ತೋ ನ ಚಾಪರಃ ॥**

ಈ ಹಿಂದೆ ಹೇಳಿದ ದಾರ್ಢ್ಯಾರ್ಥಕ್ಕಾಗಿ, ಭಾಗವತದ ಮುಂದಿನ ಎರಡು ಶ್ಲೋಕಗಳ ಅರ್ಥವನ್ನು ಸಂಗ್ರಹವಾಗಿ ಹೇಳುತ್ತಾರೆ :—[1]

ಫಲವನ್ನು ಭೋಗಿಸದೇ (ಆಹಾರವಿಲ್ಲದೇ) ಇದ್ದರೂ, ಶಕ್ತಿಯಲ್ಲಿ ಶ್ರೇಷ್ಠವಾಗಿದೆ; ಅದೇ (ಈಶ್ವರನೇ) ಶ್ರೀಕೃಷ್ಣ ಪ್ರಭುವು ; ಆತನು ನಿತ್ಯಮುಕ್ತನು ; ಅವನಿಂದ ಭಿನ್ನನಾದ ಜೀವನು (ಜೀವಪಕ್ಷಿಯು), ಬದ್ಧನು—ಅವಿದ್ಯೆಯಿಂದ ಬದ್ಧನಾಗಿ (ಸ್ವರೂಪ ಜ್ಞಾನಶೂನ್ಯನಾಗಿ) ಕುರುಡನಂತೆ, ದಾರಿತಪ್ಪಿ ಸಂಸಾರದಲ್ಲಿ ಅಲೆಯುತ್ತಿರುವನು ; ಶ್ರೀಕೃಷ್ಣನಾದರೋ, ವಿದ್ಯಾಮಯನು—ನಿರವಧಿಕ ಜ್ಞಾನಸ್ವರೂಪನು; ಆ ಪ್ರಭುವು (ಶ್ರೀಕೃಷ್ಣನು) ಹಿಂದೆ ಹೇಳಿದ ಅರ್ಥವನ್ನೇ ಸ್ಪಷ್ಟವಾಗಿ ಮತ್ತೆ ಹೇಳಿರುವನು—ಅದೇ ಅರ್ಥವನ್ನೇ ನಾವಾದರೂ ಹೇಳಿರುವೆವು—ಬೇರೆಯಲ್ಲ ; ಬದ್ಧತ್ವ ಮುಕ್ತತ್ವಗಳೆರಡೂ ಒಬ್ಬ ಪರಮಾತ್ಮನಿಗೆಂಬುವ ಪರನವಾದವು, ಯಾವ ರೀತಿಯಿಂದಲೂ ಯುಕ್ತವಾಗುವುದಿಲ್ಲ (೨೨೦–೨೨೧).

[1] ‘ಸುಪರ್ಣಾವೇತೌ ಸಯುಜೌ ಸಖಾಯೌ ಯದೃಚ್ಛಯಾ ಕೃತನೀಡೌ ಚ ವೃಕ್ಷೇ । ಏಕಸ್ತಯೋಃ ಖಾದತಿ ಪಿಪ್ಪಲಾನ್ನಂ ಅನ್ಯೋ ನಿರನ್ನೋಽಪಿ ಬಲೇನ ಭೂಯಾನ್’ ಮತ್ತು ‘ಯೋಽವಿದ್ಯಯಾಂಧಃ ಸ ತು ನಿತ್ಯಬದ್ಧೋ ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ’ ಈ (ಭಾಗವತ ಸ್ಕಂ ೧೧ ಅಧ್ಯಾಯ ೧೧) ಶ್ಲೋಕಗಳ ವಿಮರ್ಶೆಯನ್ನು ಇಲ್ಲಿ ಮಾಡಿರುವರು ; ಇವು ‘ದ್ವಾಸುಪರ್ಣಾ ಸಯುಜಾ ಸಖಾಯಾ’ ಎಂಬ ಶ್ರುತ್ಯರ್ಥವನ್ನೇ ಬಿಡಿಸಿ ಹೇಳುವ ವ್ಯಾಖ್ಯಾನದಂತಿವೆ.

ದೇಹನೀಡಕೃತಾಸ್ಪದೌ–ದೇಹವೆಂಬ ಗೂಡಿನಲ್ಲಿ ವಾಸಿಸುವ, ಸಖಾಯೌ–ನಿತ್ಯಸಖರಾದ (ಒಟ್ಟಿಗಿರುವ), ದ್ವೌ–ಎರಡು, ಸುಪರ್ಣೌ–(ಜೀವ, ಈಶರೆಂಬ) ಪಕ್ಷಿಗಳು (ಇರುತ್ತವೆಯಷ್ಟೆ); ಏಕಃ – (ಅವರಲ್ಲಿ) ಒಬ್ಬನಾದ ಜೀವನು, ಪಿಪ್ಪಲಾನ್ನಂ–ದೇಹದಿಂದಾಗುವ) ಕರ್ಮಫಲವನ್ನು, ಖಾದತಿ–ಭೋಗಿಸುತ್ತಾನೆ; ಅನ್ಯಃ–ಜೀವಭಿನ್ನನಾದ, ಈಶ್ವರಃ–ಈಶ್ವರನು, ನಿರನ್ನಃ ಅಪಿ–ಆಹಾರವಿಲ್ಲದವನಾದರೂ (ಕರ್ಮಫಲವನ್ನು ಭೋಗಿಸದಿದ್ದರೂ), ಬಲೇನ–ಬಲದಿಂದ (ಶಕ್ತಿಯಲ್ಲಿ), ಭೂಯಾನ್–ಶ್ರೇಷ್ಠನು; ಸಃ ವಿಭುಃ–ಆ ಶ್ರೀಕೃಷ್ಣನು; ನಿತ್ಯಮುಕ್ತಃ–ಸದಾಮುಕ್ತನು; ತತಃ–ಅವನಿಂದ (ನಿತ್ಯಮುಕ್ತನಿಂದ), ಅಪರಃ–ಅನ್ಯನಾದ, ಜೀವಃ–ಜೀವನು, ಬದ್ಧಃ–ಬದ್ಧನು; ಅವಿದ್ಯಯಾ–ಅಜ್ಞಾನದಿಂದ, ಅಂಧಃ–ಕುರುಡನು (ಸ್ವರೂಪಜ್ಞಾನಶೂನ್ಯನಾಗಿ ಸಂಸಾರದಲ್ಲಿ ಸುತ್ತುತ್ತಾನೆ); ಪೂರ್ವಃ – ಮೊದಲಿನವನು, ವಿದ್ಯಾಮಯಃ – ನಿರವಧಿಕ ಜ್ಞಾನಸ್ವರೂಪನು ('ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ' ಎಂಬುದರ ಅರ್ಥವಿದು); ಕಿಲ–ಎಂಬುದು ಅತಿ ಸ್ಪಷ್ಟವು, ('ಯೋಽವಿದ್ಯಯಾಂಧಃ ಸ ತು ನಿತ್ಯಬದ್ಧಃ', ಎಂದು ಜೀವನನ್ನು ಪ್ರತ್ಯೇಕವಾಗಿ ನಿರ್ದೇಶಿಸಿ ನಿತ್ಯಬದ್ಧತ್ವವನ್ನು ಹೇಳಿರುವುದರಿಂದಲೂ, 'ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ' ಎಂದು ಪರಮಾತ್ಮನನ್ನು ನಿತ್ಯಮುಕ್ತನೆಂದು ಬೇರೆಯಾಗಿ ಹೇಳಿರುವುದರಿಂದ, ಉಕ್ತಪ್ರಮೇಯವು ಸುಸ್ಪಷ್ಟವು); ಇತಿ–ಹೀಗೆ, ಪೂರ್ವೋಕ್ತಂ ಏವ ಅರ್ಥಂ–ಹಿಂದೆ ನಿರೂಪಿಸಿದ ಅರ್ಥವನ್ನೇ, ಪ್ರಭುಃ–ಶ್ರೀಕೃಷ್ಣನು, ಪುನಃ–ಮತ್ತೆ, ಸ್ಪಷ್ಟಂ–ಸ್ಪಷ್ಟವಾಗಿ, ಆಹ–ಹೇಳಿರುವನು; ಅತಃ–ಆದ್ದರಿಂದ, ಪೂರ್ವೋಕ್ತವಾಕ್ಯಾರ್ಥಃ–ಪೂರ್ವೋಕ್ತವಾಕ್ಯಾರ್ಥವೇ,

---

'ನಿತ್ಯಮುಕ್ತೋ ನಿತ್ಯಬದ್ಧ ಏಕ ಏವೇತಿ ಮೇ ಮತಿಃ', ಎಂದು ಬದ್ಧತ್ವ ಮುಕ್ತತ್ವಗಳೆರಡೂ, ಒಬ್ಬ ಬ್ರಹ್ಮನಿಗೇ ಸಲ್ಲುತ್ತವೆಂಬುದು, ಉದ್ಧವನ ಪೂರ್ವಪಕ್ಷವು; ಅದನ್ನು ಶ್ರೀಕೃಷ್ಣನಲ್ಲಿ ವಿಜ್ಞಾಪಿಸಿಕೊಂಡು, ನಿಶ್ಚಯವನ್ನು ತಿಳಿಯಲು ಪ್ರಾರ್ಥಿಸಿದ್ದಾನೆ; ಶ್ರೀಕೃಷ್ಣನು, ಈ ಸಂಶಯದ ನಿವಾರಣೆಗಾಗಿ ಬಹುಪರಿಯಿಂದ ಉದ್ಧವನಿಗೆ ಉಪದೇಶಿಸಿದ್ದಾನೆ; ಹೀಗಿರುವಾಗ, ನಿತ್ಯಬದ್ಧನಿಗೂ ನಿತ್ಯಮುಕ್ತನಿಗೂ ಐಕ್ಯವನ್ನು ಹೇಳಲು ಶಕ್ಯವೇ ಇಲ್ಲ; ಸಿದ್ಧಾಂತ ಮತ್ತು ಪೂರ್ವಪಕ್ಷಗಳಿಗೆ ಏಕಪ್ರಕಾರತ್ವವು ಕೂಡುವುದಿಲ್ಲವಾದ್ದರಿಂದ ಭೇದವನ್ನೇ ನಿರ್ಣಯಿಸಿ ಹೇಳಿದ್ದಾನೆಂಬುದಾಗಿ ತಿಳಿಯುವುದೇ ಯೋಗ್ಯವಾಗಿದೆ; ಭೇದವನ್ನೇ ಹೇಳಿರುವುದರಿಂದ,

ಅಸ್ಮದುಕ್ತಿಃ–ನಮ್ಮಿಂದ ಹೇಳಲಾಗಿದೆ; ಅಪರಃ ನ ಚ–ಬೇರೆ ಅರ್ಥವು ಅಲ್ಲವೇ ಅಲ್ಲ (ಪರೋಕ್ತವಾದಂತೆ ಪರಮಾತ್ಮನಿಗೇ ಬದ್ಧತ್ವ ಮುಕ್ತತ್ವಗಳೆರಡೂ ಎಂಬುದು ಅಲ್ಲ).

**ನಿತ್ಯಮುಕ್ತೋ ನಿತ್ಯಬದ್ಧ[1] ಏಕ ಏವೇತಿ ಮೇ ಮತಿಃ ।**
**ಇತ್ಥಂ ಬದ್ಧಸ್ಯ ಮುಕ್ತಸ್ಯ ಚೈಕ್ಯಶಂಕಾಕೃದುದ್ಧವಂ ॥ ೨೭೩ ॥**

**ಮುಹುಃ ಪ್ರಬೋಧಯನ್ ಕೃಷ್ಣಃ ಕಥಂ ವಕ್ತಿ ತದೇಕತಾಂ ।**
**ಅತಃ ಸಿದ್ಧಾಂತಪದ್ಯೇಽಸ್ಮಿನ್ ದ್ವಿತಾಮೇವ ವದೇತ್ ಕೃತೀ ॥ ೨೭೪ ॥**

ಉದ್ಧವನು ಮುಂದಿಟ್ಟ ಪೂರ್ವಪಕ್ಷದ ಪರಿಹಾರಕ್ಕಾಗಿ ಶ್ರೀಕೃಷ್ಣನು ಪರಿಹಾರರೂಪದಿಂದ ಹೇಳಿದ ಸಿದ್ಧಾಂತವೇ ನಾವು ಹೇಳಿರುವ ಅರ್ಥವೂ ಆಗಿದೆ; ಬೇರೆಯಲ್ಲವೆನ್ನುತ್ತಾರೆ :—

---

ಶ್ರೀಕೃಷ್ಣನ ಸರ್ವಜ್ಞತ್ವವೂ ಸಿದ್ಧವಾಗುತ್ತದೆ (೨೭೩–೨೭೪). 'ಅಥ ಬದ್ಧಸ್ಯ ಮುಕ್ತಸ್ಯ' ಇತ್ಯಾದಿ ಹಿಂದಿನ ಶ್ಲೋಕದಲ್ಲಿ, ಪ್ರಸಕ್ತರಾದ ಬದ್ಧಮುಕ್ತರೆಂಬ ಜೀವೇಶರೇ, ಮುಂದಿನ, 'ಸುಪರ್ಣಾವೇತೌ' ಎಂಬ (ಭಾಗವತ) ಶ್ಲೋಕ ದಲ್ಲಿಯೂ, ಪ್ರಸಕ್ತರೆಂದೇ ಸಿದ್ಧವಾದರೂ, ನಿತ್ಯಮುಕ್ತನೆಂದು ಹಿಂದೆ ನಿತ್ಯಬದ್ಧ

[1] 'ನಿತ್ಯಬದ್ಧೋ ನಿತ್ಯಮುಕ್ತೋ ಏಕ ಏವೇತಿ ಮೇ ಮತಿಃ' ಎಂದು ಜೀವೇಶ್ವರೈಕ್ಯ ವಾದಿಗಳಲ್ಲಿ ಒಂದು ಪಂಗಡದವರಾದ, ಏಕಜೀವವಾದಿಗಳ ಪಕ್ಷವನ್ನು ಮುಂದಿಟ್ಟು, ನಿರ್ಣಯದ ನಿಶ್ಚಯಜ್ಞಾನಕ್ಕಾಗಿ, ಶ್ರೀಕೃಷ್ಣನನ್ನು, ಉದ್ಧವನು ಪ್ರಶ್ನಿಸಿದನು; ಪ್ರಾಕೃತ ಗುಣಬಂಧವುಳ್ಳ ಜೀವನಿಗಲ್ಲದೇ, ನಿರ್ಗುಣನೂ ಸ್ವತಂತ್ರನೂ ಆದ ತನಗೆ ಬಂಧಮೋಕ್ಷ ಗಳಿಲ್ಲವೆನ್ನುತ್ತಾನೆ; ನಿತ್ಯಬದ್ಧನು ಜೀವನೆಂಬುದನ್ನು ಸರಿಯಾಗಿ ಗ್ರಹಿಸಬೇಕು—ಮುಕ್ತನಾದ ಮೇಲೆ ಹೇಗೆ ಬದ್ಧತ್ವ ಕೂಡುತ್ತದೆಂಬುದನ್ನು ತಿಳಿಯಬೇಕಲ್ಲವೇ ? ಶ್ರೀಮದಾನಂದತೀರ್ಥ ಭಗವತ್ಪಾದರು, ಭಾಗವತ ತಾತ್ಪರ್ಯದಲ್ಲಿ,

'ಮುಕ್ತಾಖ್ಯಾ ದುಃಖಮೋಕ್ಷಾತ್ತಾಸ್ಸೃಷ್ಟಬದ್ಧಾಖ್ಯಾ ಹರ್ಯಧೀನತಾ ।
ನಿತ್ಯಬದ್ಧಾ ಅಪಿ ತತೋ ಮುಕ್ತಾ ದುಃಖವಿಮೋಕ್ಷತಃ ।
ನಿತ್ಯಮುಕ್ತಸ್ತ್ವೇಕ ಏವ ಹರಿರ್ನಾರಾಯಣಃ ಪ್ರಭುಃ ॥'

ಎಂಬ ಪ್ರಮಾಣವನ್ನುದಹರಿಸಿ, ವಿವರಿಸಿದ್ದಾರೆ; ದುಃಖವಿಮೋಚನೆಯೇ ಮುಕ್ತನೆಂಬ ನಾಮಕ್ಕೆ ಕಾರಣವು; ಶ್ರೀಹರಿಯ ಅಧೀನತೆಯೇ ಬದ್ಧನೆಂಬ ನಾಮಕ್ಕೆ ಕಾರಣವು; ಆದ್ದರಿಂದ ಮುಕ್ತರಾದರೂ, ಜೀವರು ನಿತ್ಯ (ಎಲ್ಲ ಕಾಲದಲ್ಲಿ) ಬದ್ಧರೇ ಸರಿ.

ನಿತ್ಯಮುಕ್ತಃ—ನಿತ್ಯಮುಕ್ತನೂ, ನಿತ್ಯಬದ್ಧಃ—ನಿತ್ಯಬದ್ಧನೂ, ಏಕ ಏಕ ಇತಿ—ಒಬ್ಬನೇ ಎಂದು, ಮೇ ಮತಿಃ—ನನ್ನ ಅಭಿಪ್ರಾಯವು; ಇತ್ಥಂ—ಹೀಗೆ, ಬದ್ಧಸ್ಯ—ಬದ್ಧನ, ಚ—ಮತ್ತು, ಮುಕ್ತಸ್ಯ—ಮುಕ್ತನ, ಐಕ್ಯಶಂಕಾಕೃದುದ್ಧವಂ—(ಬದ್ಧನ ಮತ್ತು ಮುಕ್ತನ) ಐಕ್ಯವಿಷಯವಾದ ಸಂಶಯವನ್ನು ಮುಂದೆ ಮಾಡಿ ಪ್ರಶ್ನಿಸಿರುವ ಉದ್ಧವನನ್ನು ಕುರಿತು (ಅವನಿಗಾಗಿ), ಮುಹುಃ—ಮತ್ತೆ ಮತ್ತೆ, ಪ್ರಬೋಧಯನ್—ಉಪದೇಶಿಸುತ್ತಿರುವ, ಕೃಷ್ಣಃ—ಶ್ರೀಕೃಷ್ಣನು, ಕಥಂ—ಹೇಗೆ, ತದೇಕತಾಂ—ನಿತ್ಯಬದ್ಧ ನಿತ್ಯಮುಕ್ತರಿಗೆ ಐಕ್ಯವನ್ನು, (ಸಿದ್ಧಾಂತ ಪೂರ್ವಪಕ್ಷಗಳಿಗೆ ಏಕಪ್ರಕಾರತ್ವವು ಕೂಡುವುದಿಲ್ಲವಾದ್ದರಿಂದ), ವಕ್ತಿ— ಹೇಳುತ್ತಾನೆ? (ಹೇಳಿರುವುದಿಲ್ಲ); ಅತಃ—ಆದ್ದರಿಂದ, ಸಿದ್ಧಾಂತ ಪದ್ಯೇ ಅಸ್ಮಿನ್—ಈ ಸಿದ್ಧಾಂತವನ್ನು ನಿರೂಪಿಸುವ ಶ್ಲೋಕದಲ್ಲಿ), ಕೃತೀ—ಸರ್ವಜ್ಞನಾದ ಶ್ರೀಕೃಷ್ಣನು, ಸಿದ್ಧಾಂತಂ ಏವ – ಸಿದ್ಧಾಂತವನ್ನೇ, ದ್ವಿತಾಂ – ಭೇದವನ್ನೇ (ನಿತ್ಯಮುಕ್ತ ನಿತ್ಯಬದ್ಧರ ಭೇದವನ್ನೇ), ವದೇತ್—ಹೇಳಿಯಾನು (ಹೇಳಿರುವನಲ್ಲದೇ ಬೇರೆ ಏನನ್ನೂ ಹೇಳಲು ಅವಕಾಶವಿಲ್ಲ).

**ಏತಾವಿತ್ಯತಿದೇಶೇನ ಪೂರ್ವಂ ಚ ಪ್ರಸ್ತುತಿರ್ದ್ವಯೋಃ ।**
**ಅಬದ್ಧಬದ್ಧಯೋರ್ವಾಚ್ಯಾ ತಚ್ಛೋಚ್ಯಾ ಕೃಷ್ಣಬದ್ಧವಾಕ್ ॥೨೭೫॥**

ಏತೌ ಇತಿ ಅತಿದೇಶಾತ್—(ಮುಂದಿನ ಶ್ಲೋಕದಲ್ಲಿ) 'ಏತೌ', ಈ ಇಬ್ಬರೆಂದು, ಪೂರ್ವೋಕ್ತರಾದವರೇ ಹೇಳಲ್ಪಟ್ಟಿರುವುದರಿಂದ, ಪೂರ್ವಂ ಚ—ಹಿಂದಿನ ಶ್ಲೋಕದಲ್ಲಿರುವುವೇ ಆದ, ಅಬದ್ಧಬದ್ಧಯೋಃ—ನಿತ್ಯಮುಕ್ತ ನಿತ್ಯಬದ್ಧ

---

ಜೀವನಿಂದ ವಿಲಕ್ಷಣನೆಂದು ಹೇಳಲಾದ ಶ್ರೀಕೃಷ್ಣನು ಬದ್ಧನೆಂಬ ಅರ್ಥವೆಂದು ತಿಳಿಯುವವನು ಶೋಚ್ಯನಾದ ಮೂರ್ಖನೇ ಸರಿ (೨೭೫). 'ಏಕಸ್ಯೈವ ಮಮಾಂಶಸ್ಯ' ಎಂಬ (ಭಾಗವತ) ಶ್ಲೋಕದಲ್ಲಿ, 'ಏಕಸ್ಯ' ಎಂಬುದಕ್ಕೆ ಜೀವ, ಪರಮಾತ್ಮರೆಂಬ ಇಬ್ಬರಲ್ಲಿ ಒಬ್ಬನಾದ, ಎಂಬರ್ಥವೇ ಯುಕ್ತವಾಗುವೆಂಬ ನನ್ನ ಅಭಿಪ್ರಾಯವೇ ಸ್ಥಿರವಾಯಿತು; ಮತ್ತು 'ಮಮಾಂಶಸ್ಯ' ಎಂಬುದಕ್ಕೆ ನನ್ನ ಭಿನ್ನಾಂಶನಾದ ಜೀವನೆಂಬರ್ಥವೂ, ಈ ಸಂದರ್ಭದಿಂದ ಸ್ಥಿರಪಟ್ಟಿತು; ಮುಂದಿನ ಎರಡು ಶ್ಲೋಕಗಳಲ್ಲಿ, ಶ್ರೀಕೃಷ್ಣನೇ, ಜೀವೇಶ್ವರರ ಭೇದವನ್ನು ಸ್ಪಷ್ಟವಾಗಿ

ರೆಂಬ, ದ್ವಯೋಃ–ಇಬ್ಬರ, ಪ್ರಸ್ತುತಿಃ–[1] ಪ್ರಸಕ್ತಿಯು, ವಾಚ್ಯಾ–(ಈ ಶ್ಲೋಕದಲ್ಲಿ ಸಹ) ಹೇಳಲ್ಪಡಬೇಕು ; ತತ್–ಆದ್ದರಿಂದ, ಕೃಷ್ಣಬದ್ಧವಾಕ್–ಶ್ರೀಕೃಷ್ಣನು ಬದ್ಧನೆಂಬ ಮಾತು, ಶೋಚ್ಯಾ–ಶೋಚನೀಯವು, (ಈ ಅರ್ಥವನ್ನು ಹೇಳುವವರು, ಶೋಚನೀಯರು–ಮೂರ್ಖರೆಂದು ಶೋಚ್ಯರು).

**ದ್ವಯೋರೇಕಸ್ಯೇತಿ ಚಾರ್ಥಃ ಸುಸ್ಥೋಽಭೂತ್ತತ ಏವ ಮೇ ।**
**ಭಿನ್ನಾಂಶತಾ ಚ ತದ್ಭೇದಸ್ಯಾಂತೇ ಸ್ವೇನೈವ ಕೀರ್ತನಾತ್ ॥ ೨೭೬ ॥**

ತತಃ–ಆದ್ದರಿಂದ ('ಸುಪರ್ಣಾ ಏತೌ' ಎಂಬ ಶ್ಲೋಕಾರ್ಥವು ಹಿಂದೆ ಪ್ರಸ್ತುತವಾದ್ದರಿಂದ), ದ್ವಯೋಃ-('ಏಕಸ್ಯೈವ ಮಮಾಂಶಸ್ಯ' ಎಂಬ ಶ್ಲೋಕದಲ್ಲಿ) ಪ್ರಸಕ್ತರಾದ ಇಬ್ಬರಲ್ಲಿ (ಎರಡು ಪಕ್ಷಿಗಳಲ್ಲಿ), ಏಕಸ್ಯ–ಒಬ್ಬನಾದ ಜೀವಪಕ್ಷಿಯ, ಇತಿ ಚ ಅರ್ಥಃ–ಎಂಬೀ ಅರ್ಥವೇ, ಮೇ–ನನಗೆ, ಸುಸ್ಥಃ–ಸ್ಥಿರವಾದುದು, ಅಭೂತ್ – ಆಯಿತು ; ಭಿನ್ನಾಂಶತಾ ಚ – ( 'ಮಮಾಂಶಸ್ಯ' ಎಂಬಲ್ಲಿ ) ಭಿನ್ನಾಂಶತ್ವವೂ, ತದ್ಭೇದಸ್ಯ–ಜೀವೇಶರ ಭೇದದ, ಅಂತೇ–(ಮುಂದಿನ ಎರಡು ಶ್ಲೋಕಗಳಲ್ಲಿ) ಕೊನೆಯಲ್ಲಿ, ಸ್ವೇನ ಏವ – ತನ್ನಿಂದಲೇ (ಶ್ರೀಕೃಷ್ಣನಿಂದಲೇ), ಕೀರ್ತನಾತ್–ಸ್ಪಷ್ಟೋಕ್ತಿಯೂ ಇರುವುದರಿಂದ ('ಮಮಾಂಶ'ನೆಂದರೆ ಭಿನ್ನಾಂಶದ ಜೀವನೇ ಎಂದೂ, ಸುಸ್ಥಃ–ಸ್ಥಿರಪಟ್ಟಿತು).[2]

---

ಹೇಳಿದ್ದಾನೆ (೨೭೬). 'ನ ಮೇ ಮೋಕ್ಷೋ ನ ಬಂಧನಂ', ಎಂದು ಹಿಂದಿನ ಶ್ಲೋಕದಲ್ಲಿ ತೋರಿಸಿರುವ ಯುಕ್ತಿಯಿಂದ, ನಿತ್ಯಮುಕ್ತನು, ಶ್ರೀಕೃಷ್ಣನೇ

---

[1] 'ಸುಪರ್ಣಾವೇತೌ ಸಯುಜಾ ಸಖಾಯೌ' ಎಂಬುದು ಮುಂದಿನ ಶ್ಲೋಕವು ; 'ಅಥ ಬದ್ಧಸ್ಯ ಮುಕ್ತಸ್ಯ ವೈಲಕ್ಷಣ್ಯಂ ವದಾಮಿ ತೇ' ಎಂಬುದು ಅದರ ಹಿಂದಿನ ಶ್ಲೋಕವು; ಏತೌ ಎಂದು ಮುಂದಿನ ಶ್ಲೋಕದಲ್ಲಿ ಪ್ರಸಕ್ತರಾದವರು, ಹಿಂದಿನ ಶ್ಲೋಕದಲ್ಲಿ ಪ್ರಸಕ್ತರಾದ (ಬದ್ಧಮುಕ್ತರೆಂದು ಪ್ರಸಕ್ತರಾದ) ಜೀವೇಶ್ವರರೇ ಆಗಿದ್ದಾರೆ ; ಪ್ರಸಕ್ತರಲ್ಲಿರುವ ವಿಭಾಗವನ್ನೇ ತಿಳಿಯದೇ (ಪೂರ್ವಪಕ್ಷದ) ಒಬ್ಬನಿಗೇ ಎಂದು ತಿಳಿದು ಶ್ರೀಕೃಷ್ಣನಿಗೆ ಬದ್ಧತ್ವವನ್ನು ಹೇಳುವುದು ಮೂರ್ಖತನವಲ್ಲವೇ ?

[2] ಮೊದಲು ತನ್ನ ಅಂಶನೆಂದು ಹೇಳಿ, ಆ ಅಂಶಕ್ಕೆ, ಅಂಶಿಯಾದ ತನ್ನಿಂದ ಭೇದವನ್ನೇ ಹೇಳಿರುವುದರಿಂದ, ಮೊದಲಿನ ಅಂಶವು ಭಿನ್ನಾಂಶ (ಜೀವ) ನೆಂದೇ ಸಿದ್ಧವಾಗುತ್ತದೆ.

**ಅತ್ರೋಕ್ತೋ ನಿತ್ಯಮುಕ್ತಶ್ಚ ನ ಮೇ ಮೋಕ್ಷೋ ನ ಬಂಧನಂ ।**
**ಇತ್ಯಾಹ ಯಃ ಪುರಾ ಯುಕ್ತ್ಯಾ ಸ ಏವ ಸ್ಯಾನ್ನ ಸಂಶಯಃ ॥ ೨೭೭ ॥**

'ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ' ಎಂದು ಸಾಮಾನ್ಯವಾಗಿ ಹೇಳಿದ ನಿತ್ಯಮುಕ್ತತ್ವವು ಶ್ರೀಕೃಷ್ಣನಿಗೆಂದು ಹೇಗೆ ಸಿದ್ಧವಾಗುತ್ತದೆಂಬುದನ್ನು ವಿವರಿಸುತ್ತಾರೆ :—

ಅತ್ರೋಕ್ತಃ—ಈ ಶ್ಲೋಕದಲ್ಲಿ ಹೇಳಲ್ಪಟ್ಟವನು, ಯಃ—ಯಾರು, ಪುರಾ—ಹಿಂದಿನ ಶ್ಲೋಕದಲ್ಲಿ, ಯುಕ್ತ್ಯಾ—ಯುಕ್ತಿಯಿಂದ ಸಹ, ನ ಮೇ ಮೋಕ್ಷಃ ನ ಬಂಧನಂ—ನನಗೆ ಮೋಕ್ಷವೂ ಇಲ್ಲ, ಬಂಧವೂ ಇಲ್ಲ, ಇತಿ—ಎಂದು, ಆಹ—ಹೇಳಿದನೋ, (ನಿತ್ಯಮುಕ್ತನೆಂದು ಹೇಳಿಕೊಂಡಿರುವನೋ), ನಿತ್ಯಮುಕ್ತಶ್ಚ—ನಿತ್ಯಮುಕ್ತನೂ, ಎಂದೂ (ಆಹ—ಹೇಳಿರುವನೋ), ಸಃ ಏವ—ಆ ಕೃಷ್ಣನೇ, ನ ಸಂಶಯಃ—ಸಂಶಯವಿಲ್ಲ (ಶ್ರೀಕೃಷ್ಣನೇ ನಿತ್ಯಮುಕ್ತನಾದ ಬ್ರಹ್ಮನು).

**ಬಂಧಸ್ಯ ನಿತ್ಯತೋಕ್ತಿಶ್ಚ ತಥಾ ಮುಕ್ತೇಶ್ಚ ನಿತ್ಯತಾ ।**
**ಪುರಾ ಪರೋಕ್ತತನ್ಮಿಥ್ಯಾರ್ಥತ್ವಂ ಯುಕ್ತ್ಯಾ ನ್ಯವಾರಯತ್ ॥೨೭೮॥**

ಹಿಂದಿನ ಶ್ಲೋಕದಲ್ಲಿ ಮುಕ್ತತ್ವದ ಜೊತೆಯಲ್ಲಿ ಉಕ್ತವಾದ ಬಂಧತ್ವಕ್ಕೆ ನಿತ್ಯತ್ವವನ್ನು ಹೇಳಿದ್ದರಿಂದ, 'ನ ಮೇ ವಸ್ತುತಃ' ಎಂಬಲ್ಲಿ ಹೇಳಿದ 'ನ ವಸ್ತುತಃ' ಎಂಬ ಶಬ್ದಕ್ಕೆ ಸತ್ಯವಾಗಿಯೂ ಅಲ್ಲ; ಅಲ್ಲಿ ಪ್ರಸಕ್ತವಾದ ಬಂಧವು ಮಿಥ್ಯಾತ್ವವುಳ್ಳದ್ದೆಂದು ಅರ್ಥಮಾಡಿದುದು, ಯುಕ್ತಿ ವಿರುದ್ಧವೆಂದು ಹೇಳುತ್ತಾರೆ :—

ಬಂಧಸ್ಯ – ಬಂಧಕ್ಕೆ, ನಿತ್ಯತೋಕ್ತಿಶ್ಚ – ನಿತ್ಯತ್ವವನ್ನು ಹೇಳಿದುದೂ, ತಥಾ—ಹಾಗೂ, (ಬಹುಕಾಲದನಂತರ ಜೀವನಿಗೆ ದೊರೆಯುವುದೆಂಬ, ಮತ್ತು

---

ಎಂಬಲ್ಲಿ ಯಾವ ಸಂಶಯವೂ ಇಲ್ಲವೆಂದೂ ಸಿದ್ಧವಾಗುತ್ತದೆ (೨೭೭). ಬಂಧನಿತ್ಯತ್ವವನ್ನೂ ಮತ್ತು ಕಾಲಾಂತರದಲ್ಲಿ ಜೀವನಿಗೆ ದೊರೆಯುವುದೆಂಬ ಮುಕ್ತಿಗೂ ನಿತ್ಯತ್ವವನ್ನು ಹೇಳಿರುವುದರಿಂದ, ನಿತ್ಯವಾದುದು ಮಿಥ್ಯೆಯಾಗುವುದು ಅಸಂಭವವೆಂಬ ಯುಕ್ತಿಯಿಂದ, ಪರನು ಹೇಳುವ ಮಿಥ್ಯಾತ್ವವನ್ನು

ಮಾಯಾವಾದಿಯಂತೆ ಸಹ ಬಹುಕಾಲದನಂತರ ಲಭಿಸುವುದೆಂಬ ಮುಕ್ತಿಯೂ), ಮುಕ್ತೇಃ ಚ–ಮುಕ್ತಿಗೂ, ನಿತ್ಯತಾ–ನಿತ್ಯತ್ವವೂ, ಪುರಾಪ್ರೋಕ್ತ ತನ್ಮಿಥ್ಯಾರ್ಥತ್ವಂ–ಹಿಂದೆ ಪರನಿಂದ ಹೇಳಲಾದ ಮಿಥ್ಯಾರ್ಥತ್ವವನ್ನು, ಯುಕ್ತ್ಯಾ–ಯುಕ್ತಿಯಿಂದ (ನಿತ್ಯವಾದುದು, ಮಿಥ್ಯಾ ಆಗುವುದು ಅಸಂಭವವೆಂಬ ಯುಕ್ತಿಯಿಂದ), ನ್ಯವಾರಯತ್–ಪರಿಹರಿಸಿದನು (ನಿವಾರಿಸಿದನು).

**ತವಾಪಿ ಮುಕ್ತೇರ್ಮಿಥ್ಯಾತ್ವಂ ಕಥಮರ್ಥೋ ಭವೇದ್ವದ ।**
**ಪದದ್ವಯನಿಬದ್ಧೈಕರಜ್ಜ್ವಾ ಪ್ರಾಪ್ತಿರ್ದ್ವಯೋರಪಿ ॥ ೨೭೯ ॥**

'ನ ವಸ್ತುತಃ' ಎಂಬುದಕ್ಕೆ 'ನ ಪರಮಾರ್ಥತಃ' ಎಂಬರ್ಥವನ್ನು ಪರನು ಸಹ ಹೇಳುವಂತಿಲ್ಲ, ಎನ್ನುತ್ತಾರೆ :—

ತವಾಪಿ–ನಿನಗಾದರೂ (ಮಾಯಾವಾದಿಗಾದರೂ), ಮುಕ್ತೇಃ–ಮುಕ್ತಿಗೆ, ಮಿಥ್ಯಾತ್ವಂ–ಮಿಥ್ಯಾತ್ವವು, ಕಥಂ–ಹೇಗೆ, ಅರ್ಥಃ ಭವೇತ್–(ಎಂಬ) ಅರ್ಥವು ಸಂಭವಿಸುತ್ತದೆ (ಅಥವಾ, ಮುಕ್ತಿಯೂ ಮಿಥ್ಯೆಯಾದರೆ ಅದು ಪುರುಷಾರ್ಥವು ಹೇಗೆ ?), ವದ–ಹೇಳು ; (ಪರಮತದಲ್ಲಿ ಮುಕ್ತಿಗೆ ಸತ್ಯತ್ವವನ್ನು ಒಪ್ಪುತ್ತಾರೆ); ಪದದ್ವಯನಿಬದ್ಧೈಕರಜ್ಜ್ವಾ–ಎರಡೂ ಪಾದಗಳಲ್ಲಿ ಬಿಗಿಯಲಾದ ಒಂದೇ ಹಗ್ಗದಿಂದ, ದ್ವಯೋಃ ಅಪಿ–ಬಂಧಮುಕ್ತಿರೂಪದ ಎರಡರ್ಥಗಳುಳ್ಳ ಎರಡು ಪಾದಗಳಲ್ಲಿ (ಸಿಕ್ಕು ಎರಡಕ್ಕೂ ಮಿಥ್ಯಾತ್ವವು), ಪ್ರಾಪ್ತಿಃ–ಬಂದಿತು (ಬಂಧದಂತೆ ಮುಕ್ತಿಯೂ ಮಿಥ್ಯೆಯೆಂದಾಯಿತು – ಆದ್ದರಿಂದ ಬಂಧನಿತ್ಯತ್ವವು, ಬಂಧದ ಸತ್ಯತ್ವವನ್ನು ಸಾಧಿಸಿತು).

---

ಶ್ರೀಕೃಷ್ಣನು ನಿವಾರಿಸಿರುವನು ; ಆದ್ದರಿಂದ 'ನ ಮೇ ವಸ್ತುತಃ' ಎಂಬುದರಿಂದ ಮಿಥ್ಯಾತ್ವವು ಅಭಿಪ್ರೇತವಲ್ಲ (೨೭೮). ಬಂಧಮುಕ್ತಿಗಳನ್ನು ನಿರೂಪಿಸುವ ಶ್ರೀಕೃಷ್ಣನ ನುಡಿಯೆಂಬ ಶ್ಲೋಕದ ಎರಡು ಪಾದಗಳಲ್ಲಿ ಸಿಕ್ಕ ಮಾಯಾವಾದಿಯು, ಬಂಧತ್ವಕ್ಕೂ ಸತ್ಯತ್ವವನ್ನು ಅಂಗೀಕರಿಸಬೇಕಾಗಿ ಬಂತು ; ಮಿಥ್ಯಾತ್ವವನ್ನೇ ತಿಳಿಯುವುದಾದರೆ, ಎರಡಕ್ಕೂ (ಬಂಧಮುಕ್ತಿಗಳೆರಡಕ್ಕೂ) ಮಿಥ್ಯಾತ್ವವನ್ನು ಒಪ್ಪಬೇಕು ; ಆಗ ಮುಕ್ತಿಗೂ ಮಿಥ್ಯಾತ್ವವು ಪ್ರಾಪ್ತವಾಗುತ್ತದೆ ; ಅದು, ಮುಕ್ತಿಗೆ ಸತ್ಯತ್ವವನ್ನು ಹೇಳುವ ತನಗೆ ಒಪ್ಪಿತವಲ್ಲ ; ಮುಕ್ತಿಯು ಸತ್ಯವಾದರೆ,

**ಯಾದೃಚ್ಛಿಕಸ್ಯ ಪಂಕಸ್ಯ ಕ್ಷಾಲನಂ ಚ ಯದೃಚ್ಛಯಾ ।**
**ವಸ್ತುಸ್ವಭಾವತೋ ನೇತಿ ಮಮತ್ವರ್ಥೋ ನಿರಾಕುಲಃ ॥ ೨೮೦ ॥**

'ನ ವಸ್ತುತಃ' ಎಂಬುದಕ್ಕೆ ಸ್ವಭಾವತಃ ಎಂಬರ್ಥದಲ್ಲಿ ಈ ದೋಷವಿಲ್ಲವೆನ್ನುತ್ತಾರೆ :—

ಯಾದೃಚ್ಛಿಕಸ್ಯ–ಭಗವದಿಚ್ಛೆಯಿಂದ, ಉಂಟಾದ, ಪಂಕಸ್ಯ–ಕೆಸರಿನ, ಕ್ಷಾಲನಂ–ನಾಶವೂ (ಪರಿಹಾರವೂ), ಯದೃಚ್ಛಯಾ ಚ–ಭಗವದಿಚ್ಛೆಯಿಂದಲೇ; (ಯಾದೃಚ್ಛಿಕವೆಂದರೆ ಅಕಸ್ಮಾತ್ತಾಗಿ, (ತೋರುವ ಕಾರಣವಿಲ್ಲದೇ) ಎಂಬರ್ಥವೂ ಇದೆ—(ಅಸ್ವಾಭಾವಿಕವಾಗಿ, ಶುದ್ಧ ವಸ್ತ್ರವು ಮಲಿನವಾದರೆ ತೊಳೆಯುವುದರಿಂದ ಪುನಃ ಶುದ್ಧವಾಗುವಂತೆ), (ಬಂಧ ಮೋಕ್ಷಗಳು), ವಸ್ತುಸ್ವಭಾವತಃ ನ ಇತಿ–ವಸ್ತುಸ್ವಭಾವದಿಂದಲ್ಲ (ಕಿಂತು ಭಗವದಿಚ್ಛೆಯಂತೆ ಬಂಧಿಸಿರುವ ಸತ್ವಾದಿಗಳು, ಭಗವಂತನ ಇಚ್ಛೆಯಿಂದಲೇ (ಪ್ರಸಾದದಿಂದಲೇ) ಪರಿಹಾರವಾಗಿ ಮುಕ್ತಿಯು ದೊರೆಯುತ್ತದೆ), ಎಂಬ, ಅರ್ಥಃ – ಅರ್ಥವು, ಮಮ ತು – ನನಗಾದರೋ (ಸಿದ್ಧಾಂತಿಗಾದರೋ), ನಿರಾಕುಲಃ–ವಿರೋಧರಹಿತವಾದುದು.

**ಯತ್ತ್ವಾಂಗ್ನೈವ ಮ ಇತ್ಯಾಹ ತೇನ ಸೋಽವಾಸ್ತವಂ ಚ ತತ್ ।**
**ಸ್ವಸ್ಮಿನ್ನಿಷೇಧತೀಶಾನೇ ಸ್ವಸ್ಯ ಜೀವಸ್ಯ ಚೇತ್ಯಪಿ ॥ ೨೮೧ ॥**

---

ಬಂಧವೂ ಸತ್ಯವಾಯಿತು ; ಆದ್ದರಿಂದ ಬಂಧನಿತ್ಯತ್ವವು ಬಂಧದ ಸತ್ಯತ್ವವನ್ನು ಸಾಧಿಸಿಕೊಟ್ಟಿತು (೨೭೯). ಭಾಗವತ ಶ್ಲೋಕದಲ್ಲಿ 'ನ ವಸ್ತುತಃ' ಎಂಬುದಕ್ಕೆ (ಗುಣಗಳಿಂದ ಬಂಧವಲ್ಲದೇ) ಸ್ವಭಾವದಿಂದಲ್ಲವೆಂಬರ್ಥವೇ ಯುಕ್ತವಾಗುತ್ತದೆ ; ಅಕಸ್ಮಾತ್ತಾಗಿ ಉಂಟಾದ ವಸ್ತ್ರದ ಮಾಲಿನ್ಯವು, ತೊಳೆಯುವುದರಿಂದ ಪರಿಹಾರವಾಗುವಂತೆ, ಭಗವಂತನ ಇಚ್ಛೆಯಿಂದ (ಯಾದೃಚ್ಛಿಕ) ವಾಗಿ ಜೀವನಿಗೆ ಉಂಟಾಗಿರುವ ಗುಣಬಂಧವು, ಯಾದೃಚ್ಛಿಕವಾಗಿಯೇ (ಭಗವಂತನ ಇಚ್ಛೆಯಿಂದಲೇ—ಪ್ರಸಾದದಿಂದಲೇ) ಪರಿಹಾರವಾಗಬೇಕಷ್ಟೆ ; ಆದ್ದರಿಂದ, ಜೀವನಿಗೆ ಗುಣದಿಂದ ಬಂಧವಲ್ಲದೇ, ಸ್ವಾಭಾವಿಕವಲ್ಲವೆಂಬ ನನ್ನ ಅರ್ಥಕ್ಕೆ ಯಾವ ವಿರೋಧವೂ ಇಲ್ಲದೇ ಸ್ಥಿರವಾಯಿತು (೨೮೦). ಹಿಂದೆ, ತನಗೆ ಸತ್ವಾದಿಗುಣಗಳ

**ನೇತಿ ಬ್ರವೀತಿ ಸ್ವಾನಿಷ್ಟಂ ಜೀವೋ ಮಚ್ಛಕ್ತಿತೋಽಗ್ರಹೀತ್ ।**
**ಇತಿ ವಕ್ತುಂ ಸ ಪದ್ಯೇಽಸ್ಮಿನ್ ಪ್ರಾಹ ಮೇ ಗುಣತಸ್ತ್ವಿತಿ ॥ ೨೮೨ ॥**

ಯತ್–ಯಾವ ಕಾರಣದಿಂದ, ಪ್ರಾಕ್–(ಮೊದಲಿನ 'ಸತ್ವಂ ರಜ' ಎಂಬ ಶ್ಲೋಕಾರ್ಧಭಾಗದಲ್ಲಿ, ಮೇ–ನನಗೆ, ನೈವ–ಇಲ್ಲವೇ ಇಲ್ಲ, ಇತಿ ಆಹ–ಎಂದು ಹೇಳಿರುವನೋ, ತೇನ–ಅದರಿಂದ (ಆ ಕಾರಣದಿಂದ), ತತ್ ಅವಾಸ್ತವಂ–ಆ ಸತ್ಯವಲ್ಲದ (ಮಿಥ್ಯಾಭೂತವಾದ) ಭವಬಂಧನವನ್ನು, ಈಶಾನೇ–ನಿಯಾಮಕ ನಾದ, ಸ್ವಸ್ಮಿನ್–(ಗುಣಗಳ ಸ್ವಾಮಿಯಾದ) ತನ್ನಲ್ಲಿ, ನಿಷೇಧತಿ–ನಿಷೇಧಿಸು ತ್ತಾನೆ; ಸ್ವಸ್ಯ–ತನಗೂ, ಜೀವಸ್ಯ ಚ–ಜೀವನಿಗೂ, ಇತ್ಯಪಿ–ಎಂದೂ, ನೇತಿ–(ಉಭಯರಿಗೂ) ಇಲ್ಲವೆಂದು ಹೇಳದೇ, ಸ್ವಾನಿಷ್ಟಂ–ತನಗೆ (ಬಂಧನವು) ಇಷ್ಟ ವಲ್ಲದ್ದೆಂದೂ, ಜೀವಃ–ಜೀವನು, ಮಚ್ಛಕ್ತಿತಃ–ನನ್ನ ಶಕ್ತಿಯಿಂದ, ಅಗ್ರಹೀತ್–ಬಂಧನವನ್ನು ವಹಿಸಿದನು, ಇತಿ ವಕ್ತುಂ–ಎಂದು ಹೇಳಲು, ಅಸ್ಮಿನ್ ಪದ್ಯೇ–ಈ ಶ್ಲೋಕದಲ್ಲಿ ('ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತೋ ಮೇ ನ ವಸ್ತುತಃ' ಎಂಬ ಶ್ಲೋಕದಲ್ಲಿ), ಮೇ ಗುಣತಃ–ನನ್ನ ಅಧೀನವಾದ ಗುಣದಿಂದ, ಇತಿ ತು–ಎಂದೇ, ಪ್ರಾಹ–ಹೇಳಿರುವನು. (ಹೀಗೆ ಬಂಧನವನ್ನು ಗುಣಗಳು ತನ್ನ ಅಧೀನ ದಲ್ಲಿರುವುದರಿಂದ ತನಗಿಲ್ಲವೆಂದು ಹೇಳಿದ್ದಾನೆ, ಅಲ್ಲದೇ, ನ ವಸ್ತುತಃ–ಮಿಥ್ಯಾ ಭೂತವಾದ ಬಂಧವು ತನಗಿರುತ್ತೆಂಬರ್ಥದಲ್ಲಿ, ಅಲ್ಲ ; ಕಿಂತು, ಸ್ವತಂತ್ರನಾದ್ದರಿಂದ ನನಗೆ ಗುಣಬಂಧವಿಲ್ಲವೆಂಬರ್ಥವೇ ಉಚಿತವಾಗುತ್ತದೆ; ಈ ಅರ್ಥವು, 'ಸತ್ವಂ ರಜಸ್ತಮ ಇತಿ ಗುಣಾ ಜೀವಸ್ಯೈವ ನ ಮೇ' ಎಂಬುದಕ್ಕೆ ಅನುಗುಣವಾಗಿ ರುತ್ತದೆ);

---

ಬಂಧವು ಇಲ್ಲವೆಂದು ಹೇಳಿರುವುದರಿಂದ, ಗುಣಸ್ವಾಮಿಯಾದ ತನ್ನಲ್ಲಿ ಗುಣ ಬಂಧವನ್ನು ನಿಷೇಧಿಸಿ, ಮಿಥ್ಯಾಭೂತವಾದ ಬಂಧವನ್ನೂ ನಿರಾಕರಿಸಿರುವನಲ್ಲದೇ, ಆ ಬಂಧವು ಜೀವನಿಗೂ ಸ್ವಭಾವತಃ ಇಲ್ಲವೆಂದೂ, ತನ್ನ ನಿಯಾಮಕ ಶಕ್ತಿ ಯಿಂದ ಗುಣಬಂಧವನ್ನು ಜೀವನು ವಹಿಸಿರುವನೆಂದೂ ಹೇಳಿರುವನು ; ಇದನ್ನು ತಿಳಿಸಲು, 'ನ ಮೇ ಗುಣತಃ', ಎಂದರೆ, ಸ್ವಾಧೀನವಾದ ಗುಣದಿಂದ ತನಗೆ ಬಂಧನವಿಲ್ಲೆಂದು, ಸ್ಪಷ್ಟಪಡಿಸಿದ್ದಾನೆ (೨೮೧–೨೮೨).

**ತೇನೈವ ವಕ್ತಿ ಸ್ವಾಧೀನಮನಿಷ್ಟಂ ಸ್ವಸ್ಯ ನೇತ್ಯಪಿ ।**
**ಮೋಹಂ ಚಾಸುರಜೀವಾನಾಂ ಸಂಮುಗ್ಧೋಕ್ತ್ಯಾಕರೋತ್ಪ್ರಭುಃ ॥**

ನನ್ನ ಅಧೀನವಾದ ಗುಣತ್ರಯದಿಂದ ಜೀವನಿಗೆ ಮಾತ್ರವೆಂದು ಸ್ಪಷ್ಟವಾಗಿ ಹೇಳದೇ, 'ಗುಣತೋ ಮೇ ನ ವಸ್ತುತಃ' ಎಂಬುದಾಗಿ ಭ್ರಾಮಕವಾಗುವಂತೆ ಏಕೆ ಹೇಳಿರುವನೆಂಬುದನ್ನು ಸ್ಪಷ್ಟವಾಗಿ ನಿರೂಪಿಸುತ್ತಾರೆ :—

ತೇನ ಏವ–ಗುಣಗಳು ತನ್ನ ಸ್ವಾಧೀನವೆಂಬುದರಿಂದಲೇ, ಸ್ವಾಧೀನಂ–ತನ್ನ ಅಧೀನದಲ್ಲಿರುವ, ಅನಿಷ್ಟಂ–ಬಂಧರೂಪವಾದ ಅನಿಷ್ಟವನ್ನು, ಸ್ವಸ್ಯ–ತನಗೆ, ನ ಇತ್ಯಪಿ–ಇಲ್ಲವೆಂದೂ (ಅಸ್ವತಂತ್ರನಾದ ಜೀವನಿಗೆ ಭಗವದಧೀನ ಗುಣನಿಮಿತ್ತಕ ದುಃಖಾದಿಯು ಆಗಲೆಂದು ಗುಣನಿಯಾಮಕನೂ, ಕಾಲಾನುಗುಣವಾದ ಭೋಗಗಳನ್ನು ಸ್ವತಂತ್ರನಾಗಿ ಜೀವರಿಗೆ ಪ್ರದಾನಮಾಡುವವನೂ ಆದ ಭಗವಂತನು ಇಚ್ಛಿಸಿ ಗುಣಬಂಧವನ್ನುಂಟುಮಾಡುತ್ತಾನೆ), (ಹೇಳಿ), ಆಸುರಜೀವಾನಾಂ–ಅಸುರ ಸ್ವಭಾವದ ಜೀವರಿಗೆ, ಮೋಹಂ ಚ – ಮೋಹವನ್ನು (ಭ್ರಮೆಯನ್ನು), ಸಂಮುಗ್ಧೋಕ್ತ್ಯಾ–ಮೋಹಜನಕ ಶಬ್ದಪ್ರಯೋಗದಿಂದ), ಪ್ರಭುಃ – ಭಗವಂತನು (ಶ್ರೀಕೃಷ್ಣನು), ಅಕರೋತ್ – ಉಂಟುಮಾಡಿರುವನು.

**ಸ್ವಾತಂತ್ರ್ಯಗುಣತೋ ಬದ್ಧಾಖ್ಯಾಂ ವ್ಯಾಖ್ಯಾಂತಿ ಮೇ ಬುಧಾಃ ।**
**ಬಂಧಾದಿವಸ್ತುತಸ್ತನ್ನಾಮ ಬಂಧೋಜ್ಝಿತಸ್ಯ ಮೇ ।**
**ನೇತಿ ವಿದ್ವತ್ಪ್ರಸಿದ್ಧಿಂ ಸೂಚಯನ್ ಶಂಸತಿ ಪ್ರಭುಃ ॥ ೨೮೪ ॥**

---

ಗುಣಗಳು ತನ್ನ ಅಧೀನವೆಂಬುದರಿಂದ, ತನಗೆ ಅನಿಷ್ಟವಾದ ಬಂಧವು ತನಗಿಲ್ಲವೆಂದೂ ಅದು ಅಸ್ವತಂತ್ರನಾದ ಜೀವನಿಗೆ ತನ್ನ ಇಚ್ಛೆಯಂತೆ ಸಂಭವಿಸುವುದೆಂದೂ ಹೇಳಿ, ಮೋಹಜನಕವಾದ ರೀತಿಯಲ್ಲಿ, 'ಗುಣತೋ ನ ವಸ್ತುತಃ' ಎಂದು ಹೇಳಿರುವುದಕ್ಕೆ, ಅಸುರಸ್ವಭಾವದ ಜೀವರಿಗೆ ಮೋಹವನ್ನುಂಟುಮಾಡಲಿಕ್ಕಾಗಿಯೇ, ಎಂದು ತಿಳಿಯಬೇಕು (೨೮೩). ಜೀವನಲ್ಲಿರುವ ಬಂಧಾದಿಗಳು ಸ್ವತಂತ್ರನಾದ (ಭಗವಂತನ) ನನ್ನ ಅಧೀನವೇ ಆದ್ದರಿಂದ, ಜ್ಞಾನಿಗಳು ಬದ್ಧ, ದುಃಖೀ ಮೊದಲಾದ ಆಯಾ ಧರ್ಮಗಳುಳ್ಳವನೆಂಬ ಅರ್ಥವನ್ನು ಸೂಚಿಸುವ ನಾಮಗಳಿಂದ ನಾನೇ ವಾಚ್ಯನೆಂದೂ ಹೇಳುತ್ತಾರೆ; ಹೀಗೆ

'ಬದ್ಧೋ ಮುಕ್ತ ಇತಿ ಹ್ಯಾಖ್ಯಾ' ಎಂಬ ಶ್ಲೋಕವನ್ನು ಬೇರೆ ರೀತಿಯಿಂದ ವ್ಯಾಖ್ಯಾನಮಾಡುತ್ತಾರೆ:—

ಸ್ವಾತಂತ್ರ್ಯಗುಣತಃ–(ಜೀವನಲ್ಲಿ ಬಂಧಾದಿ ಧರ್ಮಗಳು ಭಗವಂತನ ಅಧೀನವಾದ್ದರಿಂದ) ಭಗವಂತನ ಸ್ವಾತಂತ್ರ್ಯಗುಣದಿಂದ, ಮೇ–ನನ್ನ ಭಕ್ತರಾದ, ಬುಧಾಃ–ಜ್ಞಾನಿಗಳು, ಬದ್ಧಾಖ್ಯಾಂ–ಬದ್ಧನೆಂಬ (ನನ್ನ) ಹೆಸರನ್ನು, ವ್ಯಾಖ್ಯಾಂತಿ – ವ್ಯಾಖ್ಯಾನ ಮಾಡುತ್ತಾರೆ; (ಹೀಗೆ ಜೀವ ನಿಷ್ಠ ಬದ್ಧ ದುಃಖಾದಿ ಶಬ್ದಗಳು ಭಗವಂತನಲ್ಲಿ – ಬದ್ಧ, ದುಃಖೀ ಇತ್ಯಾದಿಯಾಗಿ ಪ್ರಯೋಗಿಸಲ್ಪಡುತ್ತವೆ); [1] ವಸ್ತುತಃ – ಯಥಾರ್ಥವಾಗಿ ನೋಡಿದರೆ, ಬಂಧೋಜ್ಝಿತಸ್ಯ–ಬಂಧಾದಿಗಳಿಲ್ಲದ, ಮೇ–ನನಗೆ, ಬಂಧಾದಿತತ್ತನ್ನಾಮ– ಬಂಧಾದಿ (ದುಃಖ ಮೊದಲಾದ) ಆಯಾ ನಾಮಗಳು, ನೇತಿ–ಇಲ್ಲವೆಂಬ, ವಿದ್ವತ್ಪ್ರಸಿದ್ಧಿಂ–ಜ್ಞಾನಿಗಳಲ್ಲಿರುವ ಪ್ರಸಿದ್ಧಿಯನ್ನು (ವೇದವ್ಯಾಸಾದಿ ಜ್ಞಾನಿವರ್ಯರು ಪ್ರಶಂಸಿಸುವರೆಂದು), ಸೂಚಯನ್–ಸೂಚಿಸುವವನಾಗಿ, ಪ್ರಭುಃ– ಶ್ರೀಕೃಷ್ಣನು, ಶಂಸತಿ–(ತನ್ನ ಮಹಿಮೆಯನ್ನೇ) ಹೇಳಿಕೊಳ್ಳುತ್ತಾನೆ.

---

ಬಂಧಾದಿಹೀನನಾದ ನನ್ನನ್ನು 'ತದಧೀನತ್ವಾದರ್ಥವತ್' ಎಂಬ ಬ್ರಹ್ಮಸೂತ್ರದಲ್ಲಿ ನಿರ್ಣಯಿಸಿರುವಂತೆ, ಯಾವ ವಸ್ತುಗಳು ತನ್ನ ಅಧೀನದಲ್ಲಿರುವುವೋ, ಆ ವಸ್ತುವಾಚಕ ಶಬ್ದಗಳಿಂದ ತಾನೇ ವಾಚ್ಯನೆಂದು, ಶ್ರೀಕೃಷ್ಣನು 'ಬದ್ಧೋ ಮುಕ್ತ ಇತಿ ಹ್ಯಾಖ್ಯಾ' ಎಂಬ ಶ್ಲೋಕದಿಂದ ಹೇಳಿಕೊಂಡು, 'ಆಖ್ಯಾ'

---

[1] 'ತದಧೀನತ್ವಾದರ್ಥವತ್,' ಎಂಬ ಬ್ರಹ್ಮಸೂತ್ರದಲ್ಲಿ, ಯದ್ಯಪಿ ಬದ್ಧ, ದುಃಖೀ ಇತ್ಯಾದಿ ಶಬ್ದಗಳು, ಬಂಧ ಮತ್ತು ದುಃಖಗಳುಳ್ಳವರನ್ನು ಹೇಳುವುವಾದರೂ, ಈ ಅರ್ಥಗಳು, ಈ ಶಬ್ದಗಳನ್ನು ಜೀವನಲ್ಲಿ ಪ್ರಯೋಗಿಸಿದಾಗ ಮಾತ್ರ; ಪರಮಾತ್ಮನಲ್ಲಿ, ಬಂಧಾದಿಗಳಿಂದ ನಿಯಮಿಸುತ್ತಾನೆಂಬ—ನಿಯಾಮಕನಾಗಿ ಬಂಧ, ದುಃಖ ಅಜ್ಞಾನಾದಿಗಳನ್ನು ಜೀವನಿಗೆ ಕೊಡುವವನೆಂಬ ಅರ್ಥವನ್ನು ಹೇಳುತ್ತದೆಂದು, ನಿರ್ಣಯಿಸಿರುವರು; ಭಾಷ್ಯದಲ್ಲಿ 'ಯಥಾ ರಾಜಾ ಜಯೀತ್ಯಪಿ' ಎಂಬ ವಾಕ್ಯದಿಂದ, ಭಟನಲ್ಲಿರುವ ಜಯಕ್ಕೆ ನಿಯಾಮಕನಾದ ರಾಜನಲ್ಲಿ, ಜಯೀ ಶಬ್ದವು (ಜಯವುಳ್ಳವನೆಂದು) ಉಪಯೋಗಿಸಲ್ಪಡುವಂತೆ, ಎಂಬ ದೃಷ್ಟಾಂತವನ್ನು ಕೊಟ್ಟಿರುತ್ತಾರೆ. ಜೀವರಲ್ಲಿರುವ ಬದ್ಧತ್ವ ಮತ್ತು ದುಃಖಿತ್ವಗಳು ಭಗವಂತನ ಅಧೀನಗಳಾದ್ದರಿಂದ, ಬದ್ಧ, ದುಃಖೀ ಎಂದು ಪರಮಾತ್ಮನೂ ಕರೆಯಲ್ಪಡುತ್ತಾನೆ.

**ಆಖ್ಯಾಪದಸ್ಯ ಚಾಖ್ಯಾನಮೇವಂ ಸತ್ಯೇವ ಶೋಭತೇ ।**
**ಮೋಕ್ಷೋ ಬಂಧನಮಿತ್ಯೇವ ನೋಚೇದೂಚೇ ಕುತೋಂತತಃ ॥**

ಆಖ್ಯಾಪದಸ್ಯ–ಆಖ್ಯಾ ಎಂಬ ಪದದ, ಆಖ್ಯಾನಂ – ಪ್ರಯೋಗವು (ನಾಮಧೇಯ ಪರ್ಯಾಯವೂ ಆದ ಈ ಪದಪ್ರಯೋಗವು), ಏವಂ–ಹೀಗೆ, ಸತ್ಯೇವ–ಇದ್ದರೆ ಮಾತ್ರ, ಶೋಭತೇ–ಶೋಭಿಸುತ್ತದೆ (ಸರಿಯಾದ ಅರ್ಥವುಳ್ಳದ್ದಾಗುತ್ತದೆ) (ಆಖ್ಯಾ ಪದವು ಸಾರ್ಥಕವಾಗುತ್ತದೆ – ಹಾಗಲ್ಲದಿದ್ದರೆ ವ್ಯರ್ಥವಾಗುತ್ತದೆ) ; ನೋ ಚೇತ್–ಹಾಗಲ್ಲದಿದ್ದರೆ ('ಬದ್ಧೋ ಮುಕ್ತ ಇತಿ ಹ್ಯಾಖ್ಯಾ' ಎಂಬಲ್ಲಿ ಬಂಧ ಮೋಕ್ಷಗಳು, ಅವುಗಳ ಸ್ವತಂತ್ರಕರ್ತನಾದ ಭಗವಂತನ ಅಧೀನಗಳೆಂಬ ಅರ್ಥದಲ್ಲಿ 'ಆಖ್ಯಾ' ಪದವು ಪ್ರಯೋಗಿಸಲ್ಪಟ್ಟಿಲ್ಲ ವೆಂದರೆ), ಮೋಕ್ಷಃ–ಮೋಕ್ಷವೂ, ಬಂಧನಂ–ಬಂಧವೂ, ಇತ್ಯೇವ–ಎಂದು ಮಾತ್ರವೇ, ಅಂತತಃ–ಕೊನೆಯಲ್ಲಿ (ಬಂಧಾದಿಗಳ ಸ್ವಭಾವವನ್ನು ಹೇಳುವ ಉತ್ತರಾರ್ಧದಲ್ಲಿ), ಕುತಃ ಊಚೇ–ಏತಕ್ಕಾಗಿ (ಆಖ್ಯಾ ಪದವನ್ನು ಬಿಟ್ಟೇ) ಹೇಳಿರುವನು? (ಆದ್ದರಿಂದ ಆಖ್ಯಾ ಪದದಿಂದ ಬಂಧಮೋಕ್ಷಗಳು ತನ್ನ ಅಧೀನಗಳೆಂದೂ, ತನಗೆ ಮಾತ್ರ ಬಂಧಮೋಕ್ಷಗಳಿಲ್ಲವೆಂದೂ ಹೇಳಿದ್ದಾನೆಂದು ತಿಳಿಯುತ್ತದೆ).

**ಅಸ್ವತಂತ್ರಸ್ಯ ಜೀವಸ್ಯ ಬದ್ಧಾದ್ಯಾಖ್ಯಾ ತು ವಸ್ತುತಃ ।**
**ಇತಿ ಸೂಚಯತಾ ಚಾತ್ರ ಮುಕ್ತಾಮುಕ್ತದ್ವಿತೋದಿತಾ ॥ ೨೮೬ ॥**

---

(ನಾಮಧೇಯ) ಎಂಬುದರ ವಿದ್ವತ್ಪ್ರಸಿದ್ಧ ವ್ಯಾಖ್ಯಾನವನ್ನೇ ಸೂಚಿಸಿದ್ದಾನೆ (೨೮೫). ಆಖ್ಯಾ ಶಬ್ದದ ವ್ಯಾಖ್ಯಾನವು ಹೀಗಿದ್ದರೆ ಮಾತ್ರ ಸಾರ್ಥಕವಾಗುತ್ತದೆ; ಹಾಗಲ್ಲದಿದ್ದರೆ, ಬಂಧಮೋಕ್ಷಗಳ ಸ್ವಭಾವಗಳನ್ನು ನಿರೂಪಿಸುವ ಉತ್ತರಾರ್ಧ ಶ್ಲೋಕದಲ್ಲಿ ಮೋಕ್ಷ, ಬಂಧನಗಳೆಂಬ ಪದಗಳನ್ನು ಆಖ್ಯಾ ಶಬ್ದವಿಲ್ಲದೇ ಪ್ರಯೋಗಿಸುತ್ತಿರಲಿಲ್ಲ ; ಆದ್ದರಿಂದ ಆಖ್ಯಾ ಶಬ್ದವು, ಬಂಧ ಮೋಕ್ಷಗಳು ಸ್ವತಂತ್ರನಾದ ತನ್ನ ಅಧೀನಗಳೆಂದು ತಿಳಿಸಲಿಕ್ಕಾಗಿಯೇ ಪ್ರಯೋಗಿಸಲ್ಪಟ್ಟಿರುತ್ತದೆಂದು ಸಿದ್ಧವಾಗುತ್ತದೆ (೨೮೫). ಅಸ್ವತಂತ್ರನಾದ ಜೀವನಲ್ಲಿ ಬದ್ಧನೆಂಬ ನಾಮವು (ವಸ್ತುತಃ) ಸತ್ಯವೇ ಆಗಿರುತ್ತದೆ–ಸತ್ಯವಾದ ಬಂಧನವುಳ್ಳವನಾದ್ದರಿಂದ ಬದ್ಧನೇ ಸರಿ; ಹೀಗೆ ಹೇಳಿದ ಶ್ರೀಕೃಷ್ಣನು,

*

ಅಸ್ವತಂತ್ರಸ್ಯ–ಅಸ್ವತಂತ್ರನಾದ, ಜೀವಸ್ಯ–ಜೀವನಿಗೆ, ಬದ್ಧಾದ್ಯಾಖ್ಯಾ ತು–ಬದ್ಧ (ಮುಕ್ತನೆಂಬ) ನಾಮಧೇಯವಾದರೋ, ವಸ್ತುತಃ–ಯಥಾರ್ಥವೇ (ಸತ್ಯವೇ) (ಬದ್ಧತ್ವ ಮುಕ್ತತ್ವಧರ್ಮಗಳು ಜೀವನಲ್ಲಿ ನಿಜವಾಗಿಯೂ ಇರುತ್ತವೆ); ಇತಿ–ಹೀಗೆಂದು, ಸೂಚಯತಾ–ಸೂಚಿಸುವ ಶ್ರೀಕೃಷ್ಣನಿಂದ, ಅತ್ರ ಚ–ಇಲ್ಲಿಯೇ, ಮುಕ್ತಾಮುಕ್ತದ್ವಿತಾ–ಮುಕ್ತಾಮುಕ್ತ ಭೇದವೂ, ಉದಿತಾ–ಹೇಳಲಾಯಿತು.

**ಮಾಯಾಯಾ ಅಪಿ ಮೂಲಂ ಮೇ ಸ್ವಾತಂತ್ರ್ಯಾಖ್ಯಗುಣೋ ಯತಃ**
**ಅತೋ ಮಾಯಾಮಯೋ ಬಂಧಸ್ತದ್ಧ್ವಂಸೋ ವಾ ಕಥಂ ಮಮ ।**
**ಇತಿ ತತ್ರೈವ ಹೇತುಂ ಚ ವ್ಯನಕ್ತೀತಿ ಮತಿರ್ಮಮ ॥ ೨೮೭ ॥**

ಯತಃ–ಯಾವ ಕಾರಣದಿಂದ, ಮೇ–ನನ್ನ, ಸ್ವಾತಂತ್ರ್ಯಾಖ್ಯಗುಣಃ–ಸ್ವಾತಂತ್ರ್ಯವೆಂಬ ಗುಣವು, ಮಾಯಾಯಾಃ ಅಪಿ–ನನ್ನ ಮಾಯೆಗೂ ಸಹ (ಇಚ್ಛಾಶಕ್ತಿಗೂ) ನಿಯಾಮಕವಾದುದೋ, ಅತಃ – ಆದ್ದರಿಂದ (ಬಂಧಕ ಮಾಯೆಯೂ—ಪ್ರಕೃತಿ ಗುಣಗಳೂ ಅಥವಾ ನನ್ನ ಇಚ್ಛೆಯೂ ನನ್ನ ಸ್ವಾತಂತ್ರ್ಯಗುಣದ ಅಧೀನವಾದ್ದರಿಂದ), ಮಾಯಾಮಯಃ – ಮಾಯಾ ಮೂಲವಾದ, ಬಂಧಃ–ಬಂಧವು (ಸಂಸಾರಬಂಧವೂ), ತದ್ಧ್ವಂಸಃ ವಾ–ಅದರ ನಾಶವೂ, ಮಮ–ನನಗೆ, ಕಥಂ–ಹೇಗೆ ಕೂಡುತ್ತವೆ? ಇತಿ–ಎಂಬ (ಕೂಡುವುದಿಲ್ಲವೆಂಬ), ಹೇತುಂ ಚ – ಕಾರಣವನ್ನು, ತತ್ರೈವ – ಅಲ್ಲಿಯೇ ('ಬದ್ಧೋ ಮುಕ್ತ ಇತಿ ಹ್ಯಾಖ್ಯಾ' ಎಂಬ ಶ್ಲೋಕದಲ್ಲಿಯೇ), ವ್ಯನಕ್ತಿ ಇತಿ–(ಶ್ರೀಕೃಷ್ಣನು) ಸ್ಪಷ್ಟವಾಗಿ ಪ್ರಕಟಗೊಳಿಸುವನೆಂದು, ಮಮ–ನನ್ನ, ಮತಿಃ–ನಿಶ್ಚಯವು.

---

ಅದರಿಂದ, ಮುಕ್ತಾಮುಕ್ತರ ಭೇದವನ್ನು (ನಿತ್ಯಮುಕ್ತನಾದ ತನ್ನಿಂದ ಜೀವರು ಭಿನ್ನರೆಂಬುದನ್ನು) ಹೇಳಿದಂತಾಗಿದೆ (೨೮೬). ನನ್ನ ಸ್ವಾತಂತ್ರ್ಯವೆಂಬ ಗುಣವು, ಮಾಯೆಗೂ (ಪ್ರಕೃತಿಯನ್ನು–ನನ್ನ ಇಚ್ಛೆಯನ್ನು) ನಿಯಂತ್ರಿಸುತ್ತದೆ; ಆದ್ದರಿಂದ ಸಂಸಾರಬಂಧವು ಮಾಯಾಮಯವೆಂದೂ ಹೇಳಲಾಗುತ್ತದೆ; ಹೀಗಿರುವ ಬಂಧವಾಗಲಿ, ಬಂಧವೇ ಇಲ್ಲದಿರಲು, ಅದರ ಧ್ವಂಸ(ನಾಶ)ವಾಗಲಿ, ಸ್ವತಂತ್ರನಾದ ನನಗೆ ಹೇಗೆ ಇರಲು ಸಾಧ್ಯ? (ಸಾಧ್ಯವೇ ಇಲ್ಲ); ಈ ಯುಕ್ತಿ

**ಸ್ವಸ್ಯೈವ ನಿತ್ಯಮುಕ್ತತ್ವಂ ವಕ್ಷ್ಯನ್ನಾದೌ ಶ್ರುತೀರಿತಾಂ ।**
**ಬದ್ಧಾದ್ಯಾಖ್ಯಾಮಾತ್ಮನೀತ್ಥಮನ್ವರ್ಥಾಮಕರೋದ್ಧ್ರುವಂ ॥೨೮೮॥**

ಸ್ವಾತಂತ್ರ್ಯನಿಮಿತ್ತವಾದ ಬದ್ಧಾದಿ ನಾಮವುಳ್ಳವನೆಂದು, ತನ್ನನ್ನು ಹೇಳಿಕೊಳ್ಳುವುದರಲ್ಲಿ ಕಾರಣವನ್ನು ಹೇಳುತ್ತಾರೆ:—

ಆದೌ—ಮೊದಲಿಗೆ, ಸ್ವಸ್ಯ ಏವ—ತನಗೇ, ನಿತ್ಯಮುಕ್ತತ್ವಂ—ನಿತ್ಯಮುಕ್ತನೆಂಬುದನ್ನು, ವಕ್ಷ್ಯನ್ – ( 'ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ' ) ಎಂದು ಹೇಳಿಕೊಂಡು, ಶ್ರುತೀರಿತಾಂ—('ಸ ಬದ್ಧಃ ಸ ದುಃಖೀ', 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ) ಶ್ರುತಿಗಳಿಂದ ಹೇಳಲಾದುದನ್ನು, ಬದ್ಧಾದ್ಯಾಖ್ಯಾಂ—ಬದ್ಧ ಮೊದಲಾದ ನಾಮವನ್ನು, ಆತ್ಮನಿ—ತನ್ನಲ್ಲಿ, ಇತ್ಥಂ—ಹೀಗೆ (ಈ ಪ್ರಕಾರದಿಂದ), ಧ್ರುವಂ—ನಿಶ್ಚಯವಾಗಿಯೂ, ಅನ್ವರ್ಥಾಂ—ಶ್ರುತ್ಯನುಕೂಲವಾದ ಅರ್ಥವುಳ್ಳದ್ದನ್ನಾಗಿ, ಅಕರೋತ್—ಮಾಡಿದನು.

**ಭ್ರಾಂತತ್ವೇ ದೋಷಮೂಲತ್ವಂ ವದೇನ್ನಗುಣಮೂಲತಾಂ ।**
**ಬದ್ಧಾಖ್ಯಾಂ ಗುಣತಃ ಶಂಸಂಸ್ತದ್ಧಿಯಂ ತ್ವಗುಣೋದ್ಭವಾಂ ।**
**ಅಭಿಪ್ರೈತಿ ನ ದೋಷೋತ್ಥಾಂ ಗುಣಜನ್ಯಾ ಚ ಧೀಃಪ್ರಮಾ ॥೨೮೯॥**

'ನ ವಸ್ತುತಃ' ಎಂಬುದಕ್ಕೆ ಪರೋಕ್ತವಾದ ಮಿಥ್ಯಾತ್ವವೆಂಬರ್ಥವು ದೋಷಯುಕ್ತವೆಂದು ತೋರಿಸುತ್ತಾರೆ:—

ಭ್ರಾಂತತ್ವೇ—(ಬಂಧವು) ಭ್ರಾಂತಿಕಲ್ಪಿತವೆಂಬಲ್ಲಿ, ದೋಷಮೂಲತ್ವಂ—ದೋಷವನ್ನೇ ಕಾರಣವನ್ನಾಗಿ, ವದೇತ್—ಹೇಳಬೇಕು; ಗುಣಮೂಲತಾಂ

---

ಯನ್ನು ಸಹ, ಶ್ರೀಕೃಷ್ಣನು ಅಲ್ಲಿಯೇ ಸ್ಪಷ್ಟಗೊಳಿಸಿರುವನೆಂದು ನನ್ನ ನಿಶ್ಚಿತಾಭಿಪ್ರಾಯವಾಗಿದೆ (೨೮೭). ಮೊದಲಿಗೇ ತನಗೆ ನಿತ್ಯಮುಕ್ತತ್ವವನ್ನು ಹೇಳಿಕೊಂಡು, ಅದು ಶ್ರುತ್ಯುಕ್ತವೆಂದೂ ತೋರಿಸಿ, ಸ್ವತಂತ್ರನಿಯಾಮಕನಾದ್ದರಿಂದ, ಅನ್ಯರಲ್ಲಿ (ಜೀವರಲ್ಲಿ) ರುವ ಬದ್ಧತ್ವ ದುಃಖಿತ್ವಾದಿಗಳು ತನ್ನ ಅಧೀನಗಳಾದ್ದರಿಂದ ಬದ್ಧ, ದುಃಖೀ ಮುಂತಾದ ನಾಮಗಳಿಂದಲೂ ತಾನೇ ವಾಚ್ಯನೆಂದು, ಶ್ರುತ್ಯನುಸಾರವಾದ ಅರ್ಥವುಳ್ಳವುಗಳೆಂದು, ನಿಸ್ಸಂಶಯವಾಗಿ ಸಾಧಿಸಿರುತ್ತಾನೆ (೨೮೮). ಬಂಧವು ಭ್ರಾಂತಿಕಲ್ಪಿತವೆಂಬಲ್ಲಿ, ದೋಷವನ್ನು ಕಾರಣವನ್ನಾಗಿ ಹೇಳಬೇಕಲ್ಲದೇ, ಗುಣಮೂಲವನ್ನಲ್ಲ; ಬದ್ಧತ್ವವು 'ಗುಣತಃ'

ನ–ಗುಣವೇ ಕಾರಣವೆಂದು ಹೇಳಲಾಗದು ; ಬದ್ಧಾಖ್ಯಾಂ–ಬದ್ಧತ್ವವೆಂಬುದನ್ನು (ಬದ್ಧನೆಂದು), ಗುಣತಃ–ಗುಣದಿಂದ (ಎಂದು), ಶಂಸನ್–ಹೇಳುವವನಾಗಿ, ತದ್ಧಿಯಂ–(ಬಂಧನ ನಿಮಿತ್ತಗುಣದ ಪರಂಪರೆಯಿಂದ ಪ್ರಾಪ್ತವಾದ) ಅದರ ಬುದ್ಧಿಯನ್ನು, ಅಗುಣೋದ್ಭವಾಂ[1]– ಗುಣಜನ್ಯವಾದುದಲ್ಲವೆಂದು, ಅಭಿಪ್ರೈತಿ–('ನ ವಸ್ತುತಃ' ಎಂಬುದಕ್ಕೆ ಮಿಥ್ಯಾವೆಂದು ಅರ್ಥ ಹೇಳುವವನು, 'ಗುಣತೋ ನ ವಸ್ತುತಃ' ಎಂಬಲ್ಲಿರುವ 'ಗುಣತಃ' ಎಂಬ ಪದಕ್ಕೆ ವಿರುದ್ಧವಾದ ಅರ್ಥವನ್ನೇ) ಹೇಳುತ್ತಾನೆ ; ನ ದೋಷೋತ್ಥಾಂ–ದೋಷಜನ್ಯವೆಂದು ಹೇಳುವುದಿಲ್ಲ; ಗುಣಜನ್ಯಾ ಚ ಧೀಃ–ಗುಣಜನ್ಯವಾದ ಬುದ್ಧಿಯೇ, ಪ್ರಮಾ–ಪ್ರಮಾಣವು (ಸತ್ಯವಾದುದು–ಮಿಥ್ಯೆಯಲ್ಲ).

**ಇತ್ಥಂ ಪ್ರಮಾಯಾ ವಿಷಯಃ ಪ್ರಮಿನಂತೀತಿ ಚ ಶ್ರುತೌ ।**
**ಶ್ರುತೋ ಬಂಧಃ ಕಥಂ ಮಿಥ್ಯಾ ಸತ್ತ್ವಂ ಹಿ ಜ್ಞಾನದೋ ಗುಣಃ ॥**
**ಸಾತ್ವಿಕಾಶ್ಚ ಸುರರ್ಷ್ಯಾದ್ಯಾಸ್ತದ್ಬಂಧೋ ನ ಭ್ರಮೋದ್ಭವಃ ।**
**ಏವಂ ಚ ತದ್ವದ್ದುಃಖಾತ್ಮಾಬಂಧೋಽನ್ಯತ್ರ ಕಥಂ ಭ್ರಮಃ ॥೨೯೧॥**

---

ಎಂದು ಗುಣಮೂಲವುಳ್ಳದ್ದೆಂದು ಹೇಳಿರುವುದರಿಂದ, ಗುಣಜನ್ಯವಾದ (ಬಂಧಕವಾದ ಗುಣಪರಂಪರೆಯಿಂದ ಪ್ರಾಪ್ತವಾದ) ಬುದ್ಧಿಯನ್ನು, (ಬುದ್ಧಿಗ್ರಾಹ್ಯವಾದ ಜಗತ್ತಿಗೆ ಸಹ) ಮಿಥ್ಯೆಯೆಂದು ಹೇಳುವುದು, ಗುಣಜನ್ಯವಲ್ಲವೆಂದೇ ಹೇಳಿದಂತಾಗುತ್ತದೆ; ಮೇಲಾಗಿ ಗುಣಜನ್ಯ ಬುದ್ಧಿಯು ಪ್ರಮಾಣವು— ಯಥಾರ್ಥವನ್ನು ಗ್ರಹಿಸುತ್ತದೆ; ಇದರಿಂದ ಬಂಧದ ಸತ್ಯತ್ವವನ್ನೂ ಹೇಳಿದಂತಾಗುವುದೆಂಬ ವಿರೋಧವೂ ತಪ್ಪಿದ್ದಲ್ಲ (೨೮೯). ಗುಣಶಬ್ದಕ್ಕೆ ದೋಷಾಭಾವವೆಂಬ ಅರ್ಥವು ಯೋಗ್ಯವಾದರೂ, ಸತ್ವಾದಿ ಗುಣಪರವಾದ ಅರ್ಥವೂ ಇರುತ್ತದೆ; ಪ್ರಮೆಯು ಗುಣಮೂಲವುಳ್ಳದ್ದೆಂದು ಶ್ರುತಿಯಿಂದಲೂ ಸ್ಪಷ್ಟವಿದೆ; 'ಸತ್ವಾತ್ಸಂಜಾಯತೇ ಜ್ಞಾನಂ' ಇತ್ಯಾದಿ ಗೀತಾವಾಕ್ಯಗಳೂ ಸತ್ವ

---

[1] ತಾರ್ಕಿಕರಂತೆ, ಗುಣಜನ್ಯವಾದುದು, ಬುದ್ಧಿಯು ; ತತ್ವವಾದಿಗಳಂತೆ (ಸಿದ್ಧಾಂತಿಗಳಾದ ನಮ್ಮಂತೆ) ದೋಷಾಭಾವಾದಿ ಗುಣವಿದ್ದರೇ ಪ್ರಾಯಃ ಹುಟ್ಟುವುದೆಂಬ ಬುದ್ಧಿಯು, ಪ್ರಮಾಣವಾಗಿರುತ್ತದೆ ; ಗುಣಜನ್ಯಬುದ್ಧಿಯು ಪ್ರಮಾಣವಾದ್ದರಿಂದ, ಬದ್ಧನಿಗುಂಟಾಗುವ ಜಗತ್ತಿನ ಜ್ಞಾನವೂ ಸತ್ಯವೇ—ಮಿಥ್ಯವಲ್ಲ.

ಇತ್ಥಂ—ಹೀಗೆ (ಪೂರ್ವೋಕ್ತ ರೀತಿಯಿಂದ), ಪ್ರಮಾಯಾಃ—ಪ್ರಮೆಯ (ಯಥಾರ್ಥಜ್ಞಾನದ), ವಿಷಯಃ — ವಿಷಯವು (ಗುಣಮೂಲವುಳ್ಳದೆಂಬ ಪ್ರಮಾ ವಿಷಯವು), ಪ್ರಮಿಸಂತಿ ಇತಿ—ತಿಳಿಯಲ್ಪಡುವುದೆಂದು, ಶ್ರುತೌ—ವೇದದಲ್ಲಿ, ಶ್ರುತಂ — ಸ್ಪಷ್ಟವಾಗಿ ಉಕ್ತವಾಗಿದೆ (ಪರೋಕ್ತವಾದ ಬಂಧ ಮಿಥ್ಯಾತ್ವವು ಕೂಡುವುದಿಲ್ಲ); ಬಂಧಃ—ಬಂಧವು, ಕಥಂ—ಹೇಗೆ, ಮಿಥ್ಯಾ—ಮಿಥ್ಯೆಯಾಗುತ್ತದೆ? ಸತ್ತ್ವಂ—ಸತ್ತ್ವಗುಣವು, ಜ್ಞಾನದಃ ಗುಣಃ—ಪ್ರಮಾ ಜನಕ ಗುಣವುಳ್ಳದ್ದು (ಈ ಹಿಂದೆ 'ಗುಣ' ಶಬ್ದಕ್ಕೆ ದೋಷಾಭಾವವೆಂಬ ಅರ್ಥವನ್ನು ಹೇಳಿದ್ದರೂ, ಗುಣ ಶಬ್ದವು ಸತ್ತ್ವಾದಿಗುಣ ಪರವಾದ ಅರ್ಥವೂ ಉಳ್ಳದ್ದೆಂದು ತೋರಿಸುತ್ತಾರೆ); ಹಿ—'ಸತ್ತ್ವಾತ್ಸಂಜಾಯತೇ ಜ್ಞಾನಂ' ಎಂಬ ಗೀತಾವಾಕ್ಯದಿಂದಲೂ, ಸತ್ತ್ವಗುಣವು ಜ್ಞಾನವನ್ನುಂಟುಮಾಡುವುದೆಂಬ ಅರ್ಥವೂ, ಸಿದ್ಧವಾಗುತ್ತದೆಯಷ್ಟೆ; ಸುರರ್ಷ್ಯಾದ್ಯಾಃ—ದೇವ ಋಷಿ ಮೊದಲಾದ ಉತ್ತಮಾಧಿಕಾರಿಗಳು, ಸಾತ್ತ್ವಿಕಾಃ—ಸತ್ತ್ವಗುಣಪ್ರಧಾನರು; ತತ್—ಬ್ರಹ್ಮಾದಿ ಜ್ಞಾನಿಗಳ ಬುದ್ಧಿ ವಿಷಯವಾದ್ದರಿಂದ, ಬಂಧಃ—ಸಂಸಾರಬಂಧವು, ನ ಭ್ರಮೋದ್ಭವಃ — ಭ್ರಮಜನ್ಯವಲ್ಲ (ಭ್ರಾಂತಿಯಿಂದ ತೋರುವುದಲ್ಲ); ತದ್ವತ್ — ಬ್ರಹ್ಮಾದಿಗಳಿಗೂ ಇರುವ ಗುಣಬಂಧದಂತೆ (ಸಂಸಾರದಂತೆ), ದುಃಖಾತ್ಮಾಬಂಧಃ—ದುಃಖ ರೂಪದ ಬಂಧವು,[1] ಏವಂ ಚ—ಹೀಗೆಯೇ ಸತ್ತ್ವ

---

ಗುಣವು ಪ್ರಮಾಜನಕವೆಂದು (ಯಥಾರ್ಥಜ್ಞಾನಪ್ರದವೆಂದು) ಹೇಳುತ್ತವೆ; ಸತ್ತ್ವಗುಣಪ್ರಧಾನರಾದ ದೇವ, ಋಷ್ಯಾದಿ ಉತ್ತಮಾಧಿಕಾರಿಗಳು ಸಹ ಸತ್ಯವೆಂದೇ ಸಂಸಾರಬಂಧವನ್ನು ತಿಳಿಯುತ್ತಾರೆ; ಬ್ರಹ್ಮಾದಿಗಳಿಗೂ ಇರುವ ಬಂಧವು (ಸಂಸಾರವು), ಅನ್ಯಜೀವರಲ್ಲಿ ಹೇಗೆ ಮಿಥ್ಯೆಯಾದೀತು? ದುಃಖಾದಿ

---

1 ಬ್ರಹ್ಮಾದಿಗಳಿಗೂ ಬಂಧವುಂಟೆಂಬಲ್ಲಿ, ಬ್ರಹ್ಮನೇ ಉತ್ಪತ್ತಿಗೆ ಕಾರಣರಾದವರಲ್ಲಿ, ಎಂದರೆ ಆತನಿಂದ ಸೃಷ್ಟರಾದ ಅನ್ಯಜೀವರಿಗೆ, ಎಂಬ ಅರ್ಥವನ್ನು ತಿಳಿಯಬೇಕು; 'ಬ್ರಹ್ಮಾ ಆದಿಃ ಯೇಷಾಂ ತೇ'—ಎಂಬುವ ವ್ಯುತ್ಪತ್ತಿಯಿಂದ ಈ ಅರ್ಥವು ಸಿದ್ಧವಾಗುತ್ತದೆ; ಯದ್ಯಪಿ ಬ್ರಹ್ಮನೂ ಸಂಸಾರವುಳ್ಳವನೇ; 'ಸತ್ತ್ವ ಸತ್ತ್ವ ಮಹಾಸತ್ತ್ವ' ಇತ್ಯಾದಿ. ಮಹಾಸತ್ತ್ವ ಪ್ರಧಾನ ದೇಹವುಳ್ಳವರಾದರೂ, 'ಅಜ್ಞಾನಂ ಚ ಚತುರ್ವಾರಂ ದ್ವಿವಾರಂ ಭಯಮೇವ ಚ' ಇತ್ಯಾದಿ ಪ್ರಮಾಣ ವಾಕ್ಯಗಳು ಹೇಳುವಂತೆ, ಪರಾಧೀನರಾದ ಸಂಸಾರಿ ಜೀವರಲ್ಲಿ, ಬ್ರಹ್ಮದೇವನೂ ಸೇರುವನೆಂಬ ಲಕ್ಷಣಗಳನ್ನು ಹೇಳುತ್ತವೆ. ಈ ಶ್ಲೋಕದ ಅಭಿಪ್ರಾಯದ

ವಾದುದೇ ಸರಿ; ಅನ್ಯತ್ರ – ಇತರ ದೇವಾದಿ ಜೀವರಲ್ಲಿ, ಕಥಂ–ಹೇಗೆ, ಭ್ರಮಃ–ಭ್ರಮವಾಗುವುದು? (ಭ್ರಾಂತಿಯಲ್ಲ–ಸತ್ಯವಾದುದೇ).

**ಪ್ರಮಾತಾರೋಽಪಿ ಬಂಧಸ್ಯ ಪ್ರಮಿಣ್ವಂತಿ ನ ತೇ ಹರಿಂ ।**
**ಅತೋ ಹ್ಯವಿದ್ಯಯಾ ಬಂಧ ಇತ್ಯುಕ್ತಂ ನ ಮೃಷಾತ್ವತಃ ।**
**ಇತ್ಥಂ ಭಾಗವತೇ ಪ್ರೋಕ್ತಂ ಕೃಷ್ಣೇನೈವೋದ್ಧವಂ ಪ್ರತಿ ॥ ೯೨ ॥**

ಬಂಧಸ್ಯ–ಬಂಧದ, ಪ್ರಮಾತಾರಃ ಅಪಿ–ಜ್ಞಾನವುಳ್ಳವರಾದರೂ, ತೇ–ಅವರು (ದೈತ್ಯರು–ತಮೋಯೋಗ್ಯ ಜೀವರು), ಹರಿಂ–ಶ್ರೀಹರಿಯನ್ನು, ನ ಪ್ರಮಿಣ್ವಂತಿ – ತಿಳಿಯುವುದಿಲ್ಲ (ಕಾಣುವುದಿಲ್ಲ) (ಎಂದರೆ, ಶ್ರೀಹರಿಯ ಸರ್ವೇಶ್ವರತ್ವ, ಸರ್ವಜ್ಞತ್ವಾದಿ ವಿಷಯಕವಾದ ಪ್ರಮೆಯುಳ್ಳವರು–ಯಥಾರ್ಥ ನಿಶ್ಚಯವುಳ್ಳವರು, ಅಗುವುದಿಲ್ಲ); ಅತಃ–ಆದ್ದರಿಂದ (ದುಃಖಾದಿ ರೂಪಬಂಧದ ಜ್ಞಾನವು ನಿಯಮೇನ ಯಥಾರ್ಥವಾಗಿಯೇ ಇರುವುದರಿಂದ), ಅವಿದ್ಯಾಯಾಃ – ಅವಿದ್ಯೆಯ (ಅಜ್ಞಾನದ), ಬಂಧಃ – ಬಂಧವು, ಇತಿ – ಎಂದು, ಉಕ್ತಂ – ಹೇಳಲ್ಪಟ್ಟಿತು (ಪರಮಾತ್ಮನ ಜ್ಞಾನಾಭಾವವೆಂಬ ಬಂಧವು ಮಾತ್ರ), ನ ಮೃಷಾತ್ವತಃ – ಬಂಧವೇ ಸುಳ್ಳೆಂಬ ಕಾರಣದಿಂದಲ್ಲ; ಇತ್ಥಂ – ಹೀಗೆ,

---

ರೂಪದ ಸಂಸಾರಬಂಧವು ಮಿಥ್ಯೆಯಲ್ಲ–ಸತ್ಯವಾದುದೇ (೯೦–೯೧). ಮಿಥ್ಯಾಜ್ಞಾನಿಗಳಾದ ತಮೋಯೋಗ್ಯರೂ ಸಹ (ದೈತ್ಯರೂ) ದುಃಖಾದಿ ರೂಪದ ಬಂಧವನ್ನು ತಿಳಿಯುತ್ತಾರೆ, ಆದರೆ ಅದು ಯಾವಾತನ ಇಚ್ಛೆಯಿಂದ ತಮ್ಮನ್ನು ಬಂಧಿಸಿದೆಯೋ, ಆ ಶ್ರೀಹರಿಯನ್ನು ತಿಳಿಯುವುದೇ ಇಲ್ಲ—ಶ್ರೀ ಹರಿಯ ಸಾಕ್ಷಾತ್ಕಾರವು ಅವರಿಗೆ ಎಂದಿಗೂ ಇಲ್ಲ; ಈ ಕಾರಣದಿಂದ ಅವಿದ್ಯೆ ಯಿಂದ ಬಂಧವೆಂದು, ಶ್ರೀಕೃಷ್ಣನು ಉದ್ಧವನನ್ನು ಉದ್ದೇಶಿಸಿ, ಭಾಗವತದಲ್ಲಿ ಹೇಳಿದನಲ್ಲದೇ, ಬಂಧನವೇ ಸುಳ್ಳೆಂದು (ಮಿಥ್ಯೆಯೆಂದು) ಅಲ್ಲ (೯೨).

---

ವಿಶೇಷ ವಿವರಣೆಗಾಗಿ, ಮುಂದಿನ ೯೩ನೇ ಶ್ಲೋಕದ ಅಡಿ ಟಿಪ್ಪಣಿಯನ್ನೂ ನೋಡಿ ಕೊಳ್ಳಬೇಕಾದುದು ಅವಶ್ಯಕ; ಎರಡೂ ಶ್ಲೋಕಗಳ ವಿಸ್ತಾರವಾದ ವ್ಯಾಖ್ಯಾನವನ್ನು ಮುಂದಿನ ಶ್ಲೋಕ ಭಾಗದಲ್ಲಿ, ಶ್ರೀ ಸುರೋತ್ತಮತೀರ್ಥರು ಮಾಡಿರುವರು. ಅದರ ಸಾರಾಂಶವನ್ನು ಅಲ್ಲಿ ಸಂಗ್ರಹಿಸಲಾಗಿದೆ.

ಭಾಗವತೇ – ಶ್ರೀಭಾಗವತದಲ್ಲಿ, ಕೃಷ್ಣೇನ ಏವ – ಶ್ರೀಕೃಷ್ಣನಿಂದಲೇ, ಉದ್ಧವಂ ಪ್ರತಿ–ಉದ್ಧವನನ್ನು ಕುರಿತು, ಪ್ರೋಕ್ತಂ–ಹೇಳಲಾಗಿದೆ.[1]

**ಅಜೋಽನುಬದ್ಧಃ ಸಗುಣೈರ್ನ ವೇದ ತ್ವಾಂ ಗುಣಾತ್ಪರಂ ॥ ೨೯೩ ॥**

**ಸತ್ವಂ ರಜಸ್ತಮ ಇತಿ ಭವಂತಿ ಪ್ರಕೃತೇರ್ಗುಣಾಃ ।**
**ಏಷು ಹಿ ಪ್ರಾಕೃತಾಃ ಪ್ರೋಕ್ತಾ (ಪ್ರೋತಾ) ಆಬ್ರಹ್ಮಸ್ಥಾವರಾದಯಃ**

**ಭಗವನ್ ಜೀವಲೋಕೋಽಯಂ ಮೋಹಿತಸ್ತವ ಮಾಯಯಾ ।**
**ಅಹಂ ಮಮೇತ್ಯಸದ್ಗ್ರಾಹೋ ಭ್ರಾಮ್ಯತೇ ಕರ್ಮವರ್ತ್ಮಸು ॥ ೨೯೫**

**ಇತ್ಯಕ್ರೂರೇಣ ನಿರ್ಣೀತಃ ಕೃಷ್ಣೋ ಬಂಧೋಜ್ಝಿತಃ ಪ್ರಭುಃ ॥**
**ಜೀವಾನ್ ಸರ್ವಾನ್ ಗುಣೈರ್ಬದ್ಧಾನ್ ಮಾಯಾಬದ್ಧಾಂಶ್ಚ ಶಂಸತಾ**

ಶ್ರೀಕೃಷ್ಣನು ಉಪದೇಶಿಸಿದ ಭಾಗವತ ವಾಕ್ಯಗಳಲ್ಲಿ ಪರನು ಹೇಳುವಂತೆ ಬಂಧಮೋಕ್ಷಗಳೆರಡೂ ಒಬ್ಬ ಬ್ರಹ್ಮನಿಗೇ ಎಂಬುದಕ್ಕೂ, ಬಂಧದ

---

ಚತುರ್ಮುಖ ಬ್ರಹ್ಮನೂ ತ್ರಿಗುಣಗಳಿಂದ ಬದ್ಧನು ; ಗುಣಭಿನ್ನನೂ, ನಿಯಾಮಕತ್ವೇನ ಉತ್ತಮನೂ ಆದ (ಗುಣಾತ್ಪರನಾದ) ನಿನ್ನನ್ನು, ಸಾಕಲ್ಯೇನ

---

[1] ತಮೋಯೋಗ್ಯ ಜೀವರು, ಮಿಥ್ಯಾಜ್ಞಾನಿಗಳೇ ಆದರೂ, ದುಃಖವನ್ನು ದುಃಖವೆಂದೇ ತಿಳಿಯುತ್ತಾರಲ್ಲದೇ, ಅದನ್ನೇ ಸುಖವೆಂದು ಭ್ರಮಿಸುವುದಿಲ್ಲ ; ತಮಸ್ಸಿನಲ್ಲಿ ಸಹ, ತಮ್ಮಿಂದ ಅನುಭವಿಸಲ್ಪಡುವ ದುಃಖವು, ಸ್ವಸ್ವರೂಪಾತ್ಮಕವೆಂದಾಗಲಿ, ನಿತ್ಯವೆಂದಾಗಲಿ ತಿಳಿಯುವುದಿಲ್ಲ ; ಅದು ತಾತ್ಕಾಲಿಕವೆಂದೂ, ತಮ್ಮ ದ್ವೇಷಿಯಾದ ಶ್ರೀಹರಿಯಿಂದ ಪ್ರಾಪ್ತವಾದುದೆಂದೂ, ತಮಸ್ಸಿನಿಂದ ಹೊರಗೆ ಬಂದಾಗ, ಶ್ರೀಹರಿಗೆ ಇದಕ್ಕಾಗಿ, ಯೋಗ್ಯ ಶಾಸನ ಮಾಡುವೆವೆಂದು ಮುಂತಾಗಿ (ದುಃಖ ಪ್ರಕಾರಕ) ಮಿಥ್ಯಾಜ್ಞಾನವುಳ್ಳವರಾಗಿರುತ್ತಾರೆ. (ಬ್ರಹ್ಮಸೂತ್ರ, ಅಧ್ಯಾಯ ೩, ಪಾದ ೧, ೧೫ನೇ 'ನ ತೃತೀಯಾಧಿಕರಣ' ದಲ್ಲಿ ತಮಸ್ಸಿನಲ್ಲಿ ಸುಖಲೇಶದ ಅನುಭವವೂ ಇಲ್ಲವೆಂದು ನಿರ್ಣಯಿಸಲಾಗಿದೆ). ಅವಿದ್ಯೆಯಿಂದ ದುಃಖಾದಿರೂಪದ ಬಂಧವೆಂಬುದರಿಂದಲೇ, ಪರಮಾತ್ಮ ವಿದ್ಯಾಭಾವದಿಂದಲೇ ಬಂಧವೆಂಬ ಅರ್ಥವೂ ಲಭಿಸುತ್ತದೆ ; ಈ ಬಂಧವು ಸುಳ್ಳಲ್ಲ.

ಸತ್ವಗುಣವು ಪ್ರಮಾಜನಕವೆಂದರೆ, ಅದು ರಜಸ್ತಮೋಗುಣಗಳ ವ್ಯಾಪಾರವನ್ನು ತಡೆಗಟ್ಟುತ್ತಿರಲು, ಜ್ಞಾನಸಾಮಾನ್ಯ ಸಾಮಗ್ರಿಯಿಂದ ಯಥಾರ್ಥ ಜ್ಞಾನವು ಲಭಿಸುತ್ತದೆಂದರ್ಥ—ಯಥಾರ್ಥ ಜ್ಞಾನಕ್ಕೆ ಸತ್ವಗುಣವು ಸ್ವಯಂ ಉಪಯೋಗವಾಗುವುದಿಲ್ಲ ; ಹೀಗೆ ತಿಳಿಯದಿದ್ದರೆ ಜ್ಞಾನಪ್ರಾಮಾಣ್ಯವು ಪರತಃ ಎಂಬ ಶಂಕೆಯುಂಟಾಗಲು ಅವಕಾಶ

ಮಿಥ್ಯಾತ್ವಕ್ಕೂ ಪ್ರಾಪ್ತವಾಗುವ ಬಾಧಕಗಳನ್ನು, ಸ್ವಾಭಿಪ್ರಾಯದ ಸಾಧಕಗಳನ್ನು ನಿರೂಪಿಸಿ, ಅಕ್ರೂರಾದಿ ಉತ್ತಮ ಭಕ್ತರ ಮಾತುಗಳಿಂದಲೂ, ತಮ್ಮ ಅಭಿಪ್ರಾಯವನ್ನು ಸಮರ್ಥಿಸುತ್ತಾರೆ :—

ಗುಣೈಃ[1] – ಗುಣಗಳಿಂದ, ಅನುಬದ್ಧಃ – ಬದ್ಧನಾದ, ಸಃ ಅಜಃ – ಆ (ಜೀವೋತ್ತಮನೆಂದು) ಪ್ರಸಿದ್ಧನಾದ ಬ್ರಹ್ಮದೇವನು, ಗುಣಾತ್–ಗುಣದಿಂದ, ಪರಂ–ಭಿನ್ನನೂ (ಅದರ ನಿಯಾಮಕಸ್ವಾಮಿಯೂ) ಆದ, ತ್ವಾಂ–ನಿನ್ನನ್ನು, ನ ವೇದ–(ಪೂರ್ಣವಾಗಿ ಅಥವಾ/ಮತ್ತು ಸ್ವತಂತ್ರನಾಗಿ—ನಿನ್ನ ಅನುಗ್ರಹವಿಲ್ಲದೇ) ತಿಳಿಯನು[2] (ಅಕ್ರೂರನ ಸ್ತೋತ್ರಭಾಗದಲ್ಲಿಯೇ ಇರುವ

---

ತಿಳಿಯದವನಾಗಿರುವನು (ಅಪೂರ್ಣಜ್ಞಾನಿಯಾಗಿದ್ದಾನೆ) ; ಸತ್ವ, ರಜ, ತಮಗಳು ಪ್ರಕೃತಿಯಿಂದ ಉದ್ಭವಿಸಿದ ಗುಣಗಳು; ಬ್ರಹ್ಮಾದಿ ಸ್ಥಾವರಾಂತ (ತೃಣಾಂತ) ಜೀವರೆಲ್ಲರೂ, ಪ್ರಾಕೃತರೆಂದು ಹೇಳಲ್ಪಡುವರು ; ಈ ಎಲ್ಲರೂ

---

1 ಚತುರ್ಮುಖ ಬ್ರಹ್ಮನು ಪ್ರಾಕೃತ ದೇಹವುಳ್ಳವನು ; ಅದು ಮಹತ್ತತ್ವಾತ್ಮಕವಾದ ದೇಹವೇ ಆಗಿದೆ ; ಮಹತ್ತತ್ವವು ಸತ್ವಗುಣ ಪ್ರಚುರವಾದದ್ದಾದರೂ, ರಜತಮೋಗಳ ಅತ್ಯಲ್ಪ ಅಂಶಗಳು ಮಿಶ್ರಣವುಳ್ಳದ್ದಾಗಿದೆ ; ಈ ಗುಣಗಳು, ಆತನ ಮೇಲೆ ತಮ್ಮ ಸಹಜ ಪ್ರಭಾವವನ್ನು ಬೀರುವಲ್ಲಿ ಅಸಮರ್ಥಗಳು.

2 ಇಲ್ಲಿ ಪ್ರಸಕ್ತವಾದ ಅಕ್ರೂರ ಸ್ತುತಿರೂಪದ ಭಾಗವತ ಶ್ಲೋಕವು ಹೀಗಿದೆ:— 'ಅಜೋಽನುಬದ್ಧಃ ಸಗುಣೈ ರಜಾಯಾ ಗುಣಾತ್ಪರಂ ವೇದ ನ ತೇ ಸ್ವರೂಪಂ ||'—ಇದರ ಅರ್ಥವೇ ಪ್ರಸಕ್ತ ಶ್ಲೋಕದ ಅರ್ಥವಾಗಿದೆ.

---

ವಾಗುತ್ತದೆ ; ಜ್ಞಾನವು ಸ್ವತಃ ಪ್ರಮಾಣವು ; ಅದಕ್ಕೆ ಪರತಃ (ಅನ್ಯಕಾರಣಗಳಿಂದಲೇ) ಅಪ್ರಾಮಾಣ್ಯವು.

ಬಂಧ ಮಿಥ್ಯಾತ್ವರೂಪದ ಅದ್ವೈತಿಗಳ ಪ್ರಕ್ರಿಯೆಯು ಈವರೆಗೆ ಸುದೀರ್ಘವಾಗಿ ಪ್ರಸಕ್ತವಾಗಿರುವುದಷ್ಟೆ; ಈ ಸಂಬಂಧದ ಭಾಗವತ ಶ್ಲೋಕವು ಹೀಗಿದೆ : 'ಬದ್ಧೋ ಮುಕ್ತ ಇತಿ ಹ್ಯಾಖ್ಯಾ ಗುಣತೋ ಮೇ ನ ವಸ್ತುತಃ | ಗುಣಸ್ಯ ಮಾಯಾಮೂಲತ್ವಾತ್ ನ ಮೇ ಮೋಕ್ಷೋ ನ ಬಂಧನಂ' ; ಮಾಯಾವಾದಿಯು ಇದರ ಅಪವ್ಯಾಖ್ಯಾನದಿಂದ ಬಂಧ ಮಿಥ್ಯಾತ್ವವನ್ನು ಸಾಧಿಸಲು ಯತ್ನಿಸುತ್ತಾನೆ ; ಅದರ ನಿರಾಕರಣೆಗಾಗಿ, ಈ ಭಾಗವತ ಶ್ಲೋಕದ ನಾನಾರ್ಥಗಳನ್ನು ವಿವೇಚಿಸಿ, ಮಿಥ್ಯಾತ್ವವು ಅದರ ತಾತ್ಪರ್ಯವಲ್ಲವೆಂದು ನಿರ್ಧರಿಸುತ್ತಾರೆ ;

ಬೇರೆ ಶ್ಲೋಕಗಳನ್ನು ಉದಾಹರಿಸುತ್ತಾರೆ); ಸತ್ತ್ವಂ ರಜಸ್ತಮ ಇತಿ–ಸತ್ತ್ವ, ರಜ, ತಮಗಳೆಂಬ, ಪ್ರಕೃತೇಃ–ಪ್ರಕೃತಿಯ, ಗುಣಾಃ–ಗುಣಗಳು, ಭವಂತಿ–ಉಂಟಾಗುತ್ತವೆ (ಪ್ರಕೃತಿಯೇ ತ್ರಿಗುಣಾತ್ಮಕವೆಂದು ಹೇಳಲ್ಪಡುವುದಾದರೂ,

---

ಈ ಗುಣಗಳಿಂದ (ಗುಣಕೃತ ದೇಹಗಳಿಂದ) ಬಂಧಿತರೇ ಆಗಿರುವರು; ಹೇ ಶ್ರೀಕೃಷ್ಣ! ಈ ಜೀವಲೋಕವೆಲ್ಲವೂ (ಜಗತ್ತಿನಲ್ಲಿರುವ ಜೀವರೆಲ್ಲರೂ) ನಿನ್ನ

---

(೧) ಸುಖದುಃಖಾದಿ ವಿಷಯದಲ್ಲಿ ಸಾಕ್ಷಿಜ್ಞಾನಕ್ಕೆ ಯಥಾರ್ಥ ನಿಯಮವಿದೆ; ಆದ್ದರಿಂದ ಪ್ರಮಾವಿಷಯವಾದ ದುಃಖರೂಪದ ಬಂಧಕ್ಕೆ ಮಿಥ್ಯಾತ್ವವಿಲ್ಲ;

(೨) ಗುಣವು, (ಸತ್ತ್ವಾದಿಗುಣವು) ಮಾಯಾ, ಎಂದರೆ, ಪ್ರಕೃತಿಯೇ ಮೂಲವಾಗಿ ವುಳ್ಳದ್ದು; ನಿರ್ಮಾಯನಾದ ನನಗೆ, ಗುಣದಿಂದಾಗುವ, ಬಂಧಮೋಕ್ಷಗಳು ಇಲ್ಲ; ಮುಕ್ತಿಯೋಗ್ಯ ಮತ್ತು ತಮೋಯೋಗ್ಯಜೀವರಂತೆ, ಬದ್ಧ, ಮುಕ್ತ ಎಂಬ ನಾಮವೂ (ಹೆಸರೂ) ನನಗಿಲ್ಲ; ಅಥವಾ ಸುಖದುಃಖ ಮಿಶ್ರಸ್ವರೂಪರಾದ ಮಧ್ಯಮವರ್ಗದ ಜೀವರಂತೆ ಸಹ ನಾನು ಬದ್ಧನೂ ಮುಕ್ತನೂ ಅಲ್ಲ; ಆದ್ದರಿಂದ, ನಾನು ನಿತ್ಯಮುಕ್ತನು—ಜೀವರು ಮಾತ್ರ ಬಂಧಮೋಕ್ಷಕ್ಕೆ ಪಾತ್ರರು;

(೩) ನನ್ನ ಅಲೌಕಿಕವಾದ ಜ್ಞಾನಾನಂದಾದಿ ಗುಣಗಳಿಗೆ ಮಾಯಾ ಮೂಲತ್ವವಿಲ್ಲ; (ಮಾಯಾ, ಅಮೂಲತ್ವಾತ್ ಎಂದು ಪದಚ್ಛೇದ); ನನ್ನ ಈ ಗುಣಗಳು ಅಪ್ರಾಕೃತ ಗಳಾಗಿವೆ; ಕೃಷ್ಣಾದಿ ಅವತಾರಗಳಲ್ಲಿ ದುರ್ಜನರಿಗೆ ನನ್ನಲ್ಲಿ ತೋರುವ ದುರ್ಗುಣ (ದುಃಖಮೋಹಾದಿ) ಗಳು, 'ನಿರವದ್ಯೋ ನಿರನಿಷ್ಟ' ಇತ್ಯಾದಿ ಶ್ರುತಿವಿರುದ್ಧಗಳಾದ್ದರಿಂದ ಭ್ರಾಂತಿ (ಮಾಯಾ) ಮೂಲಕವೇ ಆದ್ದರಿಂದ, ವಿದ್ಯಮಾನವಾದ ಜ್ಞಾನಾನಂದಾದಿಗುಣಗಳು ಬಂಧಕವಲ್ಲ ಮತ್ತು ಬಂಧಕಗಳೆಂಬ ದುಃಖಮೋಹಾದಿಗಳು ನನ್ನಲ್ಲಿಲ್ಲ; ಈ ಕಾರಣದಿಂದ ಸಹ ಗುಣನಿಮಿತ್ತವೆಂಬ ಬಂಧವಿಲ್ಲ; ನನ್ನ ಜ್ಞಾನಾನಂದಾದಿ ಗುಣಗಳು ಎಂದೂ ನನ್ನನ್ನು ಬಿಡತಕ್ಕವುಗಳಲ್ಲವಾದ್ದರಿಂದ (ಗುಣತಃ) ಗುಣದಿಂದ ಮೋಕ್ಷವೂ ಇಲ್ಲ; ಇಲ್ಲದಿದ್ದರೂ ಇದ್ದಂತೆ ತೋರಿದ ದುಃಖಾದಿ ದುರ್ಗುಣಗಳ ನಾಶವೇ ಮೋಕ್ಷವೆನ್ನಲೂ ಬರುವುದಿಲ್ಲ; ನಾಶದ (ಪ್ರಧ್ವಂಸದ) ಪ್ರತಿಯೋಗಿಯು ಸತ್ತ್ವಯುಕ್ತವಾದುದೆಂಬ ನಿಯಮವಿರುವುದರಿಂದ, ಪ್ರತಿಯೋಗಿ ದುರ್ಗುಣಗಳು ನನ್ನಲ್ಲಿಲ್ಲದಕಾರಣ, ಮೋಕ್ಷವೂ ಇಲ್ಲ.

(೪) ಸರ್ವಾಂತರ್ಯಾಮಿಯಾಗಿರುವುದರಿಂದ, ದುಃಖಾದಿಗುಣಗಳು ನನ್ನಲ್ಲಿರ ದಿದ್ದರೂ, ದುಃಖಾದಿಗಳ ಮಧ್ಯೆ ನಾನು ಇರುವುದರಿಂದ, ನನಗೆ ಆ ಗುಣಗಳಿಂದ ಮೋಕ್ಷ ವುಂಟೆಂದು ತಿಳಿಯುವುದೂ ಯುಕ್ತವಲ್ಲ; ಸರ್ವತ್ರವಿದ್ದರೂ ಯಾವ ಗುಣಗಳ ಲೇಪವಿಲ್ಲ ದಂತೆ, ನಿತ್ಯನಿರ್ಲಿಪ್ತನಾಗಿರುವುದರಿಂದ, 'ಗುಣತಃ ಮೋಕ್ಷವಿಲ್ಲ';

ಮೂಲಪ್ರಕೃತಿಯ ಅತ್ಯಲ್ಪ ವಿಕಾರದಿಂದ ಹುಟ್ಟಿದವೂ—ಪ್ರಕಟವಾದವೂ, ಆಗಿವೆ) ; ಆ ಬ್ರಹ್ಮಸ್ಥಾವರಾದಯಃ–ಬ್ರಹ್ಮಾದಿ ಸ್ಥಾವರಾಂತ ಜೀವರೆಲ್ಲರೂ,

---

ಮಾಯೆಯಿಂದ (ನಿನ್ನ ಇಚ್ಛೆಯಿಂದ ಬಂಧಿಸಿರುವ ಪ್ರಕೃತಿಯಿಂದ) ಮೋಹಿತ ವಾದ ಬುದ್ಧಿಯುಳ್ಳವರು (ಅಜ್ಞಾನವಶರಾಗಿದ್ದಾರೆ); ಅಹಂ ಮಮಕಾರ

---

(೫) 'ವಸ್ತುತಃ ನ ಬಂಧಃ' ಎಂಬಲ್ಲಿ, ವಸ್ತು ಶಬ್ದ ವಾಚ್ಯವಾದುದು, ಮಹದ ಹಂಕಾರಾದಿ ೨೪ ತತ್ವಗಳು ಮತ್ತು ಅವೇ ಉಪಾದಾನವಾಗಿವುಳ್ಳ (ಅವುಗಳಿಂದ ರಚಿತ ವಾದ ದೇಹಾದಿ ವಸ್ತುವಿನ, ಬಂಧವಿಲ್ಲ ; ಸರ್ವದೇಹಗಳಲ್ಲಿ ಸ್ಥಿತನಾದ ನನಗೆ, ಜನನ ಮರಣ ದುಃಖಾದಿರೂಪ ಸಂಸಾರವೂ ನನಗಿಲ್ಲ ; ಗುಣವು ಮಾಯಾಮೂಲವೂ—ನನ್ನಲ್ಲಿ ಮಾಯೆಯಿಲ್ಲ ; ಮಾಯಾಪದವಾಚ್ಯವಾದ ಪ್ರಕೃತಿ ವಿಕಾರಗಳಾದ ಮಹದಾದಿ ತತ್ವಗಳೇ ದೇಹಗಳು ; ಮತ್ತು ನನ್ನಲ್ಲಿರುವ ಜ್ಞಾನಾನಂದಾದಿಗಳಿಗೆ ಪ್ರಕೃತಿಮೂಲವಿಲ್ಲ—ಅಪ್ರಾಕೃತ ಗಳು ; ಆದ್ದರಿಂದ ಗುಣದಿಂದ ಅಥವಾ ವಸ್ತುತಃ ನನಗೆ (ಯಾವ ಪ್ರಕಾರದಿಂದಲೂ) ಬಂಧವೆಂಬುದಿಲ್ಲ ; ಈ ಮಾಯಾಮೂಲವಾದ ದೇಹನಿಮಿತ್ತಕ ದುಃಖಾದಿಗಳನ್ನು ಜೀವರು ಮಾತ್ರ ಭೋಗಿಸುವವರೆಂದೂ, ನನಗೆ ಅವುಗಳ ಭೋಗವಿಲ್ಲೆಂದೂ 'ದ್ವಾಸುಪರ್ಣಾ–ಅನಶ್ನನ್ನಭಿಚಾಕಶೀತಿ', ಎಂಬ ಶ್ರುತಿಯು ಸ್ಪಷ್ಟವಾಗಿ ಹೇಳುತ್ತದೆ.

(೬) ಹೀಗೆ ವಸ್ತುತಃ ಮತ್ತು ಗುಣತಃ, (ಎಂದರೆ ದೇಹಾದಿ ಮತ್ತು ದುಃಖಾದಿ) ಗಳಿಂದ, ನನಗೆ ಬಂಧವಾಗಲಿ, ಬಂಧಧ್ವಂಸವಾಗಲಿ (ಬಂಧಮೋಕ್ಷಗಳು) ಇಲ್ಲದಕಾರಣ, ನಾನಾದೇಹಗಳಲ್ಲಿರುವ ನಾನೂ ನಿತ್ಯಮುಕ್ತನೇ ಆಗಿರುವೆನು ; ಜೀವನು ದೇಹಾದಿ ನಿಮಿತ್ತ ದುಃಖವನ್ನು ಮುಕ್ತಿಯಲ್ಲಿ ಸಹ ಅಸ್ವಾತಂತ್ರ್ಯ ಅಪೂರ್ಣತ್ವಾದಿಗಳನ್ನು ಅನುಭವಿಸು ವುದರಿಂದ, ನಿತ್ಯಬದ್ಧನೇ ಆಗಿದ್ದಾನೆ ; ಹೀಗೆ ಅರ್ಥವನ್ನು ತಿಳಿಯುವುದು, 'ನಿತ್ಯಬದ್ಧೋ ನಿತ್ಯಮುಕ್ತ ಏಕ ಏವೇತಿ ಮೇ ಮತಿಃ' ಎಂಬ ಹಿಂದಿನ, ಉದ್ಧವನ ಪ್ರಶ್ನೆಗೆ ಸಂಗತವಾಗು ತ್ತದೆ.

(೭) 'ಗುಣತಃ ಮೇ', ನನ್ನ ಜ್ಞಾನಾನಂದಾದಿಗುಣಗಳಿಂದ, ಬದ್ಧ ಮತ್ತು ಮುಕ್ತ ನೆಂಬ ನಾಮವಿಲ್ಲ ; 'ವಸ್ತುತಃ ನ'—ನನ್ನ ದೇಹ (ಚತುರ್ಭುಜಾದಿಯುಕ್ತದೇಹ), ಗೇಹ (ವೈಕುಂಠಾದಿವಾಸಸ್ಥಾನ), ಭಾರ್ಯಾ (ಲಕ್ಷ್ಮ್ಯಾದಿ ಸ್ತ್ರೀಯರು) ಗಳಿಂದ ಸಹ ಯಾವ ಬಂಧಮೋಕ್ಷಗಳೂ ನನಗಿಲ್ಲ ; ಅಲ್ಲಿಯೂ ಹೇತುವಾದ ಮಾಯಾಮೂಲತ್ವವು, ನನ್ನ ಗುಣಾದಿಗಳಿಗಿಲ್ಲ ; ಇವುಗಳು 'ಮಾಯಾ ಅಮೂಲತ್ವಾತ್', ಪ್ರಾಕೃತಗಳಲ್ಲವಾದ್ದರಿಂದ, ಅವು ಬಂಧಕಗಳಲ್ಲ ; ಶ್ರುತಿ ಸ್ಮೃತಿಗಳಲ್ಲಿ ನನ್ನ ಗುಣಾದಿಗಳು ಅಪ್ರಾಕೃತಗಳೆಂದು ಪ್ರಸಿದ್ಧವಾಗಿವೆ.

(೮) ಜೀವನಿಗಾದರೋ, ಸಂಸಾರವೆಂದು ಸರ್ವಾಭಿಮತವಾದ ದೇಹ ಗೇಹ-ಭಾರ್ಯಾದಿಗಳಿಂದ ಸಂಭವಿಸುವ ಅನಿತ್ಯ ಜ್ಞಾನಸುಖಾದಿಗಳಿಂದಲೂ, ಭಯದುಃಖಾದಿ

ಏಷು ಹಿ–ಈ ತ್ರಿಗುಣಗಳಲ್ಲಿಯೇ (ಇರುವರು—ಗುಣತ್ರಯಬದ್ಧರೇ ಆಗಿರುವ ರಾದ್ದರಿಂದ), ಪ್ರಾಕೃತಾಃ – ಪ್ರಾಕೃತರೆಂದು (ಬದ್ಧರೆಂದು), ಪ್ರೋಕ್ತಾಃ – ಹೇಳಲ್ಪಡುವರು ; ಅಥವಾ, ಪ್ರಾಕೃತಾಃ–ಪ್ರಾಕೃತರಾದ ಬ್ರಹ್ಮಾದಿಗಳು, ಪ್ರೋತಾಃ – ಬದ್ಧರಾಗಿರುವರು, ಭಗವನ್ – ಹೇ ಶ್ರೀಕೃಷ್ಣ !, ಅಯಂ – ಈ (ಪ್ರತ್ಯಕ್ಷಸಿದ್ಧವಾದ), ಜೀವಲೋಕಃ–ಜೀವಲೋಕವು (ಜೀವರಾಶಿಯು), ತವ ಮಾಯಯಾ–ನಿನ್ನ ಅಧೀನವಾದ ಪ್ರಕೃತಿಯಿಂದ, ಮೋಹಿತಃ–ಮೋಹಿತ ವಾಗಿದೆ (ಅಜ್ಞಾನಬಂಧಕ್ಕೆ ಒಳಗಾಗಿದೆ) ; ಅಹಂ ಮಮೇತಿ–ನಾನು ನನ್ನದೆಂಬ,

---

ರೂಪದ ಅನ್ಯಥಾ ಜ್ಞಾನವಶರಾಗಿ, ಕರ್ಮಮಾರ್ಗದಲ್ಲಿ (ಕರ್ಮಾನುಸಾರ ಪ್ರಾಪ್ತವಾಗುವ ನಾನಾ ಯೋನಿಗಳಲ್ಲಿ ಸುತ್ತುತ್ತ) ಸಂಸಾರದಲ್ಲಿ ಸುತ್ತುತ್ತ ಲಿರುವರು ; ಹೀಗೆಂದು ಭಕ್ತನಾದ ಅಕ್ರೂರನು ಜೀವರೆಲ್ಲ ಸಂಸಾರದಲ್ಲಿ ಬಂಧಿತ ರೆಂದೂ, ಸ್ವತಂತ್ರ ಪ್ರಭುವಾದ ಶ್ರೀಕೃಷ್ಣನೊಬ್ಬನೇ ಈ ಬಂಧವು ಯಾವ

---

ಗಳಿಂದಲೂ, ಬಂಧವೂ, ಈಶ್ವರೇಚ್ಛೆಯಿಂದ (ನನ್ನ ಪ್ರಸನ್ನತೆಯಿಂದ) ಮೋಕ್ಷವೂ ಉಂಟು ; – ಈ ಎಲ್ಲ ಗುಣಗಳೂ ಮಾಯಾಮೂಲಗಳೇ (ಪ್ರಕೃತಿ ಮೂಲಗಳೇ) ಆಗಿವೆ ; 'ಪ್ರಕೃತೇಶ್ಚ ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಪುರುಷಃ ಪ್ರಕೃತೇಃ ಪರಃ'– ಎಂದು ಹೇಳುವ ಭಾಗವತ ವಾಕ್ಯದಿಂದ—ಪ್ರಕೃತಿಯಿಂದ ಉಂಟಾದ ಅಜ್ಞಾನಾದಿ ಮಾಯೆಯನ್ನು, ಜ್ಞಾನ ಶಕ್ತಿಯಿಂದ ಪರಿಹರಿಸಿಕೊಂಡು, ಪ್ರಕೃತಿಯಿಂದ ಭಿನ್ನನಾದ ಜೀವಚೇತನನು ಮುಕ್ತನಾಗುವ ನೆಂದು, ತಿಳಿಯುವುದರಿಂದ, ಬಂಧಮೋಕ್ಷಗಳು, ಜೀವನಿಗುಂಟೆಂದು ಸಿದ್ಧವಾಗುತ್ತದೆ ; ಇದೇ ಬಂಧಮೋಕ್ಷಗಳು ಯಾರಿಗೆಂಬುದರ ಉತ್ತರವು,

(೯) 'ಮೇ'—ಎಂಬುದಕ್ಕೆ, ನನ್ನ ಭಕ್ತನಿಗೆ, ಎಂಬರ್ಥವನ್ನು ತಿಳಿದು, ಮುಕ್ತಿ ಯೋಗ್ಯನಾದ ಜೀವನು ಪ್ರಕೃತಿ ಬಂಧವುಳ್ಳವನಾದರೂ, ಅಂತ್ಯದಲ್ಲಿ (ಬಂಧಧ್ವಂಸವೂ) ಮೋಕ್ಷವೂವುಳ್ಳವನೆಂದೂ, ಇದೇ ಶ್ಲೋಕದಿಂದ ಸೂಚಿತವಾಗುತ್ತದೆ ; ಬಂಧಕ ವಸ್ತು ಗಳಿಂದ ಸಹ ಮುಕ್ತನಾಗುತ್ತಾನೆಂದೂ ಸೂಚಿತವು, ಮೊದಲು ಬಂಧವೂ ನಂತರ ಮೋಕ್ಷವೂ ಎಂಬ ಕ್ರಮವನ್ನು ತಿಳಿಯಬೇಕು ;

(೧೦) ನಿತ್ಯಮುಕ್ತನಿಗೂ, ಬಂಧಮೋಕ್ಷಗಳಿರುವ ಅಲ್ಪ ಜೀವನಿಗೂ ಐಕ್ಯವು ಸರ್ವಥಾ ಯುಕ್ತವಾಗುವುದಿಲ್ಲ ; ಮುಕ್ತಿಯೋಗ್ಯ ಜೀವನಿಗೇ ಹೀಗಿರಲು, ಸದಾ ಅನಿಷ್ಟ ರೂಪ ದುಃಖಭೋಗವುಳ್ಳ, ಮಧ್ಯಮಾಧಮ ಜೀವರಿಗೆ ಐಕ್ಯವು ಹೇಗೆ ಸಿದ್ಧಿಸುತ್ತದೆ? (ಇಲ್ಲವೆಂದು ಕೈಮುತ್ಯದಿಂದ ಸಿದ್ಧವಾಗುತ್ತದೆ) ; ನಿತ್ಯಬದ್ಧೋ ನಿತ್ಯಮುಕ್ತ ಏಕ ಏವೇತಿ ಮೇ ಮತಿಃ' ಎಂಬ ಉದ್ಧವನ ಪ್ರಶ್ನೆಗೆ ಇದೇ ಉತ್ತರವು.

ಅಸದ್ಗ್ರಹಃ – ಅನ್ಯಥಾಬುದ್ಧಿಯುಳ್ಳದ್ದಾಗಿ, ಕರ್ಮವರ್ತ್ಮಸು – ಕರ್ಮ ಮಾರ್ಗದಲ್ಲಿ (ಕರ್ಮಾನುಸಾರ ಲಭಿಸುವ ದೇಹಗಳಲ್ಲಿ), ಭ್ರಾಮ್ಯತೇ–ಸುತ್ತು ತ್ತದೆ;[1] ಇತಿ–ಹೀಗೆಂದು, ಪ್ರಭುಃ–ಪ್ರಭುವಾದ, ಕೃಷ್ಣಃ–ಶ್ರೀಕೃಷ್ಣನು, ಬಂಧೋಜ್ಝಿತಃ – ಬಂಧರಹಿತನೆಂದು, ಸರ್ವಾನ್–ಎಲ್ಲ, ಜೀವಾನ್–ಜೀವ ರನ್ನೂ, ಗುಣೈಃ–ಸತ್ತ್ವಾದಿ ಗುಣಗಳಿಂದ, ಬದ್ಧಾನ್–ಬದ್ಧರನ್ನಾಗಿಯೂ, ಚ–ಮತ್ತು, ಮಾಯಾಬದ್ಧಾನ್ – (ಭಗವದಿಚ್ಛೆಯಿಂದಲೇ) ಅವಿದ್ಯಾಬದ್ಧ ರನ್ನಾಗಿಯೂ, ಶಂಸತಾ – ಸ್ತುತಿಸುವ, ಅಕ್ರೂರೇಣ – (ಭಕ್ತಶ್ರೇಷ್ಠನಾದ) ಅಕ್ರೂರನಿಂದಲೂ, ನಿರ್ಣೀತಃ–ನಿಶ್ಚಯಿಸಲ್ಪಟ್ಟಿರುವನು (ಜೀವರು ಪ್ರಸಿದ್ಧ ವಾದ ಅಸ್ವಾತಂತ್ರ್ಯಾದಿಗಳಿಂದ, ಮುಕ್ತಾಮುಕ್ತ ಅವಸ್ಥೆಗಳಲ್ಲಿ ಸಹ ಬದ್ಧ ರೆಂದೂ, ಶ್ರೀಕೃಷ್ಣನು ನಿತ್ಯಮುಕ್ತನೆಂದೂ ನಿರ್ಣಯಿಸಲ್ಪಟ್ಟಿದೆ.).

**ಮಾಯಾಮಯೋಽಯಂ ಗುಣಸಂಪ್ರವಾಹಸ್ತೇ ನ ವಿದ್ಯತೇ ।**
**ಇತಿ ಶಕ್ರೇಣ ಕಥಿತಂ ಕೃಷ್ಣಂ ಪ್ರತ್ಯೇವ ಸಾದರಂ ॥ ೨೯೭ ॥**

ಭಾಗವತದ ಬೇರೆ ವಾಕ್ಯಗಳನ್ನೂ ಉದಾಹರಿಸುತ್ತಾರೆ :—

ಅಯಂ–ಈ (ಜೀವರಲ್ಲಿ ಕಂಡುಬರುವ), ಮಾಯಾಮಯಃ–ಪ್ರಾಕೃತ ಬಂಧವು, ಗುಣಸಂಪ್ರವಾಹಃ–ಆ ನಿಮಿತ್ತವಾದ ಗುಣಪ್ರವಾಹವು, ತೇ– ನಿನಗೆ, ನ ವಿದ್ಯತೇ–ಇರುವುದಿಲ್ಲ (ಅಜ್ಞಾನಮೂಲವಾದ ಬಂಧವು, ಸರ್ವಜ್ಞ ನಾದ ನಿನ್ನಲ್ಲಿ ಇರಲು ಅವಕಾಶವೇ ಇಲ್ಲ); ಇತಿ–ಹೀಗೆಂದು, ಕೃಷ್ಣಂ ಪ್ರತಿ– ಶ್ರೀಕೃಷ್ಣನನ್ನು ಉದ್ದೇಶಿಸಿ, ಶಕ್ರೇಣ ಏವ – ದೇವಶ್ರೇಷ್ಠನಾದ ಇಂದ್ರ

---

ಕಾಲಕ್ಕೂ ಇಲ್ಲದವನೆಂದು ಸ್ತುತಿಸಿ, ಜೀವರೇ ಪ್ರಾಕೃತಗುಣಗಳಿಂದ ಬದ್ಧರಾಗಿ ಸಂಸಾರದಲ್ಲಿ ಸುತ್ತುತ್ತಲಿದ್ದು, ಮುಕ್ತರಾದ ನಂತರ ಸಹ ಪರಾಧೀನತ್ವ (ಅಸ್ವಾತಂತ್ರ್ಯ, ಅಪೂರ್ಣತ್ವಾದಿಗಳಿಂದ) ದಿಂದ ಬದ್ಧರೇ ಎನಿಸುವವರಾಗಿ, ನಿತ್ಯ ಬದ್ಧರೆಂದೂ, ಶ್ರೀಕೃಷ್ಣನೇ ನಿತ್ಯಮುಕ್ತನೆಂದೂ ನಿರ್ಣಯಿಸಿದ್ದಾನೆ (೨೯೩–೨೯೬). ಸ್ವರ್ಗಾಧಿಪತಿಯಾದ ದೇವೇಂದ್ರನೂ ಶ್ರೀಕೃಷ್ಣನನ್ನು, ಪ್ರಾಕೃತಬಂಧವೂ, ಅದರ ಕಾರಣವಾದ ತ್ರಿಗುಣಪ್ರವಾಹದ ಸಂಪರ್ಕವೂ

---

1 ೨೯೪–೨೯೫ನೇ ಎರಡೂ, ಅಕ್ರೂರ ಸ್ತುತಿಯಲ್ಲಿರುವ ಮೂಲಭಾಗವತ ಶ್ಲೋಕ ಗಳೇ ಆಗಿರುತ್ತವೆ.

ನಿಂದಲೇ, ಸಾದರಂ—ಆದರಪೂರ್ವಕವಾಗಿ (ಹೇತುಪೂರ್ವಕ ಬಂಧನಿಷೇಧವು), ಕಥಿತಂ—ಹೇಳಲ್ಪಟ್ಟಿದೆ.

**ಪ್ರಾಗುಕ್ತವಾಕ್ಯತೋಽಪಿ ದ್ವೌ ಮುಕ್ತಾಮುಕ್ತೌ ಪ್ರಸಾಧಿತೌ ॥೨೯೮॥**

ಪ್ರಾಗುಕ್ತವಾಕ್ಯತಃ ಅಪಿ—ಹಿಂದೆ ನಿರೂಪಿಸಲಾದ ('ಸುಪರ್ಣಾವೇತೌ' ಇತ್ಯಾದಿ) ವಾಕ್ಯದಿಂದಲೂ, ಮುಕ್ತಾಮುಕ್ತೌ—ಮುಕ್ತಾಮುಕ್ತರೆಂಬ (ಮುಕ್ತ ಮತ್ತು ಬದ್ಧರೆಂಬ), ದ್ವೌ—ಇಬ್ಬರು (ಚೇತನರು), ಪ್ರಸಾಧಿತೌ—(ಯುಕ್ತಿ ಯುಕ್ತವಾಗಿ) ಸಾಧಿಸಲ್ಪಟ್ಟಿರುತ್ತಾರೆ.

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೨೯೯ ॥**
**ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ॥ ೩೦೦ ॥**
**ಇತಿ ಕೃಷ್ಣೇನ ಗೀತಾಯಾಂ ಕರ್ಮಬದ್ಧತ್ವಮಾತ್ಮನಃ ।**
**ಜೀವಾನಾಂ ಗುಣಬದ್ಧತ್ವಂ ಚೋಕ್ತಂ ವಾಕ್ಯದ್ವಯೇನ ಹಿ ॥ ೩೦೧ ॥**

---

ಇಲ್ಲವೆಂದೇ ಸ್ತುತಿಸಿದ್ದಾನೆ; ಹೀಗೆ ಹೇತುನಿರೂಪಣಪೂರ್ವಕ (ಯುಕ್ತಿ ಯುಕ್ತವಾಗಿ) ಶ್ರೀಕೃಷ್ಣನಿಗೆ ಬಂಧನಿಷೇಧವನ್ನು ಮಾಡಿರುವುದರಿಂದ, ಸರ್ವಜ್ಞನಾದ ಶ್ರೀಕೃಷ್ಣನಿಗೆ ಅಜ್ಞಾನ ನಿಮಿತ್ತವಾದ ಬಂಧಕ್ಕೆಲ್ಲಿ ಅವಕಾಶ ವಿದೆ?) ಸರ್ವಥಾ ಇಲ್ಲವೆಂದು ಸಿದ್ಧವಾಗುತ್ತದೆ) (೨೯೭). ಈ ಹಿಂದೆ ನಿರೂಪಿಸಿದ 'ಸುಪರ್ಣಾವೇತೌ' ಎಂಬ ವಾಕ್ಯದಿಂದ ಮುಕ್ತ ಮತ್ತು ಬದ್ಧ ರೆಂಬ ಎರಡು ವಿಧದ ಚೇತನರು ಸಾಧಿಸಲ್ಪಟ್ಟಿರುತ್ತಾರಷ್ಟೆ (೨೯೮). ಶ್ರೀ ಕೃಷ್ಣನು ಗೀತೆಯಲ್ಲಿ ಸಹ ತಾನೇ ನಿತ್ಯಮುಕ್ತನೆಂದು ಘೋಷಿಸಿರುತ್ತಾನೆ; 'ಹೇ ಅರ್ಜುನ! ತ್ರಿಗುಣನಿರ್ಮಿತ ದೇಹದಿಂದ ಸಂಭವಿಸುವ ನಾನಾ ವಿಧ ಕರ್ಮಗಳಲ್ಲಿ ಉದಾಸೀನನಂತಿರುವ, ಆಸಕ್ತಿರಹಿತವಾದ, ನನ್ನನ್ನು ಅವು ಬಂಧಿಸುವುದಿಲ್ಲ (ಅವುಗಳ ಬಂಧವು—ಫಲಲೇಪವು ನನಗಿಲ್ಲ); ಸತ್ವ, ರಜ, ತಮಗಳೆಂಬ ಗುಣಗಳು ಪ್ರಕೃತಿಯ ವಿಕಾರಗಳು; ಅವುಗಳಿಂದ ರಚಿತವಾದ ದೇಹದಲ್ಲಿರುವ, ನಿತ್ಯನೂ, ನಿರ್ವಿಕಾರಸ್ವರೂಪನೂ ಆದ ಜೀವನನ್ನು, ಈ ಗುಣಗಳು ಬಂಧಿಸುತ್ತವೆ—ನನ್ನನ್ನಲ್ಲ; ಹೀಗೆಂದು, ಶ್ರೀಕೃಷ್ಣನು ತನಗೆ

ಗೀತಾವಾಕ್ಯದಿಂದ ಸಹ ಶ್ರೀಕೃಷ್ಣನಿಗೆ ನಿತ್ಯಮುಕ್ತತ್ವವನ್ನೂ ಜೀವರಿಗೆ ಬದ್ಧತ್ವವನ್ನೂ ಸಾಧಿಸುತ್ತಾರೆ:—

ಧನಂಜಯ—ಹೇ ಅರ್ಜುನ! ತೇಷು—ಗುಣಕೃತದೇಹಗಳಲ್ಲಿ, ಸಂಭವಿಸುವ, ಕರ್ಮಸು — ಕರ್ಮಗಳಲ್ಲಿ, ಉದಾಸೀನವತ್ — ಉದಾಸೀನನಂತೆ, ಆಸೀನಂ—ಇರುತ್ತಿರುವ (ತನಗೆ ಸಂಬಂಧಿಸದ ಕರ್ಮಗಳಲ್ಲಿ ಲೌಕಿಕ ಪುರುಷನು ಉದಾಸೀನನಾಗಿರುವಂತೆ), ಅಸಕ್ತಂ—ಆಸಕ್ತಿಯಿಲ್ಲದವನಾದ, ಮಾಂ—ನನ್ನನ್ನು, ತಾನಿ—ಆ ದೇಹದಿಂದಾದ, ಕರ್ಮಾಣಿ—ಕರ್ಮಗಳು, ನ ನಿಬಧ್ನಂತಿ—ಬಂಧಿಸುವುದಿಲ್ಲ (ಯಾವ ವಿಧದಿಂದಲೂ ಲೇಪಿಸುವುದಿಲ್ಲ); ಸತ್ವಂ—ಸತ್ವವೂ, ರಜಃ—ರಜೋಗುಣವೂ, ತಮಃ—ತಮೋಗುಣವೂ, ಇತಿ—ಎಂಬ, ಗುಣಾಃ—ಗುಣಗಳು, ಪ್ರಕೃತಿಸಂಭವಾಃ—ಪ್ರಕೃತಿ ವಿಕಾರಗಳು (ರೂಪಾಂತರಗಳು), ಮಹಾಬಾಹೋ—ಹೇ ಅರ್ಜುನ! ದೇಹೇ—(ತಮ್ಮಿಂದ ನಿರ್ಮಿತವಾದ) ದೇಹದಲ್ಲಿರುವ, ಅವ್ಯಯಂ—(ಸ್ವರೂಪದಿಂದ ನಿರ್ವಿಕಾರನಾದ) ನಿತ್ಯನಾದ, ದೇಹಿನಂ—ಜೀವನನ್ನು (ದೇಹಿಯನ್ನು), ನಿಬಧ್ನಂತಿ—ಬಂಧಿಸುತ್ತವೆ; (ಹಿಂದಿನ ಶ್ರೀಕೃಷ್ಣನ ಉಪದೇಶದ ಫಲಿತಾರ್ಥವೇನೆಂದರೆ), ಇತಿ—ಹೀಗೆ, ಕೃಷ್ಣೇನ—ಶ್ರೀಕೃಷ್ಣನಿಂದ, ಗೀತಾಯಾಂ—ಗೀತೆಯಲ್ಲಿ, ಆತ್ಮನಃ—ತನಗೆ, ಕರ್ಮಾಬದ್ಧತ್ವಂ—ಕರ್ಮಬಂಧವಿಲ್ಲವೆಂದೂ, ಜೀವಾನಾಂ—ಜೀವರಿಗೆ, ಗುಣಬದ್ಧತ್ವಂ ಚ—ಗುಣಬಂಧವನ್ನು, ವಾಕ್ಯದ್ವಯೇನ—ಎರಡು ವಾಕ್ಯಗಳಿಂದ, ಉಕ್ತಂ—ಹೇಳಲ್ಪಟ್ಟಿದೆ; ಹಿ—ಬಂಧರಾಹಿತ್ಯ ಮತ್ತು ಬಂಧಗಳು, ತನಗೂ ಜೀವರಿಗೂ ಹೇಳಿರುವುದು ಸ್ಪಷ್ಟವೇ.

**ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।**
**ಪರಾಂತಕಾಲೇ ಸರ್ವೇಽಪಿ ವಿಮುಚ್ಯಂತೇ ಪರಾಮೃತಾತ್ ॥ ೩೦೨ ॥**

---

ಕರ್ಮಬಂಧರಾಹಿತ್ಯವನ್ನೂ ಜೀವರೇ ಗುಣಗಳಿಂದ ಬದ್ಧರೆಂದೂ ಸ್ಪಷ್ಟವಾಗಿ ಹೇಳಿರುವನು (೨೯೯—೩೦೧). ಶ್ರುತಿಗಳೂ ಭಗವಂತನ ನಿತ್ಯಮುಕ್ತತ್ವವನ್ನು ಸಯುಕ್ತಿಕವಾಗಿ ಸಾಧಿಸುತ್ತವೆ; 'ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ' ಎಂಬ ಶ್ರುತಿಯು, ಸಂಸಾರಿಜೀವರನ್ನು ಅತಿಕ್ರಮಿಸಿ, ಅವರೆಲ್ಲರನ್ನೂ ತನ್ನ ಅಧೀನದಲ್ಲಿಟ್ಟು ರಾಜನಂತೆ ಅವರನ್ನಾಳುವ, ಭಗವಂತನು,

**ಪರಾಮೃತಪದೇನಾತ್ರ ನಿತ್ಯಮುಕ್ತಃ ಸ್ಫುಟೋದಿತಃ ।**
**ಶ್ರುತಯಃ ಸ್ಮೃತಯಶ್ಚೈವ ಮುಕ್ತಾಮುಕ್ತದ್ವಿತಾಂ ಜಗುಃ ॥ ೩೦೩ ॥**
**ತಸ್ಮಾತ್ಕುಂದಃ ಪರಬ್ರಹ್ಮ ನಿತ್ಯಮುಕ್ತತ್ವತಃ ಪ್ರಭುಃ ।**
**ಮುಕ್ತಾಶ್ಚ ನಿತ್ಯಮುಕ್ತಾ ನ ನಿತ್ಯಮುಕ್ತಸ್ತದಾಪಿ ರಾಟ್ ॥ ೩೦೪ ॥**

ಭಗವಂತನ ನಿತ್ಯಮುಕ್ತತ್ವವನ್ನು ಶ್ರುತಿಯಿಂದ ಸಹ ಸಾಧಿಸುತ್ತಾರೆ:—

ಸಃ – ಭಗವಂತನು, ಅನ್ನಂ – ಅನ್ನದಿಂದ, (ಅನ್ನಪದವಾಚ್ಯನಾದ) ಮರ್ತ್ಯಂ – ಸಂಸಾರಿ ಜೀವನನ್ನು, ('ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ', ಎಂಬ ಶ್ರುತ್ಯರ್ಥವನ್ನು, 'ಸೋಽಮೃತಸ್ಯಾಭಯಸ್ಯೇಶೋ–' ಇತ್ಯಾದಿ ಭಾಗವತ ಶ್ಲೋಕವು ಹೇಳುತ್ತದೆಂದು ತೋರಿಸುತ್ತಾರೆ); ಯತ್ (ಯಸ್ಮಾತ್)–ಯಾವ ಕಾರಣದಿಂದ, ಅತ್ಯಗಾತ್ – ಅತಿಕ್ರಮಿಸಿರುವನೋ (ಸ್ವಾಧೀನಮಾಡಿಕೊಂಡು ರಾಜನಂತಿರುವನೋ), ತತ್ – ಆದ್ದರಿಂದ, ಅಭಯಸ್ಯ[1] – (ಮರಣಾದಿ ಸಂಸಾರ) ಭಯರಹಿತನಾದ, ಅಮೃತಸ್ಯ – (ಅಮೃತತ್ವಸ್ಯ) ಮುಕ್ತವರ್ಗದ, ಈಶಃ – ಸ್ವಾಮಿಯು (ನಿಯಾಮಕನು) (ಯಾವ ವಿವೇಕಿಯೂ, ಅಧೀನರನ್ನು ಸ್ವಸಮರನ್ನಾಗಿ ಮಾಡುವುದಿಲ್ಲವಷ್ಟೆ–ಆದ್ದರಿಂದ ಮುಕ್ತಿಯಲ್ಲಿ ಸಹ ಜೀವರಿಗೆ ಭಗವಂತನೇ ಸ್ವಾಮಿಯು); ಪರಾಂತಕಾಲೇ–ಪರನಾಮಕ ಬ್ರಹ್ಮನ ಆಯುಷ್ಯವು ಮುಗಿದ ನಂತರ ('ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ ಪರಿಮುಚ್ಯಂತಿ ಸರ್ವೇ'—

---

ಸಮಸ್ತ ಮುಕ್ತಜೀವರ ವರ್ಗದ ಸ್ವಾಮಿಯೂ ಆಗಿರುವನು; ಎಂದು ಹೇಳುತ್ತದೆ; ಯಾವ ವಿವೇಕಿಯೂ ಅಧೀನರನ್ನು ಸ್ವಸಮರನ್ನಾಗಿ ಮಾಡುವುದಿಲ್ಲವಷ್ಟೆ; 'ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ ಪರಿಮುಚ್ಯಂತಿ ಸರ್ವೇ'—ಮಹಾಪ್ರಲಯಕಾಲದಲ್ಲಿ, ಎಲ್ಲ ಸಂಸಾರಿ ಜೀವರೂ, ಸತ್ಯಲೋಕದಲ್ಲಿ ಬ್ರಹ್ಮನಲ್ಲಿ ಸೇರಿ, ನಿತ್ಯಮುಕ್ತನಾದ ಭಗವಂತನಿಂದ, ಸಂಸಾರ ಬಂಧದಿಂದ ಮುಕ್ತರಾಗುತ್ತಾರೆಂದು ಹೇಳುತ್ತದೆ; ಇಲ್ಲಿರುವ 'ಪರಾಮೃತಾತ್'

---

[1] ದೇವಾನ್ನವಾದುದು ಅಮೃತವು; ಮಾನುಷಾನ್ನವು ಸಂಸಾರಿ ಜೀವರ ಮರಣಾದಿ ಭಯಗಳಿಗೆ ಕಾರಣವು; 'ಅಮೃತ' ಶಬ್ದದಿಂದ, ಮುಕ್ತರು ಸಂಸಾರಭಯ ನಿರ್ಮುಕ್ತರೆಂಬುದು ಸೂಚಿತವಾಗಿದೆ.

ಬ್ರಹ್ಮನ ಕಾಲವು ಮುಗಿದ ನಂತರ ಸತ್ಯಲೋಕದಲ್ಲಿ ಬ್ರಹ್ಮನಿಂದ ಕೂಡಿ ಕೊಂಡು ಸಂಸಾರಿ ಜೀವರು ನಿತ್ಯಮುಕ್ತನಾದ ಭಗವಂತನಿಂದ, ಎಲ್ಲರೂ ಸಂಸಾರದಿಂದ ಆತ್ಯಂತಿಕ ಬಿಡುಗಡೆಯನ್ನು–ಮೋಕ್ಷವನ್ನು–ಹೊಂದುತ್ತಾರೆಂಬ ಅರ್ಥದ ಶ್ರುತ್ಯರ್ಥವನ್ನೇ ಹೇಳುತ್ತಾರೆ), ಸರ್ವೇಪಿ – ಎಲ್ಲ ಸುಜೀವರೂ, ಪರಾಮೃತಾತ್–ನಿತ್ಯಮುಕ್ತನಾದ ಪರಮಾತ್ಮನಿಂದ, ವಿಮುಚ್ಯಂತೇ–ವಿಶೇಷ ವಾಗಿ ಮುಕ್ತರಾಗುತ್ತಾರೆ (ಅಪರೋಕ್ಷ ಜ್ಞಾನವಾದಾಗಿನಿಂದ, ಸಂಸಾರದ ನಿರ್ಲಿಪ್ತತೆಯು ಪ್ರಾಪ್ತವಾಗಿದ್ದರೂ, ಲಿಂಗದೇಹಭಂಗದಿಂದ ವಿಶೇಷ ಮೋಚನವು ದೊರೆಯುತ್ತದೆ) ; ಅತ್ರ–ಇಲ್ಲಿ, ಪರಾಮೃತ ಪದೇನ–ಪರಾಮೃತ ಶಬ್ದದಿಂದ, ನಿತ್ಯಮುಕ್ತಃ–ನಿತ್ಯಮುಕ್ತನು (ಎಂದೂ ಸಂಸಾರವಿಲ್ಲದ ಪರಮ ಚೇತನನು), ಸ್ಫುಟೋದಿತಃ–ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾನೆ; ಶ್ರುತಯಃ–ಶ್ರುತಿಗಳೂ, ಸ್ಮೃತಯಃ ಚೈವ–ಸ್ಮೃತಿಗಳೂ ಸಹ, ಮುಕ್ತಾ ಅಮುಕ್ತ ದ್ವಿತಾಂ–ಮುಕ್ತರು ಅಮುಕ್ತರೆಂಬ ಭೇದವನ್ನು, ಜಗುಃ–ಸಾರುತ್ತವೆ; ತತ್–ಆದ್ದರಿಂದ, ಪರಬ್ರಹ್ಮ–ಪರಬ್ರಹ್ಮನು, ನಿತ್ಯಮುಕ್ತತ್ವತಃ–ನಿತ್ಯಮುಕ್ತನಾದ್ದ ರಿಂದ, ಪ್ರಭುಃ–ಶಕ್ತನಾದ ರಾಜನಾಗಿ, ಮುಕುಂದಃ–(ಜೀವರಿಗೆ) ಮೋಕ್ಷ ಪ್ರದನೆಂದು ಪ್ರಸಿದ್ಧನಾಗಿರುವನು ; ಮುಕ್ತಾಃ–ಮುಕ್ತರಾದ ಜೀವರು, ನಿತ್ಯ ಮುಕ್ತಾಃ ನ – ನಿತ್ಯಮುಕ್ತರು (ಪರಮಾತ್ಮನಂತೆ) ಅಲ್ಲ ; (ಆದ್ದರಿಂದ), ತಥಾಪಿ–ಆಗಲೂ (ಮುಕ್ತಿದಶಾದಲ್ಲಿ ಸಹ), ರಾಟ್–(ಭಗವಂತನೇ) ರಾಜನು (ಮುಕ್ತ ಜೀವರಲ್ಲಿಲ್ಲದ ನಿತ್ಯಮುಕ್ತನೆಂಬ ಮಹಾಮಹಿಮೆಯನ್ನುಳ್ಳವನೂ ಆಗಿರುವುದರಿಂದ, ಆತನೇ ರಾಜನು).

---

ಎಂಬ ಪದದಿಂದ ನಿತ್ಯಮುಕ್ತನೆಂಬರ್ಥವು ಸುಸ್ಪಷ್ಟವಾಗುತ್ತದೆ; ಹೀಗೆ ಶ್ರುತಿ ಸ್ಮೃತಿಗಳು, ಮುಕ್ತಾಮುಕ್ತರೆಂಬ ಭೇದವನ್ನು ಹೇಳುತ್ತವೆ; ಮತ್ತು ಮುಕ್ತಿ ಪ್ರದನೆಂಬ ಪರಬ್ರಹ್ಮನು ನಿತ್ಯಮುಕ್ತನೆಂದೂ (ಮುಕುಂದನೆಂದೂ) ಹೇಳು ತ್ತವೆ; ಮುಕ್ತಜೀವರೆಲ್ಲರೂ ಮುಕ್ತರೇ ಆದರೂ, ನಿತ್ಯಮುಕ್ತರಲ್ಲ; ಸಂಸಾರ ಬಂಧದಲ್ಲಿದ್ದು ಅದರ ಮೋಚನೆಯಿಂದ ಮುಕ್ತರಾದವರು; ನಿತ್ಯಮುಕ್ತ ನಾದ್ದರಿಂದ ಪರಬ್ರಹ್ಮನೇ ಅವರ ರಾಜನು (ಪ್ರಭುವು) (೩೦೭–೩೦೪).

**ತದಧೀನತ್ವಬಂಧೇನ ಭಕ್ತಿಬಂಧೇನ ವಾ ಹರೇಃ ।**
**ಮುಕ್ತೋಽಪಿ ಬದ್ಧೋ[1] ಯತ್ತಸ್ಮಾನ್ನಿತ್ಯಬದ್ಧೋಽಪ್ಯಸೌ ಭವೇತ್ ॥**

ಮುಕ್ತಿಯಲ್ಲಿ ಯಾವ ಬಂಧವೂ ಇಲ್ಲದಿರುವುದರಿಂದ, ಜೀವನಿಗೆ ನಿತ್ಯ ಬದ್ಧತ್ವವು ಅಯುಕ್ತವೆಂಬ ಸಂಶಯವನ್ನು ಪರಿಹರಿಸುತ್ತಾರೆ :—

ತದಧೀನತ್ವಬಂಧೇನ – ಭಗವಂತನ ಅಧೀನತ್ವವೆಂಬ ಬಂಧದಿಂದ, (ಪರಾಧೀನತ್ವ ರೂಪಬಂಧದಿಂದ—ಮುಕ್ತನೂ ಸ್ವತಂತ್ರನಲ್ಲ, ಅಸ್ವತಂತ್ರನೇ); ವಾ—ಮತ್ತು, ಹರೇಃ—ಶ್ರೀಹರಿಯ, ಭಕ್ತಿಬಂಧೇನ—ಭಕ್ತಿಯೆಂಬ ಬಂಧವುಳ್ಳವ ನಾದ್ದರಿಂದಲೂ, ಮುಕ್ತಃ ಅಪಿ—ಮುಕ್ತನೂ ಸಹ, ಯತ್—ಯಾವ ಕಾರಣ ದಿಂದ, ಬದ್ಧಃ—ಬಂಧಿತನಾಗಿರುವನೋ, ತಸ್ಮಾತ್—ಆ ಕಾರಣದಿಂದ, ಅಸೌ—ಈ ಮುಕ್ತಜೀವನೂ, ನಿತ್ಯಬದ್ಧಃ – ನಿತ್ಯಬದ್ಧನು, ಭವೇತ್ – ಆಗುತ್ತಾನೆ (ದುಃಖಾದಿ ಕಾರಣವಾದ ಬಂಧರಹಿತನು ಮಾತ್ರ—ಸರ್ವಬಂಧಸಹಿತನಲ್ಲ—ಸ್ವೇಚ್ಛಾನುಸಾರವಾದ ಭೋಗಗಳಿಂದ ಸ್ವಯೋಗ್ಯಪೂರ್ಣಾನಂದವುಳ್ಳವನು).

**ನಿತ್ಯಸಂಸಾರಿಸದ್ಭಾವೋಽಪ್ಯನೇನೈವ ಪ್ರಸಿದ್ಧ್ಯತೇ ।**
**ತದಾ ಯಥಾಶ್ರುತೋ ವಾಕ್ಯಸ್ಯಾರ್ಥಃ ಸ್ವಸ್ಥೋ ಭವಿಷ್ಯತಿ ॥ ೩೦೬ ॥**

ಪ್ರಕಾರಾಂತರದಿಂದ, ಕೆಲವು ಜೀವರಿಗೆ ನಿತ್ಯಬದ್ಧತ್ವವು ಕೂಡುತ್ತದೆನ್ನು ತ್ತಾರೆ :—

---

ಮುಕ್ತಜೀವರಿಗೆ ಸಂಸಾರಬಂಧವಿಲ್ಲದಿದ್ದರೆ, ಮುಕ್ತಿಯಲ್ಲಿಯೂ, ಭಗವಂತನ ಅಧೀನರೆಂಬ ಅಸ್ವಾತಂತ್ರ್ಯದ ಬಂಧವೂ, ಭಗವಂತನಲ್ಲಿ ನಿರಂತರವಾದ ಭಕ್ತಿ ಪಾಶದ ಬಂಧವೂ, ಇರುವುದರಿಂದ, ಅವರು ನಿತ್ಯಬದ್ಧರೇ ಸರಿ—ಅವರಿಗೆ ಸರ್ವವಿಧದ ಬಂಧರಾಹಿತ್ಯವು ಯಾವ ಕಾಲಕ್ಕೂ ಇಲ್ಲ (೩೦೫). ನಿತ್ಯಬದ್ಧ ರೆಂಬುದು, ವಿವಕ್ಷಾಭೇದದಿಂದ, ಕೆಲವು ಮಧ್ಯಮವರ್ಗದ ಜೀವರಿಗೆ ಸಿದ್ಧವೇ ಆಗಿರುತ್ತದೆ; ನಿತ್ಯಬದ್ಧರು ಜೀವರೆಂಬುದರಿಂದ ನಿತ್ಯಸಂಸಾರಿಗಳೆಂಬ ಜೀವರ ಇರುವಿಕೆಯೂ ಸಮರ್ಥಿತವಾಗುತ್ತದೆ; ಈ ಜೀವರು ಸುಖದುಃಖಮಿಶ್ರವಾದ ಸ್ವರೂಪವುಳ್ಳವರಾದ್ದರಿಂದ ದುಃಖದಿಂದ ಎಂದೂ ಅವರು ಮುಕ್ತರಾಗುವುದೇ

---

1 ೨೭೩ನೇ ಶ್ಲೋಕದ ಅಡಿ ಟಿಪ್ಪಣಿಯನ್ನು ಇಲ್ಲಿ ಓದಿಕೊಳ್ಳುವುದು ಒಳ್ಳೆಯದು.

*

ನಿತ್ಯಸಂಸಾರಿಸದ್ಭಾವಃ ಅಪಿ–ನಿತ್ಯಸಂಸಾರಿಗಳೆಂಬ ಜೀವರ ಇರುವಿಕೆಯೂ (ಮಧ್ಯಮವರ್ಗದ ಜೀವರೂ), ಅನೇನ ಏವ–ಈ ನಿತ್ಯಬದ್ಧರೆಂಬ[1] ಶಬ್ದದಿಂದಲೇ, ಪ್ರಸಿದ್ಧ್ಯತೇ–ಸಿದ್ಧವಾಗುತ್ತದೆ; ತದಾ–ಆಗ (ಆ ಜೀವರ ವಿವಕ್ಷೆಯಿಂದ), ವಾಕ್ಯಸ್ಯ–(ನಿತ್ಯಬದ್ಧನೆಂಬ) ವಾಕ್ಯದ, ಯಥಾಶ್ರುತಃ ಅರ್ಥಃ–ತಿಳಿದುಬರುವ ಅರ್ಥವು, ಸ್ವಸ್ಥಃ–ಸ್ಥಿರವಾದುದೇ (ಯೋಗ್ಯವಾದುದೇ–ಉಚಿತವೇ), ಭವಿಷ್ಯತಿ–ಆಗುತ್ತದೆ.

**ಏವಂ ಚ ನಿತ್ಯಮುಕ್ತಸ್ಯ ನಿತ್ಯಬದ್ಧಸ್ಯ ಚೈಕತಾ ।**
**ಕದಾಸ್ಯಾತ್ತೌ ಯತೋ ಧರ್ಮೌ ವಿರುದ್ಧೌ ಸಾರ್ವಕಾಲಿಕೌ ॥೩೦೭॥**

ಯತಃ–ಯಾವ ಕಾರಣದಿಂದ, ತೌ–ಅವರಿಬ್ಬರೂ (ಜೀವಪರಮಾತ್ಮರು), ಸಾರ್ವಕಾಲಿಕೌ–ನಿತ್ಯವಾದ (ಎಲ್ಲ ಕಾಲದಲ್ಲಿ), ವಿರುದ್ಧೌ ಧರ್ಮೌ–ವಿರುದ್ಧವಾದ ಧರ್ಮಗಳುಳ್ಳವರೋ (ಆದ್ದರಿಂದ), ಏವಂ ಚ–ಹೀಗೆ (ಪೂರ್ವದ ವಿಮರ್ಶೆಯಂತೆ), ನಿತ್ಯಬದ್ಧಸ್ಯ–ನಿತ್ಯಬದ್ಧನ, ಚ–ಮತ್ತು, ನಿತ್ಯಮುಕ್ತಸ್ಯ–ನಿತ್ಯಮುಕ್ತನ, ಏಕತಾ–ಐಕ್ಯವು, ಕದಾ–ಎಂದು, ಸ್ಯಾತ್–ಆಗುವುದು? (ಒಂದಾಗುವುದು ಶಕ್ಯವೇ ಇಲ್ಲ).

---

ಇಲ್ಲ; ದುಃಖರೂಪದ ಬಂಧವು ನಿತ್ಯವಾದ್ದರಿಂದ, ಅವರು ನಿತ್ಯಬದ್ಧರೇ ಸರಿ (೩೦೬). ಹೀಗೆ ಜೀವ ಪರಮಾತ್ಮರು ಸಾರ್ವಕಾಲಿಕ ವಿರುದ್ಧ ಧರ್ಮಗಳುಳ್ಳವರಾಗಿರುವಾಗ, ನಿತ್ಯಬದ್ಧ ಮತ್ತು ನಿತ್ಯಮುಕ್ತನ ಐಕ್ಯವು, ಎಂದಿಗೂ ಆಗಲು ಶಕ್ಯವಿಲ್ಲ (೩೦೭).

---

[1] ಶ್ರೀ ವಾದಿರಾಜರ ಅನ್ಯ ಗ್ರಂಥಗಳಲ್ಲಿ ಉಕ್ತವಾಗಿರುವಂತೆ, ನಿತ್ಯಸಂಸಾರಿಗಳೆಂಬ ಮಧ್ಯಮ ಜೀವರಿಗೂ ಲಿಂಗದೇಹಭಂಗದಿಂದ ಸ್ವಸ್ವರೂಪ ಪ್ರಾಪ್ತಿಯುಂಟೆಂದು ತಿಳಿಯುತ್ತದೆ; ಬಹುಪರಿಯುಕ್ತಿಗಳಿಂದಲೂ, ಪ್ರಮಾಣಗಳಿಂದ ಹೀಗೆಂದು ನಿಶ್ಚಯಿಸಿ ನಿರೂಪಿಸಿದ್ದಾರೆ; ಈ ವಿಷಯದಲ್ಲಿ ಜ್ಞಾನಿಗಳ ಭಿನ್ನಾಭಿಪ್ರಾಯವೂ ಇದೆ; ಕೆಲವರು, ಆ ಜೀವರು, ನಿತ್ಯವೂ ಸಂಸಾರದಲ್ಲಿ ಸುತ್ತುತ್ತಲೇ ಇರುವರೆಂದು ತಿಳಿಯುತ್ತಾರೆ; ಇವರ ವಿವಕ್ಷೆಯಿಂದ, ನಿತ್ಯಬದ್ಧತ್ವವೆಂದರೆ, ಸುಖದುಃಖ ಮಿಶ್ರವಾದ ಸ್ವರೂಪವುಳ್ಳವರಾದ್ದರಿಂದ, ಅನಿಷ್ಟವಾದ ದುಃಖವು ಬಂಧನರೂಪವೇ ಆದ್ದರಿಂದ, ಅವರು, ಸ್ವಸ್ವರೂಪವನ್ನು ಹೊಂದಿದರೂ, ದುಃಖ ಬಂಧವು ತಪ್ಪುವುದಿಲ್ಲವೆಂಬ ಅರ್ಥವನ್ನು ತಿಳಿಯಬಹುದಾಗಿದೆ.

**ಅತೋ ಮಿಥ್ಯಾತ್ವಕಥನೇಽಪ್ಯಾಶಾದೇಶಾಂತರಂ ಗತಾ ।**
**ಬ್ರಹ್ಮವದ್ವಾ ಮೋಕ್ಷವದ್ವಾ ಯನ್ನಿತ್ಯಂ ತತ್ಕಥಂ ಮೃಷಾ ॥ ೩೦೮ ॥**

ಅತಃ – ಬಂಧವೂ ನಿತ್ಯವೆಂದು ಹೇಳಲ್ಪಟ್ಟಿರುವುದರಿಂದ, ಮಿಥ್ಯಾತ್ವ ಕಥನೇ–ಬಂಧವು ಮಿಥ್ಯೆಯೆಂದು ಹೇಳುವುದರಲ್ಲಿ ಸಹ, ಆಶಾ–(ಮಾಯಾವಾದಿಯ) ಆಶೆಯು, ದೇಶಾಂತರಂ–ದೇಶಾಂತರಕ್ಕೆ, ಗತಾ–ಓಡಿಹೋಯಿತು (ಆಶೆ ಸಹ ಸಮೀಪಕ್ಕೆ ಬರುವಂತಿಲ್ಲ—ದೂರವೇ ಉಳಿಯಿತು); ಬ್ರಹ್ಮವತ್ ವಾ–ಬ್ರಹ್ಮನಂತೆ ಆಗಲಿ, ಮೋಕ್ಷವತ್ – ಮೋಕ್ಷದಂತೆ ಆಗಲಿ, ಯತ್ – ಯಾವುದು, ನಿತ್ಯಂ–ನಿತ್ಯವಾದುದೋ, ತತ್–ಅದು, ಕಥಂ–ಹೇಗೆ (ಯಾವ ಕಾರಣದಿಂದ), ಮೃಷಾ – ಸುಳ್ಳು (ಮಿಥ್ಯಾ) ಆದೀತು? (ಎಂದಿಗೂ ಆಗಲಾರದು).

**ಅನಾದಿಗುಣಸಂಬಂಧಾತ್ತೇನೌಪಾಧಿಕತೈವ ಹಿ ।**
**ಅವಾಸ್ತವತ್ವಂ ಪ್ರಾಗುಕ್ತಂ ನ ಮಿಥ್ಯಾತ್ವಮಿತಿ ಸ್ಥಿತಂ ॥ ೩೦೯ ॥**

'ನ ವಸ್ತುತಃ' ಎಂಬುದಕ್ಕೆ ಹಿಂದೆ ಹೇಳಿದ ಅರ್ಥವನ್ನೇ ಜ್ಞಾಪಿಸಿಕೊಟ್ಟು ಉಪಸಂಹರಿಸುತ್ತಾರೆ:—

ಅನಾದಿಗುಣಸಂಬಂಧಾತ್ – ಅನಾದಿಕಾಲದಿಂದ ಗುಣಬಂಧವುಳ್ಳವನಾದ್ದರಿಂದ (ಜೀವನು ನಿತ್ಯಬದ್ಧನೆಂದು ಸಾಧಿಸಿರುವುದರಿಂದ), ಔಪಾಧಿಕತಾ ಏವ–ಸತ್ವಾದಿ ಗುಣಕೃತ ಉಪಾಧಿಯೇ, ಹಿ–ಯಾವ ಕಾರಣದಿಂದ ಬಂಧಕ್ಕೆ ಕಾರಣವೋ, ತೇನ–ಅದರಿಂದ, ಅವಾಸ್ತವತ್ವಂ–ಅವಸ್ತುತ್ವವು (ಗುಣಬಂಧವು ನಿತ್ಯವಲ್ಲೆಂದು), ಪ್ರಾಕ್ – ಮೊದಲು (ನ ವಸ್ತುತಃ, ಎಂದು), ಉಕ್ತಂ –

---

ಆದ್ದರಿಂದ, ಬಂಧವು ಮಿಥ್ಯೆಯೆಂದು ಸಾಧಿಸಬೇಕೆಂಬ, ಮಾಯಾವಾದಿಯ ಆಶೆಯು ದೇಶಾಂತರವನ್ನು ಹೊಕ್ಕಿತು; ವೇದಾಂತ ಪ್ರಪಂಚದಲ್ಲಿ ಅದಕ್ಕೆ ಸ್ಥಾನವಿಲ್ಲದಂತಾಯಿತು; ಬ್ರಹ್ಮನಂತೆ, ಅಥವಾ ಮೋಕ್ಷದಂತೆ (ಪರವಾದಿಯೇ ಅಂಗೀಕರಿಸಿರುವಂತೆ) ನಿತ್ಯವಾದುದು, ಮಿಥ್ಯೆಯು (ಬಾಧಜ್ಞಾನವುಳ್ಳದ್ದು—ಸುಳ್ಳು) ಹೇಗಾಗುತ್ತದೆ? (೩೦೮). ಜೀವರ ಬಂಧವು 'ಗುಣತಃ ನ ವಸ್ತುತಃ' ಎಂದು ಹೇಳಿರುವುದರ ಅರ್ಥವು, ಗುಣಕೃತವಾದ ಉಪಾಧಿಯಿಂದ ಆದ ಬಂಧವಲ್ಲದೇ ಮಿಥ್ಯವಲ್ಲ–ಅನಾದಿಯಾದರೂ ನಿತ್ಯವೂ

ಹೇಳಲ್ಪಟ್ಟಿತು; ಮಿಥ್ಯಾತ್ವಂ–ಮಿಥ್ಯೆಯೆಂಬರ್ಥದಲ್ಲಿ, ನ–ಅಲ್ಲ, ಇತಿ ಸ್ಥಿತಂ–ಎಂದು ಸಿದ್ಧವಾಯಿತು.

**ಸ್ವಯಂ ದುಃಖೀ ಪರಸ್ಯಾಪಿ ದುಃಖಮಾಕಾಂಕ್ಷತೇ ಖಲಃ ।**
**ಬ್ರಹ್ಮ ಸಂಸಾರೀತ್ಯುಕ್ತಮನ್ಯಥಾ ಕೇನ ಹೇತುನಾ ॥ ೩೧೦ ॥**

ಭಗವಂತನಿಗೆ ಬದ್ಧತ್ವವನ್ನು ಹೇಳುವುದು ನೀತಿವಿರುದ್ಧವೂ ಆಗಿರುತ್ತದೆಂದು ಹೇಳುತ್ತಾರೆ :—

ಖಲಃ–ದುರ್ಜನನು, ಸ್ವಯಂ ದುಃಖೀ – ತಾನೇ ದುಃಖಿಯಾಗಿದ್ದು, ಪರಸ್ಯಾಪಿ–ಅನ್ಯನಿಗೂ (ತನ್ನಿಂದ ಅತ್ಯಂತ ಭಿನ್ನನಾದ ಭಗವಂತನಿಗೂ), ದುಃಖಂ–ದುಃಖವನ್ನು, ಆಕಾಂಕ್ಷತೇ – ಇಚ್ಛಿಸುತ್ತಾನೆ; ಅನ್ಯಥಾ–ಹಾಗಲ್ಲದಿದ್ದರೆ (ದುಷ್ಟಸ್ವಭಾವವಿಲ್ಲದಿದ್ದರೆ), ಕೇನ–ಯಾವ, ಹೇತುನಾ–ಕಾರಣದಿಂದ (ಯುಕ್ತಿ ಅಥವಾ ಅನ್ಯಪ್ರಮಾಣದಿಂದ), ಬ್ರಹ್ಮ–ಬ್ರಹ್ಮನು, ಸಂಸಾರೀ ಇತಿ –ಸಂಸಾರವುಳ್ಳವನೆಂದು, ಉಕ್ತಂ–ಹೇಳಲ್ಪಟ್ಟನು ? (ಬ್ರಹ್ಮನೇ ಅಜ್ಞಾನವಶನಾಗಿ ಸಂಸಾರಿ ಜೀವನಾಗಿರುವನೆಂದು ಹೇಳಲು ಬೇರಾವ ಕಾರಣವೂ ಇರುವುದಿಲ್ಲ).

**ಬದ್ಧಸ್ತು ಬದ್ಧ ಏವ ಸ್ಯಾದ್ರಾಜ್ಞೋ ಬದ್ಧತ್ವಕೀರ್ತನಾತ್ ।**
**ಯಥಾ ಮುಕುಂದಬಂಧೋಕ್ತ್ಯಾ ಬಂಧನಿರ್ಬಂಧಭುಗ್ಜನಃ ॥ ೩೧೧ ॥**

ರಾಜ್ಞಃ – ರಾಜನಿಗೆ (ಸ್ವತಂತ್ರಪ್ರಭುವಿಗೆ), ಬದ್ಧತ್ವಕೀರ್ತನಾತ್–ಬದ್ಧನೆಂದು ಹೇಳುವುದರಿಂದ, ಬದ್ಧಃ ತು – ಬದ್ಧನಾದವನು ಆದರೋ,

---

ಅಲ್ಲದ್ದರಿಂದ ಅವಾಸ್ತವವೆಂದು ಹೇಳಲಾಗುತ್ತದೆ, ಎಂದಾಗಿದೆ. ಬೇರೆ ವಿಧವಾದ ಅರ್ಥವು ಬಹುಯುಕ್ತ್ಯಾದಿ ಪ್ರಮಾಣಗಳಿಗೆ ವಿರೋಧವಾದುದು; ಆದ್ದರಿಂದ ಗ್ರಾಹ್ಯವಲ್ಲ (೩೦೯). ಬ್ರಹ್ಮನೇ ಸಂಸಾರಿಜೀವನೆಂಬ ಆರೋಪವು, ದುರ್ಜನನ ದುಷ್ಟಸ್ವಭಾವದಿಂದಲೇ ಆದುದಲ್ಲದೇ ಅನ್ಯಕಾರಣವಿಲ್ಲ; ಸ್ವಯಂ ದುಃಖಿಯಾದ ದುರ್ಜನನು ಪರನಿಗೂ ದುಃಖವನ್ನು ಇಚ್ಛಿಸುತ್ತಾನೆ; ಯಾವ ಯುಕ್ತಿ ಅಥವಾ ಪ್ರಮಾಣವೂ ಇಲ್ಲದೇ ಸಂಸಾರಿಜೀವನೇ ಬ್ರಹ್ಮನೆಂಬುದೂ ಹೀಗೆ ದುರ್ಜನ ಸ್ವಭಾವದಿಂದ ಮಾತ್ರವೆಂದೇ ತಿಳಿಯಬೇಕು (೩೧೦). ರಾಜನಿಗೆ (ಸ್ವತಂತ್ರನಿಗೆ) ಬದ್ಧತ್ವವನ್ನು ಹೇಳಿದರೆ, ಬಂಧಿತನಾದವನ

ಬದ್ಧ ಏವ – ಬದ್ಧನೇ, ಸ್ಯಾತ್ – ಆಗಿರುವನು (ಬಂಧನದಿಂದ ಬಿಡುಗಡೆ ಯಾದೀತೆ ?(ಸರ್ವಥಾ ಶಕ್ಯವಿಲ್ಲ); ಯಥಾ–ಹೇಗೆ, ಮುಕುಂದಬಂಧೋಕ್ತ್ಯಾ– ಭಗವಂತನಿಗೆ ಬದ್ಧತ್ವವನ್ನು ಹೇಳುವುದರಿಂದ, ಜನಃ–ಜೀವರು (ಹಾಗೆ ಹೇಳು ವವರು), ಬಂಧನಿರ್ಬಂಧಭುಕ್–ಬಂಧದ ನಿತರಾಂ (ಅತಿಶಯ) ಬಂಧವನ್ನೇ ಅನುಭವಿಸುವರು ; (ನಿತ್ಯದುಃಖರೂಪದ ಅಂಧತಮಸ್ಸನೇ ಹೊಂದುವರು) (ರಾಜನಿಗೆ ಬದ್ಧತ್ವವನ್ನು ಹೇಳುವವನು, ನಿಗಡಬಂಧವನ್ನೇ ಹೊಂದುವಂತೆ).

**ಯದ್ಯಬದ್ಧಃ ಸ ವೈ ಬದ್ಧೋ ನಿತ್ಯಮುಕ್ತತ್ವಗೀರ್ವೃಥಾ ।**
**ಬಂಧಮಿಥ್ಯಾತ್ವತಃ ಸಾ ಚೇತ್ ಬದ್ಧಃ ಕೋ ನಾಮ ಸಿದ್ಧ್ಯತಿ ॥ ೩೧೨**

ಅಬದ್ಧಃ – ಮುಕ್ತನೇ (ಬಂಧರಹಿತನಾದ ಮುಕುಂದನೇ), ಸ ವೈ– ಆತನೇ, ಯದಿ ಬದ್ಧಃ – ಬದ್ಧನೆಂದಾದ ಪಕ್ಷದಲ್ಲಿ (ಶುದ್ಧನೆಂಬ ಬ್ರಹ್ಮನೇ ಸಂಸಾರಬದ್ಧನೆಂದರೆ), ನಿತ್ಯಮುಕ್ತತ್ವಗೀಃ – ನಿತ್ಯಮುಕ್ತನೆಂಬ ವಾಕ್ಯವು, ವೃಥಾ – ವ್ಯರ್ಥವೇ ಸರಿ ; ಬಂಧಮಿಥ್ಯಾತ್ವತಃ – ಬಂಧವು ಮಿಥ್ಯೆಯೇ ಆದ್ದ ರಿಂದ, ಸಾ–(ಆ ನಿತ್ಯಮುಕ್ತನೆಂಬ) ವಾಕ್ಯವು, ಚೇತ್–ಎಂದಾದರೆ, ಬದ್ಧಃ– ಬದ್ಧನೆಂಬ, ಕೋ ನಾಮ – ಯಾವಾತನು, ಸಿದ್ಧ್ಯತಿ – ಸಿದ್ಧನಾಗುವನು ? (ಎಲ್ಲರೂ ಬಂಧದ ಮಿಥ್ಯಾತ್ವದಿಂದ, ನಿತ್ಯಮುಕ್ತರೇ ಆಗುವರಲ್ಲವೇ !).

**ಅನುತ್ತೀರ್ಣಃ ಸ್ವಯಂ ಪಂಕಾತ್ಕಿಮನ್ಯೋತ್ಕಾರಕೋ ಭವೇತ್ ।**
**ಯದಿ ಬದ್ಧಂ ಪರಂಬ್ರಹ್ಮ ಕಃ ಸ್ಯಾದ್ಬಂಧಸ್ಯ ಮೋಚಕಃ ॥ ೩೧೩ ॥**

---

ನಿಗಡಬಂಧವು ತಪ್ಪುವುದೇ ? (ಇಲ್ಲ) ; ಬದ್ಧನು ನಿತ್ಯ ಬಂಧನದಲ್ಲಿಯೇ ಉಳಿಯುವನು ; ಮುಕುಂದನು ಬದ್ಧನೆಂದು ಹೇಳುವವನು, ತನ್ನ ಬಂಧದ (ದುಃಖಾದಿ ರೂಪಬಂಧದ) ಅತಿಶಯವನ್ನೇ (ಕೇವಲ ದುಃಖರೂಪದ ನಿತ್ಯ ಬಂಧವನ್ನೇ—ಅಂಧತಮಸ್ಸನ್ನೇ) ಹೊಂದುತ್ತಾನೆ (೩೧೧). ಭಗವಂತನು ನಿತ್ಯಮುಕ್ತನಾಗಿರಲು, ಆತನಿಗೂ ಬದ್ಧತ್ವವನ್ನು ಹೇಳಿದರೆ 'ನಿತ್ಯಮುಕ್ತ' ನೆಂಬ ನುಡಿಯು ವ್ಯರ್ಥವೇ ಆಗುತ್ತದೆ; ಭಗವಂತನಿಗೆ ಬಂಧವಿದೆ, ಆದರೆ, ಅದು ಮಿಥ್ಯೆಯೇ ಎಂದರೆ, ಯಾವನೂ ಬದ್ಧನಾಗುವುದೇ ಇಲ್ಲ—ಎಲ್ಲರ ಬಂಧವೂ ಮಿಥ್ಯೆಯಾದ್ದರಿಂದ ಬದ್ಧನೆಂಬ ಯಾರೊಬ್ಬನೂ ಸಿದ್ಧನಾಗುವುದಿಲ್ಲ; ಎಲ್ಲರೂ ನಿತ್ಯಮುಕ್ತರೇ ಆಗುವರು (೩೧೨). ಬ್ರಹ್ಮನೂ ಬದ್ಧನಾದರೆ,

ಬ್ರಹ್ಮನಿಗೆ ಬದ್ಧತ್ವವನ್ನು ಹೇಳುವುದು ಅನ್ಯನೀತಿವಿರುದ್ಧವೂ ಆಗುವುದೆನ್ನುತ್ತಾರೆ :—

ಸ್ವಯಂ—ತಾನೇ, ಪಂಕಾತ್—ಕೆಸರಿನಿಂದ, ಅನುತ್ತೀರ್ಣಃ—ದಾಟಲಾರದವನು, ಅನ್ಯೋತ್ತಾರಕಃ—ಅನ್ಯರನ್ನು ಕೆಸರಿಂದ ದಾಟಿಸುವವನು, ಭವೇತ್ ಕಿಂ—ಆಗುವನೇನು? (ಆಗಲಾರನು); ಪರಂಬ್ರಹ್ಮ— ಪರಬ್ರಹ್ಮನು, ಯದಿ ಬದ್ಧಂ—ಬದ್ಧನಾದರೆ, ಬಂಧಸ್ಯ—ಬಂಧದ, ಮೋಚಕಃ—ಮೋಚಕನು (ಬಿಡಿಸುವವನು), ಕಃ ಸ್ಯಾತ್—ಯಾರಾಗಬೇಕು? (ಯಾರೂ ಇಲ್ಲ).

**ದರಿದ್ರದರ್ಶನೇನ ಸ್ಯಾನ್ನೈವ ದಾರಿದ್ರ್ಯನಾಶನಂ ।**
**ಧನಿನೋಽಘೃಣಿನೋ ದೂರಾದಾರಾದ್ವಾ ದರ್ಶನೇನ ಕಿಂ ॥ ೩೧೪ ॥**

ಶ್ರೀಹರಿಯು ಬದ್ಧನಾದರೆ, ಆತನ ದರ್ಶನದಿಂದ ಅನ್ಯನಿಗೆ ಬಂಧನಾಶವಾಗಲಾರದೆಂಬಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ :—

ಅಘೃಣಿನಃ—ದಯಾರಹಿತನಾದ, ಧನಿನಃ—ಶ್ರೀಮಂತನ, ದೂರಾತ್—ದೂರದಿಂದ, ವಾ—ಅಥವಾ, ಆರಾತ್ — ಸಮೀಪದಿಂದಾಗಲಿ, ದರ್ಶನೇನ—ಕಾಣುವುದರಿಂದ, ಕಿಂ—ಏನು (ಫಲವು?—ವ್ಯರ್ಥವಷ್ಟೆ) (ದಯಾದಿ ಗುಣಶೂನ್ಯನಾದ ಶುದ್ಧಬ್ರಹ್ಮನ ದರ್ಶನದಿಂದ ಬಂಧನಾಶವಾಗುವುದಿಲ್ಲ;—ಔದಾರ್ಯಾದಿ ಗುಣವಿಲ್ಲದ ಶ್ರೀಮಂತನ ದರ್ಶನದಿಂದ ದಾರಿದ್ರ್ಯದ ಪರಿಹಾರವಾಗದಿರುವಂತೆ); ದರಿದ್ರ ದರ್ಶನೇನ—ದರಿದ್ರನ (ಗುಣಶೂನ್ಯನ) ದರ್ಶನದಿಂದ, ದಾರಿದ್ರ್ಯನಾಶನಂ—ಬಡತನದ ನಾಶವು, ನೈವ ಸ್ಯಾತ್ — ಆಗಲಾರದಲ್ಲವೇ ?

---

ಬದ್ಧರೆಂಬ ಜೀವರನ್ನು ಬಂಧದಿಂದ ಮೋಚನೆ ಮಾಡುವವರು ಯಾರು? ಕೆಸರಿನಿಂದ ತಾನೇ ದಾಟಲಾರದವನು, ಅನ್ಯರನ್ನು ದಾಟಿಸುವನೇ? ಇದು ನೀತಿವಿರುದ್ಧವೂ ಆಗಿದೆ (೩೧೩). ಬ್ರಹ್ಮಸಾಕ್ಷಾತ್ಕಾರದಿಂದ ಸಂಸಾರಬಂಧನಾಶವೂ ಆಗಲಾರದು; ನಿಷ್ಕರುಣಿಯಾದ ಧನಿಕನನ್ನು, ದೂರದಿಂದಾಗಲಿ, ಸಮೀಪದಿಂದಾಗಲಿ ನೋಡುವುದರಲ್ಲಿ ದರಿದ್ರನಿಗೆ ಏನೂ ಫಲವಿಲ್ಲದಂತೆ, (ಔದಾರ್ಯಾದಿ ಗುಣರಹಿತ ಶ್ರೀಮಂತನಿಂದ ದಾರಿದ್ರ್ಯದ ಪರಿಹಾರವಾಗದಂತೆ) ಗುಣಶೂನ್ಯನಾದ (ನಿರ್ವಿಶೇಷ) ಬ್ರಹ್ಮದರ್ಶನದಿಂದ (ದಯಾಸಾಗರ

**ತಸ್ಮಾಚ್ಛುದ್ಧಃ ಸ ಭಗವಾನಶುದ್ಧಂ ಯೋಗ್ಯಚೇತನಂ ।**
**ಶ್ರವಣಾದಿಯುತಂ ಭಕ್ತಂ ಪ್ರೀತಃ ಶುದ್ಧೀಕರಿಷ್ಯತಿ ।**
**ಇತಿ ವಾಚ್ಯಮತಃ ಶುದ್ಧೌ ಶುದ್ಧಾಂತರಂ ಭವೇತ್ ॥ ೩೧೫ ॥**

ತಸ್ಮಾತ್–ಆದ್ದರಿಂದ (ಬದ್ಧನೂ ಗುಣಶೂನ್ಯನೂ ಆದ ಬ್ರಹ್ಮನ ದರ್ಶನ ದಿಂದ ಬಂಧನಾಶವಾಗದಿರುವುದರಿಂದ), ಶುದ್ಧಃ–ದೋಷರಹಿತನಾದ (ಗುಣ ಪೂರ್ಣನಾದ), ಸಃ ಭಗವಾನ್–ಆ ದಯಾಲುತ್ವಾದಿ ಗುಣವುಳ್ಳ ಭಗವಂತನು, ಶ್ರವಣಾದಿಯುತಂ–ಶ್ರವಣ, ಮನನಾದಿ ಸಾಧನಯುಕ್ತನೂ, ಭಕ್ತಂ–(ತನ್ನ) ಭಕ್ತನೂ ಆದ, ಅಶುದ್ಧಂ–(ಗುಣಬಂಧದಿಂದ) ಅಶುದ್ಧನಾಗಿರುವ, ಯೋಗ್ಯ ಚೇತನಂ–ಮುಕ್ತಿಗೆ ಅರ್ಹನಾದ ಜೀವನನ್ನು (ಮುಕ್ತಿಯೋಗ್ಯಸ್ವರೂಪವುಳ್ಳ ಜೀವನನ್ನು), ಪ್ರೀತಃ – ಪ್ರೀತನಾಗಿ, ಶುದ್ಧೀಕರಿಷ್ಯತಿ – ಶುದ್ಧಸ್ವರೂಪ ನನ್ನಾಗಿ ಮಾಡುತ್ತಾನೆ; ಅತಃ–ಆದ್ದರಿಂದ (ನಿತ್ಯಶುದ್ಧನಾದ ಭಗವಂತನು ಮಧ್ಯೆ ಜೀವನನ್ನು ಶುದ್ಧನನ್ನಾಗಿ ಮಾಡುವುದರಿಂದ), ಶುದ್ಧೌ–ಹೀಗೆ ಶುದ್ಧ ನಾಗುತ್ತಿರಲು, ಸಃ ಅಪಿ – ಆ ಜೀವನಾದರೂ, ಶುದ್ಧಾಂತರಂ–ಶುದ್ಧನಾದ ಭಗವಂತನಿಂದ ಭಿನ್ನನಾಗಿ (ಭಗವದ್ರೂಪದಂತೆ ಶುದ್ಧನಲ್ಲ), ಭವೇತ್–ಆಗು ತ್ತಾನೆ, ಇತಿ ವಾಚ್ಯಂ–ಎಂದೇ ಹೇಳಬೇಕು (ಬೇರೆಯಲ್ಲ).

**ಯದ್ವನ್ಯ ಏವ ಮಲಿನಃ ಪಟೋ ಧೌತಪಟಾಂತರಾತ್ ।**
**ಸ ಧಾವನೇಽಪಿ ಧೌತೋಽನ್ಯಃ ಪಟಃ ಸ್ಯಾತ್ ಕಾಭಿದಾ ತಯೋಃ ॥**

---

ನಲ್ಲದಿದ್ದರೆ), ಸಂಸಾರ (ದುಃಖರೂಪದ) ಬಂಧದ ಪರಿಹಾರವಾದೀತೇ? (ಇಲ್ಲ) (೩೧೪). ಆದ್ದರಿಂದ ಶುದ್ಧನಾದ ಬ್ರಹ್ಮನಿಂದ, ಎಂದರೆ ದೋಷ ರಹಿತನಾದ ದಯಾಲುತ್ವಾದಿ ಗುಣಪೂರ್ಣನಾದ ಭಗವಂತನಿಂದ, ಯೋಗ್ಯ ಚೇತನನು, ತಾನೂ ಶುದ್ಧನಾಗಿ (ಬಂಧರಹಿತನಾಗಿ), ಮುಕ್ತಿಯನ್ನು ಹೊಂದು ತ್ತಾನೆ; ಭಗವಂತನು ಮುಕ್ತಿಯೋಗ್ಯ ಚೇತನರನ್ನು (ಜೀವರನ್ನು) ಶುದ್ಧ ರನ್ನಾಗಿ ಮಾಡಿದರೆ, ಅವರೂ ಶುದ್ಧಸ್ವರೂಪದಿಂದ, ಶುದ್ಧನಾದ ಭಗವಂತ ನಿಂದ ಭಿನ್ನರಾಗಿಯೇ ಇರುವರಲ್ಲದೇ ಬೇರೆಯಲ್ಲ (೩೧೫). ಶುದ್ಧವಾದ ವಸ್ತ್ರದಿಂದ ಭಿನ್ನವಾದ ಒಂದು ಮಲಿನವಸ್ತ್ರವನ್ನು, ನೀರಲ್ಲಿ ತೊಳೆದು, ಮಲಿನ ವಾದುದನ್ನು ಶುದ್ಧಗೊಳಿಸಿದರೆ, ಶುದ್ಧವಾದ ಮತ್ತೊಂದು ವಸ್ತ್ರವು ಸಿದ್ಧವಾಗು

ಈ ಯುಕ್ತಿಯು ಅನ್ಯತ್ರ ಅನ್ವಯಿಸುವ ಸ್ಥಲಾಂತರವನ್ನು ಹೇಳುತ್ತಾರೆ :

ಮಲಿನಃ–ಕೊಳೆಯಾದ, ಪಟಃ–ವಸ್ತ್ರವು, ಧೌತಪಟಾಂತರಾತ್–ಒಗೆದ (ನೀರಿನಲ್ಲಿ ತೊಳೆದ) ಬೇರೆ ವಸ್ತ್ರದಿಂದ, ಅನ್ಯ ಏವ–ಭಿನ್ನವಾದುದೇ, ಯದಿ–ಹೀಗಿದ್ದರೂ, ಸಃ–ಆ ಮಲಿನವಸ್ತ್ರವು, ಧಾವನೇ ಅಪಿ–ಒಗೆದು ಶುದ್ಧಮಾಡಿದರೂ, ಧೌತಃ–ಶುದ್ಧವಾದ, ಅನ್ಯಃ ಪಟಃ–ಮತ್ತೊಂದು ವಸ್ತ್ರವು, ಸ್ಯಾತ್–ಆಗುತ್ತದೆ; ತಯೋಃ–ಇವುಗಳಲ್ಲಿ (ಮೊದಲೇ ಅಶುದ್ಧವಾಗಿದ್ದ ಮತ್ತು ನಂತರ ಶುದ್ಧವಾದ, ಈ ಎರಡು ವಸ್ತ್ರಗಳಲ್ಲಿ), ಕಾ ಅಭಿದಾ–ಯಾವ ಅಭೇದವಿದೆ? (ಅಭೇದವಿಲ್ಲ—ಭಿನ್ನವಾದವುಗಳೇ ಆಗಿರುತ್ತವೆ), (ಹೀಗೆ ಜೀವನು ಶುದ್ಧನಾಗಿ ಮಾಡಲ್ಪಟ್ಟರೂ, ಭಿನ್ನನಾಗಿಯೇ ಇರುವನಲ್ಲದೇ ಅಭೇದವನ್ನು ಹೊಂದುವುದಿಲ್ಲ).

**ಅತಃ ಸಾಧರ್ಮ್ಯಮೇವಾಹ ಮುಕ್ತಾನಾಂ ಹರಿರಾತ್ಮನಾ ।**
**ಪೇಟೀಸ್ಥಾನೇಕಪಟವತ್ ಸಾಯುಜ್ಯಮಪಿ ಯುಕ್ತತಾ ॥ ೩೧೭ ॥**

ಅತಃ–ಆದ್ದರಿಂದ (ನಿತ್ಯಮುಕ್ತನಿಗೂ, ಒಂದು ಕಾಲವಿಶೇಷದಲ್ಲಿ ಮಾತ್ರ ಮುಕ್ತನಾಗುವವನಿಗೂ ಅಭೇದವು ಕೂಡುವುದಿಲ್ಲವಾದ್ದರಿಂದ), ಸಾಧರ್ಮ್ಯಂ ಏವ–('ಮಮ ಸಾಧರ್ಮ್ಯಮಾಗತಾಃ' ಎಂದು ಗೀತೆಯಲ್ಲಿ ಹೇಳಿದಂತೆ), ಜನನ ಮರಣಗಳಿಲ್ಲವೆಂಬ ಸಮಾನಧರ್ಮವನ್ನೇ, ಮುಕ್ತಾನಾಂ–ಮುಕ್ತರಾದ ಜೀವರಿಗೆ, ಆತ್ಮನಾ–ತನ್ನಿಂದ, ಹರಿಃ–ಭಗವಂತನು (ಶ್ರೀಕೃಷ್ಣನು), ಆಹ–ಹೇಳಿರುವನು; ಪೇಟೀಸ್ಥಾನೇಕಪಟವತ್ – ಒಂದೇ ಪೆಟ್ಟಿಗೆಯಲ್ಲಿರುವ ಮಡಿ

---

ತ್ತದೆ; ಮೊದಲೇ ಶುದ್ಧವಾದ ವಸ್ತ್ರದಿಂದ ಭಿನ್ನವಾಗಿಯೇ ಉಳಿಯುತ್ತದೆ—ಅಲ್ಲದೇ ಎರಡೂ ಒಂದೇ ಆಗುವುದಿಲ್ಲವಷ್ಟೆ; ಹೀಗೆಯೇ ಜೀವನು ಶುದ್ಧನಾಗಿ ಮಾಡಲ್ಪಟ್ಟರೂ, ಜೀವನೇ ಆಗಿರುವನಲ್ಲದೇ ಭಗವಂತನಲ್ಲಿ ಐಕ್ಯವನ್ನು ಹೊಂದುವುದಿಲ್ಲ (೩೧೬). ನಿತ್ಯಮುಕ್ತನಿಗೂ, ಒಂದು ಕಾಲಕ್ಕೆ ಮುಕ್ತನಾಗುವವನಿಗೂ ಅಭೇದವು ಸರ್ವಥಾ ಯುಕ್ತವಲ್ಲ; ಆದ್ದರಿಂದ, ಜನನಮರಣಗಳಿಲ್ಲವೆಂಬ ಸಮಾನಧರ್ಮಮಾತ್ರವುಳ್ಳವನಾಗಿ, ಜೀವನು ಮುಕ್ತಿಯಲ್ಲಿ ಶೋಭಿಸುವನೆಂದು 'ಮಮ ಸಾಧರ್ಮ್ಯಮಾಗತಾಃ । ಸರ್ಗೇಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ।' ಎಂದು ಗೀತೆಯಲ್ಲಿ ಶ್ರೀಕೃಷ್ಣನು ಹೇಳಿರುವನು;

ವಸ್ತ್ರಗಳಂತೆ, ಸಾಯುಜ್ಯಂ ಅಪಿ—ಸಾಯುಜ್ಯಮುಕ್ತಿಯೂ (ಸಾಯುಜ್ಯಮುಕ್ತಿಯಲ್ಲಿ ಸಹ ಭಗವಂತ ಮತ್ತು ಸಾಯುಜ್ಯಮುಕ್ತರ ನಿತ್ಯಸಂಬಂಧವಿಶೇಷವೂ), ಯುಕ್ತತಾ—ಸದಾ ಕೂಡಿರುವುದೆಂಬುದೂ (ಉಪಪನ್ನವಾಗುತ್ತದೆ).

**ಕಿಂ ಚೇದಂ ಶಬಲತ್ವಂ ತೇ ಕಿಂ ಮಾಯಾಶಬಲತ್ವತಃ ।**
**ಉತ ಸರ್ವೇಶ್ವರತ್ವಾದಿ ಸದ್ಗುಣಾಂಭೋಧಿಸಂಭ್ರಮಾತ್ ॥ ೩೧೮ ॥**

ಈಗ, ಶ್ರೀ ನಾರಾಯಣನಿಗೆ ಶಬಲ ಬ್ರಹ್ಮತ್ವವನ್ನು, ನಿರಾಕರಿಸಲು, ಶಬಲತ್ವವೆಂಬುದು, ದೋಷರೂಪವಾದ ಮಾಯಾಶಬಲತ್ವವೋ, ಅದೋಷ ರೂಪ ಮಾಯಾಶಬಲತ್ವವೋ, ಜ್ಞಾನಾನಂದಾದಿ ಶುಭಗುಣ ಶಬಲತ್ವವೋ, ಎಂದು ಮೂರು ವಿಧದಿಂದ ವಿಕಲ್ಪಮಾಡಿ, ಮೊದಲನೆಯ ಪಕ್ಷವನ್ನು ಅಂಗೀಕರಿಸದೇ ತಿರಸ್ಕರಿಸಿ, ಎರಡು ಮೂರನೇ ವಿಕಲ್ಪಗಳನ್ನು, ಭಗವಂತನಲ್ಲಿ ದೋಷವನ್ನು ಆರೋಪಿಸುವುದಿಲ್ಲವಾದ್ದರಿಂದ, ಅಂಗೀಕರಿಸುತ್ತಾರೆ :—

ತೇ—ನಿನ್ನ (ಮಾಯಾವಾದಿಯ), ಇದಂ—ಈ, ಶಬಲತ್ವಂ—(ಬ್ರಹ್ಮನ) ಶಬಲತ್ವವು (ಮಿಶ್ರಧರ್ಮವುಳ್ಳವನೆಂಬುದು—ವಿಶಿಷ್ಟನೆಂಬುದು), ಕಿಂ—ಯಾವ ಪ್ರಕಾರವಾದುದು ? ಮಾಯಾಶಬಲತ್ವತಃ—ಮಾಯಾನಿಮಿತ್ತವಾದ (ಅವಿದ್ಯಾನಿಮಿತ್ತವಾದ) ಶಬಲತ್ವದಿಂದ, ಕಿಂ—(ನಾರಾಯಣನ) ಶಬಲತ್ವವೋ, ಉತ—ಅಥವಾ, ಸರ್ವೇಶ್ವರತ್ವಾದಿ ಸದ್ಗುಣಾಂಭೋಧಿಸಂಭ್ರಮಾತ್—ಸರ್ವೇಶ್ವರತ್ವ ಮೊದಲಾದ ಸದ್ಗುಣಸಮುದ್ರದ ಉದ್ರೇಕದಿಂದಲೋ ? [1]

---

ಸಾಯುಜ್ಯಮುಕ್ತಿಯೆಂಬುದೂ ಜೀವನಿಗೆ ಭಗವಂತನಿಂದ ಅಭೇದವನ್ನು ಹೇಳುವುದಿಲ್ಲ; ಒಂದೇ ಪೆಟ್ಟಿಗೆಯಲ್ಲಿರುವ ಅನೇಕ ಮಡಿವಸ್ತ್ರಗಳಂತೆ, ಏಕತ್ರ ಕೂಡಿರುವುದೇ ಸಾಯುಜ್ಯವು; ಭಗವಂತನನ್ನು ಪ್ರವೇಶಿಸುವುದು ಸಾಯುಜ್ಯವು (೩೧೭). ಮಾಯಾವಾದವು ಬ್ರಹ್ಮನಿಗೆ ಶಬಲತ್ವವನ್ನು ಹೇಳುತ್ತದೆ; ಈ ಶಬಲತ್ವವೆಂಬುದು, (ಮಿಶ್ರಸ್ವಭಾವದವನೆಂಬುದು) ಅವಿದ್ಯಾಮೂಲಕ

[1] ಅವಿದ್ಯಾಮೂಲದ ಶಬಲತ್ವವು, ದೋಷದೂರನೆಂಬ ಶ್ರುತಿಗಳನ್ನು ವಿರೋಧಿಸುವುದರಿಂದ ಸರ್ವಥಾ ಒಪ್ಪತಕ್ಕದ್ದಲ್ಲ; ನಿರ್ದುಷ್ಟವಾದ ಮಾಯಾ (ಪ್ರಕೃತಿ) ನಿಮಿತ್ತವಾದ ವಿವಿಧ ಧರ್ಮಗಳುಳ್ಳವನೆಂದರೆ (ಸೃಷ್ಟ್ಯಾದಿ ನಿರ್ವಾಹಕತ್ವ ಮಹಿಮಾದ್ಯೋತಕವೆಂಬರ್ಥದಲ್ಲಿ), ಅದೋಷಮಾಯಾಶಬಲತ್ವವೂ ವಿರೋಧಾರ್ಹವಲ್ಲ.

**ಮಾಯಾದೂರತ್ವವಾಕ್ಯಾನಿ ಪೂರ್ವಂ ಧಿಕ್ಕುರ್ವತೇ ಮತಂ ।**
**ನಿತ್ಯಮುಕ್ತತ್ವಸಿದ್ಧ್ಯರ್ಥಂ ಪ್ರಾಗುಕ್ತವಚನಾನಿ ಚ ॥ ೩೧೯ ॥**

ಮಾಯಾದೂರತ್ವವಾಕ್ಯಾನಿ – ('ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಇತ್ಯಾದಿ) ಜ್ಞಾನಸಾಮರ್ಥ್ಯದಿಂದ ಮಾಯೆಯನ್ನು ದೂರವಿಟ್ಟವನೆಂಬ ವಾಕ್ಯಗಳು (ಸೂರ್ಯನನ್ನು ಅಂಧಕಾರವು ಸಮೀಪಿಸಬಹುದೇ ?), ಪೂರ್ವಂ– ಎಲ್ಲಕ್ಕೂ ಮೊದಲು, ಮತಂ – (ಮಾಯಾಮತವನ್ನು), ಧಿಕ್ಕುರ್ವತೇ – ತಿರಸ್ಕರಿಸುತ್ತವೆ; ನಿತ್ಯಮುಕ್ತತ್ವಸಿದ್ಧ್ಯರ್ಥಂ – (ಪರಬ್ರಹ್ಮನು) ನಿತ್ಯಮುಕ್ತನೆಂಬುದನ್ನು ಸಾಧಿಸಲು, ಪ್ರಾಗುಕ್ತವಚನಾನಿ ಚ– ಈ ಮೊದಲು ಉದಾಹೃತಗಳಾದ ('ಸತ್ತ್ವರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ' ಇತ್ಯಾದಿ) ವಾಕ್ಯಗಳು ಸ್ಪಷ್ಟವೇ (ಆಗಿವೆ).

**ಅಜ್ಞಾನೇ ಜೀವಗತ್ವಸ್ಯೈವೋಕ್ತತ್ವಾಚ್ಚ ನ ತನ್ಮತಂ ॥ ೩೨೦ ॥**

ಅಜ್ಞಾನೇ ಜೀವಗತ್ವಸ್ಯ–ಅಜ್ಞಾನವು ಜೀವಾಶ್ರಿತವೆಂಬುದಕ್ಕೆ, ಏವ– ಈ ವಾದಕ್ಕೇ, ಉಕ್ತತ್ವಾಚ್ಚ – ('ಅನಾದಿ ಮಾಯಯಾ ಸುಪ್ತೋ ಯದಾ

---

ವೆಂದೂ ಹೇಳುತ್ತದೆ; ಶುದ್ಧಬ್ರಹ್ಮನಿಗೆ ಶ್ರುತಿವಿರೋಧವಾದ (ಅವಿದ್ಯಾಶ್ರಯತ್ವರೂಪದ) ದೋಷವನ್ನು ಹೇಳುವುದರಿಂದ, ಈ ಶಬಲತ್ವವು ಅಂಗೀಕಾರಯೋಗ್ಯವಾಗುವುದಿಲ್ಲ; ಸರ್ವೇಶ್ವರತ್ವಾದಿ ಗುಣರಾಶಿಯಿಂದ ಮಿಶ್ರಿತವೆಂಬ ಶಬಲತ್ವವನ್ನು ಅಂಗೀಕರಿಸಲು ಅಡ್ಡಿಯಿಲ್ಲ (೩೧೮). ಬ್ರಹ್ಮನಲ್ಲಿ (ಮಾಯಾ) ಅಜ್ಞಾನಕ್ಕೆ ಅವಕಾಶವಿಲ್ಲವೆಂಬಲ್ಲಿ ('ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ'— ಜ್ಞಾನಬಲದಿಂದ ಅಜ್ಞಾನವನ್ನು ಸಮೀಪಿಸದಂತೆ ನಿವಾರಿಸಿ) ಇತ್ಯಾದಿ ಪ್ರಮಾಣಗಳನ್ನು ಈ ಮೊದಲು ಉದಾಹರಿಸಿ, ವಿವರಿಸಿದ್ದಾಗಿದೆ; ನಿತ್ಯಮುಕ್ತನೆಂಬುದನ್ನು (ಎಂದೂ ಬಂಧವಿಲ್ಲದವನೆಂಬುದನ್ನು), ('ಸತ್ವರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ'—ಸತ್ವಾದಿ ಪ್ರಾಕೃತ ಗುಣಬಂಧವು ಜೀವನಿಗಲ್ಲದೇ, ನನಗೆ ಇಲ್ಲವೆಂದು, ಇತ್ಯಾದಿ) ಪ್ರಮಾಣಗಳಿಂದ, ಈ ಹಿಂದೆ ಸಾಧಿಸಲಾಗಿದೆ (೩೧೯). ಮತ್ತು 'ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ', ಇತ್ಯಾದಿ ಪ್ರಮಾಣಗಳಿಂದ, 'ಅನಾದಿಯಿಂದ ಗುಣನಿಮಿತ್ತ ಬಂಧದಿಂದ ಅಜ್ಞಾನಿಯಾಗಿರುವ ಜೀವನು, ಯಾವಾಗ ಜ್ಞಾನದಿಂದ, (ಮಲಗಿ

ಜೀವಃ ಪ್ರಬುಧ್ಯತೇ ' ಇತ್ಯಾದಿ ಶ್ರುತಿಗಳಿಂದಲೂ, ' ಅಹಮಜ್ಞಃ ' ಎಂಬ ಪ್ರತ್ಯಕ್ಷದಿಂದಲೂ, ಪರಿಹಾರಯೋಗ್ಯವಾದ ಅಜ್ಞಾನವೂ, ಅಜ್ಞಾನನಿವರ್ತಕ ಜ್ಞಾನವೂ ಏಕದೇಶದಲ್ಲಿರುವ ನಿಯಮವು ಯುಕ್ತಿಸಿದ್ಧವೆಂದು) ಈ ಹಿಂದೆ ಸಾಧಿಸಿರುವುದರಿಂದಲೂ (ಆ ಮತವು ತಿರಸ್ಕರಿಸಲ್ಪಟ್ಟಿರುತ್ತದೆ); ತತ್—ಆದ್ದರಿಂದ, ಮತಂ—ಮಾಯಾಮತವು, ನ—ನಿಲ್ಲುವುದಲ್ಲ.

**ಹರೇರಿಚ್ಛಾಪಿ ಮಾಯಾಖ್ಯಾ ಮಾಯಾಖ್ಯಾ ಪ್ರಕೃತಿರ್ಜಡಾ ।**
**ಭ್ರಮಹೇತುಶ್ಚ ಮಾಯೈಕಾ ಮಾಯೇಯಂ ತ್ರಿವಿಧಾ ಮತಾ ॥**

ಭಗವಂತನು ಮಾಯಾದೂರನೆಂದಾದರೆ, ' ಸೈಷಾ ಭಗವತೋ ಮಾಯಾ' ಇತ್ಯಾದಿ (ಭಾಗವತ) ವಾಕ್ಯಗಳ ಗತಿ ಏನೆಂದರೆ, ಮಾಯಾ ಶಬ್ದಾರ್ಥವನ್ನು ವಿಭಾಗದಿಂದ ವಿವರಿಸುತ್ತಾರೆ :—

ಹರೇಃ—ಶ್ರೀಹರಿಯ, ಇಚ್ಛಾ ಅಪಿ—ಇಚ್ಛೆಯೂ, ಮಾಯಾಖ್ಯಾ—ಮಾಯಾ ನಾಮಕವಾದುದೇ ; ಜಡಾಪ್ರಕೃತಿಃ — ಜಡಪ್ರಕೃತಿಯೂ, ಮಾಯಾಖ್ಯಾ—ಮಾಯಾ ಎಂದೇ ಕರೆಯಲ್ಪಡುತ್ತದೆ; ಭ್ರಮಹೇತುಃ—ಭ್ರಾಂತಿಗೆ ಕಾರಣ ವಾದುದು, ಏಕಾ ಮಾಯಾ ಚ—ಒಂದು ಮಾಯೆಯೂ, (ಹೀಗೆ), ಇಯಂ

---

ದವನು ಎಚ್ಚತ್ತಂತೆ) ಜಾಗ್ರತನಾಗುವನೋ....' ಎಂಬುದಾಗಿ ಹೇಳುವ ಪ್ರಮಾಣಗಳಿಂದಲೂ, ' ಅಹಮಜ್ಞಃ '—ನಾನು ಅಜ್ಞನು, ಎಂಬ ಪ್ರತ್ಯಕ್ಷ ದಿಂದಲೂ (ಅನುಭವದಿಂದಲೂ), ಅಜ್ಞಾನವು ಜೀವಾಶ್ರಿತವೆಂದು ಸಾಧಿಸ ಲಾಗಿದೆ; ಹೀಗಿರಲು ಬ್ರಹ್ಮನು, ಅಜ್ಞಾನವನ್ನು ಆಶ್ರಯಿಸುವುದೆಂಬುದು ಕೂಡುವುದೇ ಇಲ್ಲ (೩.೨೦). ಮತ್ತೇನೆಂದರೆ, ಭಗವಂತನ ಇಚ್ಛೆಯೂ, ಜಡಪ್ರಕೃತಿಯೂ, ಭ್ರಮಹೇತುವೂ, ಸಹ ಮಾಯಾಶಬ್ದ ವಾಚ್ಯಗಳೇ ಆಗಿವೆ ; ಈ ಮೂರು ಮಾಯೆಗಳೂ ಈಶ್ವರನಲ್ಲಿ ಯಾವ ದೋಷವನ್ನುಂಟು ಮಾಡಲೂ ಅಶಕ್ತವಾಗಿವೆ, ಎಂದು ಶ್ರುತಿಸಿದ್ಧವು; ತನ್ನ ಇಚ್ಛೆಯು, ಸ್ವತಂತ್ರನೂ ಸರ್ವಜ್ಞನೂ ಆದ ಭಗವಂತನಲ್ಲಿ ದುಃಖಾಜ್ಞಾನಾದಿ ದೋಷ ವನ್ನುಂಟುಮಾಡಲಾರದು ; ಜಡಪ್ರಕೃತಿಯು ಭಗವಂತನ ಅಧೀನದಲ್ಲಿದ್ದು, ಜಗತ್ತಿನ ಸೃಷ್ಟ್ಯಾದಿಗಳಲ್ಲಿ ಲೀಲೆಯಿಂದ ಉಪಯೋಗಿಸಲ್ಪಡುತ್ತದೆ ; ಭ್ರಮಹೇತುವಾದವನು, ಮುಖ್ಯವಾಗಿ (ಜೀವರನ್ನು ಸಂಸಾರದಲ್ಲಿ ಅವರವರ

ಮಾಯಾ – ಈ ಮಾಯೆಯೆಂಬುದು, ತ್ರಿವಿಧಾ – ಮೂರು ಪ್ರಕಾರವೆಂದು, ಮತಾ–(ಜ್ಞಾನಿಗಳಿಂದ) ತಿಳಿಯಲ್ಪಡುತ್ತದೆ.[1]

**ಹರೇಃ ಶಕ್ತಿಶ್ಚ ತೇಜಶ್ಚ ತಥಾ ಮಾಯಾಪದೋದಿತೇ ।**
**ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।**
**ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ ॥ ೩೨೨ ॥**

**ಇತ್ಥಂ ಪುರಾಣವಚನಂ ತಥಾ ಭಾಗವತೇ ಧ್ರುವಃ ।**
**ಮಾಯಾಖ್ಯಯಾ ಸ್ವಶಕ್ತ್ಯೇತಿ ಮಾಯಾಖ್ಯಾಂ ಶಕ್ತಿಮಾಹ ಹಿ ॥**

---

ಯೋಗ್ಯತೆ ಮತ್ತು ಕರ್ಮಗಳನ್ನನುಸರಿಸಿ, ಸುತ್ತಿಸುವುದರಿಂದ) ತಾನೇ ಆಗಿರುವುದರಿಂದ, ಇವು ಯಾವುವೂ ತನ್ನ ಬಂಧಕ್ಕೆ ಕಾರಣವಾಗುವುದಿಲ್ಲ[2] (೩೨೧). ಶ್ರೀಹರಿಯ ಅಚಿಂತ್ಯಶಕ್ತಿಯೂ, ತೇಜಸ್ಸೂ, ಮಾಯಾ ಶಬ್ದ ವಾಚ್ಯಗಳೇ ಆಗಿವೆ; ಶ್ರೀಹರಿಯ ಇಚ್ಛೆಯು ಮಹಾಮಾಯಾ, ಅವಿದ್ಯಾ, ನಿಯತಿ, ಮೋಹಿನೀ, ಪ್ರಕೃತಿ, ವಾಸನಾ ಎಂಬ ಶಬ್ದಗಳಿಂದ ಹೇಳಲ್ಪಡುತ್ತದೆಂದು ಪುರಾಣವಾಕ್ಯವೂ ಹೇಳುತ್ತದೆ ('ಮಹಾಮಾಯೇತ್ಯವಿದ್ಯೇತಿ....' ಎಂಬುದೇ ಪುರಾಣವಾಕ್ಯವು); ಭಾಗವತದಲ್ಲಿ ಧ್ರುವರಾಜನು 'ಮಾಯಾಖ್ಯಯಾ ಸ್ವಶಕ್ತ್ಯಾ....' ಇತ್ಯಾದಿ ಉದಾಹರಿಸಿರುವ ವಾಕ್ಯದಲ್ಲಿ, ಮಾಯೆಯೆಂಬ ನಿನ್ನ ಶಕ್ತಿಯಿಂದ, ಮಹದಾದಿ ತತ್ವಗಳನ್ನುತ್ಪಾದಿಸಿ, ಜಗತ್ಸೃಷ್ಟಿಯಲ್ಲಿ ಉಗಯೋಗಿಸು, ಎಂದು ಹೇಳುತ್ತ, ಮಾಯಾಶಬ್ದವು ಭಗವಚ್ಛಕ್ತಿವಾಚಕವೆಂಬುದನ್ನು ಪ್ರಮಾಣೀಕರಿಸುತ್ತಾನೆ; ಹೀಗೆ ಮಾಯಾ

---

[1] ಮಾಯೆಯು ಪಂಚವಿಧವು; 'ಇಂದ್ರೋ ಮಾಯಾಭಿಃ ಪುರುರೂಪ ಈಯತೇ' (ತನ್ನ ಮಾಯೆಗಳಿಂದ ಇಂದ್ರನು ಬಹುರೂಪಗಳನ್ನು ಹೊಂದುತ್ತಾನೆ) ಇತ್ಯಾದಿ ವಾಕ್ಯಗಳಲ್ಲಿ ಬಹುವಚನ (ಮಾಯಾಭಿಃ) ಪ್ರಯೋಗವು ಈ ಕಾರಣದಿಂದಲೇ ಯೋಗ್ಯವಾಗುತ್ತದೆ; ಇಚ್ಛಾಶಕ್ತಿ, ತೇಜಸ್ಸು, ಮುಂತಾದ ಅನೇಕಾರ್ಥಗಳಲ್ಲಿ, ದೋಷಕ್ಕೆ ಅವಕಾಶ ಕೊಡದವುಗಳೆಂಬ, ಶ್ರುತಿಸಮ್ಮತವಾದ ಮೂರುವಿಧ ಮಾಯೆಗಳು, ಇಲ್ಲಿ ಪ್ರಸಕ್ತವಾಗಿವೆ.

[2] ಶ್ಲೋಕ ೩೩೪ ರಿಂದ ೩೪೦ ರವರೆಗಿನವುಗಳನ್ನೂ (ಶಬಲತ್ವದ ವಿಷಯದಲ್ಲಿ) ಇಲ್ಲಿ ನೋಡಬಹುದು.

ಭಗವದಿಚ್ಛೆಯು ಮಾಯಾ ಶಬ್ದದಿಂದ ಹೇಳಲ್ಪಡುವುದೆಂಬಲ್ಲಿ ಪ್ರಮಾಣ ವನ್ನು ಹೇಳುತ್ತಾರೆ :—

ಹರೇಃ—ಶ್ರೀಹರಿಯ, ಶಕ್ತಿಶ್ಚ—ಅಚಿಂತ್ಯಶಕ್ತಿಯೂ, ತೇಜಶ್ಚ—ತೇಜಸ್ಸೂ, ತಥಾ—ಹಾಗೆಯೇ, ಮಾಯಾಪದೋದಿತೇ—ಮಾಯಾ ಶಬ್ದದಿಂದ ಹೇಳಲ್ಪಡು ತ್ತವೆ; ಮಹಾಮಯಾ ಇತಿ – ಮಹಾಮಾಯೆಯೆಂದೂ, ಅವಿದ್ಯಾ ಇತಿ— ಅವಿದ್ಯೆಯೆಂದೂ, ನಿಯತಿಃ – ನಿಯತಿ, ಚ – ಮತ್ತು, ಮೋಹಿನೀ ಇತಿ— ಮೋಹಿನೀ ಎಂದೂ, ಪ್ರಕೃತಿಃ – ಪ್ರಕೃತಿ ಎಂದೂ, ವಾಸನಾ ಇತ್ಯೇವಂ— ವಾಸನಾ ಎಂದೂ, ಅನಂತ—ಹೇ ಶ್ರೀಕೃಷ್ಣ!, ತವ ಇಚ್ಛಾ—ನಿನ್ನ ಇಚ್ಛೆಯೇ, ಕಥ್ಯತೇ—ಹೇಳಲ್ಪಡುತ್ತದೆ; ಇತ್ಥಂ—ಹೀಗೆ, ಪುರಾಣವಚನಂ—ಪುರಾಣವಚನ ವಿದೆ; ತಥಾ—ಮತ್ತು, ಭಾಗವತೇ—ಭಾಗವತದಲ್ಲಿ, ಧ್ರುವಃ—ಧ್ರುವರಾಜನು, ಮಾಯಾಖ್ಯಯಾ ಸ್ವಶಕ್ತ್ಯಾ ಇತಿ – (' ಏಕಸ್ತ್ವಮೇವ ಭಗವಾನಿದಮಾತ್ಮ ಶಕ್ತ್ಯಾ ಮಾಯಾಖ್ಯಯೋರುಗುಣಯಾ ಮಹದಾದ್ಯಶೇಷಂ ' ಎಂಬ ತನ್ನ (ಭಗವಂತನ ಸ್ತೋತ್ರಭಾಗದಲ್ಲಿ) ಮಾಯೆಯೆಂಬ ನಿನ್ನ ಶಕ್ತಿಯಿಂದ, ಎಂಬುದಾಗಿ, ಶಕ್ತಿಂ – ಭಗವಂತನ ಶಕ್ತಿಯನ್ನು, ಮಾಯಾಖ್ಯಾಂ—ಮಾಯೆ ಎಂಬ ನಾಮವುಳ್ಳದ್ದೆಂದು, ಆಹ ಹಿ—ಹೇಳಿರುವನಷ್ಟೆ (ಆತ್ಮಶಕ್ತಿ ಎಂಬುದರಿಂದ ಪ್ರಸಕ್ತವಾದ ಈಶ್ವರಶಕ್ತಿಯನ್ನು, ಮಾಯೆ ಎಂಬ ಹೆಸರುಳ್ಳದ್ದೆಂದು ಸ್ಪಷ್ಟ ವಾಗಿ ಹೇಳಿರುತ್ತಾನೆ).

**ಅಂತಸ್ಥಃ ಸರ್ವಭೂತಾನಾಮಾತ್ಮಾ ಯೋಗೇಶ್ವರೋ ಹರಿಃ ।**
**ಸ್ವಮಾಯಯಾ ವೃಣೋದ್ಗರ್ಭಂ ವೈರಾಟ್ಯಾಃ ಕುರುತಂತವೇ ॥**

---

ಶಬ್ದಕ್ಕೆ ಅನೇಕಾರ್ಥಗಳಿರುವಾಗ, ಭ್ರಾಂತಿಕಾರಣವಾದ ಅವಿದ್ಯೆಯೆಂದೇ (ಅದರ ಒಂದರ್ಥವನ್ನು) ಗ್ರಹಿಸುವುದು ಯೋಗ್ಯವಲ್ಲ (೩.೨೨—೩.೨೩). ಸೂತಾಚಾರ್ಯನು ಶೌನಕಾದಿ ಋಷಿಗಳಿಗೆ ಶ್ರೀಭಾಗವತ ಪುರಾಣವನ್ನು ಶ್ರವಣಮಾಡಿಸುತ್ತಾ, ಸರ್ವಪ್ರಾಣಿಗಳ ಅಂತಃಸ್ಥಿತನಾದ, ಯೋಗೇಶ್ವರ ನಾದ (ಅಚಿಂತ್ಯ ಶಕ್ತಿಯುಳ್ಳ) ಶ್ರೀಕೃಷ್ಣನು, ಕುರುವಂಶದ ಸಂತಾನ ವನ್ನು ರಕ್ಷಿಸಲಿಕ್ಕಾಗಿ, ಉತ್ತರಾದೇವಿಯ ಗರ್ಭವನ್ನು ' ಸ್ವಮಾಯೆ ' ಯಿಂದಲೇ ಪ್ರವೇಶಿಸಿ, ಗರ್ಭವನ್ನು ವ್ಯಾಪಿಸಿದನೆಂದು, ಆರಂಭದಲ್ಲಿ ಹೇಳಿ,

**ಯದ್ಯಪ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಂ ।**
**ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್ಭೃಗೂದ್ವಹ ॥ ೩೨೫ ॥**

**ಇತಿ ಭಾಗವತೇ ಸೂತೋ ಮಾಯೇತ್ಯುಕ್ತ್ವಾ ಪುನಶ್ಚತಾಂ ।**
**ವೈಷ್ಣವಂ ತೇಜ ಇತ್ಯಾಹ ಸ್ವಮಾಯಾ ಕಿಲ ಸಾ ಹರೇಃ ॥ ೩೨೬ ॥**

ಮಾಯಾ ಶಬ್ದವು ಭಗವಂತನ ತೇಜೋವಾಚಕವೆಂಬಲ್ಲಿ ಪ್ರಮಾಣ ವನ್ನು ಹೇಳುತ್ತಾರೆ (ಮೊದಲ ಶ್ಲೋಕದಲ್ಲಿ 'ಸ್ವಮಾಯಯಾ' ಎಂದು ಮಾಯಾಪದವನ್ನು ಹೇಳಿ, ಎರಡನೇ ಶ್ಲೋಕದಲ್ಲಿ 'ವೈಷ್ಣವಂ ತೇಜ ಆಸಾದ್ಯ' ವೈಷ್ಣವ ತೇಜಸ್ಸೆಂದು ಆ ಮಾಯೆಯನ್ನೇ ಕರೆದಿರುವುದನ್ನು ಗಮನಿಸಬೇಕು) :—

ಸರ್ವಭೂತಾನಾಂ—ಸಕಲ ಪ್ರಾಣಿಗಳ, ಅಂತಸ್ಥಃ—ಒಳಗಿರುವವನೂ, ಆತ್ಮಾ—ಸ್ವಾಮಿಯೂ, ಯೋಗೇಶ್ವರಃ—ಯೋಗೇಶ್ವರನೂ (ಅಚಿಂತ್ಯ ಶಕ್ತಿಯುಳ್ಳವನೂ), ಹರಿಃ—(ಆದ) ಶ್ರೀಹರಿಯು, ಸ್ವಮಾಯಯಾ[1]—ತನ್ನ ಇಚ್ಛಾಶಕ್ತಿಯಿಂದಲೇ, ಕುರುತಂತವೇ-ಕುರುವಂಶದ ಸಂತತಿಗಾಗಿ (ಸಂತಾನವನ್ನುಳಿಸಲು), ವೈರಾಟ್ಯಾಃ—ಉತ್ತರಾದೇವಿಯು, ಗರ್ಭಂ — ಗರ್ಭವನ್ನು, ಆವೃಣೋತ್—(ಪ್ರವೇಶಿಸಿ) ಸುತ್ತುಗಟ್ಟಿ ನಿಂತನು; ಬ್ರಹ್ಮಶಿರಸ್ತು ಅಸ್ತ್ರಂ — ಬ್ರಹ್ಮಾಸ್ತ್ರ

---

ಅಶ್ವತ್ಥಾಮರಿಂದ ಪ್ರಯೋಗಿಸಲಾದ ಬ್ರಹ್ಮಾಸ್ತ್ರವು, ಅಮೋಘವೂ, ಪ್ರತ್ಯಸ್ತ್ರಕ್ಕೆ ಬಗ್ಗದುದೂ, ಆದರೂ ಸಹ, ವೈಷ್ಣವತೇಜಸ್ಸನ್ನು ಹೊಂದಿ, ಉಪಶಮನಗೊಂಡಿತೆಂದು ಹೇಳಿರುವರು; ಇಲ್ಲಿ ಮೊದಲು ಹೇಳಿದ ಸ್ವಮಾಯೆಯಿಂದಲೇ ಬ್ರಹ್ಮಾಸ್ತ್ರವು ವ್ಯರ್ಥಗೊಳಿಸಲ್ಪಟ್ಟಿತೆಂದು ಹೇಳಿ ವೈಷ್ಣವ ತೇಜಸ್ಸಿನಿಂದ ಉಪಶಮನಗೊಂಡಿತೆಂದು ಹೇಳಿರುವುದು, ಮಾಯೆಯೇ ವೈಷ್ಣವತೇಜಸ್ಸೆಂಬುದನ್ನು ಸ್ಪಷ್ಟಗೊಳಿಸುತ್ತದೆ; ಆದ್ದರಿಂದ ಮಾಯಾಶಬ್ದವು

---

[1] ಸ್ವರೂಪಭೂತವಾದ ಮಾಯೆಯು, ಸ್ವಮಾಯಾ ಎಂದು ಹೇಳಲಾಗುತ್ತದೆ; ಇಚ್ಛಾರೂಪದ ಮಾಯೆಯೇ, 'ಸ್ವಯೋಗಮಾಯಾ' ಎಂದೂ ಹೇಳಲ್ಪಡುತ್ತದೆ; ಭ್ರಾಂತಿಹೇತುವಾದ ಮಾಯೆಯು, ಕೇವಲ ಮಾಯಾಶಬ್ದದಿಂದ ಹೇಳಲ್ಪಡುತ್ತದೆ; 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಇತ್ಯಾದಿ ಪ್ರಯೋಗದಂತೆ; ಈ ಪ್ರಯೋಗ ವೈಲಕ್ಷಣ್ಯದಿಂದ 'ಮಾಯಾ' ದ್ವಿವಿಧತ್ವವನ್ನು ಊಹಿಸಬಹುದಾಗಿದೆ.

ವಾದರೋ, ಅಮೋಘಂ–ಅಮೋಘ (ವ್ಯರ್ಥವಾಗದುದೂ), ಅಪ್ರತಿಕ್ರಿಯಂ –ಪ್ರತ್ಯಸ್ತ್ರರಹಿತವಾದುದೂ, ಯದ್ಯಪಿ–ಆಗಿದ್ದರೂ ಸಹ, ವೈಷ್ಣವಂ ತೇಜಃ–ವೈಷ್ಣವತೇಜಸ್ಸನ್ನು, ಆಸಾದ್ಯ – ಹೊಂದಿ, ಭೃಗೂದ್ವಹ–ಹೇ ಶೌನಕ! (ಭೃಗುಕುಲದ ಋಷಿ), ಸಮಶಾಮ್ಯತ್ – ಉಪಶಮನ ಹೊಂದಿತು (ಬ್ರಹ್ಮಾಸ್ತ್ರವು ಯಾವ ಅಪಾಯವನ್ನು ಮಾಡಲೂ ಅಸಮರ್ಥವಾಯಿತು); ಇತಿ – ಹೀಗೆ, ಸೂತಃ – ಸೂತಾಚಾರ್ಯನು, ಭಾಗವತೇ – ಭಾಗವತದಲ್ಲಿ (ಶೌನಕಾದಿಗಳಿಗೆ ಶ್ರೀ ಭಾಗವತನನ್ನು ಹೇಳುತ್ತಾ), ಮಾಯೇತ್ಯುಕ್ತ್ವಾ–ಮಾಯೆಯೆಂದು ಹೇಳಿ (ಮಾಯೆಯಿಂದ ಗರ್ಭಪ್ರವೇಶಮಾಡಿ, ಎಂದು ಹೇಳಿ), ಪುನಃ–ಮುಂದೆ, ತಾಂ ಚ–ಆ ಮಾಯೆಯನ್ನೇ, ವೈಷ್ಣವಂ ತೇಜಃ–ವೈಷ್ಣವ ತೇಜಸ್ಸನ್ನು, ಇತ್ಯಾಹ–ಎಂದು ಹೇಳಿದನು; ಸಾ–ಆ ತೇಜಸ್ಸೇ, ಹರೇಃ–ಶ್ರೀಹರಿಯ, ಸ್ವಮಾಯಾ ಕಿಲ–ಸ್ವಮಾಯೆಯೆಂಬುದಷ್ಟೆ (ಎಂದು ಸ್ಪಷ್ಟವೇ ಆಗಿದೆ).

**ಇಚ್ಛಾದಿರೂಪಾ ಯಾ ಮಾಯಾ ತಯಾ ಮಾಯಾಮಯೋಽಸ್ತ್ವಯಂ**
**ಸ್ವಚ್ಛಂದವೃತ್ತಿತಾ ಸರ್ವಶಕ್ತತಾ ಚ ಸಮರ್ಥತಾ ॥ ೩೨೭ ॥**
**ಸಿದ್ಧ್ಯೇನ್ಮಹಾತ್ಮನಸ್ತೇನ ಮಾಲಿನ್ಯಂ ನ ಹಿ ಕಿಂಚನ ।**
**ಪ್ರಾಚುರ್ಯಾರ್ಥೋ ಮಯಟ್‌ಶಬ್ದೋ ವಕ್ತಿ ತೈಃ ಪೂರ್ಣತಾಂ ಕಿಲ**

ಇಚ್ಛಾಶಕ್ತಿಯನ್ನೂ, ವಿಷ್ಣುವಿನ ತೇಜಸ್ಸನ್ನೂ, ಹೇಳುತ್ತದೆಂದು ತಿಳಿದುಬರುತ್ತದೆ (೩೨೪–೩೨೬). ಇಚ್ಛಾರೂಪವಾದ ಯಾವ ಮಾಯೆಯೋ, ಅದನ್ನೇ ಮನಸ್ಸಿನಲ್ಲಿಟ್ಟು, ಕೆಲವು ಪುರಾಣಗಳಲ್ಲಿ, ಶ್ರೀಹರಿಯನ್ನು 'ಮಾಯಾಮಯ' ನೆಂದೂ ವರ್ಣಿಸಲಾಗಿದೆ; ಇದರಿಂದ ಸ್ವೇಚ್ಛಾನುಸಾರ ಪ್ರವೃತ್ತಿಯೂ (ಸ್ವಾತಂತ್ರ್ಯವೆಂಬ ಮಹಾಗುಣವೂ), ಸರ್ವಶಕ್ತಿತ್ವಗಳು, ಮತ್ತು ಸಾಮರ್ಥ್ಯ ವಿಶೇಷವೂ ಸಿದ್ಧವಾಗುತ್ತವೆ; ಮಾಯಾಮಯನೆಂಬುದರಿಂದ ಮಹಾಮಹಿಮನಾದ ಶ್ರೀಹರಿಗೆ ಯಾವ ಪ್ರಕಾರದ ಅಶುದ್ಧತೆಯನ್ನೂ (ದೋಷವನ್ನೂ) ಶಂಕಿಸಬಾರದು; ಏಕೆಂದರೆ, 'ಮಾಯಾಮಯ' ಎಂಬಲ್ಲಿರುವ 'ಮಯಟ್' ಶಬ್ದವು, ಪ್ರಚುರವೆಂಬ (ಪೂರ್ಣವೆಂಬ) ಅರ್ಥವುಳ್ಳದ್ದು; ಇದರಿಂದ,

ಇಚ್ಛಾದಿರೂಪ ಮಾಯೆಯನ್ನಿಟ್ಟುಕೊಂಡು (ಮಾಯಾ ಶಬ್ದವು ಇಚ್ಛಾ ವಾಚಕವೆಂದು ಒಪ್ಪಿ) ಕೆಲವು ಪುರಾಣಾದಿಗಳಲ್ಲಿ ಶ್ರೀಹರಿಯನ್ನು ಮಾಯಾ ಮಯನೆಂದೂ ಕರೆದಿರುವರು; ಅದು (ಮಾಯಾಮಯನೆಂಬುದು) ಶ್ರೀಹರಿಯ ಮಹಾತ್ಮೆಯನ್ನೇ ಸಾಧಿಸುತ್ತದೆಂದು ಹೇಳುತ್ತಾರೆ :—

ಇಚ್ಛಾದಿರೂಪಾ – ಇಚ್ಛಾದಿ ಅರ್ಥವುಳ್ಳ, ಯಾ ಮಾಯಾ–ಯಾವ ಮಾಯೆಯೋ (ಪುರಾಣಗಳು ಈ ಅರ್ಥದಲ್ಲಿ ಮಾಯಾ ಶಬ್ದವನ್ನು ಉಪ ಯೋಗಿಸಿದಾಗ), ಅಯಂ – ಭಗವಂತನು, ಮಾಯಾಮಯಃ – ಮಾಯಾ ಮಯನೇ, ಅಸ್ತು–ಆಗಿರುವನು (ಆಗಲಿ) ; (ಆಗ ಆ ಶಬ್ದದಿಂದ), ಸ್ವಚ್ಛಂದ ವೃತ್ತಿತಾ–ಸ್ವೇಚ್ಛಾನುಸಾರವಾದ ವೃತ್ತಿಯೂ (ಪೂರ್ಣಸ್ವಾತಂತ್ರ್ಯವೂ), ಚ–ಮತ್ತು, ಸರ್ವಶಕ್ತತಾ–ಸರ್ವಶಕ್ತಿಮತ್ತ್ವವೂ, ಸಮರ್ಥತಾ–ಸಮರ್ಥಿಸ ಲ್ಪಡುವುದು (ಆಗುತ್ತದೆ) ; (ಸಮರ್ಥತಾ – ಸಾಮರ್ಥ್ಯವೂ, ಸಿದ್ಧ್ಯೇತ್– ಸಿದ್ಧಿಯಾಗುತ್ತದೆ); ತೇನ–ಅದರಿಂದ (ಮಾಯಾಮಯನೆಂದು ಕರೆದುದ ರಿಂದ), ಮಹಾತ್ಮನಃ–ಮಹಾಸ್ವಾಮಿಯಾದ ಭಗವಂತನಿಗೆ, ಕಿಂಚನ–ಎಷ್ಟು ಮಾತ್ರವೂ, ಮಾಲಿನ್ಯಂ – ದೋಷವು, ನ ಹಿ – ಇಲ್ಲವಷ್ಟೆ (ಏಕೆಂದರೆ), ಮಯಟ್‌ಶಬ್ದಃ – ಮಯಟ್ ಶಬ್ದವು, ಪ್ರಾಚುರ್ಯಾರ್ಥಃ – ಪ್ರಚುರ (ಪೂರ್ಣ) ಎಂಬ ಅರ್ಥವುಳ್ಳದ್ದು; ತೈಃ–ಅವುಗಳಿಂದ (ಸ್ವಚ್ಛಂದ ವೃತ್ತಿತ್ವ ಮೊದಲಾದವುಗಳಿಂದ), ಪೂರ್ಣತಾಂ–('ಮಯ' ಎಂಬುದು) ಪೂರ್ಣತ್ವ ವನ್ನು, ವಕ್ತಿ ಕಿಲ–ಹೇಳುವುದೆಂದೂ ಪ್ರಸಿದ್ಧವೇ.

**ಅನೇಕಾರ್ಥಪದಸ್ಯಾರ್ಥೋ ಗ್ರಾಹ್ಯಃ ಪ್ರಕರಣೋಚಿತಃ ।**
**ನ ಹಿ ಸೈಂಧವಶಬ್ದೇನ ವಕ್ತ್ಯಶ್ವಂ ಭುಕ್ತಿಕಾಮುಕಃ ॥ ೩೨೯ ॥**

---

(ಈ ಮಯಟ್ ಶಬ್ದದಿಂದ) ಸ್ವಾತಂತ್ರ್ಯಾದಿ ಮಹಾಗುಣಗಳ ಪರಿಪೂರ್ಣ ತೆಯು (ಆನಂತ್ಯವು) ಸಿದ್ಧವಾಗುತ್ತದೆ (೩೨೭–೩೨೮). ಮಯಟ್ ಶಬ್ದಕ್ಕೆ ವಿಕಾರಾರ್ಥಕತ್ವವೂ ಇದೆ, ನಿಜ; ಆದರೆ ಅನೇಕಾರ್ಥಗಳುಳ್ಳ ಪದಕ್ಕೆ, ಪ್ರಕರಣೋಚಿತವಾದ ಅರ್ಥವನ್ನು ಗ್ರಹಿಸಬೇಕೆಂಬ ನಿಯಮವಿದೆ; ಭೋಜ ನೇಚ್ಛೆಯುಳ್ಳ ಮನುಷ್ಯನೊಬ್ಬನು, 'ಸೈಂಧವ'ವನ್ನು ತಾರೆಂದರೆ, ಸೈಂಧವ

'ಮಾಯಾಮಯ'ನೆಂಬಲ್ಲಿ, ದೋಷರೂಪವಾದ ಮಾಯೆಯನ್ನೂ ಉಳ್ಳವನೆಂಬರ್ಥವನ್ನು ಸಂಗ್ರಹಿಸುತ್ತದೆಂದು ಏಕೆ ತಿಳಿಯಕೂಡದೆಂದರೆ ಹೇಳುತ್ತಾರೆ:—

ಅನೇಕಾರ್ಥಪದಸ್ಯ—ಅನೇಕಾರ್ಥಗಳುಳ್ಳ ಶಬ್ದದ, ಅರ್ಥಃ—ಅರ್ಥವು, ಪ್ರಕರಣೋಚಿತಃ – ಪ್ರಕರಣೋಚಿತವಾದ (ಶುಭಾಶುಭ ಪ್ರಕರಣಗಳಲ್ಲಿ ಪ್ರಯೋಗಿಸಲಾದ ಒಂದೇ ಪದಕ್ಕೆ ಶುಭಾಶುಭ ಅರ್ಥವೇ) ಅರ್ಥವೇ, ಗ್ರಾಹ್ಯಃ – ಸ್ವೀಕರಿಸುವುದು ಯುಕ್ತವು; ಭುಕ್ತಿಕಾಮುಕಃ – ಭೋಜನೇಚ್ಛೆಯುಳ್ಳವನು, ಸೈಂಧವಶಬ್ದೇನ – ಸೈಂಧವ ಶಬ್ದದಿಂದ (ಉಪ್ಪೆಂಬರ್ಥವುಳ್ಳ ಶಬ್ದದಿಂದ), ಅಶ್ವಂ—ಕುದುರೆಯನ್ನು (ಸೈಂಧವ ಶಬ್ದದ ಬೇರೊಂದು ಅರ್ಥವಾದ ಅಶ್ವವನ್ನು), ನ ಹಿ ವಕ್ತಿ—ಹೇಳುವುದಿಲ್ಲವಷ್ಟೆ.

**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ ।**
**ಇತಿ ಶ್ರುತೌ ತು ಯಾ ಮಾಯೇತ್ಯುಕ್ತಾ ಸಾ ಪ್ರಕೃತಿರ್ಜಡಾ ॥**

ದೋಷರೂಪವಾದ ಮಾಯೆಯೂ, ದ್ವಿವಿಧವಾಗಿರುವುದು; ಭ್ರಾಂತಿಜನಕವಾದುದು ಒಂದು, ಜಡಪ್ರಕೃತಿರೂಪವಾದುದು ಮತ್ತೊಂದು; ಮೊದಲಿನದು ಭಗವಂತನಲ್ಲಿ ಅತ್ಯಂತ ಅನುಪಪನ್ನವಾದುದು; ಎರಡನೆಯದು, ಕುಂಬಾರನು ಮೃತ್ತಿಕೆಯನ್ನು ಘಟನಿರ್ಮಾಣದಲ್ಲಿ ಉಪಾದಾನವನ್ನಾಗಿ ಉಪಯೋಗಿಸುವಂತೆ, ಭಗವಂತನು, ಜಡಪ್ರಕೃತಿಯನ್ನು ಜಗತ್ತನ್ನು ಸೃಷ್ಟಿಸುವುದಕ್ಕಾಗಿ ಉಪಯೋಗಿಸುತ್ತಾನೆ—ಇತರ ಕಾಲದಲ್ಲಿ ಅದರ ವಿಷಯಕ್ಕೆ ಉದಾಸೀನನಾಗಿಯೇ ಇರುತ್ತಾನೆಂದು ಹೇಳುತ್ತಾರೆ:—

---

ಎಂಬುದಕ್ಕೆ ಕುದುರೆ ಎಂಬ ಅರ್ಥವೂ ಇದ್ದಮಾತ್ರದಿಂದ, ಉಪ್ಪನ್ನು ತರಬೇಕಲ್ಲದೇ, ಕುದುರೆಯನ್ನು ತಂದು ನಿಲ್ಲಿಸುವುದೇ ? ಆತನ ಅಭಿಪ್ರಾಯವು, (ಹೃದಯವು) ಅಶ್ವವನ್ನು ಹೇಳುವುದಲ್ಲವಷ್ಟೆ (೩೨೯). ಮಾಯಾ ಶಬ್ದಕ್ಕೆ ಪ್ರಕೃತಿಯೆಂಬ ಅರ್ಥವೂ ಇದೆ; 'ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ' ಎಂಬ ಶ್ರುತಿಯು, ಮಾಯೆಯೆಂದರೆ ಪ್ರಕೃತಿ ಎಂದೂ, ಮಾಯೀ (ಮಾಯೆಯುಳ್ಳವನು) ಎಂದರೆ, ಭಗವಂತನನ್ನೇ ತಿಳಿಯಬೇಕೆಂದೂ, ಹೇಳುತ್ತದೆ; ಈ ಮಾಯೆಯೇ ಜಡಪ್ರಕೃತಿಯು (೩೩೦).

*

ಮಾಯಾಂ ತು–ಮಾಯೆಯನ್ನಾದರೋ, ಪ್ರಕೃತಿಂ–ಪ್ರಕೃತಿಯೆಂದು, ವಿದ್ಯಾತ್ – ತಿಳಿಯಬೇಕು; ಮಹೇಶ್ವರಂ–ಭಗವಂತನನ್ನು, ಮಾಯಿನಂ ತು– 'ಮಾಯೀ' ಎಂದೇ (ತಿಳಿಯಬೇಕು); ಇತಿ ಶ್ರುತೌ–ಹೀಗೆ ಹೇಳುವ ಶ್ರುತಿಯಲ್ಲಿ, ಯಾ ತು ಮಾಯೇತ್ಯುಕ್ತಾ – ಯಾವುದು ಮಾಯೆಯೆಂದೇ ಹೇಳಲಾಗಿರುವುದೋ, ಸಾ–ಅದು, ಜಡಾ ಪ್ರಕೃತಿಃ–ಜಡಪ್ರಕೃತಿಯು (ಸತ್ತ್ವಾದಿ ತ್ರಿಗುಣಾತ್ಮಕವಾದುದು).

**ಸರ್ಗಾದೌ ಮಾಯಯಾ ವಿಶ್ವಂ ಸೃಜತೀತಿ ವಚೋಽಪಿ ಚ ।**
**ಮಾಯಾಖ್ಯಾಂ ಪ್ರಕೃತಿಂ ಪ್ರಾಹ ಯಾಸ್ಯೋಪಾದಾನಕಾರಣಂ ॥**

ಮಾಯೆಯು ಭ್ರಮಕಾರಣವಾದ ಅನಿರ್ವಚನೀಯವೆಂಬ ಅವಿದ್ಯೆಯಲ್ಲ; ಪ್ರಕೃತಿಯೇ ಎನ್ನುತ್ತಾರೆ:—

ಸರ್ಗಾದೌ–ಸೃಷ್ಟಿಯ ಪ್ರಾರಂಭದಲ್ಲಿ, ಮಾಯಯಾ–ಮಾಯೆಯಿಂದ, ವಿಶ್ವಂ–ಜಗತ್ತನ್ನು, ಸೃಜತಿ – ಸೃಷ್ಟಿಮಾಡುತ್ತಾನೆ, ಇತಿ ವಚಃ ಚ–ಎಂಬ ಮಾತೇ, ಮಾಯಾಖ್ಯಾಂ–ಮಾಯಾನಾಮಕ, ಪ್ರಕೃತಿಂ–ಪ್ರಕೃತಿಯನ್ನು, ಪ್ರಾಹ–ಹೇಳಿತು (ಹೇಳುತ್ತದೆ); ಯಾ–ಯಾವುದು, ಅಸ್ಯ–ಈ ಜಗತ್ತಿಗೆ, ಉಪಾದಾನಕಾರಣಂ–ಉಪಾದಾನಕಾರಣವೋ (ಆ ಪ್ರಕೃತಿಯೇ ಆಗಿದೆ).

**ಜಗತೋ ಹೇತುಭೂತಾ ತು ಮಾಯಾ ಸರ್ವಗತಾ ಶುಭಾ ।**
**ವಿಕೃತಾಕಾರತೋಽನಿತ್ಯಾ ನಿತ್ಯಾ ಮೂಲಸ್ವರೂಪತಃ ॥ ೩೩೨ ॥**

ಜಗತಃ–ಜಗತ್ತಿಗೆ (ಅದರ ಸೃಷ್ಟಿಗೆ), ಹೇತುಭೂತಾ – ಕಾರಣವಾದ, ಮಾಯಾ ತು – ಮಾಯೆಯಾದರೋ, ಶುಭಾ – ಶುದ್ಧಸ್ವರೂಪವುಳ್ಳದ್ದು,

---

ಜಗತ್ಸೃಷ್ಟಿಯ ಆರಂಭದಲ್ಲಿ, ಮಾಯೆಯಿಂದ ಜಗತ್ತನ್ನು ಸೃಷ್ಟಿಮಾಡುವನೆಂಬ ವಚನವೂ ಉಪಾದಾನಕಾರಣವಾದ ಜಡಪ್ರಕೃತಿವಾಚಕವೇ ಆಗಿರುತ್ತದೆ; ಮೋಹ (ಅನ್ಯಥಾಜ್ಞಾನ ಅಥವಾ ಮಿಥ್ಯಾಜ್ಞಾನ) ಕಾರಣವಾದ ಮಾಯೆಯಲ್ಲ (೩೩೧). ಜಗತ್ತಿನ ಉಪಾದಾನಕಾರಣವಾದ ಮಾಯೆಯು, ಶುದ್ಧಸ್ವರೂಪವುಳ್ಳದ್ದಾಗಿದೆ ಮತ್ತು ವ್ಯಾಪ್ತವೂ ಆಗಿದೆ; ಆ ಮೂಲಪ್ರಕೃತಿಯ ವಿಕಾರಗಳೇ (ಪೃಥಿವ್ಯಾದಿ ಪಂಚಭೂತಾದಿಗಳು) ಅನಿತ್ಯಗಳು; ಮೂಲರೂಪದಿಂದ

ಸರ್ವಗತಾ ತು–ವ್ಯಾಪ್ತವಾದುದೇ ಆಗಿದೆ ; ವಿಕೃತಾಕಾರತಃ–(ಅದರ) ವಿಕಾರ ಗಳಿಂದ (ಪಂಚಭೂತಾದಿ ರೂಪಗಳಿಂದ), ಅನಿತ್ಯಾ – ಅನಿತ್ಯವಾದುದು ; ಮೂಲಸ್ವರೂಪತಃ–ಮೂಲರೂಪದಿಂದ (ಮೂಲಪ್ರಕೃತಿಯು), ನಿತ್ಯಾ–ನಿತ್ಯ ವಾದುದೇ (ಎಲ್ಲ ಕಾಲದಲ್ಲಿ ಇರುವುದೇ ಆಗಿದೆ).

**ನ ಸಾ ಭ್ರಾಂತಿಕರೀ ಶುದ್ಧಾ ಮುಕ್ತಾಮುಕ್ತಪ್ರದೇಶಗಾ ।**
**ಸೂಕ್ಷ್ಮರೇಣುಮಯೀ ಸಾ ಚ ತಂತುವಾಯಸ್ಯ ತಂತುವತ್ ॥ ೩೩೩ ॥**
**ವಶಗಾ ಯಸ್ಯ ದೇವಸ್ಯ ತಯಾ ಸ ಶಬಲಃ ಕಥಂ ।**
**ನ ಹಿ ಸ್ವರ್ಣಕೃತೋ ಹಸ್ತಃ ಸೌವರ್ಣಃ ಶಬಲೋಽಪಿ ವಾ ॥ ೩೩೪ ॥**
**ನಾಪಿ ತಂತುಮಯೀ ತಂತುವಾಯಮೂರ್ತಿರತಃ ಪ್ರಭುಃ ।**
**ಅಪ್ರಾಕೃತಮಹಾಕಾಯೋ ಯದ್ರೋಽಮ್ನಿ ಪ್ರಾಕೃತಂ ಜಗತ್ ॥ ೩೩೫**

ಸಾ ಶುದ್ಧಾ – ಆ ಶುದ್ಧಪ್ರಕೃತಿಯು, ನ ಭ್ರಾಂತಿಕರೀ ಜೀವರ ಕಣ್ಣು ಕಟ್ಟುವ (ಮುಚ್ಚಿಸುವ) ಮಾಯೆಯಂತೆ ಭ್ರಾಂತಿಯನ್ನುಂಟುಮಾಡುವುದಲ್ಲ (ಅತ ಏವ–ಆದ್ದರಿಂದ, ಶುದ್ಧಾ–ಶುದ್ಧವಾದುದು); ಮುಕ್ತಾಮುಕ್ತಪ್ರದೇಶಗಾ – ಮುಕ್ತಾಮುಕ್ತ ಪ್ರದೇಶಗಳಲ್ಲಿ ಸಹ (ಸರ್ವತ್ರ) ವ್ಯಾಪ್ತವಾದುದು[1] ;

---

ಪ್ರಕೃತಿಯು ನಿತ್ಯವೇ ಆಗಿದೆ (೩೩೨). ನಿತ್ಯವಾದ ಶುದ್ಧವಾದ ಮೂಲ ಪ್ರಕೃತಿಯು ಭ್ರಾಂತಿಕಾರಕವಲ್ಲ; ಮುಕ್ತ ಮತ್ತು ಅಮುಕ್ತಪ್ರದೇಶಗಳಿಲ್ಲ ತುಂಬಿದೆ; ಅದು, ತಾರ್ಕಿಕರ ಪರಮಾಣುಗಳಕಿಂತ ಅನಂತಾಂಶದಿಂದ ಸೂಕ್ಷ್ಮ ವಾದ ಅಣುರೂಪವುಳ್ಳದ್ದು; ನೇಯ್ಗಾರನ ನೂಲಿನಂತೆ ಭಗವಂತನ ಅಧೀನ ದಲ್ಲಿದೆ; ಇದರಿಂದ ಭಗವಂತನಿಗೆ ಶಬಲತ್ವವು (ದೋಷಮಿಶ್ರಣವು) ಹೇಗೆ

1 ವೈಕುಂಠಾದಿ ಮುಕ್ತಲೋಕಗಳಲ್ಲಿ ಶುದ್ಧಸತ್ತ್ವಾತ್ಮಕ ಪ್ರಕೃತಿಯು ಸದಾ ಇರುತ್ತದೆ ; ಮುಕ್ತರ ಇಚ್ಛಾನುಸಾರವಾದ ಅದರಿಂದ ಫಲಪುಷ್ಪಾದಿ ಭೋಗ್ಯವಸ್ತುಗಳು ತತ್ಕಾಲದಲ್ಲಿ ಉತ್ಪನ್ನವಾಗಿ, ಮುಕ್ತರ ಭೋಗಾನಂತರ, ಜಲದಿಂದ (ಸಮುದ್ರದಲ್ಲಿ) ಹುಟ್ಟಿದ ಅಲೆ ಗಳು, ಜಲದಲ್ಲಿಯೇ ಅಂತರ್ಧಾನಹೊಂದುವಂತೆ, ಆ ವಸ್ತುಗಳೆಲ್ಲವೂ ಮೂಲಪ್ರಕೃತಿ ಯಲ್ಲಿ ಲಯಗೊಳ್ಳುತ್ತವೆಂದು ಮುಂತಾಗಿ, ಶ್ರೀ ವಿಷ್ಣುರಹಸ್ಯದ ಮುಕ್ತಭೋಗಾಧ್ಯಾಯ ದಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ.

ಸೂಕ್ಷ್ಮರೇಣುಮಯೀ–(ತಾರ್ಕಿಕರ) ಪರಮಾಣುವಿಗಿಂತ ಅತ್ಯಂತ ಸೂಕ್ಷ್ಮವಾದ ಅಣುರೂಪವುಳ್ಳದ್ದು, ಸಾ – ಆ ಶುದ್ಧಪ್ರಕೃತಿಯು (ಆಗಿರುತ್ತದೆ); ತಂತುವಾಯಸ್ಯ – ನೇಯ್ಕಾರನ, ತಂತುವತ್ – (ಅಧೀನದಲ್ಲಿರುವ) ಸೂಕ್ಷ್ಮವಾದ ನೂಲೆಳೆಯಂತೆ, ಯಸ್ಯ–ಯಾವ, ದೇವಸ್ಯ–ಭಗವಂತನ, ವಶಗಾ–ವಶದಲ್ಲಿರುವುದೋ, ಸಃ–ಅಂಥ ಭಗವಂತನು, ತಯಾ–ಅದರಿಂದ (ಆ ಪ್ರಕೃತಿಯು ತನ್ನ ವಶದಲ್ಲಿರುವ ಮಾತ್ರದಿಂದ), ಕಥಂ – ಹೇಗೆ? ಶಬಲಃ – ಶಬಲನಾಗುತ್ತಾನೆ (ಮಿಶ್ರಸ್ವರೂಪನಾಗುತ್ತಾನೆ?); ಸ್ವರ್ಣಕೃತಃ – ಸ್ವರ್ಣಕಾರನ (ಅಕ್ಕಸಾಲಿಗನ), ಹಸ್ತಃ-ಹಸ್ತವು, ಸೌವರ್ಣಃ–(ಭಂಗಾರವನ್ನು ಹಿಡಿದು ಕೆಲಸ ಮಾಡುವುದರಿಂದ) ಸುವರ್ಣಾತ್ಮಕವು, ನ ಹಿ – ಆಗುವುದಿಲ್ಲವಷ್ಟೆ; ವಾ– ಅಥವಾ, ಶಬಲಃ ಅಪಿ–(ಹಸ್ತವು, ಕೈಯಲ್ಲಿ ಹಿಡಿದ ಭಂಗಾರದಿಂದ) ಮಿಶ್ರವೂ (ಹಸ್ತ ಸುವರ್ಣಗಳ ಶಬಲವೂ), (ನ ಹಿ – ಅಲ್ಲವಷ್ಟೇ); ತಂತುವಾಯಮೂರ್ತಿಃ–ನೇಯ್ಕಾರನ ದೇಹವು, ನಾಪಿ ತಂತುಮಯೀ–ತಂತುಮಯವೂ ಅಲ್ಲ (ಭಗವಂತನು ಈ ಅರ್ಥದಲ್ಲಿ 'ಮಾಯಾಮಯೀ' ಅಲ್ಲ);[1] ಅತಃ– ಆದ್ದರಿಂದ, ಪ್ರಾಕೃತಂ ಜಗತ್–ಪ್ರಕೃತಿನಿರ್ಮಿತ ಜಗತ್ತು, ಯದ್ರೋಮ್ಣಿ– ಯಾರ ಅಪ್ರಾಕೃತ ರೋಮಗಳನ್ನಾಶ್ರಯಿಸಿ ಸ್ಥಿತವಾಗಿಯೋ, (ಆತನು),

---

ಉಂಟಾಗಬಲ್ಲದು? ಭಂಗಾರವನ್ನು ತನ್ನ ಕೈಯಿಂದ ಹಿಡಿದು, ಕೆಲಸ ಮಾಡುವ ಅಕ್ಕಸಾಲಿಗನ ಕೈಯು, ಸುವರ್ಣಾತ್ಮಕವೋ (ಸ್ವರ್ಣಮಯವೋ) ಅಥವಾ ಸ್ವರ್ಣಮಿಶ್ರವೋ (ಶಬಲವೋ) ಆಗುವುದೇ? (ಇಲ್ಲ); ನೇಯ್ಕಾರನ ದೇಹವು, ತಂತುಮಯವಾಗುವುದೇ? (ಇಲ್ಲ). ಹೀಗೆ, ಮಾಯಾ ಶಬ್ದವಾಚ್ಯವಾದ ಪ್ರಕೃತಿಯನ್ನು ಉಪಾದಾನವನ್ನಾಗಿ ಉಪಯೋಗಿಸಿ, ಜಗತ್ಸೃಷ್ಟಿಯನ್ನು ಮಾಡುವ ಮಾತ್ರದಿಂದ ಮಾಯಾಮಯನಾಗುವುದಿಲ್ಲ ಅಥವಾ ಶಬಲನೂ ಆಗುವುದಿಲ್ಲ; ತನ್ನ ರೋಮಗಳಲ್ಲಿ ಜಗತ್ತನ್ನೇ ಧರಿಸಿರುವನೆಂಬ

---

1 ಅಕ್ಕಸಾಲಿಗನ ಅಧೀನದಲ್ಲಿ ಭಂಗಾರವೂ, ನೇಯ್ಕಾರನ ವಶದಲ್ಲಿ ನೂಲೆಳೆಗಳೂ ಇರುವಂತೆ, ಪ್ರಕೃತಿಯು ಭಗವಂತನ ವಶದಲ್ಲಿರುತ್ತದೆ; ಭಂಗಾರದಿಂದ, ಅಥವಾ ನೂಲೆಳೆಯಿಂದ, ತದ್ಭಾವವಾಗಲಿ ಅಥವಾ ಅದರ ಮಿಶ್ರಣವಾಗಿ (ಶಬಲತ್ವವಾಗಲಿ) ಅಕ್ಕಸಾಲಿಗ ಅಥವಾ ನೇಯ್ಕಾರನಿಗೆ ಇಲ್ಲದಿರುವಂತೆ, ಭಗವಂತನಿಗೂ ಮಾಯಾಶಬ್ದವಾಚ್ಯ ಪ್ರಕೃತಿಯು ಸಂಪರ್ಕದಿಂದ ಯಾವ ವಿಧದ ಶಬಲತ್ವವೂ ಇಲ್ಲ.

ಅಪ್ರಾಕೃತಮಹಾಕಾಯಃ—ಪ್ರಾಕೃತವಲ್ಲದ ವ್ಯಾಪ್ತವಾದ ಮಹಾದೇಹವುಳ್ಳ, ಪ್ರಭುಃ—ಸ್ವಾಮಿಯಾಗಿದ್ದಾನೆ (ಆತನ ಅಪ್ರಾಕೃತತ್ವಕ್ಕೆ ಹಾನಿಯನ್ನುಂಟು ಮಾಡುವ ಶಬಲತ್ವವು ಆತನಿಗೆ ಇಲ್ಲವೇ ಇಲ್ಲ; ತನ್ನ ವಶವಾದ ಪ್ರಕೃತಿಯು ತನ್ನ ಸದೃಶಾಕಾರವನ್ನು ಹೊಂದಿ ಪರಿಣಾಮಗೊಳ್ಳುವುದೂ ಇಲ್ಲ.).

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೩೩೬ ॥**

ಹೀಗಿರುವ ಪ್ರಕೃತಿಯಿಂದ ಭಗವಂತನು ಅಮಿಶ್ರಿತನೆಂಬಲ್ಲಿ ಗೀತಾ ವಾಕ್ಯವನ್ನು ಪ್ರಮಾಣೀಕರಿಸುತ್ತಾರೆ :—

ಭೂಮಿಃ—ಭೂಮಿಯು, ಆಪಃ—ಜಲವು, ಅನಲಃ—ಅಗ್ನಿಯು, ವಾಯುಃ —ವಾಯುವು, ಖಂ—ಆಕಾಶವು, ಮನಃ — ಮನಸ್ಸು, ಬುದ್ಧಿಃ — ಬುದ್ಧಿಯು, ಏವ ಚ—ಮತ್ತೂ, ಅಹಂಕಾರಃ — ಅಹಂಕಾರವು (ತತ್ವವು), ಇತಿ ಇಯಂ— ಹೀಗೆಂಬ ಈ, ಮೇ—ನನ್ನ ಅಧೀನವಾದ, ಪ್ರಕೃತಿಃ—ಪ್ರಕೃತಿಯು, ಭಿನ್ನಾ— (ನನ್ನಿಂದ) ಭಿನ್ನವಾದುದಾಗಿ, ಅಷ್ಟಧಾ — ಅಷ್ಟವಿಕಾರಗಳಿಂದ ವಿಭಕ್ತ ವಾದುದು (ಜಗತ್ತಿನ ಉಪಾದಾನ ಕಾರಣವಾಗಿದೆ ; ಜಗತ್ತು ಪರನಿಗೆ ಅಭಿಪ್ರೇತವಾದ ಅವಿದ್ಯೆಯೇ ಉಪಾದಾನವಾಗಿವುಳ್ಳದ್ದಲ್ಲ).

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಂ ।**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ।**
**ಇತಿ ಕೃಷ್ಣಃ ಸ್ವಯಂ ಪ್ರಾಹ ಪ್ರಕೃತ್ಯಧ್ಯಕ್ಷತಾಂ ಪರಂ ॥ ೩೩೭ ॥**

---

ಕಾರಣದಿಂದ, ಶಬಲನಾಗಲಾರನು (೩೩೩—೩೩೫). ಗೀತೆಯ ಶ್ರೀಕೃಷ್ಣ ವಾಕ್ಯಗಳೂ ಇದನ್ನೇ ಸಮರ್ಥಿಸುತ್ತವೆ; ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರಗಳೆಂಬುವು ಎಂಟು ವಿಧ ಪ್ರಕೃತಿಯು (ಎಂಟು ವಿಧದಿಂದ ವಿಕಾರಗೊಂಡಿರುವ ಪ್ರಕೃತಿಯು), ನನ್ನ ಅಧೀನವಾಗಿದ್ದು ಜಗತ್ತಿನ ಉಪಾದಾನವಾಗಿದೆ; ಜಗತ್ತಿಗೆ ಅವಿದ್ಯೆಯು ಉಪಾದಾನವಲ್ಲ (೩೩೬). ನಿಮಿತ್ತಕಾರಣನಾದ ಅಧ್ಯಕ್ಷನು ನಾನು; ನನ್ನಿಂದಲೇ ಪ್ರಕೃತಿಯು, ಚೇತನಾಚೇತನಾತ್ಮಕ ವಸ್ತುಗಳನ್ನೆಲ್ಲವನ್ನು, ಪ್ರಸವಿಸುತ್ತದೆ;

ಅಧ್ಯಕ್ಷೇಣ – ಅಧ್ಯಕ್ಷನಾದ (ಸ್ವಾಮಿಯಾದ—ಶಬಲಿತನಿಂದಲ್ಲ), ಮಯಾ–ನನ್ನಿಂದ ('ಮೇ ಪ್ರಕೃತಿಃ' ಎಂದು ಹಿಂದಿನ ಶ್ಲೋಕದಲ್ಲಿಯೂ, ನನ್ನ ಸ್ವಾಮಿತ್ವಕ್ಕೆ ಒಳಪಟ್ಟದ್ದೆಂಬರ್ಥದಲ್ಲಿಯೇ, ಹೇಳಿರುವುದು), ಪ್ರಕೃತಿಃ– ಪ್ರಕೃತಿಯು, ಸಚರಾಚರಂ–ಚೇತನಾಚೇತನ ರೂಪದ ಜಗತ್ತನ್ನು, ಸೂಯತೇ –ಪ್ರಸವವಾಗುತ್ತದೆ (ಕಾರ್ಯರೂಪದಿಂದ, ಪ್ರಕೃತಿಯ ವಿಕಾರವೇ ಜಗತ್ತಾಗಿರುವುದರಿಂದ, ಪ್ರಕೃತಿಯು ಪ್ರಸವಿಸುತ್ತದೆಂದಿರುತ್ತದೆ); ಅನೇನ – ಈ, ಹೇತುನಾ – ಕಾರಣದಿಂದಲೇ (ನಿಮಿತ್ತನಾದ ನನ್ನಿಂದಲೇ), ಕೌಂತೇಯ– ಹೇ ಅರ್ಜುನ! ಜಗತ್–ಜಗತ್ತು, ವಿಪರಿವರ್ತತೇ–ವಿಶೇಷವಾಗಿ (ಅನಾದಿಯಿಂದ, ಅನಂತಕಾಲದಲ್ಲಿ ಸಹ) ಚಕ್ರದಂತೆ ಸುತ್ತುತ್ತದೆ; ಇತಿ–ಹೀಗೆಂದು (ಪ್ರಕೃತಿಯನ್ನಾಳುವ ಸ್ವಾಮಿಯೆಂದು), ಕೃಷ್ಣಃ–ಶ್ರೀಕೃಷ್ಣನು, ಸ್ವಯಂ– ತಾನೇ (ಗೀತೆಯಲ್ಲಿ), ಪ್ರಕೃತ್ಯಧ್ಯಕ್ಷತಾಂ – ಪ್ರಕೃತಿಯ ಸ್ವಾಮಿತ್ವವನ್ನು, ಪರಂ–ಮಾತ್ರ (ಕೇವಲವಾಗಿ—ತದ್ರೂಪತ್ವ ಅಥವಾ ಅದರಿಂದ ಶಬಲತ್ವವನ್ನಲ್ಲದೇ), ಪ್ರಾಹ–ಹೇಳಿರುವನು.

**ನಿಮಿತ್ತಮಾತ್ರಂ ತತ್ರಾತ್ಮಾ ನಿರ್ಗುಣಃ ಪುರುಷರ್ಷಭಃ ।**
**ವ್ಯಕ್ತಾವ್ಯಕ್ತಮಿದಂ ವಿಶ್ವಂ ಯತ್ರ ಭ್ರಮತಿ ಲೋಹವತ್ ।**
**ಇತಿ ವಾಕ್ಯೇ ನಿಮಿತ್ತತ್ವಮಾತ್ರೋಕ್ತೇಶ್ಚ ನ ತನ್ಮಯಃ ॥ ೩೩೮ ॥**

ಇದೇ ಅರ್ಥವೆಂಬಲ್ಲಿ ಭಾಗವತ ವಾಕ್ಯವನ್ನು ಉದಹರಿಸುತ್ತಾರೆ :—

ತತ್ರ–(ಪ್ರಕೃತಿಯಿಂದ ಜಗತ್ತನ್ನು ಸೃಷ್ಟಿಮಾಡುವ) ಆ ವಿಷಯದಲ್ಲಿ, ನಿರ್ಗುಣಃ – ಸತ್ವಾದಿ ಗುಣರಹಿತನಾದ, ಪುರುಷರ್ಷಭಃ – ಪುರುಷೋತ್ತಮನಾದ, ಆತ್ಮಾ– ಭಗವಂತನು (ಸ್ವಾಮಿಯು), ನಿಮಿತ್ತಮಾತ್ರಂ – ನಿಮಿತ್ತ

---

ಮತ್ತು ಜಡಾಜಡಾತ್ಮಕ ಈ ಜಗತ್ತು ನನ್ನಿಂದಲೇ, ಅನಾದಿಯಿಂದ ಅನಂತ ಕಾಲದಲ್ಲಿ, ಚಕ್ರದಂತೆ, ಸುತ್ತುತ್ತದೆ; ಹೀಗೆಂದು ಶ್ರೀಕೃಷ್ಣನು, ತಾನು ಕೇವಲ ಪ್ರಕೃತಿಯ (ಅಧ್ಯಕ್ಷ) ಸ್ವಾಮಿಯೆಂದು ಹೇಳಿಕೊಂಡಿದ್ದಾನೆ; ತದ್ರೂಪನನ್ನಾಗಿ ಅಥವಾ ಶಬಲನನ್ನಾಗಿ ಹೇಳಿಕೊಂಡಿಲ್ಲ (೩೩೭). ಇದೇ ಅರ್ಥವನ್ನೇ ಭಾಗವತವೂ ಹೇಳುತ್ತದೆ; ಅಯಸ್ಕಾಂತದಿಂದ ಆಕರ್ಷಿತವಾದ ಕಬ್ಬಿಣದ ವಸ್ತುವು, ಅದರ ಸುತ್ತಲೂ ಸುತ್ತುವಂತೆ, ಇಂದ್ರಿಯಾಗೋಚರವೂ

ಕಾರಣನು ಮಾತ್ರ (ಉಪಾದಾನ ಕಾರಣನಲ್ಲ); ಯತ್ರ–ಯಾವ ಭಗವಂತನಲ್ಲಿ, ವ್ಯಕ್ತಾವ್ಯಕ್ತಂ–ವ್ಯಕ್ತವೂ ಅವ್ಯಕ್ತವೂ ಆದ (ಇಂದ್ರಿಯಗೋಚರವೂ ಮತ್ತು ಅತೀಂದ್ರಿಯವೂ ಆದ), ಇದಂ–ಈ ವಿಶ್ವಂ–ಜಗತ್ತು, ಲೋಹವತ್–ಲೋಹದಂತೆ (ಕಬ್ಬಿಣದ ವಸ್ತುವಿನಂತೆ), ಭ್ರಮತಿ–(ಅಯಸ್ಕಾಂತಶಿಲೆಯ ಸುತ್ತಲೂ ಎಂಬಂತೆ, ಆಕರ್ಷಿತವಾಗಿ) ಸುತ್ತುತ್ತಿರುವುದೋ, ಇತಿ–ಎಂಬ, ವಾಕ್ಯೇ – ವಾಕ್ಯದಲ್ಲಿ, ನಿಮಿತ್ತಮಾತ್ರತ್ವೋಕ್ತೇಃ – ನಿಮಿತ್ತಮಾತ್ರನೆಂದು ಹೇಳಿರುವುದರಿಂದ, ನ ತನ್ಮಯಃ–[1] (ಭಗವಂತನು) ತನ್ಮಯನೂ (ಅದರಿಂದ ಶಬಲಿತನೂ) ಅಲ್ಲ.

**ನಿರ್ಗುಣತ್ವೋಕ್ತಿತಶ್ಚಾಭೂತ್ ಸಾ ದೂರೇ ತ್ರಿಗುಣಾತ್ಮಿಕಾ ।**
**ಆಹಾಯಸ್ಕಾಂತದೃಷ್ಟಾಂತೋಽಪ್ಯಸಕ್ತಸ್ಯ ನಿಯಂತೃತಾಂ ॥ ೩೩೯ ॥**

ನಿರ್ಗುಣತ್ವೋಕ್ತಿತಃ – (ಭಗವಂತನಿಗೆ) ನಿರ್ಗುಣತ್ವವನ್ನು ಹೇಳಿರುವುದರಿಂದ, ಸಾ ತ್ರಿಗುಣಾತ್ಮಿಕಾ–ತ್ರಿಗುಣಸ್ವರೂಪದ ಪ್ರಕೃತಿಯು, ದೂರೇ–

---

ಅತೀಂದ್ರಿಯವೂ ಆದ ಸರ್ವಜಗತ್ತು, ಪರಮಾತ್ಮನ ಇಚ್ಛೆಯಂತೆ, ಸುತ್ತುತ್ತದೆ; ಈ ವಿಷಯದಲ್ಲಿ, ಪುರುಷೋತ್ತಮನಾದ ಪರಮಾತ್ಮನೇ ನಿಮಿತ್ತ ಕಾರಣನು–ಆತನು ನಿರ್ಗುಣನೂ ಆಗಿರುವನು; ಹೀಗೆ ನಿಮಿತ್ತಮಾತ್ರತ್ವವು ಹೇಳಲ್ಪಟ್ಟಿರುತ್ತದೆ—ತನ್ಮಯತ್ವವಲ್ಲ (೩೩೮). ನಿರ್ಗುಣತ್ವವನ್ನು ಭಗವಂತನಿಗೆ ಹೇಳಿರುವುದು, ಆತನ ಸ್ವರೂಪದಲ್ಲಿ ತ್ರಿಗುಣಸ್ವರೂಪದ ಪ್ರಕೃತಿಯು, ಇಲ್ಲವೆಂದು ಸಾಧಿಸುತ್ತದೆ; ಅಯಸ್ಕಾಂತದ ದೃಷ್ಟಾಂತವೂ, ಪ್ರಾಕೃತಸಂಗ ರಹಿತನಾದರೂ, ಪರಮಾತ್ಮನು ಅದರ ನಿಯಾಮಕನೆಂಬುದನ್ನು ಸಾಧಿಸುತ್ತದೆ

---

[1] ಕೂಟಸ್ಥ (ನಿರ್ವಿಕಾರಸ್ವರೂಪ) ನಾದ ಭಗವಂತನು ಜಗದಾಕಾರವಾಗಿ ಪರಿಣಾಮ ಹೊಂದುವನೆಂಬುದು ಕೂಡುವುದಿಲ್ಲ; ಜಗತ್ತಿಗೆ ಉಪಾದಾನನಾದರೆ ಮಾತ್ರ ತನ್ಮಯತ್ವವು, ಅಥವಾ ಪ್ರಕೃತಿ ಶಬಲತ್ವವೂ ಕೂಡುತ್ತದೆ; ಆದ್ದರಿಂದ, ನಿಮಿತ್ತ ಕಾರಣತ್ವವನ್ನು ಮಾತ್ರ ಹೇಳಿಕೊಂಡಿರುವನು; ಗಡಿಗೆಗೆ ಮಣ್ಣು ಉಪಾದಾನಕಾರಣವು; ಕುಂಬಾರ (ಚಕ್ರ ಇತ್ಯಾದಿ) ನಿಮಿತ್ತಕಾರಣಗಳು; ವಸ್ತುರಚನೆಯಲ್ಲಿ ಸ್ವಯಂ ಸೇರದಿರುವುದೆಂದು ಸಾಮಾನ್ಯಾರ್ಥ.

ಬಹು ದೂರದಲ್ಲಿಯೇ ಉಳಿಯುತ್ತದೆಂದು (ಆಗುತ್ತದೆ);[1] ಅಯಸ್ಕಾಂತ ದೃಷ್ಟಾಂತಃ ಅಪಿ–ಸೂಜಿಗಲ್ಲಿನ ದೃಷ್ಟಾಂತವಾದರೂ, ಅಸಕ್ತಸ್ಯ–(ಪ್ರಕೃತಿಯ ಸಂಬಂಧ—ಸಂಪರ್ಕರಹಿತನಾದರೂ) ಸಂಬಂಧರಹಿತನಿಗೆ,[2] ನಿಯಂತೃತಾಂ–ನಿಯಾಮಕತನವನ್ನೂ, ಆಹ–ಹೇಳಿತು.

**ತಮಸಃ ಪಾರಗತ್ವಂ ಚ ಶ್ರುತ್ಯಾ ಸ್ಮೃತ್ಯಾ ಚ ಕೀರ್ತ್ಯತೇ ।**
**ಅತೋ ಜಗದುಪಾದಾನಮಾಯಾಶಬಲತಾ ಗತಾ ॥ ೩೪೦ ॥**

ತಮಸಃ–ಜಡಪ್ರಕೃತಿಯ, ಪಾರಗತ್ವಂ–ಅತಿಕ್ರಮಿಸುವಿಕೆಯು, ಶ್ರುತ್ಯಾ –ಶ್ರುತಿಯಿಂದಲೂ ('ವೇದಾಹಮೇತಂ ಪುರುಷಂ ಮಹಾಂತಮಾದಿತ್ಯವರ್ಣಂ

---

(೩೩೯). ಪ್ರಕೃತಿಯ ಸಂಪರ್ಕರಹಿತನೆಂಬ ಮಹಿಮೆಯನ್ನು, ಶ್ರುತಿಸ್ಮೃತಿಗಳೂ ಸ್ಪಷ್ಟವಾಗಿ ಕೀರ್ತಿಸುತ್ತವೆ; ಆದ್ದರಿಂದ ಜಗದುಪಾದಾನವಾದ ಪ್ರಕೃತಿ

---

1 ನಿರ್ಗುಣನೆಂಬುದರಿಂದ ಪ್ರಕೃತಿಯು ಭಗವಂತನ ಸ್ವರೂಪದಿಂದ ಬಹುದೂರ ವಿರತಕ್ಕದ್ದೆಂದು ಸಿದ್ಧವಾಗುತ್ತದೆ; ವಸ್ತ್ರವನ್ನು ಬಿಟ್ಟು ಅದರ ರೂಪಮಾತ್ರವು ಹೊರಗೆ ಬರುವುದೇ? (ಇಲ್ಲ); ಅದರಂತೆ ಗುಣಮಯವಾದ (ಗುಣಸ್ವರೂಪದ) ಪ್ರಕೃತಿಯು ಬಿಟ್ಟುಹೋಗದೇ, ಮಾಯಾಮಯನು, ನಿರ್ಗುಣನು ಹೇಗಾಗುತ್ತಾನೆ? (ಸಾಧ್ಯವಿಲ್ಲ); ಆದ್ದರಿಂದ, ಭಗವಂತನು, ನಿರ್ಗುಣನೆಂದರೆ, ಗುಣಸ್ವರೂಪ (ಗುಣಮಯನು) ಅಲ್ಲವೆಂದೇ ಸಿದ್ಧವಾಗುತ್ತದೆ.

೨ ಸೂಜಿಗಲ್ಲೆಂಬುದು ಒಂದು ಶಿಲಾವಿಶೇಷವು; ಅದರ ಸಂಪರ್ಕವಿಲ್ಲದೇ ದೂರದಲ್ಲಿರುವ ಕಬ್ಬಿಣದ ವಸ್ತುವು ಸುತ್ತುತ್ತದೆ; ಈ ದೃಷ್ಟಾಂತವೂ ಗುಣಸಂಬಂಧವಿಲ್ಲದಿದ್ದರೂ, ಅಯಸ್ಕಾಂತದಂತೆ, ಗುಣಗಳನ್ನು (ಗುಣಾತ್ಮಕ ಪ್ರಕೃತಿಯನ್ನು) ಭಗವಂತನು, ನಿಯಮನ ಮಾಡುತ್ತಾನೆಂದು ಸಾಧಿಸುತ್ತದೆ; ಪ್ರಕೃತ್ಯಾದಿಗಳ ಲೇಪರಹಿತನೆಂದೂ ಇದರಿಂದಲೇ ಸಿದ್ಧಿಸುತ್ತದೆ; ಯದ್ಯಪಿ ಭಗವಂತನು ಸರ್ವತ್ರವ್ಯಾಪ್ತನಾಗಿ ಕಬ್ಬಿಣದಲ್ಲಿಯೂ ಇದ್ದಾನೆ–ಸೂಜಿಗಲ್ಲಿನಂತೆ ದೂರವಿರುವುದಿಲ್ಲ; ದೃಷ್ಟಾಂತದಲ್ಲಿ ವಿದೂರತ್ವವು ಲೇಪಾಭಾವವನ್ನು ಸೂಚಿಸುತ್ತದೆ; ಅಲ್ಲಿದ್ದರೂ ಲೇಪವಿಲ್ಲವೆಂಬರ್ಥವೇ ಗ್ರಾಹ್ಯವೆಂಬುದು, 'ಮಯಾ ತತಮಿದಂ ವಿಶ್ವಂ ಜಗದವ್ಯಕ್ತಮೂರ್ತಿನಾ। ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ।'–ಅವ್ಯಕ್ತನಾದ ವಿಶ್ವವನ್ನೇ ವ್ಯಾಪಿಸಿದ್ದರೂ, ಸರ್ವಭೂತಗಳು (ಚರಾಚರ ವಸ್ತುಗಳು) ನನ್ನಲ್ಲಿಯೇ ಇದ್ದರೂ, ನಾನು ಅವುಗಳಲ್ಲಿಲ್ಲ—ಎಂದರೆ ಅವುಗಳ ಲೇಪ—ಧರ್ಮಸಂಪರ್ಕವು, ನನಗಿಲ್ಲವೆಂದು ಹೇಳುವ ಗೀತಾವಾಕ್ಯದಿಂದ ಸ್ಪಷ್ಟವಾಗುತ್ತದೆ.

ತಮಸಃ ಪರಸ್ತಾತ್' ಇತ್ಯಾದಿ ಶ್ರುತಿಗಳಿಂದಲೂ), ಸ್ಮೃತ್ಯಾ ಚ–ಸ್ಮೃತಿಯಿಂದಲೂ ('ತಮಸ್ತದಾಸೀದ್ಗಹನಂ ಗಂಭೀರಂ ಯಸ್ತಸ್ಯ ಪಾರೇಽಭಿವಿರಾಜತೇ ವಿಭುಃ' ಇತ್ಯಾದಿ),[1] ಕೀರ್ತ್ಯತೇ – ಹೇಳಲ್ಪಡುತ್ತದೆ ; ಅತಃ–ಆದ್ದರಿಂದ, ಜಗದುಪಾದಾನಮಾಯಾಶಬಲತಾ – ಜಗದುಪಾದಾನವಾದ ಮಾಯಾಶಬಲತ್ವವು, ಗತಾ–ಬಿದ್ದುಹೋಯಿತು.

**ವಿದಿತೋಽಸಿ ಭವಾನ್ ಸಾಕ್ಷಾತ್ಪುರುಷಃ ಪ್ರಕೃತೇಃ ಪರಃ ।**
**ಕೇವಲಾನುಭವಾನಂದಸ್ವರೂಪಃ ಸರ್ವಬುದ್ಧಿದೃಕ್ ॥ ೩೪೧ ॥**
**ಇತಿ ಭಾಗವತೇ ಕೃಷ್ಣಃ ಪ್ರಕೃತೇಃ ಪರ ಏವ ಸನ್ ।**
**ಕೇವಲಾನುಭವಾನಂದರೂಪಃ ಸ್ಪಷ್ಟಂ ನಿರೂಪಿತಃ ॥ ೩೪೨ ॥**

ಭಾಗವತಶ್ಲೋಕವನ್ನು ಉದಾಹರಿಸಿ, ಭಗವಂತನ ದೇಹಕ್ಕೂ ಮಾಯವೆಂಬ ಪ್ರಕೃತಿಶಬಲತ್ವವು ಇಲ್ಲವೆಂದು ಉಪಪಾದಿಸುತ್ತಾರೆ :—

ಭವಾನ್–ನೀನು (ಶ್ರೀಕೃಷ್ಣನು ಅವತರಿಸಿದಾಗ, ಶಂಖಚಕ್ರಾದಿಗಳಿಂದ ಭೂಷಿತವಾದ ಚತುರ್ಭುಜವುಳ್ಳ ತನ್ನ ವಿಲಕ್ಷಣ ರೂಪವನ್ನು ಪ್ರದರ್ಶಿಸಿದುದನ್ನು ಕಂಡ ವಸುದೇವನು ಸ್ತೋತ್ರಮಾಡುತ್ತಾ ಹೇಳುವ ವಾಕ್ಯವಿದು),

---

ಯಿಂದ ಶಬಲತ್ವವೆಂಬ ವಾದವು, ಭಗ್ನವಾಯಿತು (೩೪೧). ಭಾಗವತದಲ್ಲಿ ಶ್ರೀಕೃಷ್ಣನು, ಪರಮಪುರುಷನೆಂದೂ, ಪ್ರಕೃತಿಯಿಂದ ಪರನೆಂದೂ (ಭಿನ್ನಸ್ವರೂಪನೂ, ಉತ್ತಮನೂ, ಎಂದು), ಕೇವಲ ಜ್ಞಾನಾನಂದಸ್ವರೂಪನೆಂದೂ, ಸರ್ವಾಂತರ್ಯಾಮಿಯಾಗಿದ್ದು, ಸರ್ವರ ಮನಸ್ಸನ್ನು ಪ್ರತ್ಯಕ್ಷ ಕಾಣುವ ಮಹಾತ್ಮನೆಂದೂ, ನಿರೂಪಿಸಲ್ಪಟ್ಟಿರುವನು ; ಸ್ಪಷ್ಟವಾದ ಈ ನಿರೂಪಣೆಯಿಂದ, ಶ್ರೀಕೃಷ್ಣಸ್ವರೂಪವು (ದೇಹವೂ) ಜ್ಞಾನಾನಂದಾತ್ಮಕವಾದುದೆಂದೂ

---

[1] 'ಪ್ರಕೃತಿಯಿಂದ ಆಚೆ ಇರುವ, ಅದರಿಂದ ಭಿನ್ನಸ್ವರೂಪನೂ, ಸ್ವಾಮಿಯಾದ್ದರಿಂದ ಉತ್ತಮನೂ ಆದ, ಈ ಮಹಾಪುರುಷನು, ಅನಂತ ಸೂರ್ಯಪ್ರಕಾಶನು—ಆತನನ್ನು ನಾನು ತಿಳಿದಿರುವೆನು ;' ಎಂದು ಉದಾಹೃತ ಶ್ರುತಿಯ ಭಾವಾರ್ಥವು ; 'ಆಗ ಗಹನವಾದ, ಗಾಢಾಂಧಕಾರವಿತ್ತು (ಮಹಾಪ್ರಲಯಕಾಲದಲ್ಲಿ) ; ಅದನ್ನು ಮೀರಿ ಸರ್ವಶಕ್ತನಾದ ಪ್ರಭುವು—ಭಗವಂತನು, ಚೆನ್ನಾಗಿ ಪ್ರಕಾಶಿಸುತ್ತಿರುವನು'—ಎಂಬುದು ಉಕ್ತಸ್ಮೃತಿಯ ಭಾವವು.

ಸಾಕ್ಷಾತ್ – ಪ್ರತ್ಯಕ್ಷವಾಗಿ ಕಾಣುತ್ತಿರುವ, ಪ್ರಕೃತೇಃ ಪರಃ–ಪ್ರಕೃತಿಯಿಂದ ಭಿನ್ನನೂ ಸ್ವಾಮಿಯೂ, ಪುರುಷಃ – ಸರ್ವರ ಅಂತರ್ಯಾಮಿಯಾದ ಪುರುಷ ನಾಮಕನೂ, ಸರ್ವಬುದ್ಧಿದೃಕ್–ಸರ್ವರ ಮನಸ್ಸಿನ ಸರ್ವವ್ಯಾಪಾರಗಳನ್ನೂ ಪ್ರತ್ಯಕ್ಷ ನೋಡುವ, ಕೇವಲಾನುಭವಾನಂದ ಸ್ವರೂಪಃ – ಜ್ಞಾನಾನಂದ ಸ್ವರೂಪನೆಂದೂ (ಪ್ರಾಕೃತದಿಂದ ಅಮಿಶ್ರವಾದ ಅಪ್ರಾಕೃತ ದೇಹವುಳ್ಳವನೆಂದೂ), ವಿದಿತಃ–(ನನ್ನಿಂದ) ತಿಳಿಯಲ್ಪಟ್ಟವನು, ಅಸಿ–ಆಗಿರುವಿ; ಇತಿ–ಎಂದು, ಭಾಗವತೇ–ಭಾಗವತದಲ್ಲಿ, ಕೃಷ್ಣನು–ಶ್ರೀಕೃಷ್ಣನು, ಪ್ರಕೃತೇಃ–ಪ್ರಕೃತಿಯಿಂದ, ಪರಃ ಏವ ಸನ್–ವಿಲಕ್ಷಣನೇ (ಭಿನ್ನಸ್ವರೂಪನೇ) ಆಗಿರುವವನಾಗಿ, ಕೇವಲಾನುಭವಾನಂದರೂಪಃ – ಜ್ಞಾನಾನಂದಮಾತ್ರ ದೇಹವುಳ್ಳವನೆಂದು, ಸ್ಪಷ್ಟಂ – ಸ್ಪಷ್ಟವಾಗಿ (ಸಂದೇಹಕ್ಕೆ ಅವಕಾಶವಿಲ್ಲದಂತೆ), ನಿರೂಪಿತಃ–ನಿರೂಪಿತನಾಗಿದ್ದಾನೆ (ಹೇಳಲ್ಪಟ್ಟಿರುವನು).

**ಸ್ವದೃಷ್ಟಮದ್ಭುತಂ ರೂಪಂ ಶಿಶೋಸ್ತಸ್ಯ ಚತುರ್ಭುಜಂ ।**
**ಇತ್ಥಮಸ್ತೌತ್ಕಿಲ ಪಿತಾ ದೀಪ್ತಶ್ರೀವತ್ಸಕೌಸ್ತುಭಂ ॥ ೩೪೩ ॥**

ಸ್ವದೃಷ್ಟಂ–ತನ್ನಿಂದ (ವಸುದೇವನಿಂದ) ನೋಡಲಾದ, ಚತುರ್ಭುಜಂ–ನಾಲ್ಕು ಕೈಗಳುಳ್ಳ (ತೋಳುಗಳುಳ್ಳ), ತಸ್ಯ–ತನ್ನ, ಶಿಶೋಃ–ಮಗುವಿನ, ಅದ್ಭುತಂ ರೂಪಂ – ಅಲೌಕಿಕವಾದ ದಿವ್ಯರೂಪವನ್ನು, ಇತ್ಥಂ – ಹೀಗೆ (ಪ್ರಕೃತಿಯಿಂದ ಪರನೆಂದೂ, ಕೇವಲಾನುಭವಾನಂದ ಸ್ವರೂಪನೆಂದೂ), ದೀಪ್ತಶ್ರೀವತ್ಸಕೌಸ್ತುಭಂ–ಪ್ರಜ್ವಲಿಸುವ ಶ್ರೀವತ್ಸ ಮತ್ತು ಕೌಸ್ತುಭಗಳಿಂದ ಶೋಭಿಸುವವನನ್ನಾಗಿ, ಪಿತಾ–ತಂದೆಯೇ, ಅಸ್ತೌತ್ಕಿಲ–ಸ್ತೋತ್ರಮಾಡಿರುವುದು (ಭಾಗವತದಲ್ಲಿ ಪ್ರಸಿದ್ಧವಿದೆಯಷ್ಟೆ).

---

ಪ್ರಕೃತಿಯಿಂದ ಅಮಿಶ್ರಿತವೆಂದೂ ಸಿದ್ಧವಾಗಿ, ಮಾಯಾಮಯತ್ವವೂ, ಮಾಯಾಶಬಲತ್ವವೂ ದೂರವೇ ಉಳಿದವು (೩೪೧–೩೪೨). ಶ್ರೀಕೃಷ್ಣನು ಅವತರಿಸಿದುದನ್ನು ಕಂಡ, ತಂದೆಯಾದ ವಸುದೇವನು, ಚತುರ್ಭುಜಗಳಿಂದಲೂ, ಶಂಖ, ಚಕ್ರ, ಪ್ರಜ್ವಲಿಸುವ ಶ್ರೀವತ್ಸ ಕೌಸ್ತುಭಗಳಿಂದಲೂ, ವಿರಾಜಿಸುತ್ತಿದ್ದ ಆ ಅದ್ಭುತರೂಪವನ್ನು, ಅಪ್ರಾಕೃತವೆಂದೇ ಸ್ತೋತ್ರಮಾಡಿರುವನು (೩೪೩).

**ಅತೋಽಪ್ರಾಕೃತಏವಾಭೂದ್ದಿವ್ಯಾಕಾರೋ ಹರೇರಸೌ ।**
**ಜಡಾಮಿಶ್ರಸುಖಜ್ಞಾನಾತ್ಮಕ ಹಸ್ತಾಂಘ್ರ್ಯುರೋಮುಖಃ ॥ ೩೪೪ ॥**

ಈ ವಸುದೇವಸ್ತುತಿಯಿಂದ ಸಿದ್ಧವಾಗುವ ಪ್ರಮೇಯಗಳನ್ನು ವಿವರಣ ಮಾಡಿ ನಿರೂಪಿಸುತ್ತಾರೆ :—

ಅತಃ—ಆದ್ದರಿಂದ (ಹೀಗೆ ಸ್ತುತಿಸಿರುವುದರಿಂದ), ಹರೇಃ—ಶ್ರೀಹರಿಯ, ಅಸೌ – ಈ (ಶ್ರೀಕೃಷ್ಣರೂಪವು), ದಿವ್ಯಾಕಾರಃ – ವಿಲಕ್ಷಣ ಆಕಾರವುಳ್ಳ, ಅಪ್ರಾಕೃತಃ – ಅಪ್ರಾಕೃತವಾದುದೇ, ಅಭೂತ್–(ಎಂದು) ಸಿದ್ಧವಾಯಿತು; ಜಡಾಮಿಶ್ರಸುಖಜ್ಞಾನಾತ್ಮಕ ಹಸ್ತಾಂಘ್ರ್ಯುರೋಮುಖಃ– (ಶ್ರೀಕೃಷ್ಣನ ರೂಪವನ್ನು, ವಸುದೇವನು, ಜೀವಮಾತ್ರರಲ್ಲಿ ಕಾಣುವ ಪ್ರಾಕೃತ ಅವಯವ ಗಳುಳ್ಳದ್ದನ್ನಾಗಿ ಕಾಣಲಿಲ್ಲವಾದ್ದರಿಂದಲೇ, ಆ ರೂಪವಿಶೇಷವನ್ನು ವರ್ಣಿಸಿರು ವನು), ಅದು (ಆ ರೂಪವು) ಜಡಮಿಶ್ರಿತವಲ್ಲದ 'ಕೇವಲಾನುಭವಾನಂದ' ಎಂಬಲ್ಲಿನ ಕೇವಲ ಶಬ್ದದ ವಿವರಣೆಯಿದು), ಸುಖಜ್ಞಾನಗಳೇ ಮೂರ್ತಿ ವೆತ್ತಿದ, ಹಸ್ತಪಾದ, ವಕ್ಷಸ್ಥಳ, ಮುಖಾದಿ ಅವಯವಗಳುಳ್ಳದ್ದಾಗಿತ್ತು).

**ಭ್ರಮಹೇತುಸ್ತು ಯಾ ಮಾಯಾ ಜೀವೇ ಜೀವೇ ಚ ಸಂಗತಾ ।**
**ಸಾ ನೈವ ಶ್ರೂಯತೇ ದೇವೇ ಯಾ ಜೀವೇಽಪಿ ನ ಮುಕ್ತಿಗೇ ॥ ೩೪೫॥**

ಜಗದುಪಾದಾನವಾದ ಮಾಯಾ (ಪ್ರಕೃತಿ) ಮಿಶ್ರತ್ವವೇ (ಶಬಲತ್ವವೇ) ಶ್ರೀಕೃಷ್ಣನಲ್ಲಿ ಇಲ್ಲವೆಂದಮೇಲೆ ಭ್ರಾಂತಿಯನ್ನು ಹುಟ್ಟಿಸುವ ಅವಿದ್ಯಾರೂಪದ ಮಾಯೆಯು, ಆತನ ಸ್ವರೂಪದಲ್ಲಿಲ್ಲವೆಂದು ಹೇಳಬೇಕಾಗಿಲ್ಲವೆನ್ನುತ್ತಾರೆ :—

ಜೀವೇ ಜೀವೇ – ಪ್ರತಿ ಜೀವನಲ್ಲಿ, ಸಂಗತಾ – ಜೊತೆಯಲ್ಲಿರುವ, ಭ್ರಮಹೇತುಃ—ಭ್ರಾಂತಿಕಾರಣವಾದ, ಯಾ ಮಾಯಾ ತು—ಯಾವ ಮಾಯೆ

---

ಆದ್ದರಿಂದ ಸಹ, ಶ್ರೀಕೃಷ್ಣನು, ಅಪ್ರಾಕೃತವಾದ ವಿಲಕ್ಷಣದೇಹವುಳ್ಳವ ನೆಂದೂ, ಜಡದಿಂದ (ಪ್ರಕೃತಿಯಿಂದ) ಮಿಶ್ರವಲ್ಲದ, ಜ್ಞಾನಾನಂದಾತ್ಮಕ ಗಳಾದ, ಹಸ್ತಪಾದಮುಖಾದಿ ಅವಯವಗಳುಳ್ಳವನೆಂದೂ, ಸಿದ್ಧವಾಗುತ್ತದೆ (೩೪೪). ಭ್ರಮಕಾರಣವಾದ (ಅನ್ಯಥಾಜ್ಞಾನ ಅಥವಾ ಸಂಸಾರದಲ್ಲಿ ಸುತ್ತುವುದಕ್ಕೆ ಕಾರಣವಾದ) ಮಾಯೆಯು (ಪ್ರಕೃತಿಯು), ಪ್ರತಿ ಜೀವ ನಲ್ಲಿಯೂ, ಸಂಬಂಧವನ್ನು ಹೊಂದಿಯೇ (ಸಂಗತವಾಗಿಯೇ) ಇರುತ್ತದೆ;

ಯಾದರೋ, ಸಾ – ಆ ಮಾಯೆಯು, ದೇವೇ – ಶ್ರೀಕೃಷ್ಣನಲ್ಲಿ, ನೈವ ಶ್ರೂಯತೇ – ಕೇಳಿಬರುವುದಿಲ್ಲ ; ಯಾ – ಯಾವ (ಆ ಭ್ರಮಕರವಾದ ಮಾಯೆಯು), ಮುಕ್ತಿಗೇ ಜೀವೇಪಿ–ಮುಕ್ತಿಯಲ್ಲಿರುವ ಜೀವನಲ್ಲಿ ಸಹ, ನ– ಇರುವುದಿಲ್ಲ.

**ಕಿಂ ಪುನರ್ನಿತ್ಯಮುಕ್ತೇಽಸ್ಮಿನ್ ಜಡಮಾಯಾನುಪದ್ರವಃ ॥ ೩೪೬ ॥**

ಬೇರೆ ಯುಕ್ತಿಯಿಂದ ಕೈಮುತ್ಯವನ್ನು ತೋರಿಸುತ್ತಾರೆ :—

ನಿತ್ಯಮುಕ್ತೇ – ನಿತ್ಯಮುಕ್ತನಾದ, ಅಸ್ಮಿನ್ – ಶ್ರೀಕೃಷ್ಣನಲ್ಲಿ, ಜಡ-ಮಾಯಾನುಪದ್ರವಃ – ಜಡಪ್ರಕೃತಿಯ ಉಪದ್ರವವಿರುವುದಿಲ್ಲವೆಂದು, ಕಿಂ ಪುನಃ–ಹೇಳಲೇನು ? (ಭ್ರಮಕಾರಣವಾದ್ದರಿಂದ ಉಗ್ರವಾದ ಮಾಯೆಯೇ ಭಗವಂತನನ್ನು ಪೀಡಿಸಲು ಅಸಮರ್ಥವಾಗಿರುವಾಗ, ಶಾಂತವಾದ ಜಗದುಪಾದಾನವಾದ ಮಾಯೆಯು, ಬಾಧಿಸಲು ಹೇಗೆ ಸಮರ್ಥವಾದೀತು ?) [1]

---

ಈ ಮಾಯೆಯು, ಮುಕ್ತಿಯಲ್ಲಿ, ಜೀವನಿಗೆ ಇರುವುದಿಲ್ಲ; ಭ್ರಾಂತಿಗೆ ಕಾರಣವಾದ ಪ್ರಾಕೃತ ದೇಹವೇ ಇಲ್ಲದಿರುವಾಗ, ಭ್ರಾಂತಿಯು (ಮಾಯೆಯು) ಇಲ್ಲವೆಂಬುದು ಸಹಜವಾಗಿ ಸಿದ್ಧವಾಗಿ, ಮುಕ್ತಜೀವನೂ ಮಾಯಾದೂರನೆಂದು ಪ್ರಾಪ್ತವಾಗುತ್ತದೆ; ಈ ವಿಧ ಪ್ರಾಕೃತದೇಹವು ಶ್ರೀಕೃಷ್ಣನಿಗೆ ಇತ್ತೆಂದು ಎಲ್ಲಿಯೂ ಕೇಳಿಬರುವುದಿಲ್ಲ; ಹೀಗಿರಲು, ಆತನು ಮಾಯಾತಿದೂರನೆಂದು ಹೇಳಬೇಕೇ ? (ಇಲ್ಲ) (೩೪೫). ನಿತ್ಯಮುಕ್ತನಾದ ಶ್ರೀಕೃಷ್ಣನಿಗೆ, ತುಚ್ಛವಾಡ ಜಡಮಾಯೆಯು ಯಾವ ಉಪದ್ರವವನ್ನೂ ಉಂಟುಮಾಡಲು ಅಸಮರ್ಥವಾಗಿದೆ; ಭ್ರಮಕಾರಕಮಾಯೆಯುಂತೂ (ಅವಿದ್ಯಾರೂಪದ ಮಾಯೆಯು) ಸರ್ವಥಾ ಆತನನ್ನು ಸಮೀಪಿಸಲಾರದೆಂದು ಹೇಳಬೇಕಾಗಿಯೇ ಇಲ್ಲ (೩೪೬).

---

1 ಭ್ರಮಕರ ಮಾಯೆಗೆ ಮೂಲವಾದುದು ದೇಹಾದಿ ರೂಪದ ಮಾಯೆಯು ; ಅದೇ ಇಲ್ಲದಿರಲು, ಭ್ರಾಂತಿಕಾರಕ ಮಾಯೆಯ ಸಂಬಂಧವಿಲ್ಲೆಂಬುದು ಸ್ಥಿರಪಡುವುದಿಲ್ಲವೇ ? ಎಂಬ ಕೈಮುತ್ಯವನ್ನು ತೋರಿಸಲಾಗಿದೆ.

**ವಿಲಜ್ಜಮಾನಯಾ ಯಸ್ಯ ಸ್ಥಾತುಮೀಕ್ಷಾಪಥೇಽಮುಯಾ ।**
**ವಿಮೋಹಿತಾ ವಿಕತ್ಥಂತೇ ಮಮಾಹಮಿತಿ ದುರ್ಧಿಯಃ ॥ ೩೪೭ ॥**
**ನಮಸ್ತುಭ್ಯಂ ಭಗವತೇ ಬ್ರಹ್ಮಣೇ ಪರಮಾತ್ಮನೇ ।**
**ನ ಯತ್ರ ಶ್ರೂಯತೇ ಮಾಯಾ ಲೋಕಕಲ್ಪವಿಕಲ್ಪನಾ ॥ ೩೪೮ ॥**
**ತ್ವಮಾದ್ಯಃ ಪುರುಷಃ ಸಾಕ್ಷಾದೀಶ್ವರಃ ಪ್ರಕೃತೇಃ ಪರಃ ।**
**ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ॥ ೩೪೯ ॥**
**ಸ ಏವ ಜೀವಲೋಕಸ್ಯ ಮಾಯಾಮೋಹಿತಚೇತಸಃ ।**
**ವಿಧಿತ್ಸಃ ಸ್ವೇನ ವೀರ್ಯೇಣ ಶ್ರೇಯೋ ಧರ್ಮಾದಿಲಕ್ಷಣಂ ॥ ೩೫೦॥**
**ಇತಿ ಭಾಗವತೇ ಪ್ರೋಕ್ತೇಚತುರ್ಮುಖಮುಖೋಕ್ತಿತಃ ।**
**ಕೃಷ್ಣಸ್ಯ ಬಂಧಕೀಭೂತಮಾಯಾದೂರತ್ವನಿರ್ಣಯಾತ್ ॥ ೩೫೧ ॥**

ಭಗವಂತನಿಗೆ ಮಾಯಾದೂರತ್ವವನ್ನು ಸ್ಪಷ್ಟ ಭಾಗವತವಾಕ್ಯಗಳಿಂದ ಸಂಗ್ರಹಿಸಿ ನಿರೂಪಿಸುತ್ತಾರೆ :—

ಯಸ್ಯ – ಯಾರ (ಭಗವಂತನ), ಈಕ್ಷಾಪಥೇ – ದೃಷ್ಟಿಮಾರ್ಗದಲ್ಲಿ, ಸ್ಥಾತುಂ – ನಿಲ್ಲಲು, ವಿಲಜ್ಜಮಾನಯಾ – ನಾಚಿಕೆಪಡುವ, ಅಮುಯಾ – ಈ (ಭ್ರಾಂತಿಕಾರಕ) ಮಾಯೆಯಿಂದ, ವಿಮೋಹಿತಾಃ–ಮೋಹಿತರಾಗಿ, ದುರ್ಧಿಯಃ – ದುರ್ಬುದ್ಧಿಗಳು, ಮಮಾಹಮಿತಿ – ನನ್ನದು, ನಾನು, ಎಂಬುದಾಗಿ, ವಿಕತ್ಥಂತೇ–ಹರಟುವರು (ವ್ಯರ್ಥವಾಗಿ ನುಡಿಯುವರು); (ಅಂತಹ),

---

ಭಗವಂತನ ದೃಷ್ಟಿಪಥದಲ್ಲಿ ನಿಲ್ಲಲು ಸಹ ಲಜ್ಜೆಪಡುವ, ಈ ಮಾಯೆಯಿಂದ ಮೋಹಿತರಾದ ದುರ್ಬುದ್ಧಿಗಳು, ನಾನು, ನನ್ನದೆಂಬ ದುರಹಂಕಾರದಿಂದ ವ್ಯರ್ಥನುಡಿಗಳನ್ನು ಗಳಹುತ್ತಾರೆ; ಅಜ್ಞಾನಾಶ್ರಿತ ಜೀವರನ್ನು ಭ್ರಮೆಗೊಳಿಸುವ, ಮಾಯೆಯು, ನಿನ್ನಲ್ಲಿ ಲೇಶವೂ ಇಲ್ಲ—ಅದರ ವಾರ್ತೆಯೂ ಇರಲವಕಾಶವಿಲ್ಲ ; ಹೀಗಿರುವ ಪರಮಾತ್ಮನನ್ನು, ಚತುರ್ಮುಖಬ್ರಹ್ಮದೇವನು, 'ಹೇ ಭಗವನ್! ಪರಮಾತ್ಮ! ಗುಣನಿಧಿ! ಆದಿಪುರುಷ! ನೀನು, ನಿನ್ನ ಜ್ಞಾನಶಕ್ತಿಯಿಂದಲೇ ಮಾಯೆಯನ್ನು ದೂರವಿಟ್ಟು, ಪ್ರಕೃತಿಯನ್ನಾಳುವ ಪ್ರಭುವಾದ ನೀನು, ಅನ್ಯಾಶ್ರಯರಹಿತನಾಗಿ, ಜಗದೀಶ್ವರನಾಗಿ, ಸಕಲ ಜಗತ್ತಿನ ನಿಯಾಮಕನಾಗಿರುವಿ; ಈ ಮಹಾಮಹಿಮನಾದ ನಿನ್ನನ್ನು

ಬ್ರಹ್ಮಣೇ—ಗುಣಪೂರ್ಣನೂ, ಪರಮಾತ್ಮನೇ—ಪರಮಚೇತನನೂ, ಭಗವತೇ —ಭಗವಂತನೂ (ಆದ), ತುಭ್ಯಂ—ನಿನಗೋಸ್ಕರ, ನಮಃ—ನಮಸ್ಕಾರವು; ಯತ್ರ—ಯಾವ ನಿನ್ನಲ್ಲಿ, ಲೋಕದೃಷ್ಟಿವಿಕಲ್ಪನಾ—(ಅಜ್ಞಾನಾಶ್ರಿತ) ಜೀವರ ಜ್ಞಾನವನ್ನು ಭ್ರಮಗೊಳಿಸುವ, ಮಾಯಾ—ಮಾಯೆಯು (ಅವಿದ್ಯೆ ಅಥವಾ ಅಜ್ಞಾನವು), ನ ಶ್ರೂಯತೇ—ಕೇಳಲೂ ಸಿಕ್ಕುವುದಿಲ್ಲವೋ (ಅದರ ವಾರ್ತೆಯೇ ಇಲ್ಲವೋ), (ಅಂತಹ) ತ್ವಂ—ನೀನು, ಆದ್ಯಃ ಪುರುಷಃ—ಆದಿ (ಸೃಷ್ಟಿಪೂರ್ವ ದಿಂದಲೂ ಇರುವ) ಪುರುಷನು, ಪ್ರಕೃತೇಃ – ಪ್ರಕೃತಿಯಿಂದ, ಪರಃ – ಉತ್ತಮನು (ಸ್ವತಂತ್ರನು), ಸಾಕ್ಷಾತ್ – ಸ್ವಯಂ (ಅನ್ಯಾಪೇಕ್ಷೆಯಿಲ್ಲದ), ಈಶ್ವರಃ – ಜಗನ್ನಿಯಾಮಕನು ; ಚಿಚ್ಛಕ್ತ್ಯಾ – (ನಿನ್ನ) ಜ್ಞಾನಬಲದಿಂದ, ಮಾಯಾಂ – ಅವಿದ್ಯೆಯನ್ನು, ವ್ಯುದಸ್ಯ – ದೂರವಿಟ್ಟು, ಕೈವಲ್ಯೇ—ಕೇವಲ (ಅನ್ಯಾಪೇಕ್ಷೆಯಿಲ್ಲದ), ಆತ್ಮನಿ—ನಿನ್ನಲ್ಲಿಯೇ, ಸ್ಥಿತಃ—ಇರುವವನಾಗಿರುವಿ ; ಸಃ ಏವ – ಅಂತಹ ನೀನೇ, ಮಾಯಾಮೋಹಿತಚೇತಸಃ—ಅವಿದ್ಯಾಮೋಹಿತ ಸ್ವರೂಪವುಳ್ಳ, ಜೀವಲೋಕಸ್ಯ – ಜೀವಸಮುದಾಯಕ್ಕೆ, ಸ್ವೇನ – (ನಿನ್ನ) ಸ್ವತಂತ್ರವಾದ, ವೀರ್ಯೇಣ – ಶಕ್ತಿಯಿಂದ, ಧರ್ಮಾದಿಲಕ್ಷಣಂ – ಧರ್ಮ ಮೊದಲಾದ (ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ), ಶ್ರೇಯಃ— ಶ್ರೇಯಸ್ಸನ್ನು, ವಿಧಿತ್ಸುಃ—ಮಾಡುವವನು (ದೊರಕಿಸುವ ಇಚ್ಛೆಯುಳ್ಳವನು) (ಆಗಿರುತ್ತೀ) ; ಇತಿ – ಹೀಗೆಂದು, ಭಾಗವತೇ – ಭಾಗವತದಲ್ಲಿ, ಪ್ರೋಕ್ತ ಚತುರ್ಮುಖಮುಖೋಕ್ತಿತಃ – ಹೇಳಲ್ಪಟ್ಟ ಚತುರ್ಮುಖ ಬ್ರಹ್ಮನ ವಾಕ್ಯ ದಿಂದ, ಕೃಷ್ಣಸ್ಯ – ಶ್ರೀಕೃಷ್ಣನಿಗೆ, ಬಂಧಕೀಭೂತಮಾಯಾದೂರತ್ವ ನಿರ್ಣಯಾತ್—ಬಂಧಕ ಮಾಯಾದೂರತ್ವವು ಸಿದ್ಧವಾಗುವುದರಿಂದ (ಭಗ- ವಂತನು ಮಾಯಾದೂರನೇ ಸರಿ).

---

ನಮಸ್ಕರಿಸುತ್ತೇನೆ'; ಈತನೇ ಮಾಯಾಮೋಹಿತರಾದ ಜೀವರಿಗೆ, ತನ್ನ ಸಾಮರ್ಥ್ಯಲೇಶದಿಂದಲೇ (ಇಚ್ಛಾಮಾತ್ರದಿಂದ), ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಶ್ರೇಯಸ್ಸನ್ನುಂಟುಮಾಡುವ ದಯಾಸಾಗರನು, ಎಂದು ಮುಂತಾಗಿ, ಮಾಡಿರುವ ಬ್ರಹ್ಮದೇವನ ಸ್ತುತಿಯೂ ಶ್ರೀಕೃಷ್ಣನಿಗೆ (ಬಂಧಕ ರೂಪದ) ಮಾಯಾವಿದೂರತ್ವವನ್ನು ಸಮರ್ಥಿಸುತ್ತದೆ; ಭಾಗವತೋಕ್ತವಾದ ಈ ವಾಕ್ಯಗಳು ಪರಮಪ್ರಮಾಣಗಳಾಗಿವೆ (೩೪೭–೩೫೧).

**ನ ಯತ್ರ ಮಾಯೇತ್ಯಾದ್ಯುಕ್ತ್ಯಾ ಯಲ್ಲೋಕೋಽಪಿ ನ ಮಾಯಿಕಃ ।**
**ಕಥಂ ಮಾಯಾಮಯಾಕಾರಸ್ತಲ್ಲೋಕೇಶೋ ಭವೇದ್ವದ ॥ ೩೫೨ ॥**

ಭಗವಂತನ ದೇಹವು ಅಪ್ರಾಕೃತವೆಂಬಲ್ಲಿ ಬೇರೆ ಯುಕ್ತಿಯನ್ನೂ ಹೇಳುತ್ತಾರೆ :—

ನ ಯತ್ರ ಮಾಯೇತ್ಯಾದ್ಯುಕ್ತ್ಯಾ—'ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ' ಇತ್ಯಾದಿ ವಾಕ್ಯದಿಂದ, ಯಲ್ಲೋಕಃ ಅಪಿ – ಯಾವನ ಲೋಕವೂ ಸಹ, ನ ಮಾಯಿಕಃ – ಪ್ರಾಕೃತ ವಲ್ಲವೋ ; ತಲ್ಲೋಕೇಶಃ – ಅಂತಹ ವೈಕುಂಠಪತಿಯು,[1] ಕಥಂ – ಹೇಗೆ, ಮಾಯಾಮಯಾಕಾರಃ – ಪ್ರಾಕೃತರೂಪವುಳ್ಳವನು, ಭವೇತ್—ಆಗುವನು ? ವದ—ಹೇಳು (ಶಕ್ಯವಿಲ್ಲಷ್ಟೆ).

**ಮಾಯಾ ಜಯಾ ಕೃತಿಃ ಶಾಂತಿರಿತಿ ರೂಪಚತುಷ್ಟಯಂ ।**
**ಶ್ರಿಯೋಽಸ್ತಿ ಯಾ ಹರೇರ್ಜಾಯಾ ವಾಸುದೇವಾದಿರೂಪಿಣಃ ॥ ೩೫೩**

---

ಈ ಮಹಾಪ್ರಮೇಯವು, ಬೇರೆಯಿಂದಲೂ ಸಿದ್ಧವಾಗುತ್ತದೆ; ವೈಕುಂಠ ಲೋಕವೇ ಅಪ್ರಾಕೃತವು ; ಅದು, ಬಂಧಕಪ್ರಕೃತಿಯ ಲೇಶಾಂಶವೂ ಇಲ್ಲದ ಪರಮ ಪರಿಶುದ್ಧವಾದ ಪ್ರದೇಶವಾಗಿದೆ; ಪ್ರಕೃತ್ಯಭಿಮಾನಿಯಾದ ಪ್ರಕೃತಿಶಬ್ದ ವಾಚ್ಯಳಾದ ಲಕ್ಷ್ಮೀದೇವಿಯೇ, ವೈಕುಂಠರೂಪದಿಂದಿದ್ದು ಶ್ರೀಹರಿಯನ್ನು ಸೇವಿಸುತ್ತಿರುವ ನಗರಿಯೇ ಮಾಯಾವಿದೂರವಾಗಿರಲು, ವೈಕುಂಠಪತಿಯು ಮಾಯಾಬದ್ಧನೇ ? (ಸರ್ವಥಾ ಅಯುಕ್ತವು) (೩೫೨). ಈ ವೈಕುಂಠಪತಿಯೇ ಶ್ರೀ ನಾರಾಯಣನು ; ಆತನು ಜಗತ್ಸೃಷ್ಟ್ಯಾದಿ ಕಾರ್ಯನಿರ್ವಹಣೆಗಾಗಿ

---

[1] ಭಗವಂತನು ನಿತ್ಯವ್ಯಕ್ತನಾಗಿ ವಿಹರಿಸುವ ವೈಕುಂಠನಗರಿಯೇ ಲಕ್ಷ್ಮ್ಯಾತ್ಮಕ ವಾಗಿರಲು (ಅಪ್ರಾಕೃತವಾಗಿರುವಾಗ), ಅಲ್ಲಿರುವ ವೈಕುಂಠಪತಿಯ (ಭಗವಂತನ) ದೇಹವು ಪ್ರಾಕೃತ (ಮಾಯಾಮಯವು) ಆದೀತೇ? ಉದಾಹೃತವಾದ ಭಾಗವತ ಶ್ಲೋಕದ ಭಾವಾರ್ಥವು ಹೀಗಿದೆ :—ಯಾವ ವೈಕುಂಠಲೋಕದಲ್ಲಿ ಬಂಧಕವಾದ ಪ್ರಕೃತಿಯೇ ಇಲ್ಲವೋ, ಅಲ್ಲಿ ಮುಕ್ತದೇವತೆಗಳು, ತತ್ವಾಭಿಮಾನಿಗಳಾದ ದೇವ ಶ್ರೇಷ್ಠರೂ ಯಥಾಯೋಗ್ಯವಾಗಿ ಸ್ವಾವರರಿಂದ ಪೂಜಿತರಾಗಿ, ಸ್ವರೂಪದಿಂದಲೇ ವಿಹರಿಸುತ್ತಾರೆ.

ಮಹಾಲಕ್ಷ್ಮೀದೇವಿಯೇ ಮಾಯಾಶಬ್ದವಾಚ್ಯಳೆಂದು ಪುರಾಣಪ್ರಸಿದ್ಧಿ ಇರುವಾಗ, ಮಾಯಾವಾದಿಗೆ ಅಭಿಮತವಾದ ಅನಿರ್ವಚನೀಯವಾದ (ಹೀಗೆಂದು ಹೇಳಲು ಬಾರದ ಸ್ವರೂಪವುಳ್ಳದ್ದೆಂಬ) ಅವಿದ್ಯೆಯು ಮಾಯಾ ಶಬ್ದವಾಚ್ಯವಲ್ಲೆಂದು ಹೇಳಬೇಕಾಗಿಲ್ಲವೆನ್ನುತ್ತಾರೆ :—

ಮಾಯಾ—ಮಾಯಾ, ಜಯಾ—ಜಯಾ, ಕೃತಿಃ—ಕೃತಿಯು, ಶಾಂತಿಃ—ಶಾಂತಿಯು, ಇತಿ—ಎಂಬ, ರೂಪಚತುಷ್ಟಯಂ—ನಾಲ್ಕು ರೂಪಗಳು, ಶ್ರಿಯಃ—ಮಹಾಲಕ್ಷ್ಮೀದೇವಿಗೆ, ಅಸ್ತಿ—ಇರುತ್ತದೆ; ಯಾಃ – ಯಾವ ಈ ರೂಪಗಳು, ವಾಸುದೇವಾದಿರೂಪಿಣಃ – ವಾಸುದೇವಾದಿ ರೂಪಿಯಾದ, ಹರೇಃ – ಶ್ರೀನಾರಾಯಣನ, ಜಾಯಾಃ—ಭಾರ್ಯರಾಗಿವೆ.[1]

**ನಾಮಧೇಯಾನಿ ಕುರ್ವಂತಿ ಸ್ಥಾನಾನಿ ಚ ನರಾ ಭುವಿ ।**
**ಮಾಯಾ ನಾರಾಯಣೀಶಾನಾ ಶಾರದೇತ್ಯಂಬಿಕೇತಿ ಚ ॥ ೩೫೪ ॥**

---

ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಗಳೆಂಬ ನಾಲ್ಕು ರೂಪಗಳನ್ನು ಧರಿಸಿರುವನು; ಶ್ರೀ ಮಹಾಲಕ್ಷ್ಮೀದೇವಿಯು, ಮಾಯಾ, ಜಯಾ, ಕೃತೀ, ಶಾಂತಿ, ಎಂಬ ನಾಲ್ಕು ರೂಪಗಳನ್ನು ಧರಿಸಿ, ಕ್ರಮವಾಗಿ ವಾಸುದೇವಾದಿ ರೂಪಗಳ ಭಾರ್ಯಳಾಗಿರುವಳು (೩೫೩). ದುರ್ಗಾರೂಪಳಾದ ಲಕ್ಷ್ಮೀದೇವಿಯು, ಶಿಶುರೂಪದಿಂದ ಶ್ರೀಕೃಷ್ಣನ ತಂಗಿಯಾಗಿ, ಆತನ ಆಜ್ಞೆಯಿಂದಲೇ ಯಶೋದೆಯಲ್ಲಿ ಜನಿಸಿದ್ದಳು; ಶ್ರೀಕೃಷ್ಣನ ಆಜ್ಞೆಯಂತೆ ವಾಸುದೇವನು, ಕೃಷ್ಣನನ್ನು ಯಶೋದೆಯ ಮಗ್ಗಲಲ್ಲಿಟ್ಟು, ದುರ್ಗೆಯನ್ನು (ಸ್ತ್ರೀಶಿಶುವನ್ನು) ತೆಗೆದುಕೊಂಡು ಬಂದದ್ದು ಸರಿಯಷ್ಟೆ; ಆ ಶಿಶುವನ್ನು ಕಂಸನು, ದೇವಕಿಯ ಎಂಟನೆಯ ಗರ್ಭವೆಂದು ತಿಳಿದು, ಸಂಹರಿಸಲು ಯತ್ನಿಸಿ

---

[1] ನಾರಾಯಣನು, ಜಗತ್ತಿನ ಸೃಷ್ಟ್ಯಾದ್ಯರ್ಥವಾಗಿ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಗಳೆಂಬ ನಾಲ್ಕು ರೂಪಗಳಿಂದ ಪ್ರಕಟನಾದನು; ನಾರಾಯಣನ ಪತ್ನಿಯಾದ ಮಹಾಲಕ್ಷ್ಮೀದೇವಿಯು, ಕ್ರಮವಾಗಿ, ಈ ನಾಲ್ಕು ರೂಪಗಳಿಗೆ, ಮಾಯಾ, ಜಯಾ, ಕೃತಿ, ಶಾಂತಿ, ಎಂಬ ರೂಪಗಳಿಂದ ಭಾರ್ಯಳಾದಳು; ಈ ರೂಪಗಳಿಂದಾಗುವ ಕಾರ್ಯಗಳನ್ನೂ ಮಹಾಮಹಿಮೆಗಳನ್ನೂ ಶ್ರೀ ವಾದಿರಾಜರು ತಮ್ಮ 'ವೈಕುಂಠ ವರ್ಣನ'ವೆಂಬ ಕನ್ನಡ ಗ್ರಂಥದಲ್ಲಿ ವಿಸ್ತಾರವಾಗಿ ವರ್ಣಿಸಿರುವರು.

**ಇತಿ ಭಾಷ್ಯ ತಂ ದೇವೀ ಮಾಯಾ ಭಗವತೀ ಭುವಿ ।**
**ಬಹುನಾಮನಿಕೇತೇಷು ಬಹುನಾಮಾ ಬಭೂವ ಹ ।**
**ಇತಿ ಭಾಗವತೋಕ್ತ್ಯಾ ಚ ಮಾಯಾ ದುರ್ಗಾತ್ಮಿಕಾ ರಮಾ ॥ ೩೫೫ ॥**

**ಯಾ ಕೈಂಕರ್ಯಕರೀ ತಸ್ಯ ಸರ್ವದಾ ಸಹಚಾರಿಣೀ ।**
**ತಯೈವ ಮಾಯೀ ಸ ಜಗನ್ನಿರ್ಮಮೋ ಮಾಯಯಾ ತಯಾ ॥ ೩೫೬**

ಶ್ರೀಕೃಷ್ಣನು ತನ್ನ ಆಜ್ಞೆಯಂತೆ ಅವತರಿಸಿದ ಮಹಾಲಕ್ಷ್ಮೀರೂಪಳಾದ ದುರ್ಗೆಯನ್ನು ಕುರಿತು ಹೇಳಿದ, ಭಾಗವತದಲ್ಲಿನ ನುಡಿಗಳಿವು :—

ಭುವಿ—ಭೂಮಿಯಲ್ಲಿ, ಸ್ಥಾನಾನಿ—ಸ್ಥಾನಗಳನ್ನು, ನಾಮಧೇಯಾನಿ—(ವಿವಿಧ) ನಾಮಗಳನ್ನು, ನರಾಃ—ಮನುಷ್ಯರು, ಕುರ್ವಂತಿ—(ನಿನಗೆ) ವ್ಯವಸ್ಥೆಗೊಳಿಸುತ್ತಾರೆ; ಮಾಯಾ – ಮಾಯಾ, ನಾರಾಯಣೀ – ನಾರಾಯಣೀ, ಈಶಾನಾ—ಈಶಾನಳು, ಶಾರದಾ—ಶಾರದೆಯು, ಇತಿ—ಎಂದೂ, ಅಂಬಿಕಾ ಇತಿ ಚ—ಅಂಬಿಕಾ ಎಂದೂ, ಇತಿ—ಹೀಗೆ, ತಂ—(ಕಂಸನ ಕೈಯಿಂದ ಜಾರಿ ಆಕಾಶವನ್ನೇರಿದ ಅಷ್ಟಭುಜದ, ಶಿಶುರೂಪದ) ದುರ್ಗೆಯನ್ನು, (ಪ್ರ)ಭಾಷ್ಯ—ಉದ್ದೇಶಿಸಿ ಹೇಳಿ (ಎಂದು ಶ್ರೀಕೃಷ್ಣನು ಹೇಳಿದನೆಂದು ಭಾಗವತದಶಮಸ್ಕಂಧದಲ್ಲಿ ಹೇಳಲಾಗಿದೆ); ಮಾಯಾಭಗವತೀ—ಮಾಯಾನಾಮಕ ಲೋಕಪೂಜ್ಯಳಾದ, ದೇವೀ—ದೇವಿಯು, ಭುವಿ—ಭೂಮಿಯಲ್ಲಿ, ಬಹುನಾಮನಿಕೇತೇಷು—ವಿವಿಧ ಹೆಸರಿನ ದೇವಾಲಯಗಳಲ್ಲಿ, ಬಹುನಾಮಾ—ವಿವಿಧ ನಾಮಗಳುಳ್ಳವಳು,

---

ದಾಗ, ಆತನ ಕೈಯಿಂದ ಆಕಾಶಕ್ಕೆ ಹಾರಿ ಅಷ್ಟಭುಜದುರ್ಗಾರೂಪದಿಂದ ಕಾಣಿಸಿಕೊಂಡು ಅದೃಶ್ಯಳಾದಳು; ಈ ಶಿಶುರೂಪಳಾದ ದುರ್ಗೆಯನ್ನು ಉದ್ದೇಶಿಸಿ, ಶ್ರೀಕೃಷ್ಣನು, ಭೂಮಿಯಲ್ಲಿ ಮನುಷ್ಯರು ನಿನಗೆ ನಾನಾ ಆಲಯಗಳನ್ನು ನಿರ್ಮಿಸಿ, ಮಾಯಾ, ನಾರಾಯಣೀ, ಈಶಾನಾ, ಶಾರದಾ, ಅಂಬಿಕಾ ಇತ್ಯಾದಿ ನಾನಾ ನಾಮಗಳಿಂದ ಅರ್ಚಿಸುತ್ತಾರೆ; ಎಂದು ಮುಂತಾಗಿ ಹೇಳಿದನೆಂದು ಭಾಗವತೋಕ್ತವಾದ ವಚನಗಳಿಂದ, ನಾನಾ ನಾಮಗಳಿಂದ ಜಗತ್ತಿನಲ್ಲಿ ಪೂಜ್ಯಳಾದ ಲಕ್ಷ್ಮೀದೇವಿಯೇ '**ಮಾಯಾ**'ನಾಮಕಳೆಂದೂ ಸಿದ್ಧವಾಗುತ್ತದೆ; ಈಕೆಯು, ಸರ್ವದಾ ಸಹಚಾರಿಣಿಯಾಗಿದ್ದು, ಶ್ರೀಕೃಷ್ಣನನ್ನು ಸೇವಿಸುವ ಕಿಂಕರಳಾದ್ದರಿಂದ, ಆಕೆಯ ಪತಿಯಾದ ಭಗವಂತನು 'ಮಾಯೀ'

*

ಬಭೂವ—ಆದಳು (ಆಗಿ ನೆಲಸಿದಳು); ಇತಿ—ಹೀಗೆಂಬ, ಭಾಗವತೋಕ್ತ್ಯಾ ಚ—ಭಾಗವತ ವಚನದಿಂದಲೂ, ದುರ್ಗಾತ್ಮಿಕಾ—ದುರ್ಗಾರೂಪಳಾದ, ರಮಾ—ಲಕ್ಷ್ಮೀದೇವಿಯೇ, ಮಾಯಾ—ಮಾಯಾನಾಮಕಳು; ಯಾ—ಯಾರು, ತಸ್ಯ—ಶ್ರೀಕೃಷ್ಣನ (ಭಗವಂತನ), ಕೈಂಕರ್ಯಕರೀ—ಸೇವೆಯನ್ನು ಮಾಡುವಳೋ, ಸರ್ವದಾ—ಎಲ್ಲ ಕಾಲದಲ್ಲಿ, ಸಹಚಾರಿಣೀ—ಕೂಡಿಯೇ ಇರುವಳೋ (ಎಂದೂ ಅಗಲುವುದಿಲ್ಲವೋ), ತಯಾ—ಆ, ಮಾಯಯಾ—ಮಾಯೆಯಿಂದಲೇ (ಲಕ್ಷ್ಮೀ ಸಮೇತನಾಗಿಯೇ), ಜಗತ್ – ಜಗತ್ತನ್ನು, ನಿರ್ಮಮೇ—ಸೃಷ್ಟಿಸಿದನೋ, ಸಃ—ಆತನೇ (ಮಾಯಾಪತಿಯೇ), ತಯಾ ಏವ—ಆಕೆಯಿಂದಲೇ (ಅನಿಮಿತ್ತವಾಗಿಯೇ), ಮಾಯೀ—'ಮಾಯೀ' ಎಂದೂ ಕರೆಯಲ್ಪಡುತ್ತಾನೆ.

**ಯೋ ನಃ ಪಿತಾ ವಿಷ್ಣುರಸೌ ಲೋಕಮಾತಾ ಹಿ ಸೇಂದಿರಾ ।**
**ತಸ್ಮಾತ್ ಸ್ವರೂಪಮಾಯೇಚ್ಛಾಬಾಹ್ಯೇ ಶ್ರೀಪ್ರಕೃತೀ ವಶೇ ॥೩೫೭॥**

ಲಕ್ಷ್ಮೀರೂಪಳಾದ ಮಾಯೆಯೇ ಜಗತ್ಕಾರಣಳೆಂಬಲ್ಲಿ ಯುಕ್ತಿಯನ್ನು ಹೇಳುತ್ತಾರೆ :—

ಯಃ ನಃ ಪಿತಾ—ಯಾವಾತನು ನಮ್ಮ ಜನಕನೋ ('ಯೋ ನಃ ಪಿತಾ ಜನಿತಾ ಯೋ ವಿಧಾತಾ'—ಇತ್ಯಾದಿ ಶ್ರುತಿಯೂ ಹೇಳುವಂತೆ, ನಮ್ಮ ಜನಕನು ಯಾರೋ), ಅಸೌ ವಿಷ್ಣುಃ—(ಆತನೇ) ಈ ವಿಷ್ಣುವು ; ಸಾ—ಆತನ ಭಾರ್ಯಳಾದ, ಇಂದಿರಾ – ಶ್ರೀ ಇಂದಿರಾದೇವಿಯೇ, ಲೋಕಮಾತಾ—

---

ಎಂದೂ ಕರೆಯಲ್ಪಡುತ್ತಾನೆ; ಆಕೆಯನ್ನಿಟ್ಟುಕೊಂಡೇ, ಜಗತ್ತಿನ ಸೃಷ್ಟಿ ಕಾರ್ಯವನ್ನು ನಿರ್ವಹಿಸುತ್ತಾನೆ (೩೫೪-೩೫೬). 'ಯೋ ನಃ ಪಿತಾ ಜನಿತಾ....' ಇತ್ಯಾದಿ ಶ್ರುತಿಯು, ಶ್ರೀವಿಷ್ಣುವೇ ನಮ್ಮ ಜನಕನೆಂದು ಹೇಳುತ್ತದೆ; ಇಂದಿರಾದೇವಿಯೇ, ಜಗಜ್ಜನನಿಯೆಂದೂ ಪ್ರಸಿದ್ಧವಿದೆ; ಆಕೆಯೇ ಮಾಯಾನಾಮಕಳು—ಭಗವಂತಭಾರ್ಯಳಾದ ಲಕ್ಷ್ಮೀದೇವಿಯು; ಜಗತ್ಸೃಷ್ಟಿಯನ್ನು ಭಗವಂತನು, ಮಾಯೆಯಿಂದ ಮಾಡುವನೆಂಬಲ್ಲಿ ಸಹ ಮಾಯಾ ಶಬ್ದವಾಚ್ಯಳು, ಲಕ್ಷ್ಮಿಯೆಂದೇ ತಿಳಿದುಬರುತ್ತದೆ; ವಿಷ್ಣುವಿನ ಇಚ್ಛಾಶಕ್ತಿ ತೇಜಸ್ಸುಗಳೂ ಮಾಯಾಶಬ್ದವಾಚ್ಯವೆಂದು ಈ ಹಿಂದೆ ಸಾಧಿಸಲಾಯಿತಷ್ಟೆ; ಅವುಗಳು ಭಗವಂತನ ಸ್ವರೂಪಭೂತವಾದವುಗಳು; ಅವುಗಳಿಂದ ಭಿನ್ನಗಳಾದ

ಜಗತ್ತಿನ ಜನನಿಯು ; ಹಿ – (ಇಂದಿರಾ ಲೋಕಮಾತಾ ಮಾ'—ಇತ್ಯಾದಿ ನಿಘಂಟಿನಿಂದ ಸಹ) ಜಗನ್ಮಾತೆಯು ಇಂದಿರಾ ಎಂಬುದು ಪ್ರಸಿದ್ಧ ; (ಏವಂ ಚ ವಿಷ್ಣುವು ಮಾಯೆಯಿಂದ ಜಗತ್ತನ್ನು ನಿರ್ಮಿಸಿದನೆಂದರೆ, ವಿಷ್ಣುವು ತಂದೆಯಾದರೆ, ಮಾಯೆಯು ಲಕ್ಷ್ಮಿಯೇ ಆಗಬೇಕೆಂದು ಸಿದ್ಧವೇ) ಜನಕನು ಜನನಿಯ ದ್ವಾರವಷ್ಟೆ, ಪುತ್ರನನ್ನು ಹುಟ್ಟಿಸುವುದು—ಆದ್ದರಿಂದ ಸೃಷ್ಟಿಕಾಲದಲ್ಲಿ ಪ್ರಯೋಗಿಸಲಾಗುವ ಮಾಯಾ ಪದದಿಂದ ಲಕ್ಷ್ಮೀದೇವಿಯೇ ಗ್ರಾಹ್ಯಳು); ತಸ್ಮಾತ್–ಆದ್ದರಿಂದ, ಸ್ವರೂಪಮಾಯೇಚ್ಛಾಬಾಹ್ಯೇ – ವಿಷ್ಣುಸ್ವರೂಪಗಳೇ ಆದ, ಇಚ್ಛಾ ಶಕ್ತಿ ತೇಜಸ್ಸುಗಳಿಂದ ಭಿನ್ನಗಳಾದ (ಸ್ವರೂಪದಿಂದ ಭಿನ್ನಗಳಾದ) (ಯಾ ಮಾ–ಯಾವ ಲಕ್ಷ್ಮಿಯೋ), ಶ್ರೀಪ್ರಕೃತೀ–(ಆ) ಶ್ರೀಲಕ್ಷ್ಮೀದೇವಿಯು ಮತ್ತು ಆಕೆಯಿಂದ ಅಭಿಮನ್ಯವಾದ ಜಡಪ್ರಕೃತಿಯೂ, ವಶೇ–(ವಿಷ್ಣು) ವಶದಲ್ಲಿರುವುವೇ ಆಗಿವೆ (ಆದ್ದರಿಂದ ಶ್ರೀದೇವಿಯು ವಿಷ್ಣುವಿನ ನಿತ್ಯಾವಿಯೋಗಿನಿಯಾದರೂ (ಮಾಯಾನಾಮಕಳಾದ ಆಕೆಯ ನಿತ್ಯ ಸಹವಾಸವು) ಮತ್ತು ಜಡಪ್ರಕೃತಿಯೂ ಉಪಾದಾನತ್ವೇನ ವಿಷ್ಣುವಿನ ಸಮೀಪವಿದ್ದರೂ, ನಮಗೇನೂ ಹಾನಿಯಿಲ್ಲ—ಆತನ ಶಬಲತ್ವಹೇತುಗಳಾಗುವುದಿಲ್ಲವೆಂಬುದು ಸ್ಪಷ್ಟವಿದೆ).

**ಚತುರ್ಥೀ ತು ಚತುರ್ಥಾರ್ಥೀ ನ ಸ್ಮರೇದ್ಭ್ರಮುದಾಂ ಹರೌ ||೩೫೮||**

ಚತುರ್ಥೀ ತು – ನಾಲ್ಕನೆಯ, ಭ್ರಮುದಾಂ – ಭ್ರಮಕಾರಣವಾದ (೧ ಮಾಯಾನಾಮಕಳಾದ ಲಕ್ಷ್ಮೀದೇವಿ, ೨ ಭಗವಂತ ಸ್ವರೂಪಭೂತಾ

---

ಮಾಯಾನಾಮಕ ಲಕ್ಷ್ಮೀದೇವಿಯೂ, ಆಕೆಯಿಂದ ಅಭಿಮನ್ಯಮಾನವಾದ ಜಗತ್ತಿನ ಉಪಾದಾನವಾದ ಜಡಪ್ರಕೃತಿಯೂ ಸಹ (ಈ ಉಭಯವೂ) ಮಾಯಾನಾಮಕಗಳೇ ಆಗಿರುತ್ತವೆ ; ಮಾಯಾನಾಮಕ ಲಕ್ಷ್ಮೀದೇವಿಯು, ನಿತ್ಯಾವಿಯೋಗಿನಿಯಾದ್ದರಿಂದಲೂ, ಜಗದುಪಾದಾನವಾದ ಜಡಪ್ರಕೃತಿಯು ವಿಷ್ಣುವಿನ ಸಮೀಪದಲ್ಲಿಯೇ ಇದ್ದರೂ ಉಭಯರೂ ಆತನ ಅಧೀನರೇ ಆದ್ದರಿಂದ, ಭಗವಂತನ ಶಬಲತ್ವಹೇತುಗಳಾಗುವುದಿಲ್ಲ; ಭಗವಂತನು ಮಾಯಾಶ್ರಿತನಲ್ಲ—ಮಾಯಾನಿಮಿತ್ತವಾದ ಲೇಪವಿಲ್ಲ (೩೫೭). ಮಾಯಾನಾಮಕಗಳಾದ ಉಕ್ತಲಕ್ಷ್ಮ್ಯಾದಿ ಮೂರನ್ನು ಬಿಟ್ಟು, ನಾಲ್ಕನೆಯದಾದ ಭ್ರಾಂತಿಕಾರಕ ಮಾಯೆಯನ್ನು, ನಾಲ್ಕನೇ ಪುರುಷಾರ್ಥವಾದ ಮೋಕ್ಷವನ್ನು

ಇಚ್ಛಾಶಕ್ತಿ, ೩ ಉಪಾದಾನವಾದ ಜಡಪ್ರಕೃತಿಗಳು, ಮಾಯಾ ಶಬ್ದವಾಚ್ಯಗಳು; ಇವುಗಳನ್ನು ಬಿಟ್ಟು ಭ್ರಮಕಾರಣವಾದ ನಾಲ್ಕನೆಯ) ಮಾಯೆಯನ್ನು, ಹರೌ – ಭಗವಂತನಲ್ಲಿ, ಚತುರ್ಥಾರ್ಥೀ – (ಪುರುಷಾರ್ಥಗಳಲ್ಲಿ ನಾಲ್ಕನೆಯದಾದ) ಮೋಕ್ಷವನ್ನು ಅಪೇಕ್ಷಿಸುವ ಯಾರೂ, ನ ಸ್ಮರೇತ್– (ಇರುವುದೆಂದು) ಚಿಂತಿಸಬಾರದು (ಭ್ರಮಜನಕ ಮಾಯೆಯನ್ನು ಭಗವಂತನ (ದೃಷ್ಟಿ) ಕಣ್ಣಿನಲ್ಲಾಗಲಿ, ಆತನ ಸಮೀಪದಲ್ಲಾಗಲಿ, ಸೃಷ್ಟಿಕಾಲದಲ್ಲಿ ಅಥವಾ ಅನ್ಯಕಾಲದಲ್ಲಿ ಆಗಲಿ, ಚಿಂತಿಸಕೂಡದು ; ಈ ಮಾಯೆಯು, ಅನಾದ್ಯನಂತಕಾಲದಲ್ಲಿ ಜೀವರಲ್ಲಿ ಮಾತ್ರ ಇರುವುದಾಗಿದೆ; ಉಕ್ತ ಮಾಯಾತ್ರಯಗಳಿಂದ, ವಿಷ್ಣುವಿಗೆ ಶಬಲತ್ವವಿಲ್ಲ; (ಷಡ್ರಸಗಳಿರುವಲ್ಲಿ) ಸಪ್ತಮ ರಸವೆಂದು ಹೇಳಿದಂತೆ, ಶಬಲತ್ವದ ವಾರ್ತೆಯೂ ಉಚಿತವಲ್ಲ).

**ವಿಜ್ಞಾನಾಸ್ತ್ರೇಣ ಯೋ ಮಾಯಾಮಹರದ್ಬಾಣಮಂತ್ರಿಣಃ ।**
**ಅನ್ಯೈರಹಸ್ಯಮಾನಾಂ ಚ ಸಾ ಕಥಂ ಸಾತ್ವತರ್ಷಭೇ ॥ ೩೫ ॥**

ಬಾಣಮಂತ್ರಿಣಃ–ಬಾಣಪ್ರಯೋಗಮಾಡಿದ (ಬಾಣಾಸುರನ) ಮಂತ್ರಿಯ, ಮಾಯಾಂ–ಮಾಯೆಯನ್ನು, ಅನ್ಯೈಃ–ಅನ್ಯರಿಂದ, ಅಹನ್ಯಮಾನಾಂ ಚ–ನಾಶಮಾಡಲಾಗದೇ ಇದ್ದುದನ್ನು, ಯಃ – ಯಾರು, ವಿಜ್ಞಾನಾಸ್ತ್ರೇಣ–ವಿಜ್ಞಾನಾಸ್ತ್ರವನ್ನು ಪ್ರತಿಯಾಗಿ ಪ್ರಯೋಗಿಸುವುದರಿಂದ, ಅಹರತ್–ಪರಿಹರಿಸಿದನೋ (ನಾಶಮಾಡಿದನೋ), ಸಾ–ದೈತ್ಯಮಾಯಾವಿನಾಶಕ ಶಕ್ತಿಯು, ಕಥಂ – ಹೇಗೆ (ತಾನೇ ಮಾಯಾವಶನಾಗಿದ್ದರೆ, ಹೇಗೆ), ಸಾತ್ವತರ್ಷಭೇ–ಯಾದವಶ್ರೇಷ್ಠನಾದ ಶ್ರೀಕೃಷ್ಣನಲ್ಲಿ (ಹೇಗೆ ಇರುತ್ತಿತ್ತು ?—ಶಕ್ಯವಿಲ್ಲ).

---

ಅಪೇಕ್ಷಿಸುವ ಯಾವನೂ, ಭಗವಂತನಲ್ಲಿರುವುದೆಂದು ಚಿಂತಿಸಕೂಡದು ; ಈ ಭ್ರಮಕಾರಣವಾದ ಮಾಯೆಯು ಅನಾದ್ಯನಂತಕಾಲದಲ್ಲಿ ಜೀವರಲ್ಲಿ ಮಾತ್ರವೇ ಇರತಕ್ಕದ್ದು—ಶ್ರೀಕೃಷ್ಣನನ್ನು ಎಂದೂ ಸಮೀಪಿಸುವುದಿಲ್ಲ (೩೪). ಬಾಣಾಸುರನ ಮಂತ್ರಿಯಿಂದ ಪ್ರಯೋಗಿಸಲಾದುದೂ, ಅನ್ಯರಿಂದ ಭಗ್ನಗೊಳಿಸಲಾಗದುದೂ ಆದ ಮಾಯೆಯನ್ನು, ಶ್ರೀಕೃಷ್ಣನು ವಿಜ್ಞಾನಾಸ್ತ್ರದಿಂದ ನಾಶಮಾಡಲಿಲ್ಲವೇ ? ಇಂತಹ ಶ್ರೀಕೃಷ್ಣನನ್ನು ಮಾಯೆಯು ಬಾಧಿಸಬಹುದೇ ? (ಸರ್ವಥಾ ಶಕ್ಯವಿಲ್ಲ) (೩೫).

**ಮಯಮಾಯಾ ಹಿ ಸಾ ಸತ್ಯಾನ್ಮಿಥ್ಯಾರ್ಥಾನ್ ದರ್ಶಯೇತ್ಪರಂ ।**
**ತ್ರಿವಿಧಾ ದೇವಮಾಯೇಯಂ ಸತ್ಯಾಸತ್ಯಾರ್ಥಕಾರಿಣೀ ॥ ೩೬೦ ॥**

ಮಯಮಾಯಾ–ದೈತ್ಯ ಬಡಗಿಯಾದ (ಶಿಲ್ಪಿಯಾದ) ಮಯಾಸುರನ ಮಾಯೆಯು, ಸತ್ಯಾತ್ – ಮಂತ್ರೌಷಧಿರೂಪದಿಂದಾದ, ಮಿಥ್ಯಾರ್ಥಾನ್– (ವಿದ್ಯೆಯಿಂದ ಬಾಧಿಸಲ್ಪಡುವ) ಮಿಥ್ಯಾವಸ್ತುಗಳನ್ನು (ಸೈನ್ಯಾದಿಗಳನ್ನು), ಪರಂ ದರ್ಶಯೇತ್–ಮಾತ್ರ ನಿರ್ಮಿಸಿ ತೋರಿಸುತ್ತದೆ; ಇಯಂ–ಈ, ದೇವ ಮಾಯಾ–ದೇವಮಾಯೆಯು (ಇಚ್ಛಾ, ಶಕ್ತಿ, ತೇಜಸ್ಸುಗಳೆಂಬ ಭಗವಂತನ ಸ್ವರೂಪಭೂತವೇ ಆದ ತ್ರಿವಿಧ ಮಾಯೆ ಮತ್ತು ಸ್ವರೂಪದಿಂದ ಭಿನ್ನವಾದ, ವಿಷ್ಣುವಿನ ಅಧೀನಗಳೇ ಆದ, ಲಕ್ಷ್ಮೀ, ಜಡಪ್ರಕೃತಿ, ಭ್ರಾಂತಿಕಾರಕ ಮಾಯಾಗಳೆಂಬ ಮೂರು), ಸತ್ಯಾರ್ಥಕಾರಿಣೀ – ಸತ್ಯವಸ್ತುಗಳ ಸೃಷ್ಟಿಗೆ ಕಾರಣವಾದುದು; (ಹೀಗೆ, ದೈತ್ಯಮಾಯೆಯೂ ಭಗವದಧೀನವೇ ಆದರೂ, ದೈತ್ಯರಿಂದ ಪ್ರಯೋಗಿಸಲ್ಪಟ್ಟು ಮಿಥ್ಯಾವಸ್ತುಗಳನ್ನೇ ನಿರ್ಮಿಸುತ್ತದೆ).[1]

---

ದೈತ್ಯಶಿಲ್ಪಿಯಾದ ಮಯಾಸುರನಿರ್ಮಿತ ಮಾಯೆಯು, ಮಂತ್ರೌಷಧ ಗಳ ಬಲದಿಂದ, ವಿದ್ಯೆಯಿಂದ ಬಾಧ್ಯವಾದ ಮಾಯಾವಸ್ತುಗಳಿಂದ, ನಿರ್ಮಿಸಿ ಪ್ರದರ್ಶಿಸಲ್ಪಡುತ್ತದೆ; ದೇವಮಾಯೆಯು ಭಗವಂತನ ಇಚ್ಛಾದಿರೂಪವಾಗಿದ್ದು, ಆತನ ಸ್ವರೂಪಭೂತವೇ ಆಗಿದೆ; ತದ್ಭಿನ್ನ, ಲಕ್ಷ್ಮೀ, ಜಡಪ್ರಕೃತ್ಯಾದಿಗಳು ಭಗವಂತನ ಅಧೀನಗಳಾಗಿವೆ; ದೇವಮಾಯೆಯು, ಸತ್ಯವಾದ ವಸ್ತುಗಳನ್ನೇ ನಿರ್ಮಿಸುತ್ತದೆ; ಯದ್ಯಪಿ, ಮಯಮಾಯೆಯೂ, ಭಗವಂತನ ಅಧೀನವಾಗಿದೆ; ಅದು ಬಾಧ್ಯವಾಗುವ ಮಿಥ್ಯಾವಸ್ತುಗಳನ್ನು ಮಾತ್ರ ಪ್ರದರ್ಶಿಸಬಲ್ಲದು (೩೬೦).

---

1 ದೈತ್ಯಮಾಯೆಯು ಮಿಥ್ಯಾಭೂತವಾದುದು—ಪಂಚಪರ್ವಗಳುಳ್ಳ ಅವಿದ್ಯೆಯ ಒಂದು ಭಾಗದಿಂದ ಸೃಷ್ಟವಾಗಿ, ತತ್ಕಾಲದಲ್ಲಿ ಸತ್ಯವಾಗಿ ತೋರಿದರೂ ವಿದ್ಯೆಯಿಂದ ಬಾಧ್ಯವಾಗುತ್ತದೆ; (ವಿಜ್ಞಾನವು ಅದನ್ನು ಪರಿಹರಿಸಬಲ್ಲದು); ದೇವಮಾಯೆಯು ಸತ್ಯ ವಾದ ವಸ್ತುಗಳನ್ನೇ ನಿರ್ಮಿಸಬಲ್ಲದು; ಈ ಉಭಯಮಾಯೆಗಳಿಂದ ಭಿನ್ನವಾದುದು, ಅನಿರ್ವಚನೀಯವಾದ (ಸತ್ಯವೂ ಅಸತ್ಯವೂ ಅಲ್ಲವೆಂಬ, ಮಾಯಾವಾದಿಯ ಮಾಯವು —ಅದು ಯಾವ ಸತ್ಯಕಾರ್ಯವನ್ನೂ ಸಾಧಿಸಲಾರದು.

**ತವ ತ್ವನಿರ್ವಾಚ್ಯಮಾಯಾ ನ ಸುರೇ ನಾಪಿ ಚಾಸುರೇ ॥ ೩೬೧ ॥**

ಮಿಥ್ಯಾಭೂತವಾದ ಮಾಯೆಯನ್ನು ಎಲ್ಲಿಯೂ ಕಾಣೆವೆನ್ನುತ್ತಾರೆ:—

ತವ ತು—ನಿನ್ನ (ಮಾಯಾವಾದಿಯ) ಮಾಯೆಯಾದರೋ, ಅನಿರ್ವಾಚ್ಯ ಮಾಯಾ—ಅನಿರ್ವಚನೀಯವಾದ (ಸತ್ಯಾಸತ್ಯವಿಲಕ್ಷಣ—ಹೀಗೆಂದು ಹೇಳಲು ಬಾರದ) ಮಾಯೆಯು; ಸುರೇ—ದೇವತೆಗಳಲ್ಲಿ, ನ—ಇಲ್ಲವು; ಅಸುರೇ ಚ—ದೈತ್ಯರಲ್ಲಿಯೂ, ನ—ಇಲ್ಲವು.

**ಮದಾಂಧೇ ತು ಮಹಾದೈತ್ಯೇ ಗುರೋರಪ್ಯವಮಂತರಿ ।**
**ತವೋಪಮಾ ಕಥಂಚಿತ್ಸ್ಯಾನ್ಮಿಥ್ಯಾತ್ವಂ ನಾಸ್ತಿತಾ ಯದಿ ॥ ೩೬೨ ॥**

ಬಾಯಲ್ಲಿ (ಮಾತಿನಿಂದ) ಮಾಯೆಯನ್ನು ಅನಿರ್ವಚನೀಯವೆಂದು ಹೇಳಿದರೂ, ವಸ್ತುಗತ್ಯಾ, ಮಾಯಾವಾದಿಗೆ ಅಸತ್ವವೇ ಅಭಿಪ್ರೇತವೆನ್ನುತ್ತಾರೆ:—

ಮಿಥ್ಯಾತ್ವಂ—ಮಿಥ್ಯಾತ್ವವು, ನಾಸ್ತಿತಾ ಯದಿ—ಅಸತ್ವವೇ ಆಗುವುದಾದರೆ, ಗುರೋಃ ಅಪಿ—(ವರದಾನ ಮಾಡಿದ) ಉಪದೇಶಕ (ಶಿವನಲ್ಲಿ) ಮಹದೇವರಲ್ಲಿಯೂ, ಅವಮಂತರಿ—ಕೀಳೆಂದು ತಿಳಿದು (ನಾಶಮಾಡುವ ಉದ್ದೇಶವನ್ನು ಹೊಂದಿದ) ಪ್ರವೃತ್ತಿಸಿದ, ಮಹಾಂಧೇ—ಮಹೋನ್ಮತ್ತನಾದ (ದುರಹಂಕಾರದಿಂದ (ಅಂಧನಾದ), ಮಹಾದೈತ್ಯೇ—ಮಹಾಸುರನಲ್ಲಿ (ವೃತ್ರಾಸುರನಲ್ಲಿ),

---

ಮಾಯಾವಾದಿಯ ಮಾಯೆಯಾದರೋ, ಅನಿರ್ವಾಚ್ಯವಾದ ಮಾಯೆಯು; ದೈತ್ಯಮಾಯೆಯು, ಮಿಥ್ಯಾ ಗಜ ತುರಗಾದಿಗಳನ್ನು ಸೃಷ್ಟಿಮಾಡಿದರೂ, ಅವು ವಿಜ್ಞಾನಾಸ್ತ್ರಾದಿ ವಿದ್ಯೆಯಿಂದ ಪರಿಹಾರವಾಗುತ್ತವೆ; ಸತ್ಯವೂ ಅಲ್ಲದ ಅಸತ್ಯವೂ ಅಲ್ಲದ ಸತ್ಯಾಸತ್ಯ ವಿಲಕ್ಷಣವೆಂಬ ಮಾಯೆಯನ್ನು ಯಾರೂ ಎಲ್ಲಿಯೂ ಕೇಳರಿಯರು (೩೬೧). ಮಾಯಾವಾದಿಯ ಗುರುವು ಉಪದೇಶಿಸಿದ ಮಾಯೆಯು ಅನಿರ್ವಚನೀಯವಾದರೂ ಮಾಯಾವಾದಿಯು ಅನಿರ್ವಚನೀಯವೆಂದು ಮಾತಿನಿಂದ ಹೇಳುತ್ತಾನಲ್ಲದೆ, ಅದರ ಅಸತ್ಯತ್ವವೇ ಅವನಿಗೆ ಅಭಿಪ್ರೇತವಾಗಿದೆ; ಆದ್ದರಿಂದಲೇ ಮಿಥ್ಯಾ ಎಂದರೆ, ಅಸತ್ಯ—ಸುಳ್ಳು, ಎಂಬ ಕಲ್ಪನೆಯು ಜನತೆಯಲ್ಲಿ ಬಂದಿರುವುದು ಉಚಿತವೂ ಎನಿಸುತ್ತದೆ; ಹೀಗೆ ಅಸತ್ವವನ್ನು ತಿಳಿಯುವ ಮಾಯಾವಾದಿಗೆ, ವೃಕಾಸುರನ ಉಪಮಾನವನ್ನು

ತವ–ನಿನಗೆ (ಮಾಯಾವಾದಿಗೆ), ಉಪಮಾ – ಸಾದೃಶ್ಯವು, ಕಥಂಚಿತ್–ಹೇಗಾದರೂ (ಕಷ್ಟದಿಂದ), ಸ್ಯಾತ್–ಆದೀತು (ಹೇಳಬಹುದು).[1]

**ಗುರುಂ ಚ ಗುರುಣಾ ದತ್ತಾಂ ವಿದ್ಯಾಮುದ್ಧತಧೀರಸೌ ।**
**ಯತೋ ಧಿಕ್ಕುರುತೇ ವಾಚಾ ಸ ಆಚಾರ್ಯೋ ಭವೇತ್ತವ ॥ ೩೬೩ ॥**

ಉಕ್ತವಿಷಯವನ್ನೇ ಸ್ಪಷ್ಟಪಡಿಸುತ್ತಾರೆ:—

ಉದ್ಧತಧೀಃ – ಧಿಟ್ಟತನದ, ಅಸೌ–ಈತನು (ಮಾಯಾವಾದಿಯು), ಗುರುಂ ಚ–(ತನ್ನ) ಗುರುವನ್ನೂ, ಗುರುಣಾ – ಗುರುವಿನಿಂದ, ದತ್ತಾಂ–ಕೊಡಲ್ಪಟ್ಟ, ವಿದ್ಯಾಂ–ವಿದ್ಯೆಯನ್ನು, ಯತಃ–ಯಾವ ಕಾರಣದಿಂದ, ವಾಚಾ–ತನ್ನ ನುಡಿಯಿಂದ, ಧಿಕ್ಕುರುತೇ–ತಿರಸ್ಕರಿಸುವನೋ (ಮಾಯೆಗೆ ಅಸತ್ವವನ್ನು ಹೇಳಿದರೆ), ತವ–(ಆ ಕಾರಣದಿಂದ) ನಿನಗೆ, ಸಃ–ಆ ಪೂರ್ವೋಕ್ತ ಮಹಾಸುರನೇ (ವೃಕಾಸುರನೇ), ಆಚಾರ್ಯಃ–ಗುರುವಾಗಲು, ಭವೇತ್–ಅರ್ಹನಾಗಿರುತ್ತಾನೆ (ಗುರುವಾಗಬೇಕು).

---

ಮಾತ್ರ ಹೇಳಬಹುದಾಗಿದೆ; ವೃಕಾಸುರನೆಂಬ ಮಹಾದೈತ್ಯನು ರುದ್ರದೇವನಿಂದ ವರವನ್ನು ಪಡೆದು, ಅದನ್ನು ಆತನಮೇಲೆ ಪ್ರಯೋಗಿಸಲು ಪ್ರವೃತ್ತನಾದನು; ಗುರುತಿರಸ್ಕಾರರೂಪದ ಈ ಮದೋನ್ಮತ್ತನ ಪ್ರವೃತ್ತಿಯು, ಮಾಯಾವಾದಿಯಲ್ಲಿಯೂ ಕಂಡುಬರುತ್ತದೆ (೩೬೨). ಗುರುವನ್ನು, ಗುರೂಕ್ತ ಉಪದೇಶವನ್ನು ತಿರಸ್ಕರಿಸಿ ಪ್ರವೃತ್ತಿಸುವ ಮಾಯಾವಾದಿಗೆ ವೃಕಾಸುರನೇ ಗುರುವಾಗಲು ಯೋಗ್ಯನೆನ್ನಬಹುದಾಗಿದೆ (೩೬೩).

---

[1] ವೃಕಾಸುರನು ಶಿವನಿಂದ, ತಲೆಮೇಲೆ ಕೈಯಿಟ್ಟ ವ್ಯಕ್ತಿಯು ಮರಣ ಹೊಂದಬೇಕೆಂಬ ವರವನ್ನು ಪಡೆದು, ಅದೇ ವರಬಲದಿಂದ, ಶಿವನ ತಲೆಯಮೇಲೆ ಹಸ್ತವನ್ನಿಟ್ಟು, ಶಿವನನ್ನು ಸಂಹರಿಸಿ, ಪಾರ್ವತಿಯನ್ನು ದೊರಕಿಸಿಕೊಳ್ಳಬೇಕೆಂದು ಹವಣಿಸಿದನು; ವರದಾನ ಮಾಡಿದ ತನ್ನ ಗುರುವನ್ನೇ ನಾಶಮಾಡುವ ಇಚ್ಛೆಯುಳ್ಳ ಈ ಮಹಾದೈತ್ಯನಂತೆ, ಮಾಯಾವಾದಿಯಾದರೂ, ತನ್ನ ಗುರುವಿನಿಂದ ಮಾಯಾಖ್ಯ ವಿದ್ಯೆಯನ್ನು ಪಡೆದು, ಆ ಮಾಯೆಗೆ ಅಸತ್ವವನ್ನು ಪ್ರತಿಪಾದಿಸುವುದರಿಂದ, ಗುರುತಿರಸ್ಕಾರರೂಪದ ದೋಷವುಂಟಾಗುತ್ತದೆನ್ನುತ್ತಾರೆ—ಗುರುವು ಉಪದೇಶಿಸಿದುದು ಮಾಯೆಯ ಅನಿರ್ವಚನೀಯತ್ವ—ಶಿಷ್ಯನು ಸಾಧಿಸುವುದು ಅಸತ್ವ.

**ಅನಿರ್ವಾಚ್ಯತ್ವಪಕ್ಷಸ್ಯ ತ್ವನಿರ್ವಾಚ್ಯೋ ಪರೋ ಗುರುಃ ।**
**ಪ್ರಚ್ಛನ್ನಬೌದ್ಧರಾದ್ಧಾಂತೋ ಯತ್ತ್ವಂ ಸದಸತೋರ್ಬಹಿಃ ॥ ೩೬೪ ॥**

ಅನಿರ್ವಾಚ್ಯತ್ವಪಕ್ಷಸ್ಯ—ಅನಿರ್ವಾಚ್ಯ ಮಾಯಾಮತದ, ಪರೋ ಗುರುಃ—ಶ್ರೇಷ್ಠಗುರುವೂ, ಅನಿರ್ವಾಚ್ಯಃ ತು—ಅನಿರ್ವಾಚ್ಯನೇ ಸರಿ (ಇಂಥವನೆಂದು ಹೇಳಲಿಕ್ಕೆ ಬರದವನು—ಜಗತ್ತಿನಲ್ಲಿಯೇ ಇಲ್ಲವೆಂಬ ಭಾವ); ಯತ್—ಯಾವ ಕಾರಣದಿಂದ, ತ್ವಂ—ನೀನು (ಮಾಯಾವಾದಿಯು), ಸದಸತೋಃ—ವೈದಿಕ ಮತ್ತು ಪಾಷಂಡಿಗಳ, ಬಹಿಃ—ಹೊರಗಿನವನು, ಪ್ರಚ್ಛನ್ನಬೌದ್ಧರಾದ್ಧಾಂತಃ—ಕೇವಲ ಪಾಷಂಡಿಯೂ ಅಲ್ಲ (ಅದನ್ನು ಆಚ್ಛಾದಿಸಿದ ವೈದಿಕ ಚಿನ್ಹೆವುಳ್ಳವನಾದರೂ, ವೈದಿಕನಲ್ಲ) ಅಂತತಃ ಬೌದ್ಧಸಿದ್ಧಾಂತ ತತ್ವವುಳ್ಳವನೇ ಆಗಿರುವಿ (ಆದ್ದರಿಂದ ವೈದಿಕನೂ ನಿನಗೆ ಗುರುವಲ್ಲ—ಪಾಷಂಡಿಯೂ ಅಲ್ಲ); (ನೀನೂ ಸದಸದ್ವಿಲಕ್ಷಣನೇ ಆದ್ದರಿಂದ ನಿನ್ನ ಮತದ ಗುರುವು ನೀನೇ), (ನೀನು ಅಂಗೀಕರಿಸುವುದು ಸ್ವಕಪೋಲಕಲ್ಪಿತವನ್ನು ಮಾತ್ರ—ಯಾವ ಪ್ರಮಾಣವನ್ನೂ ಅಲ್ಲ).

**ಪಕ್ಷೋಽನ್ಯಸ್ತು ಸಭಾಮಧ್ಯೇ ಹಾಸ್ಯಾಯಸ್ಯಾತ್ಪರಂ ನೃಣಾಂ ॥ ೩೬೫॥**

ಅನ್ಯಃ—(ನಿನ್ನದೇ ಆದ) ಇನ್ನೊಂದು, ಪಕ್ಷಃ—ಶಬಲಬ್ರಹ್ಮನೆಂಬ ಪಕ್ಷವು (ಅಭಿಪ್ರಾಯವು—ನಿನ್ನ ನಿರ್ಣಯವು), ನೃಣಾಂ ಪರಂ—ಮನುಷ್ಯರಿಗಾದರೋ,

---

ಮಾಯೆಗೆ ಅನಿರ್ವಾಚ್ಯತ್ವವನ್ನು ಹೇಳುವ ಮತದ ಆಚಾರ್ಯನೂ ಅನಿರ್ವಾಚ್ಯನೇ ಆಗಿರಬೇಕು (ಅಂಥವನು ಜಗತ್ತಿನಲ್ಲಿಯೇ ಇಲ್ಲವೆಂದು ಭಾವ); ಮಾಯಾವಾದಿಯು, ವೈದಿಕನೂ ಅಲ್ಲ, ಪಾಷಂಡಿಯೂ ಅಲ್ಲ; ಅಂತತಃ ಬೌದ್ಧಮತ ತತ್ವಗಳನ್ನೇ ಒಳಗಿಟ್ಟುಕೊಂಡು, ಬೇರೆ ಶಬ್ದಗಳಿಂದ ವೈದಿಕನೆಂದು ಸಾಧಿಸಿಕೊಳ್ಳಲೆತ್ನಿಸುವ ಮಾಯಾವಾದಿಯು, ಪ್ರಚ್ಛನ್ನ ಬೌದ್ಧನೇ ಆಗಿದ್ದಾನೆ; ಯಾವ ಪ್ರಮಾಣವೂ ಇಲ್ಲದ ಸ್ವಕಪೋಲಕಲ್ಪಿತ ತತ್ವಗಳನ್ನೇ ನಿರೂಪಿಸುವ ಈತನು, ತನಗೆ ತಾನೇ ಗುರುವೆಂದು ಕರೆಯಲ್ಪಡಲು ಅರ್ಹನಾಗಿದ್ದಾನೆ (೩೬೪). ಮಾಯಾವಾದಿಯದೇ ಆದ ಶಬಲಬ್ರಹ್ಮತ್ವವೆಂಬ ಪ್ರಕ್ರಿಯೆಯು, ಸಭೆಗಳಲ್ಲಿ ಹಾಸ್ಯಾಸ್ಪದವಾಗುತ್ತದೆ; ಜ್ಞಾನಾನಂದಾದಿ ಶುಭ ಗುಣಗಳುಳ್ಳವನಾಗಿ, ಜಗತ್ಸೃಷ್ಟ್ಯಾದಿಗಳನ್ನು ನಿರ್ವಹಿಸುವನೆಂಬ ಬ್ರಹ್ಮನು,

ಹಾಸ್ಯಾಯ – (ಜ್ಞಾನಾನಂದಾದಿ ಗುಣಗಳುಳ್ಳವನೆಂಬ ಶಬಲಬ್ರಹ್ಮತ್ವ ಪಕ್ಷವು ಶುದ್ಧಬ್ರಹ್ಮನಿಗೆ ಶುಭಗುಣಗಳಿಂದ ಉಂಟಾದುದೆಂಬ ಹೀನತ್ವವನ್ನು ಹೇಳುವುದರಿಂದ ನೀನು ಸಭೆಯಲ್ಲಿ) ಹಾಸ್ಯಕ್ಕೆ, ಸ್ಯಾತ್–ಪಾತ್ರನಾಗುವಿ.

**ಮಲಿನದ್ರವ್ಯಸಂಯೋಗೇ ಮಾಲಿನ್ಯಂ ವಾಸಸೋಽಪಿ ಹಿ ।**
**ಶುದ್ಧಸಮಾಯೋಗೇ ಶ್ಲಾಘ್ಯಂ ಸ್ಯಾತ್ ಸ್ವರ್ಗಿಣಾಮಪಿ ॥ ೩೬೬ ॥**

ಉಕ್ತಾರ್ಥವನ್ನು ದೃಷ್ಟಾಂತದಿಂದ ಉಪಪಾದಿಸುತ್ತಾರೆ :—

ಮಲಿನದ್ರವ್ಯಸಂಯೋಗೇ–ಮಲಿನವಸ್ತುಸಂಯೋಗವು (ಸಂಬಂಧವು), ಶುದ್ಧವಸ್ತುವಿಗಾದರೆ, ವಾಸಸಃ ಅಪಿ–ಬಟ್ಟೆಗೂ ಸಹ (ಕೆಸರು ತಗಲಿದರೆ), ಮಾಲಿನ್ಯಂ–ಅಶುದ್ಧತೆಯು (ಆಗುತ್ತದೆ); ಶುದ್ಧವಸ್ತುಸಮಾಯೋಗೇ–ಶುದ್ಧವಾದ (ವಸ್ತ್ರಾಭರಣಗಳ ಅಥವಾ ಸುಗಂಧಪುಷ್ಪಾದಿಗಳ) ಸಂಬಂಧವಾದರೆ, ಸ್ವರ್ಗಿಣಾಂ ಅಪಿ – ಸ್ವರ್ಗವಾಸಿಗಳಿಗೂ (ದೇವತೆಗಳಿಗೂ ಸಹ), ಶ್ಲಾಘ್ಯಂ ಸ್ಯಾತ್ – ಶುದ್ಧವಸ್ತುಗಳ ಸಂಯೋಗದಿಂದ ಅಲಂಕಾರವೂ ಸಂತೋಷವೂ ಉಂಟಾಗಿ) ಶ್ಲಾಘ್ಯವೇ (ಸ್ತುತ್ಯವೇ) ಎನಿಸುತ್ತದೆ.

**ಕಿಂ ನ ಕೌಸುಂಭಕುಸುಮರಕ್ತಿಮಾ ವಸ್ತ್ರಭೂಷಣಂ ।**
**ನ ಕಿಂ ಕುಂಕುಮಸೌಗಂಧ್ಯಂ ಗಂಧಸೌಗಂಧ್ಯವರ್ಧನಂ ॥ ೩೬೭ ॥**

ಶುದ್ಧವಸ್ತು ಸಮಾಯೋಗವು ಶ್ಲಾಘ್ಯತೆಗೆ ಕಾರಣವೆಂಬಲ್ಲಿ ಒಂದೆರಡು ಉದಾಹರಣೆಗಳನ್ನು ಹೇಳುತ್ತಾರೆ :—

ಕೌಸುಂಭಕುಸುಮರಕ್ತಿಮಾ – ಕೌಸುಂಭ ಪುಷ್ಪದ ಕೆಂಪು ವರ್ಣವು, ವಸ್ತ್ರಭೂಷಣಂ ಕಿಂ ನ–ವಸ್ತ್ರಕ್ಕೆ ಅಲಂಕಾರವಲ್ಲವೇ ? (ಹೌದು, ಆಕರ್ಷಕ

---

ಶುದ್ಧಬ್ರಹ್ಮನಲ್ಲ, ಶಬಲ (ಅಶುದ್ಧ) ಬ್ರಹ್ಮನೆಂಬುದು ಹಾಸ್ಯಾಸ್ಪದವೇ ಸರಿ (೩೬೫). ಶುದ್ಧವಸ್ತ್ರಕ್ಕೆ ಮಲಿನವಸ್ತುವಿನ (ಕೆಸರಿನ) ಸಂಯೋಗವಾದರೆ, ಬಟ್ಟೆಯು ಮಲಿನವಾಗುತ್ತದೆ; ಗಂಧವಸ್ತ್ರಾದಿ ಶುಭವಸ್ತುಗಳ ಸಂಯೋಗದಿಂದ, ಸ್ವರ್ಗವಾಸಿಗಳಾದ ದೇವತೆಗಳೂ ಸಹ ಅಲಂಕಾರವೆನಿಸಿ ಸಂತೋಷವಾಗುತ್ತದೆ (೩೬೬). ಕೌಸುಂಭಪುಷ್ಪದ ಕೆಂಪುವರ್ಣವು ವಸ್ತ್ರಕ್ಕೆ ಭೂಷಣವಾಗಿ, ಅದನ್ನು ಆಕರ್ಷಕವನ್ನಾಗಿ ಮಾಡುವುದಿಲ್ಲವೇ ? ಗಂಧದ ಕೊರಡಿನಿಂದ

ವಾಗಿ ಹರ್ಷವನ್ನುಂಟುಮಾಡುತ್ತದೆ); ಕುಂಕುಮಸೌಗಂಧ್ಯಂ–ಕುಂಕುಮದ (ಕುಂಕುಮ ಕೇಸರಿಯ) ಸುಗಂಧವು, ಗಂಧಸೌಗಂಧ್ಯವರ್ಧನಂ–(ಚಂದನದ) ಪರಿಮಳವನ್ನು ವೃದ್ಧಿಗೊಳಿಸುವುದು, ಕಿಂ ನ–ಅಲ್ಲವೇನು? (ಅಧಿಕ ಪರಿಮಳ ದಿಂದ ಶೋಭಿಸುತ್ತದೆ.) [ಆದ್ದರಿಂದ ಜ್ಞಾನಾದಿ ಶುಭಗುಣಗಳಿಂದ ಬ್ರಹ್ಮನು ಸರ್ವರಿಂದ ಅಧಿಕವಾಗಿ ಶ್ಲಾಘ್ಯನೇ ಆಗುತ್ತಾನಲ್ಲದೇ, ಅವು ಶುದ್ಧನಾದ ಬ್ರಹ್ಮನಿಗೆ ಶಬಲನೆಂಬ (ಮಿಶ್ರಣರೂಪದ) ಹೀನತ್ವವನ್ನು (ಶಬಲಬ್ರಹ್ಮನು ಶುದ್ಧಬ್ರಹ್ಮನಿಗಿಂತ ಕೀಳೆಂದು ಮಾಯಾವಾದದ ನಿರೂಪಣೆಗೆ ಅವಕಾಶವನ್ನು) ಉಂಟುಮಾಡಲಾರವು].

**ಶೌಕ್ಲ್ಯೋತ್ತೇಜಕಯೋಗೇ ಸ್ಯಾದ್ವಸ್ತ್ರಸ್ಯ ಹ್ಯತಿಶುಕ್ಲತಾ ॥ ೩೬೮ ॥**

ಮತ್ತೊಂದು ದೃಷ್ಟಾಂತದಿಂದಲೂ ಅದನ್ನೇ ಸಮರ್ಥಿಸುತ್ತಾರೆ:—

ವಸ್ತ್ರಸ್ಯ – ಬಟ್ಟೆಗೆ, ಶೌಕ್ಲ್ಯೋತ್ತೇಜಕಯೋಗೇ–ಬೆಳ್ಳಗೆ ಮಾಡಲು ಉಪಯುಕ್ತವಾದ ವಸ್ತುವಿನ ಸಂಯೋಗವಾದರೆ, ಅತಿಶುಕ್ಲತಾ–ಅಧಿಕವಾಗಿ ಬೆಳ್ಳಗೇ, ಸ್ಯಾತ್ ಹಿ–ಆಗುವುದಷ್ಟೆ.

**ಶಕ್ತಿಸೌಂದರ್ಯಶೌರ್ಯಾದಿಯೋಗಾಚ್ಛ್ಲಾಘ್ಯತರೋ ಹರಿಃ ।**
**ಜ್ಞಾನೇನಾಜ್ಞಾನಾದಿದೋಷಾನ್ಯದ್ದೂರೇ ದ್ರಾವಯೇತ್ಪ್ರಭುಃ॥ ೩೬೯॥**

ಜ್ಞಾನಾದಿ ಗುಣಗಳಿಂದ (ಅಜ್ಞಾನಾದಿ ದೋಷನಿವಾರಕವಾದ) ಶುಭ ಗುಣಗಳಿಂದ ಅತಿಶಯ ಶ್ಲಾಘ್ಯನೇ ಆಗಬೇಕಲ್ಲವೇ ಶ್ರೀಹರಿಯು? ಎನ್ನು ತ್ತಾರೆ:—

---

ತೆಗೆದ ಗಂಧಕ್ಕೆ (ಚಂದನಕ್ಕೆ) ಕುಂಕುಮಕೇಸರಿಯು ಸೇರಿದರೆ, ಪರಿಮಳವು ವೃದ್ಧಿಯಾಗುವುದಿಲ್ಲವೇ? ಜ್ಞಾನಾದಿ ಶುಭಗುಣಗಳ ಯೋಗದಿಂದ, ಶುದ್ಧ ಬ್ರಹ್ಮನು ಅತಿಶಯಶ್ಲಾಘ್ಯನೇ ಆಗುತ್ತಾನಲ್ಲದೆ, ಶಬಲನಾಗುವುದಿಲ್ಲ (ಜಡ ಸತ್ವಾದಿ ಗುಣಗಳು ಸೇರಿದಂತೆ, ಶಬಲತ್ವವೆಂಬ ಕೊರತೆಯುಂಟಾಗುವುದಿಲ್ಲ) (೩೬೭). ಬೆಳ್ಳಗೆ ಮಾಡುವ ವಸ್ತುಸಂಯೋಗದಿಂದ, ವಸ್ತ್ರವು ಅಧಿಕ ಬೆಳ್ಳಗೆ ಆಗುವುದಷ್ಟೆ (೩೬೮). ಅದ್ಭುತ ಶಕ್ತಿ, ಸೌಂದರ್ಯ, ಶೌರ್ಯ, ಔದಾರ್ಯಾದಿ ಶುಭಗುಣಗಳು ಶುದ್ಧಬ್ರಹ್ಮನಲ್ಲಿ ಉಂಟಾದರೆ, ಆತನು ಅಧಿಕ ವಾಗಿ ಪ್ರಶಂಸನೀಯನೇ ಆಗುತ್ತಾನೆ; ಜ್ಞಾನದಿಂದ ಅಜ್ಞಾನ, ಸಂಶಯ,

ಶಕ್ತಿಸೌಂದರ್ಯಶೌರ್ಯಾದಿಯೋಗಾತ್—ಅದ್ಭುತಶಕ್ತಿ, ಸೌಂದರ್ಯ, ಶೌರ್ಯ, ಔದಾರ್ಯಾದಿ ಗುಣಯುಕ್ತನಾಗುವುದರಿಂದ, ಹರಿಃ – ಶ್ರೀ ಪರಮಾತ್ಮನು, ಶ್ಲಾಘ್ಯತರಃ – ಅಧಿಕ ಪ್ರಶಂಸನೀಯನೇ (ಆಗುತ್ತಾನೆ); ಜ್ಞಾನೇನ–ಜ್ಞಾನದಿಂದ, ಅಜ್ಞಾನಾದಿ ದೋಷಾನ್ಯತ್–ಅಜ್ಞಾನ, ಸಂಶಯ, ವಿರುದ್ಧಜ್ಞಾನ, ನಿದ್ರಾದಿ ದೋಷಗಳೆಂಬ ಭಿನ್ನವಸ್ತುಸಮೂಹವನ್ನು, ಪ್ರಭುಃ –ಸರ್ವಶಕ್ತನಾದ ಶ್ರೀಹರಿಯು, ದೂರೇ–ದೂರಕ್ಕೆ, ದ್ರಾವಯೇತ್–ಓಡಿಸುತ್ತಾನೆ.

**ಯದಿ ಸ್ವರೂಪಜ್ಞಾನಸ್ಯ ನಾಜ್ಞಾನಪ್ರತಿಕೂಲತಾ ।**
**ತದಾ ಮುಕ್ತಸ್ಯ ಚಾಜ್ಞಾನಾತ್ ಪುನಃ ಸಂಸಾರಿತಾ ಪತೇತ್ ॥ ೩೭೦ ॥**

ಮಾನಸಿಕಜ್ಞಾನವೇ (ವೃತ್ತಿಜ್ಞಾನವೇ) ಅಜ್ಞಾನದ ಪರಿಹಾರಕವು— ಸ್ವರೂಪಜ್ಞಾನವಲ್ಲ, ಎಂಬ ಪಕ್ಷವನ್ನು ನಿರಾಕರಿಸುವ ಯುಕ್ತಿಯನ್ನು ಹೇಳುತ್ತಾರೆ:—

ಸ್ವರೂಪಜ್ಞಾನಸ್ಯ–ಸ್ವರೂಪಜ್ಞಾನಕ್ಕೆ, ಯದಿ ಅಜ್ಞಾನ ಪ್ರತಿಕೂಲತಾ ನ–ಒಂದು ಪಕ್ಷ ಅಜ್ಞಾನ ವಿರೋಧಿತ್ವವು (ಅಜ್ಞಾನ ಪರಿಹಾರಶಕ್ತಿಯು) ಇಲ್ಲವೆಂದರೆ, ತದಾ–ಆಗ, ಮುಕ್ತಸ್ಯ ಚ–(ಸಂಚಾರದಿಂದ) ಮುಕ್ತನಾದವನಿಗೆ ಸಹ, ಅಜ್ಞಾನಾತ್–ಬಾಹ್ಯ ಅಜ್ಞಾನದ ಸಂಬಂಧವಾಗಿ (ಸ್ವರೂಪಜ್ಞಾನವು ಅದನ್ನು ಪರಿಹರಿಸುವ ಶಕ್ತಿಯುಳ್ಳದ್ದಲ್ಲವಾದ್ದರಿಂದ), ಪುನಃ – ಮತ್ತೆ, ಸಂಸಾರಿತಾ ಪತೇತ್–ಸಂಸಾರಿತ್ವವೇ ಒದಗಬೇಕಾಗುತ್ತದೆ (ಸಂಸಾರದಲ್ಲಿ ಬೀಳಬೇಕಾಗುತ್ತದೆ).

**ಭ್ರಾಂತ್ಯುತ್ಥಿತಸ್ಯ ತತ್ರೈವ ಭೂಯೋ ಭೂಯೋ ಭ್ರಮೋಽಸ್ತಿ ಹಿ ।**
**ನಷ್ಟಾಜ್ಞಾನಸ್ಯ ಚ ಭ್ರಾಂತ್ಯಾ ಕಲ್ಪನಾಪಿ ಪುನಃ ಪುನಃ ॥ ೩೭೧ ॥**

---

ವಿಪರ್ಯಾದಿ ದೋಷಗಳು ದೂರ ಹೋಗುತ್ತವೆ; ಹೀಗಿದ್ದೂ, ಶುದ್ಧನಾಗಿದ್ದವನು, ಶಬಲನು ಮಿಶ್ರನು (ಗುಣದೋಷಮಿಶ್ರನು) ಹೇಗಾಗುವನು ? (ಶಕ್ಯವಿಲ್ಲ) (೩೬೯). ಸ್ವರೂಪಜ್ಞಾನವು ಅಜ್ಞಾನದ ವಿರೋಧಿಯಲ್ಲದಿದ್ದರೆ (ಅಜ್ಞಾನನಾಶಕವಲ್ಲದಿದ್ದರೆ), ಮುಕ್ತನೂ ಅಜ್ಞಾನವಶನಾಗಿ ಪುನಃ ಸಂಸಾರದಲ್ಲಿ ಬೀಳಬೇಕಾಗುತ್ತದೆ (೩೭೦). ಸ್ವರೂಪಜ್ಞಾನವು ಅಜ್ಞಾನನಿವರ್ತಕ

ಅವಿದ್ಯೆಯಿಂದ ನಿವೃತ್ತಿಯನ್ನು ಹೊಂದಿದ ಮುಕ್ತನಿಗೆ ಅಜ್ಞಾನವನ್ನು ಕಲ್ಪಿಸುವುದು ಯುಕ್ತವೇ ? ಎಂದರೆ, ಹೇಳುತ್ತಾರೆ :—

ಭ್ರಾಂತ್ಯುತ್ಥಿತಸ್ಯ – (ಬಾಧಕಜ್ಞಾನದಿಂದ) ಭ್ರಾಂತಿಯನ್ನು ಕಳೆದುಕೊಂಡವನಿಗೆ, ತತ್ರ ಏವ—ಅದೇ ವಸ್ತುವಿನಲ್ಲಿ (ಶುಕ್ತಿ, ರಜ್ಜು ಮೊದಲಾದ ವಸ್ತುಗಳಲ್ಲಿ), ಭೂಯೋ ಭೂಯಃ – ಮತ್ತೆ ಮತ್ತೆ (ಕಾಲಾಂತರದಲ್ಲಿ), ನಷ್ಟಜ್ಞಾನಸ್ಯ – ಮೊದಲಿನ ಭ್ರಮಜ್ಞಾನವು ನಷ್ಟಹೊಂದಿದವನಿಗೆ ಸಹ, ಪುನಃ ಪುನಃ – ಅನೇಕಾವರ್ತಿ, ಭ್ರಾಂತ್ಯಾ – ಭ್ರಾಂತಿಯಿಂದ, ಭ್ರಮಃ—ಭ್ರಮೆಯೂ, ಚ—ಮತ್ತು, ಕಲ್ಪನಾ ಅಪಿ—'ಇದನ್ನು ನಾನು ತಿಳಿಯುವುದಿಲ್ಲ' ಎಂಬ ರೂಪದ ಅಜ್ಞಾನಕಲ್ಪಕ ಸಾಕ್ಷಿ ಅನುಭವವೂ, ಅಸ್ತಿ ಹಿ—ಇರುವುದಷ್ಟೆ; (ಅಜ್ಞಾನವು ನಾಶವಾದ ನಂತರವೂ, ಆಯಾ ಭ್ರಾಂತಿಯಿಂದ, ಬೇರೆ ಅಜ್ಞಾನಗಳು ಕಲ್ಪಿತವಾಗುತ್ತವೆ; ಹೀಗೆ ಮುಕ್ತಿಯಲ್ಲಿ (ಬ್ರಹ್ಮನಲ್ಲಿ ಸಹ) ಸ್ವರೂಪಜ್ಞಾನಕ್ಕೆ ಅಜ್ಞಾನ ಪರಿಹಾರಕ ಸಾಮರ್ಥ್ಯವಿಲ್ಲದಿದ್ದರೆ, ಅಜ್ಞಾನವೇ ಭ್ರಾಂತಿರೂಪವಾದ್ದರಿಂದ, ಅದೇ ಅಜ್ಞಾನದಿಂದ ಬೇರೆ ಅಜ್ಞಾನವೂ ಕಲ್ಪಿತವಾಗಿ, ಸಂಸಾರವೂ ಪ್ರಾಪ್ತವಾಗಬೇಕಾಗುತ್ತದೆ).[1]

---

ವಲ್ಲದಿದ್ದರೆ, ಮುಕ್ತನಿಗೆ, ಮತ್ತೆ ಮತ್ತೆ ಉಂಟಾಗುವ ಅಜ್ಞಾನದಿಂದ, ಭ್ರಮೆಗೆ ಸಿಕ್ಕು ಸುತ್ತುವನೆಂಬ ಕಲ್ಪನೆಯು, ಯುಕ್ತವೇ ಆಗುತ್ತದೆ; ಶುಕ್ತ್ಯಾದಿಗಳಲ್ಲಿ ಉಂಟಾದ ಬೆಳ್ಳಿ ಎಂಬ ಭ್ರಾಂತಿಯು, ಒಂದಾವರ್ತಿ ಪರಿಹಾರವಾಗಿ, ಶುಕ್ತಿಯೆಂಬ ಜ್ಞಾನವುಂಟಾದ ಮಾತ್ರದಿಂದ, ಕಾಲಾಂತರದಲ್ಲಿ ಮತ್ತೆ ಅದೇ ಭ್ರಮೆಯು ಉಂಟಾಗುವುದು ಅಸಂಭವವೇನಲ್ಲ (ಅದೂ ಕಂಡಿದೆ); ಅಜ್ಞಾನ ಕಾರಣವಾದ ಮೂಲದೋಷವು ಪರಿಹಾರವಾಗಿ, ಮುಕ್ತನಾದವನಿಗೂ, ಹೀಗೆಯೇ, ಪುನಃ ಅಜ್ಞಾನವುಂಟಾಗಲು ಯಾವ ಅಡ್ಡಿಯೂ ಇಲ್ಲವಷ್ಟೆ;

---

[1] ಅಜ್ಞಾನವು ಬಾಧಕಜ್ಞಾನದಿಂದ ಪರಿಹೃತವಾಗಿ ಭ್ರಮೆಯು ನಷ್ಟವಾದರೂ, ಅದೇ ಶುಕ್ತಿ ಅಥವಾ ರಜ್ಜುವನ್ನು, ಕಾಲಾಂತರದಲ್ಲಿ ಕಂಡು, ಮತ್ತೆ ಅಜ್ಞಾನದಿಂದ ಬೆಳ್ಳಿ ಅಥವಾ ಸರ್ಪವೆಂದು ಭ್ರಾಂತಿಯುಂಟಾಗುವುದೂ ಉಂಟಷ್ಟೆ; ಆ ಭ್ರಾಂತಿಗೆ ಕಾರಣವಾದ ಅಜ್ಞಾನವೂ, ಇದರಂತೆ ಪುನಃ ಪುನಃ ಉಂಟಾಗುವ ಭ್ರಾಂತಿಗಳಿಗೆ ಆಯಾ ಅಜ್ಞಾನವೂ ಕಾರಣವಾಗುತ್ತದೆಂದು ಹೇಳಬೇಕು; ಇದರ ವಿಶೇಷ ವಿವರಣೆಯನ್ನು ಸ್ಪಷ್ಟವಾಗಿ ಮುಂದಿನ ಶ್ಲೋಕಗಳಲ್ಲಿ ಕಾಣುತ್ತೀರಿ.

**ಅಜ್ಞಾನಭ್ರಾಂತಯೋ ದೋಷಃ ಕಲ್ಪ್ಯೋಽಜ್ಞಾನಾನ್ನ ಚಾಪರಃ ।**
**ಪ್ರಾತೀತಿಕಂ ಚ ತೇಽಜ್ಞಾನಂ ನಾಪಿ ಸ್ವಭ್ರಮಕಾರಣಂ ॥ ೩೭೨ ॥**

ಮುಕ್ತಿಯಲ್ಲಿ ದೋಷವಿಲ್ಲದ್ದರಿಂದ ಅಜ್ಞಾನಭ್ರಾಂತಿಗಳು, ಮುಕ್ತನಿಗೆ ಬರಲು ಅವಕಾಶವೇ ಇಲ್ಲವೆಂದರೆ, ಹೇಳುತ್ತಾರೆ :—

ಅಜ್ಞಾನಭ್ರಾಂತಯೋ—ಅಜ್ಞಾನದ ಭ್ರಾಂತಿಗೆ (ಅಜ್ಞಾನಕೃತ ಭ್ರಮೆಗೆ), ಅಜ್ಞಾನಾತ್ – (ಮುಂದೆ ಕಲ್ಪಿಸಬೇಕಾದ) ಅಜ್ಞಾನದಿಂದ, ಅಪರಃ – ಬೇರೊಂದು, ದೋಷಃ – ದೋಷವು, ನ ಕಲ್ಪ್ಯಃ – ಕಲ್ಪಿಸಬೇಕಾದುದಿಲ್ಲ ; ತೇ—ನಿನ್ನ (ಮಾಯಾವಾದಿಯ), ಅಜ್ಞಾನಂ—ಅಜ್ಞಾನವು, ಪ್ರಾತೀತಿಕಂ— ತೋರುವ ಸಮಯದಲ್ಲಿ ಇರತಕ್ಕದ್ದು ; ಹಿಂದೆ ಇರತಕ್ಕದ್ದಲ್ಲ ; ಸ್ವಭ್ರಮ ಕಾರಣಂ ಅಪಿ ನ—(ಆ ಅಜ್ಞಾನವು) ತನ್ನ ಭ್ರಮೆಗೆ ತಾನೇ ಕಾರಣವೂ ಅಲ್ಲ (ಭ್ರಮೆಗೆ ಕಾರಣವಾದುದು ಭ್ರಮೆಯ ಪೂರ್ವದಲ್ಲಿರಬೇಕೆಂಬ ನಿಯಮವಿರುವುದರಿಂದ, ಇಲ್ಲಿ ಹಾಗೆ ತಿಳಿಯಬಾರದು).[1]

---

ಅಜ್ಞಾನವೇ ಭ್ರಾಂತಿರೂಪವಾದುದು ; ಅದರಿಂದ ಸಹಜವಾಗಿ ಸಂಸಾರಿಯಾಗಬೇಕಾಗುತ್ತದೆ (೩೭೧). ಮೂಲದೋಷ ಪರಿಹಾರವಾಗಿರುವುದರಿಂದ,

---

1 ಅವಿದ್ಯಾದೋಷದಿಂದ ಮುಕ್ತನಾದ ಮುಕ್ತನಲ್ಲಿ ಯಾವ ದೋಷವೂ ಇಲ್ಲದಿರುವಾಗ, ಅಜ್ಞಾನ ಭ್ರಮೆಗಳು ಉಂಟಾಗಲು ಕಾರಣವೇ ಇಲ್ಲವೆಂದರೆ, ಅಜ್ಞಾನದ ಕಲ್ಪನೆಯನ್ನು ಹೊರತು, ಬೇರೆ ದೋಷವಿರಬೇಕಾದ್ದಿಲ್ಲ ; ಮಾಯಾವಾದಿಯು, ಬೌದ್ಧಪ್ರಭೇದಿಗಳಾದ ವಿಜ್ಞಾನವಾದಿಗಳಂತೆ ಅಜ್ಞಾನಪರಂಪರೆಯನ್ನು (ಒಂದು ಅಜ್ಞಾನದಿಂದ ಮತ್ತೊಂದು, ಅದರಿಂದ ಮತ್ತೊಂದು, ಹೀಗೆ) ಅಂಗೀಕರಿಸುವುದಿಲ್ಲವಾದ್ದರಿಂದ, ಅಜ್ಞಾನವು ಪ್ರತೀತಿಕಾಲದಲ್ಲಿ (ಭ್ರಮಪ್ರತೀತಿಕಾಲದಲ್ಲಿ—ಆ ಕಾಲದಲ್ಲಿ ಮಾತ್ರ, ಹಿಂದಿನ ಕಾಲದಲ್ಲಿ ಅಲ್ಲ) ತೋರುವುದರಿಂದ, ಅಜ್ಞಾನಕ್ಕೆ ಅಜ್ಞಾನವೇ ಕಾರಣವೆಂದು ಹೇಳಬೇಕಾಗುತ್ತದೆ ; ಅವಿದ್ಯಾಪರಿಹಾರವಾಗಿ ಮುಕ್ತನಾಗಿರುವುದರಿಂದ, (ಮುಕ್ತನಿಗೆ ಅವಿದ್ಯಾಶ್ರಯತ್ವರೂಪದ ದೋಷವಿಲ್ಲದಿದ್ದರೂ) ಭ್ರಮೆಯು ಒಮ್ಮೆ ಪರಿಹಾರವಾದರೂ, ಅನ್ಯಕಾಲದಲ್ಲಿ ಮತ್ತೊಮ್ಮೆ ಉಂಟಾಗಲು ಯಾವ ಪ್ರತಿಬಂಧಕವೂ ಇಲ್ಲದ ಕಾರಣ, ಅಜ್ಞಾನವನ್ನು, (ಅದಕ್ಕೆ ಮೂಲಕಾರಣವಾದ ದೋಷವಿಲ್ಲದಿದ್ದರೂ) ಸ್ವರೂಪಜ್ಞಾನದಿಂದ ಅಜ್ಞಾನವು ನಷ್ಟಹೊಂದುವುದಿಲ್ಲವೆಂಬ ವಾದವನ್ನು ಒಪ್ಪಿದರೆ), ಕಲ್ಪಿಸಬೇಕಾಗುತ್ತದೆ ; ಹೀಗೆ ಕಲ್ಪಿತವಾದ ಅಜ್ಞಾನದಿಂದ (ಅದರೊಡನೆ ಭ್ರಮೆಯೂ—ಮಿಥ್ಯಾಜ್ಞಾನವೂ) ಸಂಸಾರಕ್ಕೆ ಬೀಳಲೇಬೇಕಾಗುತ್ತದೆ ; ಆದ್ದರಿಂದ ಸ್ವರೂಪಜ್ಞಾನಕ್ಕೆ ಅಜ್ಞಾನಪರಿಹಾರಕ ಸಾಮರ್ಥ್ಯವಿಲ್ಲೆಂಬುವ ವಾದವು ಯುಕ್ತವಲ್ಲ.

**ಅತೋ ಭ್ರಾಂತ್ಯೇಕಕಲ್ಪ್ಯಸ್ಯ ಕುತ್ರ ಕುತ್ರ ನ ಕಲ್ಪನಾ ।**
**ಅನಾದಿ ನಾಸ್ತಿ ಚೇತ್ಕಿಂ ನಶ್ಛಿನ್ನಂ ಮಾಯೈವ ಕಲ್ಪ್ಯತಾಂ ॥ ೩೭೩ ॥**

ಅತಃ – ಅಜ್ಞಾನಕ್ಕೃತ ಭ್ರಮೆಗೆ ಪೂರ್ವದೋಷದ ಅವಶ್ಯಕವಿಲ್ಲದ್ದ ರಿಂದ, ಭ್ರಾಂತ್ಯೇಕಕಲ್ಪ್ಯಸ್ಯ–ಕೇವಲ ಭ್ರಾಂತಿಮಾತ್ರದಿಂದ ಕಲ್ಪಿಸಲಾಗುವ ಅಜ್ಞಾನಕ್ಕೆ, ಕುತ್ರ ಕುತ್ರ ನ ಕಲ್ಪನಾ – ಕಲ್ಪನೆಗೆ ಎಲ್ಲೆಲ್ಲಿ ಅವಕಾಶವಿಲ್ಲ? (ಸರ್ವತ್ರ ಕಲ್ಪಿಸಬಹುದಾಗಿದೆ); ಅನಾದಿ ನಾಸ್ತಿ ಚೇತ್ – ಅನಾದಿಯಾದ ಅವಿದ್ಯೆಯು (ಮಾಯೆಯು) ಇಲ್ಲದಿರುವುದರಿಂದ, (ಅಜ್ಞಾನವನ್ನು, ಮೂಲ ವಾದ ಮಾಯೆಯೇ ಇಲ್ಲದಿರಲು) ಕಲ್ಪಿಸುವುದು ಹೇಗೆಂದರೆ); ಮಾಯಾ ಏವ–ಮಾಯೆಯೇ, ಕಲ್ಪ್ಯತಾಂ – ಕಲ್ಪಿಸಲ್ಪಡಲಿ (ನಷ್ಟವಾದ ಅಜ್ಞಾನ ಭ್ರಮೆಯು, ಕಾಲಾಂತರದಲ್ಲಿ ಪುನಃ ಬರಬಹುದಾದಂತೆ), ನಃ – ನಮಗೆ, ಛಿನ್ನಂ ಕಿಂ – ನಷ್ಟವಾದುದೇನು? (ಏನೂ ಇಲ್ಲ—ಮಾಯೆಯನ್ನೇ ಕಲ್ಪಿಸ ಬಹುದು).

---

ಮುಕ್ತನಿಗೆ ಅಜ್ಞಾನಭ್ರಾಂತಿಗಳುಂಟಾಗಲು ಕಾರಣವಿಲ್ಲೆಂದು ಹೇಳುವುದೂ ಯುಕ್ತವಾಗುವುದಿಲ್ಲ; ಏಕೆಂದರೆ, ಮಾಯಾವಾದಿಯಂತೆ, ಅಜ್ಞಾನವು ಪ್ರಾತೀತಿಕ (ತೋರುವ ಕಾಲದಲ್ಲಿ ಮಾತ್ರ—ಹಿಂದಿನ ಸಮಯದಲ್ಲಿ ಅಲ್ಲ) ವಾದುದಾಗಿದೆ; ಹೀಗೆ ಹೇಳಿದರೆ, ಅಜ್ಞಾನವು ತನಗೆ ತಾನೇ ಕಾರಣವೆಂದು ಹೇಳಿದಂತಾಗುತ್ತದೆ—ಅಜ್ಞಾನಕ್ಕೆ ಕಾರಣವಾದ ಪೂರ್ವದೋಷವು ಇಲ್ಲ ವೆಂದರೆ, ಹೀಗೆಯೇ ಪ್ರಾಪ್ತವಾಗುತ್ತದೆ, ಎಂದರೆ, ಪ್ರಾತೀತಿಕವಾದ ಅಜ್ಞಾನವು ಅನ್ಯಕಾರಣವಿಲ್ಲದೇ ತತ್ಕಾಲದಲ್ಲಿ, ಒಮ್ಮೆ ಪರಿಹೃತವಾದ ಭ್ರಮೆಯು ಮತ್ತೊಮ್ಮೆ ಉಂಟಾಗುವಂತೆ, ಉಂಟಾಗುವುದಕ್ಕೆ, ಪ್ರತಿಬಂಧಕ ವಾಗುವ ಸ್ವರೂಪಜ್ಞಾನವು ಅಜ್ಞಾನಪರಿಹಾರಕ ಶಕ್ತಿರಹಿತವೆಂದು ಒಪ್ಪಿರು ವುದರಿಂದ ಯಾವ ಬಾಧಕವೂ ಇರುವುದಿಲ್ಲ (೩೭೨). ಕೇವಲ ಭ್ರಾಂತಿ ಯಿಂದ, ಅದಕ್ಕೆ ಕಾರಣವಾದ ಅಜ್ಞಾನವನ್ನು ಕಲ್ಪಿಸುವುದರಲ್ಲಿ ಯಾವ ಪ್ರತಿಬಂಧಕವೂ ಇಲ್ಲ; ಅಜ್ಞಾನದ ಕಲ್ಪನೆಗೆ ಕಾರಣವೆಂಬ ಬೇರೆ ದೋಷ ವನ್ನು ಚಿಂತಿಸುವ ಅವಶ್ಯಕವಿಲ್ಲ; ಬೌದ್ಧನಂತೆ ಮಾಯಾವಾದಿಯು ಅಜ್ಞಾನ ಪರಂಪರೆಯನ್ನು ಅಂಗೀಕರಿಸುವುದಿಲ್ಲವಷ್ಟೆ; ಅನಾದಿಯಾದ ಮಾಯೆಯೂ

**ಅತಃ ಸ್ವರೂಪಜ್ಞಾನೇನ ಜ್ವಲಜ್ಜ್ವಾಲೋಜ್ಜ್ವಲೇನ ಹಿ ।**
**ಅಜ್ಞಾನೋಚ್ಚಾಟನಂ ವಾಚ್ಯಂ ಯತ್ಸಂಗಾತ್ ಮಾನಸೋಪಿ ಚಿತ್॥**

ಉಪಸಂಹರಿಸುತ್ತಾರೆ :—

ಅತಃ – ಆದ್ದರಿಂದ (ಸ್ವರೂಪಜ್ಞಾನವು ಅಜ್ಞಾನವಿರೋಧಿಯಲ್ಲದಿದ್ದರೆ ಮುಕ್ತನಿಗೆ ಸಹ ಅಜ್ಞಾನವು, ಹಿಂದೆ ನಿರೂಪಿಸಿದಂತೆ, ಪ್ರಾಪ್ತವಾಗುವುದರಿಂದ), ಜ್ವಲಜ್ಜ್ವಾಲೋಜ್ಜ್ವಲೇನ – ಪ್ರಜ್ವಲಿಸುವ ಮಹಾಜ್ವಾಲೆಯಂತೆ ಪ್ರಕಾಶಿಸುವ, ಸ್ವರೂಪಜ್ಞಾನೇನ – ಸ್ವರೂಪಜ್ಞಾನದಿಂದ, ಅಜ್ಞಾನೋಚ್ಚಾಟನಂ–ಅಜ್ಞಾನದ (ಆತ್ಯಂತಿಕ ನಾಶವು), ವಾಚ್ಯಂ–ಹೇಳಲ್ಪಡಬೇಕು; ಯತ್ಸಂಗಾತ್ – ಯಾವ ಸ್ವರೂಪಜ್ಞಾನದ ಯೋಗದಿಂದ (ಸಂಬಂಧದಿಂದ), ಮಾನಸಃ ಅಪಿ ಚಿತ್ – ಮನಸ್ಸಿನ ವಸ್ತುವನ್ನು ತಿಳಿಯುವ ಜ್ಞಾನಶಕ್ತಿಯು (ಮತ್ತು ಅಜ್ಞಾನ ಪರಿಹಾರಕ ಶಕ್ತಿಯೂ) ಉಂಟಾಗುತ್ತದೆಯೋ (ಅದು ಸ್ವಯಂ ಅಜ್ಞಾನ ಪರಿಹಾರಕ ಶಕ್ತಿ ಇಲ್ಲದಿರುವುದೇ ?–ಅಸಂಭವವೇ ಸರಿ).

**ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯೇತ್ಯುಕ್ತಂ ವಾಕ್ಯಮನುಸ್ಮರ ।**
**ದೋಷೇಣ ಶಬಲೋ ದೂಷ್ಯೋ ಗುಣೇನ ತು ಮನಃ ಪ್ರಿಯಃ ॥**

ಉಕ್ತವಾದ ಯುಕ್ತಿಗೆ ಬೆಂಬಲವನ್ನೀಯುವ ಸ್ಮೃತಿಯನ್ನು ಜ್ಞಾಪಿಸುತ್ತಾರೆ :—

---

ಇಲ್ಲದಿರುವುದರಿಂದ ಮುಕ್ತನಿಗೆ ಸಂಸಾರಪ್ರಾಪ್ತಿಯನ್ನು ಕಲ್ಪಿಸುವುದು ಸರಿಯಲ್ಲವೆಂಬ ವಾದವೂ ಯುಕ್ತವಲ್ಲ; ಭ್ರಮೆಯು ಕಾಲಾಂತರದಲ್ಲಿ ಪುನಃ ಉಂಟಾಗಬಹುದಾದಂತೆ, ಅದನ್ನು ಕಲ್ಪಿಸಿದರೂ ನಮಗೇನೂ ಹಾನಿಯಿಲ್ಲ (೩೭೩). **ಆದ್ದರಿಂದ, ಉಜ್ಜ್ವಲವಾಗಿ ಪ್ರಜ್ವಲಿಸುವ ಸ್ವರೂಪಜ್ಞಾನವು, ಅಜ್ಞಾನವನ್ನು ಉಚ್ಚಾಟನ ಮಾಡುವುದೆಂದೇ ಹೇಳಬೇಕಲ್ಲದೇ ಅನ್ಯಗತಿಯಿಲ್ಲ;** ಈ ಸ್ವರೂಪಜ್ಞಾನದ ಸಂಬಂಧದಿಂದಲೇ, ಪ್ರಾಕೃತ ಮನಸ್ಸಿನ ತಿಳಿಯುವ ಸಾಮರ್ಥ್ಯವೂ ಉಂಟಾಗುತ್ತದೆ—ಅಜ್ಞಾನ ಪರಿಹಾರಕ ಶಕ್ತಿಯೂ ದೊರೆಯುತ್ತದೆ; ಇಂತಹ ಸ್ವರೂಪಜ್ಞಾನಕ್ಕೆ ಸ್ವಯಂ ಅಜ್ಞಾನಪರಿಹಾರಕ ಸಾಮರ್ಥ್ಯವಿರುವುದಿಲ್ಲವೆಂಬುದು ಸರ್ವಥಾ ಗ್ರಾಹ್ಯವಲ್ಲ (೩೭೪). 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ....' ಎಂಬ ಸ್ಮೃತಿವಚನವನ್ನು

ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ–ಸ್ವರೂಪಜ್ಞಾನದಿಂದ (ಚೇತನಶಕ್ತಿಯಿಂದ) ಮಾಯೆಯನ್ನು ತಿರಸ್ಕರಿಸಿ, ಇತ್ಯುಕ್ತಂ–ಎಂದು ಹೇಳಲಾದ, ವಾಕ್ಯಂ–ಸ್ಮೃತಿವಾಕ್ಯವನ್ನು, ಅನುಸ್ಮರ – ಜ್ಞಾಪಿಸಿಕೊಳ್ಳುವುದು (ಯೋಗ್ಯವು); ದೋಷೇಣ–ದೋಷದಿಂದ, ಶಬಲತ್ವಂ–ಮಿಶ್ರಣವು, ದೂಷ್ಯಃ–ನಿಂದಾರ್ಹವು; ಗುಣೇನ–ಗುಣದಿಂದ, ನ–(ಶಬಲತ್ವವು) ದೂಷ್ಯವಲ್ಲ; ತು–ಆದರೆ, ಮನಃಪ್ರಿಯಃ–ಮನಸ್ಸಿಗೆ ಅಧಿಕ ಸಂತೋಷವೇ ಆಗುತ್ತದೆ.

**ಗೋಃಶಾಬಲ್ಯಂ ನ ಕಿಂ ಲಾಲ್ಯಂ ಶ್ವಿತ್ರಿಣಶ್ಚಿತ್ರರೂಪವತ್ ।**
**ನಿತ್ಯಮುಕ್ತತ್ವಶುದ್ಧತ್ವವಚನಾತ್ ಕ್ವಾಸ್ಯ ದೋಷಿತಾ ॥ ೩೭೬ ॥**

ದೋಷದಿಂದ ಶಬಲತ್ವವು ನಿಂದ್ಯವೆಂಬಲ್ಲಿ ದೃಷ್ಟಾಂತಗಳನ್ನು ನಿರೂಪಿಸಿ, ಶುದ್ಧಬ್ರಹ್ಮನಿಗೆ[1] ಶಬಲತ್ವನಿರಾಕರಣ ವಿಷಯಗಳನ್ನು ಉಪಸಂಹರಿಸುತ್ತಾರೆ:

ಶ್ವಿತ್ರಿಣಃ – ಕುಷ್ಠರೋಗದಿಂದ ಮಿಶ್ರವರ್ಣದ ದೇಹವುಳ್ಳವನ, ಚಿತ್ರರೂಪವತ್–ಶಬಲ ರೂಪದಂತೆ (ಹೇಯವಾಗಿರುವಂತೆ), ಗೋಃಶಾಬಲ್ಯಂ–ಗೋವಿನ ಶಬಲತ್ವವು (ವಿವಿಧ ವರ್ಣಗಳುಳ್ಳದ್ದೆಂಬುದು) (ನ – ಅಲ್ಲವು);

---

ಸ್ಮರಿಸಿಕೊಳ್ಳುವುದೂ ಅವಶ್ಯಕವೇ (ಮರೆಯದಿರಬೇಕೆಂದರ್ಥ); ದೋಷಗಳಿಂದ ಮಿಶ್ರಣವಾದರೆ (ಶಬಲತ್ವವೆಂದರೆ) ಆ ಶಬಲತ್ವವು ನಿಂದ್ಯವೇ ಆಗುವುದು; ಅದೇ ಗುಣಗಳಿಂದ ಶಬಲತ್ವವು ಸಂತೋಷಪ್ರದವಾಗುವುದು (೩೭೫). ಕುಷ್ಠರೋಗಿಯ ದೇಹವು ಮಿಶ್ರವರ್ಣಗಳಿಂದ (ಬಿಳಿಪು ಮುಂತಾದ ಬಣ್ಣಗಳಿಂದ) ಶಬಲವಾಗಿರುತ್ತದೆ; ಅದರ ದರ್ಶನವು, ದೋಷರೂಪದ ಶಬಲತ್ವ ಪ್ರಯುಕ್ತ, ಹೇಯವೆನಿಸುತ್ತದೆ (ತಿರಿಗಿನೋಡಲಿಕ್ಕೂ ಮನಸ್ಸಾಗುವುದಿಲ್ಲ—ತಿರಸ್ಕಾರಬುದ್ಧಿ ಹುಟ್ಟುತ್ತದೆ); ಆದರೆ ಗೋವಿನ ಶಬಲತ್ವವು (ಬಣ್ಣಬಣ್ಣದ ಶರೀರದಿಂದ) ಆಕರ್ಷಕವಾಗಿ ಸಂತೋಷವನ್ನುಂಟುಮಾಡುತ್ತದೆ—ಅದು ಪ್ರಶಂಸನೀಯವಾದ ಶಬಲತ್ವವು; ನಿತ್ಯಮುಕ್ತನೂ ಶುದ್ಧನೂ

---

[1] ಜಗತ್ಸೃಷ್ಟ್ಯಾದಿಗಳನ್ನು ನಿರ್ವಹಿಸುವ ಭಗವದ್ರೂಪವು (ಹಾಗೂ ವಿವಿಧ ಧರ್ಮಸಂಸ್ಥಾಪನ, ಜ್ಞಾನಪ್ರಸಾರಾದಿ ವ್ಯಾಪಾರಗಳಲ್ಲಿ ತೊಡಗುವ, ರಾಮಕೃಷ್ಣ ವೇದವ್ಯಾಸಾದಿಗಳೂ) ಶಬಲಬ್ರಹ್ಮರೂಪಗಳೆಂದು ಮಾಯಾವಾದದ ನಿರೂಪಣೆ; ನಿರ್ವಿಶೇಷನಾದ (ಯಾವ ಧರ್ಮವೂ ಇಲ್ಲದ) ನಿಷ್ಕ್ರಿಯನೇ ಶುದ್ಧಬ್ರಹ್ಮನು.

ಕಿಂ ನ ಲಾಲ್ಯಂ – ಸ್ತುತಿಗೆ ಅರ್ಹವಲ್ಲವೇ ? (ಕುಷ್ಠರೋಗಿಯ ಶಬಲತ್ವವು ಹೇಯವು ; ಗೋವಿನ ಶಬಲತ್ವವು ಆನಂದಕರವು — ಸ್ತುತಿಪಾತ್ರವು) (ವ್ಯತಿರೇಕಾನುಮಾನದಿಂದ ಈ ಅರ್ಥವೇ ಇಲ್ಲಿ ವಿವಕ್ಷಿತವಾದುದು) ; ನಿತ್ಯ ಮುಕ್ತತ್ವಶುದ್ಧತ್ವವಚನಾತ್ – ನಿತ್ಯಮುಕ್ತನೂ ಶುದ್ಧನೂ ಎಂಬ ('ವಿದ್ಯಾ ಮಯೋ ಯಃ ಸತು ನಿತ್ಯಮುಕ್ತಃ' – 'ಅವಿಕಾರೋಕ್ಷರಃ ಶುದ್ಧಃ' –ಇತ್ಯಾದಿ) ವಚನಗಳಿಂದ, ಅಸ್ಯ – ಪರಮಾತ್ಮನಿಗೆ, ದೋಷಿತಾ ಕ್ವ – ದೋಷರೂಪದ ಶಬಲತ್ವವು ಎಲ್ಲಿಂದ ? (ಇಲ್ಲವೇ ಇಲ್ಲ).

**ಕ್ರಿಯಾವೇಶಪ್ರಸಂಗೇನ ಕರ್ತೃತ್ವಂ ನ ಚಿತೋ ಯದಿ ।**
**ತರ್ಹಿ ಜ್ಞಪ್ತಿಶ್ಚ ಚಿನ್ನ ಸ್ಯಾತ್ ಸಾ ಧಾತ್ವರ್ಥಕ್ರಿಯಾ ಯತಃ ॥೩೭೭॥**

ಕರ್ತೃತ್ವವನ್ನು ಅಂಗೀಕರಿಸಿದರೆ, ಯಥೋಚಿತಪ್ರಯತ್ನಸಾಧ್ಯಕರ್ಮ ಕರಣವೆಂಬ ದೋಷವು ಪ್ರಾಪ್ತವಾಗುವುದೆಂಬ ಭೀತಿಯಿಂದ, 'ನಿಷ್ಕಲಂ ನಿಷ್ಕ್ರಿಯಂ' ಇತ್ಯಾದಿ ಶ್ರುತಿವಿರೋಧವನ್ನು ಪರಿಹರಿಸಿಕೊಳ್ಳಲು, ಶುದ್ಧ ಬ್ರಹ್ಮನಿಗೆ ಕರ್ತೃತ್ವವಿಲ್ಲವೆಂದರೆ ಹೇಳುತ್ತಾರೆ :—

ಚಿತಃ–ಚೇತನನಿಗೆ, ಕ್ರಿಯಾವೇಶಪ್ರಸಂಗೇನ – ಕರ್ಮಕರಣ ಪ್ರಸಂಗ ದಿಂದ ('ನಿಷ್ಕ್ರಿಯಂ....' ಬ್ರಹ್ಮನು ಕ್ರಿಯಾರಹಿತನೆಂದು, ವೇದವು ನಿಷೇಧಿಸು ವುದರಿಂದ), ಯದಿ ಕರ್ತೃತ್ವಂ ನ–ಕರ್ತೃತ್ವವಿಲ್ಲವೆಂಬ ಪಕ್ಷದಲ್ಲಿ, ತರ್ಹಿ–ಆಗ, ಚಿತ್ – ಚೇತನವು (ಬ್ರಹ್ಮನು), ಜ್ಞಪ್ತಿಶ್ಚ – ಜ್ಞಾನಕ್ರಿಯೆಯುಳ್ಳದ್ದೂ, ನ ಸ್ಯಾತ್–ಆಗದೇ ಹೋಗಲಿ; ಯತಃ–ಏಕೆಂದರೆ, ಸಾ–ಆ ಜ್ಞಪ್ತಿ ಎಂಬುದು (ಜ್ಞಾನವುಳ್ಳವನೆಂಬುದು), ಧಾತ್ವರ್ಥಕ್ರಿಯಾ–'ಜ್ಞಾ' ಧಾತುವಿನ ಕ್ರಿಯೆ,

---

ಆದ ಬ್ರಹ್ಮನಲ್ಲಿ ದೋಷರೂಪದ ಶಬಲತ್ವವು (ನಿಂದ್ಯವಾದ ಶಬಲತ್ವವು) ಎಂದಿಗೂ ಇಲ್ಲ (೩೭೬). 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಎಂಬ ಶ್ರುತಿಯು, ಬ್ರಹ್ಮನು ಕ್ರಿಯಾರಹಿತನೆಂದು ಹೇಳುವುದರಿಂದ, ಶುದ್ಧಬ್ರಹ್ಮನಿಗೆ ಜಗತ್ಸೃಷ್ಟ್ಯಾದಿ ಕ್ರಿಯೆಗಳನ್ನು ಹೇಳುವುದು ವೇದವಿರುದ್ಧವಾದ್ದರಿಂದ, ಸೃಷ್ಟ್ಯಾದಿ ವಿವಿಧ ಕರ್ಮಗಳನ್ನು ನಿರ್ವಹಿಸುವವನು ಕರ್ತೃತ್ವಶೂನ್ಯ ಶಬಲ ಬ್ರಹ್ಮನೆಂದೇ ತಿಳಿಯಬೇಕೆಂಬ ವಾದವೂ ಅಯುಕ್ತವೇ ಆಗುತ್ತದೆ; ಏಕೆಂದರೆ, ಕ್ರಿಯಾಕರಣ ಶಕ್ತಿಮತ್ವವೆಂಬುದು, ಶಬಲತ್ವಕ್ಕೆ ಕಾರಣವಾದರೆ, ಜ್ಞಾನಿತ್ವವೂ

*

ಎಂಬ ಅರ್ಥವೇ ಆಗಿರುತ್ತದೆ; (ಧಾತುವಿನ ಅರ್ಥವನ್ನು ಕ್ರಿಯೆ ಎಂದೇ ಶಾಸ್ತ್ರಕಾರರು ವ್ಯವಹರಿಸುತ್ತಾರೆ).[1]

**ನಿಷ್ಕ್ರಿಯಂ ತ್ವಿತಿ ವೇದಸ್ಯ ಪಕ್ಷಪಾತೋ ನ ವಿದ್ಯತೇ ।**
**ಕ್ರಿಯಾಮಾತ್ರನಿಷೇಧಿತ್ವಾದ್ದ್ವಯಂ ಚ ಪ್ರತಿಷೇಧತಿ ॥ ೩೭೮ ॥**

ನಿಷ್ಕ್ರಿಯಂ–'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಎಂಬ, ಇತಿ ವೇದಸ್ಯ ತು–ಈ ಶ್ರುತಿವಾಕ್ಯಕ್ಕಾದರೋ, ಪಕ್ಷಪಾತಃ–ಪಕ್ಷಪಾತವು (ಕರ್ತೃತ್ವರೂಪ ಕ್ರಿಯೆಯನ್ನು ಅಂಗೀಕರಿಸದೇ, ಜ್ಞಪ್ತಿತ್ವರೂಪ ಕ್ರಿಯೆಯನ್ನು ಅಂಗೀಕರಿಸು ವುದೆಂಬ ಪಕ್ಷಪಾತವು), ನ ವಿದ್ಯತೇ–ಇರುವುದಿಲ್ಲ; ಕ್ರಿಯಾಮಾತ್ರನಿಷೇಧಿ- ತ್ವಾತ್ – ಕ್ರಿಯಾಸಾಮಾನ್ಯವನ್ನು (ನಿಷ್ಕ್ರಿಯಂ, ಎಂದು) ನಿಷೇಧಿಸು ವುದರಿಂದ, ದ್ವಯಂ ಚ–ಕರ್ತೃತ್ವ, ಜ್ಞಪ್ತಿಗಳೆಂಬ ಎರಡನ್ನು; ಪ್ರತಿಷೇಧತಿ– (ಉಭಯವೂ ಕ್ರಿಯಾರೂಪಗಳೇ ಆದ್ದರಿಂದ) ನಿಷೇಧಿಸುತ್ತದೆ (ಎಂದು ತಿಳಿಯ ಬೇಕಾಗುತ್ತದೆ).

---

ಬ್ರಹ್ಮನಿಗೆ ಇಲ್ಲವೆಂದು ಹೇಳಬೇಕಾಗುತ್ತದೆ; ಧಾತ್ವರ್ಥವನ್ನು ಕ್ರಿಯೆ ಎಂದೇ ಶಾಸ್ತ್ರಕಾರರು ವ್ಯವಹರಿಸುತ್ತಾರೆ; ತಿಳಿಯುವುದೆಂಬುದೂ ಒಂದು ಕ್ರಿಯೆಯೇ ಅಲ್ಲವೇ ? ನಿಷ್ಕ್ರಿಯನೆಂದು ಹೇಳುವ ಶ್ರುತಿಯಿಂದ, ಬ್ರಹ್ಮನು ಜ್ಞಾನರೂಪದ ಕ್ರಿಯೆಯುಳ್ಳವನೂ ಅಲ್ಲವೆಂದೇ ವ್ಯವಸ್ಥಿತವಾಗುತ್ತದೆ (೩೭೭). ಶ್ರುತಿಗೆ ಪಕ್ಷಪಾತವಿಲ್ಲ; ಕ್ರಿಯಾಸಾಮಾನ್ಯವನ್ನೇ ನಿಷೇಧಿಸುವ (ಇಲ್ಲವೆಂದು ಹೇಳುವ) 'ನಿಷ್ಕ್ರಿಯ' ಶಬ್ದವು, ಕರ್ತೃತ್ವ, ಜ್ಞಪ್ತಿಗಳೆಂಬ, ಎರಡು ಕ್ರಿಯೆಗಳಲ್ಲಿ ಕರ್ತೃತ್ವವನ್ನು ಮಾತ್ರ ನಿಷೇಧಿಸಿ, ಜ್ಞಾತೃತ್ವವನ್ನು ಅಂಗೀಕರಿಸುತ್ತದೆಂದು ಹೇಳಲಿಕ್ಕೆ ಬರುವುದಿಲ್ಲ; ಈ ಉಭಯವಿಧ ಕ್ರಿಯೆಗಳನ್ನು ನಿಷೇಧಿಸುತ್ತದೆಂದೇ ಹೇಳಬೇಕಾಗುತ್ತದೆ (೩೭೮).

---

[1] ಕರ್ತೃತ್ವವು, ಗಮನಾದಿ ಚಲನರೂಪ ಕ್ರಿಯೆಯಾದರೆ, ಜ್ಞಾತೃತ್ವವು ವಿಷಯ ಗ್ರಹಣರೂಪ ಕ್ರಿಯೆಯಾಗಿದೆ; ಧಾತುಗಳು ಸಾಮಾನ್ಯವಾಗಿ, ಕ್ರಿಯಾರ್ಥಗಳೇ ಆಗಿರು ತ್ತವೆ; 'ನಿಷ್ಕ್ರಿಯಃ' ಎಂದು ಶ್ರುತಿಯು, ಸಾಮಾನ್ಯವಾಗಿ ಕ್ರಿಯೆಯನ್ನು ನಿಷೇಧಿಸು ತ್ತದೆ; ಆದ್ದರಿಂದ ಕರ್ತೃತ್ವದಿಂದ ಶಬಲತ್ವ ಹೇಳುವುದಾದರೆ, ಜ್ಞಾನತ್ವದಿಂದಲೂ ಹಾಗೆಯೇ ಹೇಳಬೇಕಾಗುತ್ತದೆ.

**ಪರಾಸ್ಯೇತಿ ಶ್ರುತಿಃ ಪ್ರಾಹ ಸಹಜ್ಞಾನಬಲಕ್ರಿಯಾಃ ।**
**ಅತಃ ಶ್ರೌತಮಿದಂ ತ್ಯಕ್ತ್ವಾ ಸ್ವಗೋತ್ರಕಲಹಾಕ್ಷಮಾ ।**
**ಶ್ರುತಿರ್ನಿಷೇಧತೀಶೇ ದ್ವೇ ಪುಣ್ಯಪಾಪಾಭಿಧೇ ಕ್ರಿಯೇ ॥ ೩೭ ॥**

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯು, ಜ್ಞಾನತ್ವವನ್ನು ಬ್ರಹ್ಮನಿಗೆ ನಿಷೇಧಿಸುವುದಿಲ್ಲವಾದ್ದರಿಂದ, ಜ್ಞಾನಭಿನ್ನಕ್ರಿಯೆಗಳು ಮಾತ್ರ ನಿಷೇಧಿಸಲ್ಪಡುತ್ತವೆಂದು ತಿಳಿಯುವುದು ಯುಕ್ತವಾಗುವುದೆಂದರೆ ಹೇಳುತ್ತಾರೆ:

ಪರಾಸ್ಯ ಇತಿ ಶ್ರುತಿಃ—'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಎಂಬ ಶ್ರುತಿಯು, ಸಹಜ್ಞಾನಬಲಕ್ರಿಯಾಃ ಪ್ರಾಹ—ಜ್ಞಾನ, ಬಲ, ಕ್ರಿಯೆಗಳನ್ನು ಒಂದೇ ವಾಕ್ಯದಲ್ಲಿ (ಜ್ಞಾನ, ಮತ್ತು ಕ್ರಿಯೆಗಳನ್ನು ಸ್ವಾಭಾವಿಕವೆಂದು) ಕೂಡಿಸಿ ಹೇಳಿರುವುದರಿಂದ (ಜ್ಞಾನಾತಿರಿಕ್ತ ಕ್ರಿಯೆಗಳನ್ನು ಮಾತ್ರವೆಂದು ನಿಷ್ಕ್ರಿಯ, ಎಂಬುದಕ್ಕೆ ಅರ್ಥಸಂಕೋಚ ಮಾಡಲು ಬರುವುದಿಲ್ಲ) ; ಅತಃ—ಆದ್ದರಿಂದ), ಶ್ರೌತಂ—ಶ್ರುತಿಯೇ ಹೇಳುವ, ಇದಂ—ಈ ವಾಕ್ಯವನ್ನು (ಜ್ಞಾನ ಮತ್ತು ಸೃಷ್ಟ್ಯಾದಿ ಕ್ರಿಯೆಯನ್ನು ಹೇಳುವುದನ್ನು), ತ್ಯಕ್ತ್ವಾ—ಬಿಟ್ಟು, ಸ್ವಗೋತ್ರಕಲಹಾಕ್ಷಮಾ[1]—ಸ್ವಜ್ಞಾತಿಕಲಹದಲ್ಲಿ ಅಸಮರ್ಥಳಾದ, ಶ್ರುತಿಃ—ಶ್ರುತಿಯು, ಈಶೇ—ಬ್ರಹ್ಮನಲ್ಲಿ, ಪುಣ್ಯಪಾಪಾಭಿಧೇ—ಪುಣ್ಯ ಪಾಪಗಳೆಂಬ, ದ್ವೇ—ಎರಡು, ಕ್ರಿಯೆ—ಕ್ರಿಯೆಗಳನ್ನು, ನಿಷೇಧತಿ—

ಮೇಲಾಗಿ 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀಜ್ಞಾನಬಲಕ್ರಿಯಾ ಚ' ಎಂಬ ಶ್ರುತಿಯು, ಒಂದೇ ವಾಕ್ಯದಲ್ಲಿ ಬ್ರಹ್ಮನ ಸ್ವಭಾವಸಿದ್ಧಗಳೆಂಬ ಜ್ಞಾನ, ಬಲ, ಕ್ರಿಯೆಗಳನ್ನು, ಒಟ್ಟಿಗೇ ಹೇಳುವುದರಿಂದ, ಜ್ಞಾನಕ್ರಿಯೆಗಳೆಂಬ ಎರಡೂ ನಿತ್ಯಗಳೆಂದು ಸಿದ್ಧವಾಗುತ್ತದೆ; ಆದ್ದರಿಂದ ಬ್ರಹ್ಮನು ಜ್ಞಾನರೂಪನಾಗಿರಲಿ (ಮಾಯಾವಾದಿಯು ಹೇಳುವಂತೆ); ಕರ್ತೃತ್ವವು ಶುದ್ಧಬ್ರಹ್ಮನಿಗೆ ಬೇಡ; ಕರ್ತನಾದವನು, ಶಬಲಬ್ರಹ್ಮನು; ರಾಮಕೃಷ್ಣಾದಿ ಅನ್ಯರೂಪಗಳೂ ಶಬಲಗಳೇ, ಎಂಬ ವಾದವು ಗ್ರಾಹ್ಯವಲ್ಲ;

[1] ಅನ್ಯಶ್ರುತಿವಾಕ್ಯಗಳು ತನ್ನಂತೆಯೇ ಪರಮಪ್ರಮಾಣಗಳೇ ಆಗಿರುವುದರಿಂದ ಸ್ವಗೋತ್ರರಂತೆ, ಜ್ಞಾತಿಗಳೊಂದಿಗೆ ಕಲಹವು ಲೌಕಿಕದಲ್ಲಿ ಸಹಯೋಗ್ಯವಲ್ಲದಂತೆ, ಈ ಶ್ರುತಿವಾಕ್ಯವೂ ಅನ್ಯವಾಕ್ಯಕ್ಕೆ ವಿರೋಧವಿಲ್ಲದ ಅರ್ಥವನ್ನೇ ಹೇಳುತ್ತದೆ.

ನಿಷೇಧಿಸುತ್ತದೆ (ಎಂದೇ ತಿಳಿಯುವುದು ಯುಕ್ತವಾಗುತ್ತದೆ.) (ಪುಣ್ಯ ಪಾಪ ಗಳೆಂಬ ಎರಡೂ, ಸತ್ಕರ್ಮ, ದುಷ್ಕರ್ಮಗಳೆಂದು ಕ್ರಿಯಾಶಬ್ದವಾಚ್ಯ ಗಳಾಗಿವೆ—ಇವುಗಳನ್ನು 'ನಿಷ್ಕ್ರಿಯ' ಎಂಬ ಶ್ರುತಿಯು ನಿಷೇಧಿಸುತ್ತದೆಂದು ತಿಳಿಯಬೇಕು).

**ದುಃಶಬ್ದಸ್ಪರ್ಶರೂಪಾದೀನ್ ವಿಷಯಾನ್ ಜಡವಿಗ್ರಹಂ ।**
**ಅಶಬ್ದತ್ವಾದಿಕಾ ವಾಣೀ ನಿವಾರಯತಿ ವೈದಿಕೀ ॥ ೩೮೦ ॥**

'ಅಶಬ್ದಮಸ್ಪರ್ಶಮರೂಪಃ' ಇತ್ಯಾದಿ ವೇದವಾಕ್ಯದಿಂದ ಬ್ರಹ್ಮನಿಗೆ ರೂಪಾದಿಗಳ ರಾಹಿತ್ಯವೆಂಬ ದೋಷವು ಹೇಳಲ್ಪಡುತ್ತದೆಂಬ ಭ್ರಾಂತಿಯನ್ನು ನಿವಾರಿಸಲಿಕ್ಕಾಗಿ ಹೇಳುತ್ತಾರೆ:—

ವೈದಿಕೀ—ವೇದವೇ ಆದ, ಅಶಬ್ದತ್ವಾದಿಕಾವಾಣೀ—'ಅಶಬ್ದಮಸ್ಪರ್ಶಂ ....' ಇತ್ಯಾದಿ ವಾಣಿಯು (ವಾಕ್ಯವು), ದುಃಶಬ್ದಸ್ಪರ್ಶರೂಪಾದೀನ್—ದುಷ್ಟ ಶಬ್ದ(ತುಚ್ಛತ್ವ ಶೂನ್ಯತ್ವ, ದುಃಖಾದಿ ಬಂಧಾಶ್ರಯತ್ವರೂಪದ ಶಬ್ದಗಳನ್ನು), ದುಷ್ಟಸ್ಪರ್ಶ (ಪ್ರಾಕೃತಸ್ಪರ್ಶಗಳು ದುಷ್ಟಸ್ಪರ್ಶಗಳು), ದುಷ್ಟರೂಪಾದಿ ಗಳಾದ, ವಿಷಯಾನ್—(ಪ್ರಾಕೃತ) ವಿಷಯಗಳನ್ನು (ವಸ್ತುಸಂಬಂಧವನ್ನು), ಜಡವಿಗ್ರಹಂ—ಜಡದೇಹವನ್ನೂ, ನಿವಾರಯತಿ—ನಿಷೇಧಿಸುತ್ತದೆ (ಬ್ರಹ್ಮನಲ್ಲಿರು ವುದಿಲ್ಲವೆಂದು, ಆ ನಿಮಿತ್ತದ ದೋಷವನ್ನು ನಿವಾರಿಸುತ್ತದೆ).

---

ಆದ್ದರಿಂದ ಜ್ಞಾತಿಗಳಲ್ಲಿ ಪರಸ್ಪರ ಕಲಹವಿಲ್ಲದಿರುವಂತೆ, ಶ್ರುತಿವಾಕ್ಯಗಳು ಅನ್ಯೋನ್ಯವಾಗಿ ವಿರೋಧಿಸುವುದಿಲ್ಲವಾದ್ದರಿಂದ, 'ನಿಷ್ಕ್ರಿಯ' ಶಬ್ದವು, ಜ್ಞಾನಕ್ರಿಯೆಗಳಿಲ್ಲದವನೆಂಬ ಅರ್ಥವನ್ನು ಹೇಳದೆ, ಸತ್ಕ್ರಿಯೆ, ದುಷ್ಕ್ರಿಯೆ ಗಳೆಂಬ ಪಾಪ ಪುಣ್ಯಗಳನ್ನು ನಿಷೇಧಿಸುತ್ತದೆಂದೇ ತಿಳಿಯುವುದು ಯುಕ್ತ ವಾಗುತ್ತದೆ (೩೭೯). ಇದರಂತೆಯೇ, ನಿಷೇಧಪರವಾದ ಅನ್ಯವೇದವಾಕ್ಯ ಗಳ ಅರ್ಥವನ್ನು, ಸರಿಯಾದ ಯೋಜನೆಯಿಂದ ತಿಳಿಯಬೇಕು; 'ಅಶಬ್ದ- ಮಸ್ಪರ್ಶಮರೂಪಂ....' ಇತ್ಯಾದಿ ಶ್ರುತಿಯು, ಬ್ರಹ್ಮನಿಗೆ ಸಕಲ ಶಬ್ದ, ಸ್ಪರ್ಶ, ರೂಪಾದಿ ವಿಷಯಗಳ ಅಭಾವವನ್ನು ಹೇಳುತ್ತದೆಂಬ ಅರ್ಥವನ್ನು ತಿಳಿಯದೇ, ದುಷ್ಟಶಬ್ದ, ದುಷ್ಟಸ್ಪರ್ಶಾದಿಗಳಾದ ಪ್ರಾಕೃತವಿಷಯಗಳನ್ನೂ, ಜಡದೇಹ ವನ್ನೂ ಶ್ರೀಹರಿಗೆ ನಿಷೇಧಿಸುತ್ತದೆಂಬ ಅರ್ಥವನ್ನೇ ಗ್ರಹಿಸಬೇಕು (೩೮೦).

**ನಚೇನ್ನಿಷ್ಕಲಶಬ್ದೇನ ನ ಸ್ಯಾತ್ ಜ್ಞಾನಕಲಾಪಿ ತೇ ।**
**ಕಥಂಚಿತ್ತತ್ಸಮಾಧಾನೇ ಸರ್ವತ್ರೈವಂ ಮತಿಂ ಕುರು ॥ ೩೮೧ ॥**

ನ ಚೇತ್ – ಹಾಗಲ್ಲದಿದ್ದರೆ (ಪ್ರಾಕೃತ ಶಬ್ದಗಳೆಂಬ ಅರ್ಥವನ್ನು ತಿಳಿಯದೇ ('ಅಶಬ್ದಂ'–ಇತ್ಯಾದಿ ಶ್ರುತಿಯು, ಸಾಮಾನ್ಯ ಸರ್ವಶಬ್ದಾದಿಗಳನ್ನು ನಿಷೇಧಿಸುತ್ತದೆಂದು ತಿಳಿದರೆ), ನಿಷ್ಕಲಶಬ್ದೇನ – 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಎಂಬಲ್ಲಿ ನಿಷ್ಕಲಶಬ್ದದಿಂದ, ಜ್ಞಾನಕಲಾಪಿ–(ಬ್ರಹ್ಮನಲ್ಲಿ) ಜ್ಞಾನಕಲೆಯೂ, ತೇ–ನಿನ್ನ ಮತದಲ್ಲಿ, ನ ಸ್ಯಾತ್–ಇಲ್ಲದೇ ಹೋಗಲಿ (ಚತುಃಷಷ್ಟಿ–೬೪ ಕಲೆಗಳ ಮಧ್ಯದಲ್ಲಿ ಜ್ಞಾನವೂ ಒಂದು ಕಲೆಯೆಂದು ಪಠಿತವಾದ್ದರಿಂದ, ಬ್ರಹ್ಮನಲ್ಲಿ ಜ್ಞಾನವೂ ಇಲ್ಲವೆಂದಾಗಬೇಕು); ಕಥಂಚಿತ್–ಹೇಗಾದರೂ ಕಷ್ಟದಿಂದ, ತತ್ಸಮಾಧಾನೇ – (ಜಡಕಲೆಯನ್ನು ಮಾತ್ರ 'ನಿಷ್ಕಲ' ಶಬ್ದವು ಹೇಳುತ್ತದೆ, ಕಲಾಸಾಮಾನ್ಯವನ್ನಲ್ಲವೆಂದು) ಸಮಾಧಾನಪಟ್ಟುಕೊಳ್ಳುವುದಾದರೆ, ಸರ್ವತ್ರ–'ಅಶಬ್ದಮಸ್ಪರ್ಶಂ....' ಇತ್ಯಾದಿ ಶಬ್ದಾದಿಗಳಲ್ಲಿ ಸಹ, ಏವಂ ಮತಿಂ ಕುರು–ಹೀಗೆಯೇ ತಿಳಿಯತಕ್ಕವನಾಗು.

**ಅಶಬ್ದಶ್ರುತಿಲಕ್ಷ್ಯತ್ವೇ ಮುಖ್ಯಾರ್ಥಾಶಬ್ದತಾ ಗತಾ ।**
**ಅಶಬ್ದಶ್ರುತಿವಾಚ್ಯತ್ವೇ ಮುಖ್ಯಾರ್ಥಾಶಬ್ದತಾ ಗತಾ ॥ ೩೮೨ ॥**

ಅಶಬ್ದಶ್ರುತಿಯು, ಸಾಮಾನ್ಯ ಸರ್ವಶಬ್ದನಿಷೇಧಕವೆಂದು ತಿಳಿದರೆ ಬೇರೆ ದೋಷವನ್ನೂ ಹೇಳುತ್ತಾರೆ :—

---

'ಅಶಬ್ದಂ' ಇತ್ಯಾದಿ ಶ್ರುತಿಯು, ಸಾಮಾನ್ಯ ಸರ್ವಶಬ್ದಾದಿ ನಿಷೇಧಕವೆಂದು ತಿಳಿಯುವುದಾದರೆ, 'ನಿಷ್ಕಲಂ' ಎಂಬ ಶ್ರುತಿಯು, ಸಕಲಕೆಲಸಗಳನ್ನು ನಿಷೇಧಿಸುತ್ತದೆಂದೂ ತಿಳಿದು, ಜ್ಞಾನಕಲೆಯೂ ಬ್ರಹ್ಮನಲ್ಲಿ ಇಲ್ಲವೆಂದು ತಿಳಿಯಬೇಕಾಗುತ್ತದೆ; ಪ್ರಸಿದ್ಧವಾದ ೬೪ ಕಲೆಗಳಲ್ಲಿ ಒಂದಾದ್ದರಿಂದ, ಬ್ರಹ್ಮನಿಗೆ ಜ್ಞಾನವೂ ಇಲ್ಲವೆಂದು ಪ್ರಾಪ್ತವಾಗುತ್ತದೆ; ಇದನ್ನು ಪರಿಹರಿಸಿಕೊಳ್ಳಲಿಕ್ಕೆ ಜ್ಞಾನಕಲೆಯ ಹೊರತು ಅನ್ಯಕಲೆಗಳನ್ನು ನಿಷೇಧಿಸುತ್ತೆಂಬ ಅರ್ಥವನ್ನು ತಿಳಿಯುವುದಾದರೆ, 'ಅಶಬ್ದಂ' ಇತ್ಯಾದಿ ಸರ್ವತ್ರ ಹೀಗೆಯೇ ತಿಳಿಯಬಹುದಲ್ಲವೇ ? (೩೮೧). ಅಶಬ್ದತ್ವವನ್ನು ಹೇಳುವ ಶ್ರುತಿಯು ಲಕ್ಷ್ಯಾರ್ಥವನ್ನು ಹೇಳುತ್ತದೆಂದರೆ, ಅಥವಾ ವಾಚ್ಯಾರ್ಥವನ್ನು ಹೇಳುತ್ತದೆಂದರೆ (ಶಬ್ದ

('ಅಶಬ್ದಂ' ಇತ್ಯಾದಿ ಶ್ರುತಿಯಿಂದ ಬ್ರಹ್ಮನು ಲಕ್ಷ್ಯನೋ, ವಾಚ್ಯನೋ ಅಥವಾ ಅಬೋಧ್ಯನೋ ಎಂದು ಮೂರು[1] ಪ್ರಕಾರ ವಿಕಲ್ಪ ಮಾಡಿ, ಮೂರಕ್ಕೂ ಅನ್ವಯಿಸುವ ಒಂದೇ ದೂಷಣವನ್ನು ಹೇಳಬಹುದೆನ್ನುತ್ತಾರೆ), ಅಶಬ್ದಶ್ರುತಿಲಕ್ಷ್ಯತ್ವೇ–ಅಶಬ್ದಶ್ರುತಿಯಿಂದ ಬ್ರಹ್ಮನು (ಗಂಗಾ ಪದದಿಂದ ತೀರವು ತಿಳಿಸಲ್ಪಡುವಂತೆ) ಲಕ್ಷ್ಯನಾದರೆ, ಮುಖ್ಯಾರ್ಥಾಶಬ್ದತಾ ಗತಾ–'ಅಶಬ್ದ'ವೆಂಬುದರ ಮುಖ್ಯಾರ್ಥವು (ಶಬ್ದಮಾತ್ರ ವಿಷಯವೆಂಬುದು, ಬಿದ್ದುಹೋಯಿತು—ಅಶಬ್ದನಲ್ಲವೆಂದರೆ ಶಬ್ದಸಾಮಾನ್ಯರಹಿತನೆಂಬರ್ಥವು) ಕೂಡುವುದಿಲ್ಲವೆಂದಾಯಿತು; ಅಶಬ್ದಶ್ರುತಿವಾಚ್ಯತ್ವೇ – ಅಶಬ್ದಶ್ರುತಿವಾಚ್ಯನೆಂದರೆ, ಮುಖ್ಯಾರ್ಥಾಶಬ್ದತಾ ಗತಾ – ಅಶಬ್ದನೆಂದರೆ ಶಬ್ದಪ್ರತಿಪಾದ್ಯನಲ್ಲವೆಂಬುದರಿಂದ ಮುಖ್ಯಾರ್ಥವನ್ನು ಬಿಟ್ಟಂತೆಯೇ ಆಯಿತು ('ಅಶಬ್ದ' ಶಬ್ದದಿಂದ ಪ್ರತಿಪಾದ್ಯನೇ ಅಲ್ಲವೆಂದರೆ, ಅಶಬ್ದಕ್ಕೆ ಅಬೋಧಕತ್ವವೇ ಸಿದ್ಧವಾಯಿತು); ಹೀಗೆ ಆ ಶ್ರುತಿಯೇ ವ್ಯರ್ಥವೆಂದು ಪ್ರಾಪ್ತವಾಗುತ್ತದೆ.

**ಅಶಬ್ದಶ್ರುತ್ಯಬೋಧ್ಯತ್ವೇ ಮುಖ್ಯಾರ್ಥಶಬ್ದತಾ ಗತಾ ॥ ೩೮೩ ॥**

---

ಪ್ರತಿಪಾದ್ಯವಾದ ಅರ್ಥವನ್ನು ಹೇಳುವುದೆಂದರೆ), ಮುಖ್ಯಾರ್ಥವನ್ನು ತ್ಯಜಿಸಿದಂತಾಗುತ್ತದೆ; ಲಕ್ಷ್ಯಾರ್ಥವನ್ನು ತಿಳಿದರೆ ಮುಖ್ಯಾರ್ಥವನ್ನು ಬಿಟ್ಟಂತೆ ಎಂಬುದು ಸರಿ; ವಾಚ್ಯಾರ್ಥವನ್ನು ತಿಳಿದರೂ, ಮುಖ್ಯಾರ್ಥವನ್ನು ತ್ಯಜಿಸಿದಂತೆ ಎಂಬುದು ಹೇಗೆಂದು ತಿಳಿಯಬೇಕಲ್ಲವೇ? ಶಬ್ದಪ್ರತಿಪಾದ್ಯನಲ್ಲವೆಂದರೆ (ಅಶಬ್ದನೆಂದರೆ), ಶಬ್ದವು ಬ್ರಹ್ಮವಿಷಯಕ್ಕೆ ಏನನ್ನೂ ಹೇಳುವುದಿಲ್ಲವೆಂದಂತೆಯೇ ಆಗುತ್ತದೆಯಷ್ಟೆ (೩೮೨). ಆದ್ದರಿಂದ 'ಅಶಬ್ದ'ವೆಂಬುದು ಯಾವುದೊಂದು ರೀತಿಯಿಂದ (ಅರ್ಥದಿಂದ) ಬ್ರಹ್ಮಪ್ರತಿಪಾದಕವಾಗ

---

[1] ಗಂಗಾಪದದಿಂದ, ಗಂಗಾತೀರವು ಲಕ್ಷ್ಯವು, ಗಂಗಾಪ್ರವಾಹವು ವಾಚ್ಯವು, ಯಾವುದನ್ನೂ ತಿಳಿಸದಿದ್ದರೆ ಅಬೋಧ್ಯವು—ಶಬ್ದಾಗೋಚರತ್ವವು.

'ಗಂಗಾಯಾಂ ಘೋಷಃ'—ಗಂಗೆಯಲ್ಲಿ ಹಳ್ಳಿಯು, ಎಂದಾಗ, ಗಂಗಾಪದವು ಲಕ್ಷ್ಯಾರ್ಥದಿಂದ ತೀರವನ್ನು ಹೇಳುತ್ತದೆ—ಯದ್ಯಪಿ ಗಂಗಾಪದವಾಚ್ಯವಾದುದು ಜಲಪ್ರವಾಹವು—ಅದು ವಾಚ್ಯಾರ್ಥವು; ಯಾವುದೆಂದು ವಸ್ತುವನ್ನು ತಿಳಿಸದಿದ್ದರೆ ಅಬೋಧಕತ್ವವು.

ಅಶಬ್ದಶ್ರುತ್ಯಬೋಧ್ಯತ್ವೇ — 'ಅಶಬ್ದ' ಶ್ರುತಿಯು ಏನನ್ನೂ ತಿಳಿಸು ವುದಿಲ್ಲ (ಪ್ರತಿಪಾದಿಸುವುದಿಲ್ಲ) ಎಂದರೆ, ಮುಖ್ಯಾರ್ಥಾಶಬ್ದತಾ ಗತಾ— ಮುಖ್ಯಾರ್ಥವನ್ನು ತ್ಯಜಿಸಿದಂತೆಯೇ ಸರಿ (ಅಬೋಧಕತ್ವವೆಂಬುದರಿಂದ ಅಪ್ರಮಾಣವೆಂದು ಹೇಳಿದಂತಾಗಿ, ಬ್ರಹ್ಮನು ಅಶಬ್ದನೆಂಬುದನ್ನೇ ತ್ಯಜಿಸಿ ದಂತಾಗುತ್ತದೆ).

**ಯದ್ಯಶಬ್ದಶ್ರುತೇರರ್ಥಃ ಸರ್ವಥಾ ಶಬ್ದದೂರತಾ ।**
**ತರ್ಹೀಯಂ ಚ ಶ್ರುತಿಸ್ತತ್ರ ಮಾನಂ ನೇತಿ ಜಿತಂ ಪರೈಃ ॥ ೩೮೪ ॥**

ಇದೇ ವಿವೇಚನೆಯಿಂದ ಸಿದ್ಧವಾಗುವ ದೂಷಣಾಂತರವನ್ನು ಹೇಳು ತ್ತಾರೆ :—

ಯದಿ—ಒಂದು ಪಕ್ಷ, ಅಶಬ್ದಶ್ರುತೇಃ — ಅಶಬ್ದಶ್ರುತಿಯ, ಅರ್ಥಃ— ಅರ್ಥವು, ಸರ್ವಥಾ—ಸರ್ವಪ್ರಕಾರದ, ಶಬ್ದದೂರತಾ — ಶಬ್ದದೂರವೆಂದರೆ (ಬ್ರಹ್ಮನಿಗೆ ಅಶಬ್ದಪ್ರತಿಪಾದ್ಯನೇ ಅಲ್ಲವೆಂದರೆ), ತರ್ಹಿ—ಆಗ, ಇಯಂ ಚ ಶ್ರುತಿಃ — ಈ ಶ್ರುತಿಯೇ, ತತ್ರ — ಬ್ರಹ್ಮನು ಅಶಬ್ದನೆಂಬಲ್ಲಿನ, ಮಾನಂ— ಪ್ರಮಾಣವಲ್ಲ (ಅಶಬ್ದತ್ವವನ್ನು ಹೇಳುವ ಅನ್ಯಶ್ರುತಿಯೂ ಇಲ್ಲ), ಇತಿ— ಹೀಗೆ, ಪರೈಃ—ಪರರಿಂದ (ಪ್ರಾಕೃತ ಶಬ್ದಾದಿಗಳನ್ನು ಮಾತ್ರ ನಿಷೇಧಿಸು ವುದೆಂದು ವಾದಿಸುವವರಿಂದ), ಜಿತಂ—ಗೆದ್ದಂತಾಯಿತು.

---

ಬೇಕಲ್ಲವೇ ? ಅಶಬ್ದವೆಂಬ ಶಬ್ದವು, ಏನನ್ನೂ ಹೇಳುವುದಿಲ್ಲವೆಂದರೆ, ಆ ಶಬ್ದಕ್ಕೆ ಅಬೋಧಕತ್ವವನ್ನು ಹೇಳಿದಂತಾಗಿ, ಅದರಿಂದ ಸಹ ಮುಖ್ಯಾರ್ಥ ತ್ಯಾಗರೂಪದ ದೋಷವು ಬರುತ್ತದೆ (೩೮೩). ಮೇಲಾಗಿ ಅಶಬ್ದನೆಂದರೆ, ಸರ್ವಪ್ರಕಾರದಿಂದ ಶಬ್ದದೂರನೆಂದು ತಿಳಿದರೆ (ಶಬ್ದಾವಾಚ್ಯನೆಂದು ತಿಳಿದರೆ) (ಶಬ್ದಪ್ರತಿಪಾದ್ಯನೇ ಅಲ್ಲವೆಂದರೆ), ಈ 'ಅಶಬ್ದ' ಶ್ರುತಿಯೇ ಪ್ರಮಾಣವಲ್ಲ ವೆಂದು ಹೇಳಿದಂತಾಗುತ್ತದೆ ; ಆದ್ದರಿಂದ ಈ ಶ್ರುತಿಯ ಪ್ರಾಮಾಣ್ಯವನ್ನು ಅಂಗೀಕರಿಸಿ, ಅಶಬ್ದಾದಿ ಪದಗಳು, ಪ್ರಾಕೃತ (ಜಡ) ಶಬ್ದಾದಿಗಳನ್ನು ನಿಷೇಧಿಸುತ್ತವೆಂಬ ಸಂಕೋಚಾರ್ಥವನ್ನು ಹೇಳುವ ಪ್ರತಿವಾದಿಯೇ ಗೆದ್ದಂತಾ ಗುತ್ತದೆ (೩೮೪).

**ಕಥಂಚಿತ್ ಶಬ್ದಯೋಗೇ ತು ಶ್ರುತೇರ್ಮುಖ್ಯಾರ್ಥತಾ ಗತಾ ।**
**ಯಥಾಯೋಗ್ಯಾರ್ಥಕಥನೇ ಜಿತಂ ಸ್ವತ್ಪ್ರತಿವಾದಿಭಿಃ ॥ ೩೮೫ ॥**

ಕಥಂಚಿತ್–ಹೇಗಾದರೂ (ಕಷ್ಟದಿಂದ), ಶಬ್ದಯೋಗೇ–(ಬ್ರಹ್ಮನು ಅಶಬ್ದನೆಂಬ ಇಚ್ಛಿತವಾದ ಅರ್ಥಸಿದ್ಧಿಗಾಗಿ) ಶಬ್ದವೆಂಬ ಶಬ್ದವು ಕೂಡುತ್ತಿದ್ದರೆ, ಶ್ರುತೇಃ – ಶ್ರುತಿಗೆ, ಮುಖ್ಯಾರ್ಥತಾ ಗತಾ – ಸರ್ವಥಾ ಅಶಬ್ದಗೋಚರನೆಂಬ ಅರ್ಥವನ್ನು ನೀನೇ (ವಾದಿಯೇ) ಪರಿತ್ಯಜಿಸಿರುವುದರಿಂದ, ಮುಖ್ಯಾರ್ಥವೇ ಸರಿಯಲ್ಲವೆಂದು ಪ್ರಾಪ್ತವಾಯಿತು ; ಯಥಾಯೋಗ್ಯಾರ್ಥಕಲ್ಪನೇ–ಯಥೋಚಿತವಾದ ಸಂಕೋಚವನ್ನು ಹೇಳಿದಲ್ಲಿ, ತ್ವತ್ಪ್ರತಿವಾದಿಭಿಃ–(ಬ್ರಹ್ಮನಿಗೆ 'ಅಶಬ್ದ'ತ್ವಾದಿ ಸರ್ವಶಬ್ದವಾಚ್ಯನೆಂದು) ವಾದಿಸುವ ನಿನ್ನ ವಿರುದ್ಧವಾದಿಗಳಿಂದ, ಜಿತಂ – ಗೆಲ್ಲಲಾಯಿತು (ಜಯವು ಅವರಿಗೇ ಸಿದ್ಧವಾಯಿತು—ಪ್ರಾಕೃತಶಬ್ದಾದಿರಹಿತನೆಂಬ ಸಂಕೋಚಾರ್ಥವೇ ಯುಕ್ತವೆಂದು ಸಿದ್ಧವಾಗುತ್ತದೆ).

**ಯದ್ಯಸ್ಪರ್ಶಶ್ರುತೇರರ್ಥಃ ಸರ್ವಥಾ ಸ್ಪರ್ಶಶೂನ್ಯತಾ ।**
**ನ ಸ್ಪೃಶೇತ್ತರ್ಹ್ಯವಿದ್ಯಾಪಿ ಜಿತಂ ತ್ವತ್ಪ್ರತಿವಾದಿಭಿಃ ॥ ೩೮೬ ॥**

ಅಸ್ಪರ್ಶ ಶ್ರುತಿಗೆ ಸರ್ವಥಾ ಸ್ಪರ್ಶಶೂನ್ಯನೆಂಬ ಅರ್ಥವನ್ನು ಹೇಳಿದರೂ ಬರುವ ದೋಷವನ್ನು ಹೇಳುತ್ತಾರೆ :—

ಅಸ್ಪರ್ಶಶ್ರುತೇಃ–ಅಸ್ಪರ್ಶನೆಂದು ಹೇಳುವ ಶ್ರುತಿಯ, ಅರ್ಥಃ–ಅರ್ಥವು, ಯದಿ–ಒಂದು ಪಕ್ಷ, ಸರ್ವಥಾ ಸ್ಪರ್ಶಶೂನ್ಯತಾ–ಯಾವ ಪ್ರಕಾರದ ಸ್ಪರ್ಶವಿಲ್ಲದವನೆಂದಾದರೆ, ತರ್ಹಿ – ಆಗ, ಅವಿದ್ಯಾ ಅಪಿ – ಅವಿದ್ಯೆಯು ಸಹ, ನ ಸ್ಪೃಶೇತ್ – (ಬ್ರಹ್ಮನನ್ನು) ಸ್ಪರ್ಶಿಸಲಾರದು; ತ್ವತ್ಪ್ರತಿವಾದಿಭಿಃ–ನಿನ್ನ

---

ಹೇಗಾದರೂ ಕಷ್ಟದಿಂದ ಅಶಬ್ದಾದಿ ಶಬ್ದಪ್ರಯೋಗವನ್ನು ಹೊಂದಿಸಿಕೊಂಡರೂ, ಅಶಬ್ದವೆಂಬ ಪದದ ಮುಖ್ಯಾರ್ಥವನ್ನು ತ್ಯಜಿಸಿರುವುದರಿಂದ, ಯಥಾಯೋಗ್ಯವಾದ ಅರ್ಥವನ್ನು ಹೇಳುವ ಪ್ರತಿವಾದಿಯೇ ಜಯಿಸುವನೆಂದು ಸಿದ್ಧವಾಗುತ್ತದೆ (೩೮೫). ಇದರಂತೆ, ಅಸ್ಪರ್ಶನೆಂದು ಹೇಳುವ ಶ್ರುತಿಗೂ, ಸರ್ವವಿಧ ಸ್ಪರ್ಶಶೂನ್ಯನೆಂದು ತಿಳಿಯದೇ, ಯಥಾಯೋಗ್ಯವಾದ ಸಂಕೋಚಾರ್ಥವನ್ನೇ ತಿಳಿಯಬೇಕು ; ಹಾಗಲ್ಲದಿದ್ದರೆ, ನಿನ್ನ ಬ್ರಹ್ಮನಿಗೆ

ಪ್ರತಿವಾದಿಗಳಿಂದ (ಸಿದ್ಧಾಂತಿಗಳಿಂದ), ಜಿತಂ—ಗೆಲ್ಲಲ್ಪಟ್ಟಿತು (ಬ್ರಹ್ಮನಿಗೆ ಅವಿದ್ಯಾಸ್ಪರ್ಶವೇ ಇಲ್ಲದಿದ್ದರೆ, ಬ್ರಹ್ಮನಿಗೆ ಜೀವತ್ವವುಂಟಾಗುವುದಿಲ್ಲ ; ಜೀವ ಬ್ರಹ್ಮೈಕ್ಯವೆಂಬ ನಿನ್ನ ಮತಪ್ರಕ್ರಿಯೆಯನ್ನು (ಅದ್ವೈತವನ್ನು) ತ್ಯಜಿಸಿದಂತಾಗಿ ನಿನಗೆ ಅಪಜಯವೇ ಸಿದ್ಧವಾಗುತ್ತದೆ).

**ಕಥಂಚಿತ್ ಸ್ಪರ್ಶಿತಾಯಾಂ ತು ಶ್ರುತೇರ್ಮುಖ್ಯಾರ್ಥತಾ ಗತಾ ।**
**ತಥಾ ಯೋಗ್ಯಾರ್ಥಕಥನೇ ಜಿತಂ ತ್ವತ್ಪ್ರತಿವಾದಿಭಿಃ ॥ ೩೮೭ ॥**

ಕಥಂಚಿತ್—ಹೇಗಾದರಾಗಲಿ, ಸ್ಪರ್ಶಿತಾಯಾಂ—ಸ್ಪರ್ಶಿತತ್ವವು (ಸ್ಪರ್ಶಾರ್ಹತೆಯು, ವ್ಯಾವಹಾರಿಕ ಸ್ಪರ್ಶವು) ಇರುವುದಾದರೆ, ಶ್ರುತೇಃ— ಶ್ರುತಿಗೆ, ಮುಖ್ಯಾರ್ಥತಾ — ಸರ್ವಥಾ ಸ್ಪರ್ಶಶೂನ್ಯವೆಂಬ ಮುಖ್ಯಾರ್ಥತ್ವವು, ಗತಾ—ತ್ಯಜಿಸಲ್ಪಟ್ಟಿತು ; ತಥಾ—ಹಾಗೆ, ಯೋಗ್ಯಾರ್ಥಕಥನೇ—(ಮುಖ್ಯಾರ್ಥವನ್ನು ತ್ಯಜಿಸಿ, ಅನ್ಯ) ಯೋಗ್ಯಾರ್ಥವನ್ನು (ಬ್ರಹ್ಮನಲ್ಲಿ ಯೋಗ್ಯವೆನಿಸುವ ಅರ್ಥವನ್ನು) ಹೇಳುವುದರಲ್ಲಿ ತೊಡಗಿದರೆ (ಹೇಳಿದರೆ), ತ್ವತ್ಪ್ರತಿವಾದಿಭಿಃ—ನಿನ್ನ ಪ್ರತಿವಾದಿಗಳಿಂದ, ಜಿತಂ — (ಪೂರ್ವದಂತೆ ಈಗಲೂ) ಜಯಿಸಲ್ಪಟ್ಟಿತು ; (ಅಪ್ರಾಕೃತನಾದ ಬ್ರಹ್ಮನಲ್ಲಿ ಪ್ರಾಕೃತಸ್ಪರ್ಶಶೂನ್ಯತ್ವ ಅಥವಾ ಅವಿದ್ಯೆ ಎಂಬುದರ ಸ್ಪರ್ಶರಾಹಿತ್ಯವು ಯೋಗ್ಯವಾಗುತ್ತದೆ).

**ಯದ್ಯಸ್ತಿ ಮಾಯಿಕೋ ದೇಹಃ ಶ್ರುತೇರ್ಮುಖ್ಯಾರ್ಥತಾ ಗತಾ ।**
**ಸೋಽಪಿ ನೈವಾಸ್ತಿ ಚೇತ್ತರ್ಹಿ ಮಾಯಾ ವಂಧ್ಯಾಽಭವತ್ತವ ॥ ೩೮೮ ॥**

---

ಅವಿದ್ಯೆಯ ಸ್ಪರ್ಶವೂ ಇಲ್ಲದಂತಾಗಲಿ ; ಜೀವತ್ವವನ್ನು ಹೊಂದಲು ಅವಶ್ಯಕವಾದ ಅವಿದ್ಯೆಯೇ ಇಲ್ಲದಂತಾಗಿ, ನಿನ್ನ ಸಿದ್ಧಾಂತವೇ ಕಳಚಿಬೀಳುತ್ತದೆ; ಆಗಲೂ ಪ್ರತಿವಾದಿಗಳಿಗೇ ಜಯವು ಸಿದ್ಧವಾಗುತ್ತದೆ (೩೮೬). ಅವಿದ್ಯಾ ವಿನಾ ಅನ್ಯಸ್ಪರ್ಶವಿಲ್ಲವೆಂದು ಅರ್ಥವನ್ನು ನೀನು ಹೇಳುವುದಾದರೆ, ಮುಖ್ಯಾರ್ಥವನ್ನು ತ್ಯಜಿಸಿದಂತಾಗಿ, ಯಥಾಯೋಗ್ಯವಾದ (ಪ್ರಾಕೃತಸ್ಪರ್ಶರಹಿತನೆಂಬ) ಅರ್ಥವನ್ನು ಹೇಳುವ ಪ್ರತಿವಾದಿಯೇ ಜಯಿಸುವನು (೩೮೭). ಹೀಗೆಯೇ ಬ್ರಹ್ಮನು ಅಶರೀರಿಯೆಂದು ಹೇಳುವ ಶ್ರುತಿಗೆ ಸರ್ವಥಾ ದೇಹಶೂನ್ಯನೆಂದು ಹೇಳದೇ, ಮಾಯಿಕ (ಮಾಯಾಮಯ) ದೇಹವುಳ್ಳವನೆಂಬ ಅರ್ಥವನ್ನು ನೀನು ಹೇಳಿದರೂ, ಮುಖ್ಯಾರ್ಥವನ್ನು (ಸರ್ವದೇಹರಹಿತನೆಂಬ

ಬ್ರಹ್ಮನು ಅಶರೀರನೆಂದು ಹೇಳುವ ಶ್ರುತಿಗೆ ಸರ್ವಥಾ ದೇಹ (ಯಾವ ದೇಹವೂ) ಇಲ್ಲವೆಂಬ ಅರ್ಥವನ್ನು ಹೇಳಿದರೆ ಉಂಟಾಗುವ ದೋಷವನ್ನು ಹೇಳುತ್ತಾರೆ :—

ಮಾಯಿಕಃ—ಮಾಯಾಮಯವಾದ, ದೇಹಃ—ದೇಹವು, ಯದಿ ಅಸ್ತಿ—ಇರುವುದೆಂದು ಹೇಳಿದರೆ, ಶ್ರುತೇಃ—(ಅಶರೀರನೆಂದು ಹೇಳುವ) ಶ್ರುತಿಯ, ಮುಖ್ಯಾರ್ಥತಾ ಗತಾ—ಮುಖ್ಯಾರ್ಥವು ಹೋಯಿತು (ತ್ಯಜಿಸಿದಂತಾಯಿತು); ಸಃ ಅಪಿ – ಅದೂ ಕೂಡ (ಮಾಯಿಕ ದೇಹವೂ), ನೈವಾಸ್ತಿ ಚೇತ್ – ಇರುವುದಿಲ್ಲವೆಂದರೆ, ತರ್ಹಿ – ಆಗ, ತವ—ನಿನ್ನ, ಮಾಯಾ – ಮಾಯೆಯು, ವಂಧ್ಯಾ—ವ್ಯರ್ಥವು, ಅಭವತ್—ಆಯಿತು (ಬ್ರಹ್ಮನಿಗೆ ದೇಹವನ್ನು ಹೊಂದಿಸಿ, ಸಂಸಾರಾನುಭವವನ್ನುಂಟುಮಾಡುವುದೇ ಅದ್ವೈತಿಯ ಮಾಯೆಯು—ಅದಿಲ್ಲದಿದ್ದರೆ ಅದು ವ್ಯರ್ಥವೇ ಸರಿ).

**ಯಥಾಯೋಗ್ಯಾರ್ಥಕಥನೇ ಜಿತಂ ತ್ವತ್ಪ್ರತಿವಾದಿಭಿಃ ॥ ೩೮೯ ॥**

ಯಥಾಯೋಗ್ಯಾರ್ಥಕಥನೇ—ಯಥಾಯೋಗ್ಯವಾದ (ಬ್ರಹ್ಮನಿಗೆ ಯೋಗ್ಯವಲ್ಲದ ಪ್ರಾಕೃತದೇಹವಿಲ್ಲವೆಂಬ ಸಂಕೋಚಾರ್ಥವನ್ನು) ಅಶರೀರ ಶ್ರುತಿಗೆ ತಿಳಿದರೆ, ತ್ವತ್ಪ್ರತಿವಾದಿಭಿಃ—ನಿನ್ನ ಪ್ರತಿವಾದಿಗಳಿಂದ (ಹಾಗೆ ಪ್ರಾಕೃತ ದೇಹ ರಾಹಿತ್ಯವನ್ನು ಮಾತ್ರ ಹೇಳುವ ನಿನ್ನ ಪ್ರತಿವಾದಿಗಳಿಂದ), ಜಿತಂ—(ನೀನು) ಜಯಿಸಲ್ಪಟ್ಟಿರುವಿ.

**ಸರ್ವಥಾ ರೂಪರಾಹಿತ್ಯೇ ರುಗ್ಮವರ್ಣಂ ಶ್ರುತಿರ್ಗತಾ ।**
**ಮಾಯಾರೂಪೇಣ ರೂಪಿತ್ವೇ ಶ್ರುತೇರ್ಮುಖ್ಯಾರ್ಥತಾ ಗತಾ ।**
**ಯಥಾಯೋಗ್ಯಾರ್ಥಕಥನೇ ಜಿತಂ ತ್ವತ್ಪ್ರತಿವಾದಿಭಿಃ ॥ ೩೯೦ ॥**

---

ಅರ್ಥವನ್ನು) ತ್ಯಜಿಸಿದಂತೆ ಆಗುತ್ತದೆ; ಇಷ್ಟುಮಾತ್ರವಲ್ಲ, ಮಾಯಾದೇಹವೂ ಇಲ್ಲವೆಂದರೆ, ಬ್ರಹ್ಮನಿಗೆ ಪ್ರಾಕೃತದೇಹದಿಂದ ಆಗುವ ಸಂಸಾರಾನುಭವವು ಇಲ್ಲದಂತಾಗುತ್ತದೆ (೩೮೮). ಬ್ರಹ್ಮನಿಗೆ ಪ್ರಾಕೃತ ದೇಹಸಂಬಂಧವಿಲ್ಲೆಂಬ ಯೋಗ್ಯವಾದ ಸಂಕೋಚಾರ್ಥವನ್ನು 'ಅಶರೀರಿ' ಎಂಬ ಶ್ರುತಿಗೆ ಹೇಳುವ ನಿನ್ನ ಪ್ರತಿವಾದಿಗೇ ಜಯವು ಸಿದ್ಧವಾಯಿತು (೩೮೯). ಇದರಂತೆ 'ಅರೂಪತ್ವ' ಶ್ರುತಿಗೆ, ಸರ್ವಥಾ ಯಾವ ರೂಪವೂ ಇಲ್ಲವೆಂಬರ್ಥವನ್ನು

ಹೀಗೆಯೇ ಅರೂಪತ್ವವನ್ನು ಹೇಳುವ ಶ್ರುತಿಗೆ ಸರ್ವಥಾ ರೂಪರಾಹಿತ್ಯ ವನ್ನು ಹೇಳಿದರೆ ಉಂಟಾಗುವ ದೋಷವನ್ನು ಹೇಳುತ್ತಾರೆ :—

ಸರ್ವಥಾ—ಸರ್ವ ವಿಧದ, ರೂಪರಾಹಿತ್ಯೇ—(ಬ್ರಹ್ಮನಿಗೆ) ರೂಪರಾಹಿತ್ಯ ವನ್ನು ಹೇಳಿದರೆ, ರುಗ್ಮವರ್ಣಂ — ('ಯದಾಪಶ್ಯಃ ಪಶ್ಯತೇ ರುಗ್ಮವರ್ಣಂ' ಎಂದು, ಭಂಗಾರದ ವರ್ಣವುಳ್ಳ ಬ್ರಹ್ಮನನ್ನು, ಜೀವನು ಯಾವಾಗ ಸಾಕ್ಷಾತ್ತಾಗಿ ನೋಡುವನೋ; ಎಂದು ಹೇಳುವ), ಶ್ರುತಿಃ ಗತಾ—ಶ್ರುತಿಯು ಕೆಟ್ಟಿತು (ರೂಪವುಳ್ಳವನೆಂದು, ಸುವರ್ಣಕಾಂತಿಯು ಸೂಚಿಸುತ್ತದೆ); ಮಾಯಾರೂಪೇಣ—ಮಾಯಿಕವಾದ ರೂಪದಿಂದ, ರೂಪಿತ್ವೇ—ರೂಪಿತ್ವವನ್ನು (ರೂಪವುಳ್ಳವನೆಂದು) ಹೇಳಿದರೆ, ಶ್ರುತೇಃ — ಶ್ರುತಿಯ, ಮುಖ್ಯಾರ್ಥತಾ ಗತಾ—ಮುಖ್ಯಾರ್ಥವನ್ನು ಬಿಟ್ಟಂತಾಗುತ್ತದೆ; ಯಥಾಯೋಗ್ಯಾರ್ಥಕಥನೇ—(ಪ್ರಾಕೃತರೂಪರಹಿತನೆಂಬ) ಯೋಗ್ಯವಾದ ಅರ್ಥವನ್ನು (ಬ್ರಹ್ಮನಿಗೆ ಯೋಗ್ಯವಾದ ಅರ್ಥವನ್ನು) ಹೇಳುವುದರಿಂದ, ತ್ವತ್ಪ್ರತಿವಾದಿಭಿಃ — ನಿನ್ನ ಪ್ರತಿವಾದಿಗಳಿಂದ, ಜಿತಂ—ಗೆಲ್ಲಲ್ಪಡುವಿ (ಪರಾಜಿತನಾಗುವಿ).

**ಮಾಯಿಕೋಽರ್ಥೋ ನಿಷೇಧಸ್ಯ ವಾರಕೋ ಯದಿ ನೇಷ್ಯತೇ ।**
**ಘಟೇ ಸತ್ಯಪಿ ಕಿಂ ಭೂಮಿರಘಟೇತಿ ನ ಕಥ್ಯತೇ ॥ ೩೯೧ ॥**

ಮಾಯಿಕಃ ಅರ್ಥಃ — ಮಾಯಾಕಲ್ಪಿತವೆಂಬ ಅರ್ಥವು (ಮಾಯಾದಿ ದೇಹವುಳ್ಳವನೆಂಬ ಅರ್ಥವು), ನಿಷೇಧಸ್ಯ—('ಅಶರೀರಂ' ಎಂಬ) ನಿಷೇಧದ, ವಾರಕಃ — ನಿವಾರಕವು (ನಿವಾರಿಸುವುದು), ಯದಿ ನೇಷ್ಯತೇ — ಅಲ್ಲವೆಂದರೆ

---

ತಿಳಿದರೆ, 'ಯದಾಪಶ್ಯಃ ಪಶ್ಯತೇ ರುಗ್ಮವರ್ಣಂ'—'ಜೀವನು, ಯಾವಾಗ ಭಂಗಾರವರ್ಣದ ಕಾಂತಿಯುಳ್ಳ ರೂಪವನ್ನು ಕಾಣುವನೋ, ಆಗ ಜನನ ಮರಣ ರಹಿತನಾಗುವನು' ಎಂದು ಹೇಳುವ ಶ್ರುತಿಯು ಅಪ್ರಮಾಣವಾಗು ತ್ತದೆ; ಮಾಯಾರೂಪವುಳ್ಳವನೆಂದರೆ, 'ಅರೂಪಂ' ಶ್ರುತಿಯ ಮುಖ್ಯಾರ್ಥ ವನ್ನು ಬಿಟ್ಟಂತೆ ಆಗುತ್ತದೆ; ಯಥಾಯೋಗ್ಯವಾದ ಅಪ್ರಾಕೃತರೂಪವುಳ್ಳವ ನೆಂಬ ಅರ್ಥವನ್ನು ತಿಳಿದರೆ, ನಿನ್ನ ಪ್ರತಿವಾದಿಯು ಜಯಶೀಲನಾಗುತ್ತಾನೆ (೩೯೦). ಮಾಯಿಕವಾದ ದೇಹಾದಿಗಳನ್ನುಳ್ಳವನು, ಭಗವಂತನೆಂದರೆ, ಅಶರೀರ ಇತ್ಯಾದಿ ನಿಷೇಧ ಶ್ರುತಿವಾಕ್ಯಗಳನ್ನು ವಿರೋಧಿಸುವುದಿಲ್ಲ;

(ಮಾಯಿಕದೇಹವನ್ನು ಹೇಳಿದರೂ, ದೇಹರಹಿತನೆಂದು ಹೇಳುವುದು ವಿರೋಧವಲ್ಲವೆಂದರೆ), ಘಟೇ ಸತ್ಯಪಿ – ಘಟವು (ಭೂಮಿಯ ಮೇಲೆ) ಇರುತ್ತಿರಲು, ಭೂಮಿಃ–ಭೂಮಿಯು, ಅಘಟೇತಿ–ಘಟವಿಲ್ಲದ್ದೆಂದು, ಕಿಂ ನ ಕಥ್ಯತೇ – ಏಕೆ ಹೇಳಲಾಗುವುದಿಲ್ಲ ? (ಮಾಯಿಕವಾದ ಪದಾರ್ಥವೂ, ನಿಷೇಧವಿರೋಧಿಯೇ ಆಗಿರುತ್ತದೆ—ಅದು ಇದ್ದರೂ ಇಲ್ಲವೆಂದು ಹೇಳುವುದು ವಿರೋಧವೆನಿಸುತ್ತದೆ—ಘಟವೂ ನಿನ್ನಂತೆ ಮಾಯಿಕವೇ ಅಲ್ಲವೇ ?).

**ಕಿಂತು ಪ್ರಮಾಣಸಿದ್ಧೋಽರ್ಥಃ ಸ್ವತಸ್ತಂ ಚ್ಯಾವಯೇದ್ಬಲೀ ।**
**ಕೃಶಕಾನುದರೇತ್ಯಾದೌ ಯಥಾ ವ್ಯವಹೃತೌ ಸತಾಂ ॥ ೩೯೨ ॥**

ನಿಷೇಧ ಸಾಮಾನ್ಯವಚನವನ್ನು ಎಲ್ಲಿ ಸಂಕೋಚದಿಂದ ಅರ್ಥವನ್ನು ಗ್ರಹಿಸಬೇಕೆಂದರೆ, ದೃಷ್ಟಾಂತಪೂರ್ವಕ, ನಿರೂಪಿಸುತ್ತಾರೆ :—

ಕಿಂತು–ಎಲ್ಲಿ (ಯಾವಾಗ) ಸಂಕೋಚಾರ್ಥವನ್ನು ತಿಳಿಯಬೇಕೆಂದರೆ, ಪ್ರಮಾಣಸಿದ್ಧಃ ಅರ್ಥಃ–ಪ್ರಮಾಣಸಿದ್ಧವಾದ (ಘಟಾದಿ) ವಸ್ತುವು, ಬಲೀ–ಬಲೀ – (ಪ್ರಮಾಣಿಕತ್ವದಿಂದ) ಬಲಿಷ್ಠವಾಗಿ, ಸ್ವತಃ – ತನ್ನ ದೆಸೆಯಿಂದ, ತಂ – ಸಾಮಾನ್ಯ ನಿಷೇಧವನ್ನು, ಚ್ಯಾವಯೇತ್ – ಅನ್ಯತ್ರ ಕಳುಹಿಸುತ್ತದೆ (ಎಂದರೆ, ಅಲ್ಲಿ ಸಂಕೋಚಾರ್ಥವನ್ನು ತಿಳಿಯಲು ಅವಕಾಶ ಕೊಡುವುದಿಲ್ಲ);

---

ಮಾಯಿಕವಾದುದು ಇದ್ದರೂ ಇಲ್ಲದಂತೆ ಆದ್ದರಿಂದ, ಇಲ್ಲವೆಂಬುದಕ್ಕೆ ವಿರೋಧವಲ್ಲ; ಹೀಗೆಂಬ ವಾದವು ಯುಕ್ತವಲ್ಲ; ನಿನ್ನ ಮಾಯಿಕವಾದ ಘಟವು ಭೂತಲದಲ್ಲಿದ್ದರೂ, ಅಘಟಭೂತಲವೆಂದು ಕರೆಯುವುದಿಲ್ಲವಷ್ಟೆ; ನಿಷೇಧಿಸಲ್ಪಡುವ ಪದಾರ್ಥವು ಪಾರಮಾರ್ಥಿಕ ಸತ್ಯತ್ವವುಳ್ಳದ್ದಾಗಿರಬೇಕೆಂಬ ನಿಯಮವು ನಿಷೇಧಕ ಶ್ರುತಿವಾಕ್ಯಕ್ಕೆ ಅನ್ವಯಿಸುತ್ತದೆಂಬಲ್ಲಿ ಪ್ರಮಾಣವಿಲ್ಲ; (ನೀನು ಹೇಳುವುದು ಮಾತ್ರ) ನಿನ್ನ ಉಕ್ತಿ ಮಾತ್ರ ಪ್ರಮಾಣವಾಗುವುದಿಲ್ಲ (೩೯೧). ಲೌಕಿಕ ಯುಕ್ತಿಯೂ ಇದನ್ನೇ ಸಮರ್ಥಿಸುತ್ತದೆ; ಸುಂದರ ಬಾಲಕಿಯನ್ನು ಕಂಡು (ಸ್ತ್ರೀಯನ್ನು ಕಂಡು) 'ಅನುದರಾಕುಮಾರೀ' ಎಂದರೆ, ಕೃಶೋದರೀ ತೆಳ್ಳಗಿನ ಸೊಂಟವಿರುವ ಸುಂದರಾಂಗಿ, ಎಂದು ಅರ್ಥಮಾಡಿ ಕೊಳ್ಳುವರಲ್ಲದೇ, ಹೊಟ್ಟೆಯನ್ನೇ ಕೊಯ್ದು ತೆಗೆದಿರುವರೆಂದಲ್ಲ; ದಪ್ಪನಾದ ಉಬ್ಬಿದ ಉದರದವಳಲ್ಲವೆಂದು ಮಾತ್ರ ಅರ್ಥವಷ್ಟೆ; ನಿಷೇಧಿಸಲ್ಪಡುವ

ಕನ್ಯಕಾ—ಈ ಬಾಲಕಿಯು, ಅನುದರಾ—ಉದರವಿಲ್ಲದವಳು (ಹೊಟ್ಟೆಯಿಲ್ಲದವಳು), ಇತ್ಯಾದೌ—ಇದೇ ಮುಂತಾದ, ಸತಾಂ—ಸುಜನರ, ವ್ಯವಹೃತೌ—ವ್ಯವಹಾರದಲ್ಲಿ (ನುಡಿಗಳಲ್ಲಿ), ಯಥಾ (ತಥಾ)—ಹೇಗೋ ('ಅನುದರಾ' ಎಂಬುದಕ್ಕೆ ಸಾಮಾನ್ಯ ಉದರವಿಲ್ಲವೆಂಬರ್ಥವನ್ನು ತಿಳಿಯದೇ ಸಂಕೋಚದಿಂದ, ಕೃಶೋದರವುಳ್ಳ ಸುಂದರೀ ಎಂದು ತಿಳಿಯುವರೋ) (ಹಾಗೆ, 'ಅಶಬ್ದಮಸ್ಪರ್ಶಂ' ಇತ್ಯಾದಿ ಶ್ರುತಿಯಲ್ಲಿ, ಶಬ್ದಾದಿ ಸಾಮಾನ್ಯನಿಷೇಧವನ್ನು ತಿಳಿಯದೇ, ಯಥಾಯೋಗ್ಯವಾದ ಶಬ್ದಾದಿ ಪದವಾಚ್ಯ ಅನ್ಯವಸ್ತುಗಳ ಇರುವಿಕೆಯನ್ನು ತಿಳಿಯುತ್ತಾರೆ; (ಅಶಬ್ದನೆಂದು ಶ್ರುತಿಯು ಹೇಳಿದರೆ ಪ್ರಾಮಾಣಿಕವಾದ ನಾರಾಯಣಾದಿ ಶಬ್ದವಾಚ್ಯನೆಂದೂ, ಲಕ್ಷ್ಮೀಕರಸ್ಪರ್ಶಾದಿ ಸ್ಪರ್ಶವುಳ್ಳವನೆಂದೂ, ಅಸ್ಪರ್ಶನೆಂಬುದಕ್ಕೂ, ಅರೂಪನೆಂಬುದಕ್ಕೆ ರುಗ್ಮವರ್ಣಾದಿ ರೂಪವುಳ್ಳವನೆಂದೂ, ಅಶರೀರನೆಂಬುದಕ್ಕೆ ಸಹಸ್ರಶೀರ್ಷಾದಿ ಶ್ರುತಿಯಲ್ಲಿ ಹೇಳುವಂತೆ, ಅಲೌಕಿಕದೇಹವುಳ್ಳವನೆಂದೂ ತಿಳಿದು, ಇವುಗಳನ್ನು ಹೊರತು, ಅನ್ಯಶಬ್ದಾದಿ ನಿಷೇಧಪರವೆಂದು ತಿಳಿಯಬೇಕು).

**ಆದಿತ್ಯವರ್ಣಂ ತಮಸಃ ಪರಸ್ತಾದಿತಿ ವೈದಿಕೀ ।**
**ವಾಗವಿದ್ಯಾನಿವೃತ್ತೌ ಚ ರೂಪಮಾಹ ಪರಾತ್ಮನಃ ॥ ೩೯೩ ॥**

---

ಪದಾರ್ಥವು ಪ್ರಾಮಾಣಿಕವಾಗಿದ್ದರೆ (ಪ್ರತ್ಯಕ್ಷಸಿದ್ಧ ವಸ್ತುವು) ತನ್ನ ಪ್ರಾಮಾಣಿಕತ್ವ ಬಲದಿಂದ, ತನ್ನ ಹೊರತು ಅನ್ಯವಸ್ತುಗಳು ನಿಷೇಧಿತವಾಗಿವೆ, ಎಂಬ ಸಂಕೋಚಾರ್ಥಕ್ಕೆ ಅವಕಾಶ ಕೊಡುತ್ತದೆ; ಹೀಗೆ 'ಅಶಬ್ದಮಸ್ಪರ್ಶಂ' ಇತ್ಯಾದಿ ಶಬ್ದಾದಿಗಳನ್ನು ನಿಷೇಧಿಸುವ ವಾಕ್ಯಕ್ಕೆ, ಶಬ್ದಾದಿ ಪದಗಳಿಂದ ಹೇಳಲ್ಪಡುವ ಭಗವಂತನಲ್ಲಿರಬಹುದಾದ ಪ್ರಾಮಾಣಿಕವಾದ ಅನ್ಯವಸ್ತುಗಳಿದ್ದರೆ, ಅವುಗಳನ್ನು ಇಟ್ಟುಕೊಂಡು, ಸಾಮಾನ್ಯ ಸರ್ವಶಬ್ದಾದಿ ನಿಷೇಧವನ್ನು ಸಂಕೋಚಗೊಳಿಸಿ, ಸರ್ವಶಬ್ದಗಳೆಂದು ತಿಳಿಯದೇ, ಭಗವಂತನಲ್ಲಿ ನಾರಾಯಣಾದಿ ಶಬ್ದಗಳೂ ನಿತ್ಯಾವಿಯೋಗಿನಿಯಾದ ಶ್ರೀ ಲಕ್ಷ್ಮೀದೇವಿಯ ಕರಸ್ಪರ್ಶಾದಿಗಳು ಉಂಟೆಂಬುದಾಗಿ ಗ್ರಹಿಸಬೇಕು (೩೯೨). 'ಆದಿತ್ಯವರ್ಣಂ ತಮಸಃ ಪರಸ್ತಾತ್' ಎಂಬ ಶ್ರುತಿಯು, ಪರಮಾತ್ಮನಿಗೆ ಅಜ್ಞಾನವನ್ನು (ಅವಿದ್ಯೆಯನ್ನು) ನಿವಾರಿಸಲಿಕ್ಕಾಗಿ, ಸೂರ್ಯನಂತೆ ದಿವ್ಯತೇಜೋ

ಈ ಮುಂದೆ, ಶ್ರುತಿ ಮತ್ತು ತದುಕ್ತ ಯುಕ್ತಿಗಳಿಂದ ಭಗವಂತನಲ್ಲಿ ಅಪ್ರಾಕೃತ ರೂಪಾದಿಗಳನ್ನು ಸಾಧಿಸುತ್ತಾರೆ :—

'ಆದಿತ್ಯವರ್ಣಂ ತಮಸಃ ಪರಸ್ತಾತ್' – ಅಜ್ಞಾನದಿಂದ (ಜಡದಿಂದ) ದೂರನಾದ ಭಗವಂತನನ್ನು, ಸೂರ್ಯನಂತೆ ಶ್ರೇಷ್ಠವಾದ ತೇಜೋರೂಪನು, ಇತಿ ವೈದಿಕೀ–ಹೀಗೆಂಬ ವೇದದ, ವಾಕ್–ನುಡಿಯು, ಅವಿದ್ಯಾನಿವೃತ್ತೌ ಚ –ಅವಿದ್ಯಾಸಂಬಂಧವನ್ನು ನಿವಾರಿಸುವ ಅರ್ಥದಲ್ಲಿಯೇ (ಇಲ್ಲವೆಂದು ಸಾಧಿಸ ಲಿಕ್ಕಾಗಿ), ಪರಾತ್ಮನಃ–ಭಗವಂತನಿಗೆ, ರೂಪಂ ಆಹ–ರೂಪವನ್ನು ಹೇಳು ತ್ತದೆ.

**ರೂಪಂ ಸ್ಪರ್ಶತೋ ವ್ಯಾಪ್ತಂ ತೌ ಸಾಕಾರಾಶ್ರಿತೌ ಸದಾ ।**
**ತತಶ್ಚೈತನ್ಯಮಾತ್ರೇಽಪಿ ಶ್ರುತಾ ಸಾಕಾರತಾ ಮಹಾ ॥ ೩೯೪ ॥**

ಯಾವ ವಸ್ತುವು ರೂಪವುಳ್ಳದ್ದೋ ಅದು ಸ್ಪರ್ಶವುಳ್ಳದ್ದೆಂಬ ವ್ಯಾಪ್ತಿಯೂ, ರೂಪಸ್ಪರ್ಶಗಳು ಆಕಾರವುಳ್ಳ ವಸ್ತುವಿದ್ದಲ್ಲಿರುವುವೆಂಬ ವ್ಯಾಪ್ತಿಯೂ, ಕಂಡಿರು ತ್ತದೆ; ಸಾಕಾರವಸ್ತುಗಳಲ್ಲಿ ಅವಯವ ವರ್ತುಲಾದಿ ಆಕಾರಗಳೂ ಇರುತ್ತವೆ— ಇದು ಪೃಥಿವ್ಯಾದಿ ಪಂಚಭೂತಗಳಲ್ಲಿರುತ್ತವೆಂಬ ನಿಯಮವಿರುವುದರಿಂದ, ಚೈತನ್ಯಮಾತ್ರವಸ್ತುವಿನಲ್ಲಿ ಸಹ ಆಕಾರಗಳನ್ನು ಶ್ರುತಿಯಿಂದ ಸಾಧಿಸುತ್ತಾರೆ :

ರೂಪಂ – ರೂಪವು, ಸ್ಪರ್ಶತಃ – ಸ್ಪರ್ಶದಿಂದ, ವ್ಯಾಪ್ತಂ – ವ್ಯಾಪ್ತ ವಾದುದು (ರೂಪವುಳ್ಳ ವಸ್ತುವು ಸ್ಪರ್ಶವುಳ್ಳದ್ದೂ ಆಗಿರುತ್ತದೆ) ; ತೌ– ಆ ಎರಡೂ (ರೂಪಸ್ಪರ್ಶಗಳು), ಸದಾ–ಯಾವಾಗಲೂ, ಸಾಕಾರಾಶ್ರಿತೌ–

---

ರೂಪನೆಂದು ವರ್ಣಿಸುತ್ತ, ವೇದವಾಕ್ಯವು ಅಲೌಕಿಕರೂಪವನ್ನು, ಹೇಳುತ್ತದೆ (೩೯೩). ರೂಪವಿದ್ದಲ್ಲಿ, ಸ್ಪರ್ಶವೂ, ರೂಪಸ್ಪರ್ಶಗಳೆಂಬ ಉಭಯವೂ, ಆಕಾರವಿದ್ದಲ್ಲಿಯೂ ಇರುತ್ತವೆಯೆಂಬ ವ್ಯಾಪ್ತಿನಿಯಮವಿದೆ ; ಈ ನಿಯಮವು ಪೃಥಿವ್ಯಾದಿ ಭೂತನಿರ್ಮಿತ ಪ್ರಾಕೃತ (ಜಡ) ವಸ್ತುಗಳಲ್ಲಿ ವರ್ತುಲಾಕಾರಾದಿ ಗಳು ಕಂಡುಬರುತ್ತವೆ–ಅಲ್ಲಿ ಮಾತ್ರ ರೂಪಾದಿಗಳು ಇರುತ್ತವೆಂದಲ್ಲ; ಚೇತನ ಮಾತ್ರದಲ್ಲಿಯೂ ಈ ನಿಯಮವಿರುತ್ತದೆಯೆಂದು ಶ್ರುತಿಸಿದ್ಧವಾಗಿದೆ; 'ರುಗ್ಮ ವರ್ಣಂ ತಮಸಃ ಪರಸ್ತಾತ್' ಇತ್ಯಾದಿಗಳು (ತಮಸ್ಸು–ಪ್ರಾಕೃತ;) 'ತಮಸಃ ಪರಸ್ತಾತ್' ಎಂಬುದರಿಂದ ಅಪ್ರಾಕೃತ ಪ್ರದೇಶದಲ್ಲಿಯೂ ರೂಪ ಸ್ಪರ್ಶ,

ಆಕಾರವುಳ್ಳ ವಸ್ತುವನ್ನು ಆಶ್ರಯಿಸಿರುತ್ತವೆ; ತತಃ–ಆದ್ದರಿಂದ, ಚೈತನ್ಯ ಮಾತ್ರೇಪಿ–ಕೇವಲ ಚೈತನ್ಯದಲ್ಲಿಯೂ (ಪೃಥಿವ್ಯಾದಿ ಪ್ರಾಕೃತವಸ್ತುಗಳಲ್ಲಿ ಮಾತ್ರವಲ್ಲ—ಚೇತನನಲ್ಲಿ ಸಹ), ಶ್ರುತಾ[1]–ಪ್ರಸಿದ್ಧವಾಗಿದೆ ('ವಿಶ್ವತಶ್ಚಕ್ಷುಃ' ಇತ್ಯಾದಿಗಳಲ್ಲಿ ಶ್ರುತ್ಯುಕ್ತವಾಗಿದೆ); ಸಾಕಾರತಾ–(ಚೇತನವೂ) ಆಕಾರ ವುಳ್ಳದ್ದು, ಎಂಬುದು, ಮತಾ–ಯುಕ್ತಿಸಂಮತವೂ (ಆಗಿದೆ); ('ತಮಸಃ ಪರಸ್ತಾತ್' ಎಂಬಲ್ಲಿ, ಅಪ್ರಾಕೃತ ಪ್ರದೇಶದಲ್ಲಿಯೂ ರೂಪಸ್ಪರ್ಶ ಆಕಾರಗಳ ಇರುವಿಕೆಯನ್ನು ಯುಕ್ತಿಯಿಂದಲೂ ಶ್ರುತಿಯು ಸಾಧಿಸುತ್ತದೆ).

**ಅತಃ ಸ ವಿಶ್ವತಶ್ಚಕ್ಷುರ್ವಿಶ್ವತೋ ಮುಖ ಏವ ಚ ।**
**ವಿಶ್ವತೋ ಬಾಹುರೀಶೋಽಸೌ ವಿಶ್ವತಃ ಪಾತ್ಪರಃ ಪ್ರಭುಃ ॥ ೩೯೫ ॥**

ಅತಃ–ಆದ್ದರಿಂದ (ಶ್ರುತಿ ಮತ್ತು ಯುಕ್ತಿಯ ಆಧಾರವಿರುವುದರಿಂದ), ಸಃ–ಭಗವಂತನು, ವಿಶ್ವತಃ – ಅಸಂಖ್ಯವಾದ (ಸರ್ವತ್ರವಿರುವ), ಚಕ್ಷುಃ–

---

ಆಕಾರಾದಿಗಳುಂಟೆಂದು, ಅಜ್ಞಾನ ನಿವಾರಕತ್ವಹೇತುಸಹಿತವಾದ ಯುಕ್ತಿ ಯಿಂದಲೂ ಸಾಧಿಸುತ್ತದೆ (೩೯೪). ಶ್ರುತಿ ಮತ್ತು ಶ್ರುತ್ಯುಕ್ತಯುಕ್ತಿಗಳ ಆಧಾರವಿರುವುದರಿಂದ, ಭಗವಂತನು, ವಿಶ್ವತಃಚಕ್ಷುವೂ, ಅನಂತಬಾಹುಗಳೂ,

---

[1] ಶ್ರುತಿಸಂಮತವಾದ ಭಗವಂತನ ಸಾಕಾರತ್ವವು, ಯುಕ್ತಿಸಿದ್ಧವೂ ಆಗಿದೆ, ಎಂದು ಸೂಚಿಸಲಾಗಿದೆ—ಶ್ರುತಾ ಎಂಬ ಶಬ್ದದಿಂದ; ಸಾಕಾರತ್ವವಿದ್ದರೂ, ಅನಿತ್ಯತ್ವವಿಲ್ಲ; ಪರಮಾಣುಗಳ ಪರಿಮಾಣದಂತೆಯೂ, ನಿತ್ಯಾಕಾಶದ ಪರಮಾಣುಗಳಂತೆಯೂ, ಭಗವಂತನ ಸೂಕ್ಷ್ಮತ್ವವನ್ನು, ಗುಣಗುಣಿಭಾವವನ್ನೂ ಊಹಿಸಿ ತಿಳಿಯಬಹುದು; ಅವಯವ–ಅವಯವಿ, ರೂಪದ ಸಂಬಂಧವಿದ್ದಲ್ಲಿ ಅನಿತ್ಯತ್ವವಿರುತ್ತದೆಂಬ ನಿಯಮದ ಅಪವಾದನು—ಶ್ರೀ ಪರಮಾತ್ಮನು—ನಿತ್ಯವಾದವೂ ಸೂಕ್ಷ್ಮತಮಗಳೂ ಆದ ಅನಂತ ರೂಪವುಳ್ಳವನಾಗಿರುತ್ತಾನೆ.

ಪರಮಾಣು—(not the atom of the scientist but an infinitesimal part of it); 'ಚರಮಸ್ತು ವಿಶೇಷಾಣಾಂ ಅನೇಕಾ ಸಂಯುತಃ ಸದಾ ।' (ಭಾಗವತ–೩–೧೨–೧), ಎಂಬಲ್ಲಿ ಉಕ್ತವಾದ ತಾತ್ಪರ್ಯಪ್ರಮಾಣಗಳಿಂದ ಈ ಪ್ರಮೇಯವು ಸಿದ್ಧವಾಗುತ್ತದೆ. ಕಾಣಾದರೇ ಮೊದಲಾದವರು (ವೈಶೇಷಿಕಾದಿಗಳು) ಪರಮಾಣುವೆಂದು ತಿಳಿಯುವುದು ಕೇವಲ ಭ್ರಮೆಯು. ದೇವತೆಗಳು ಸಹ ಕಾಣಲಾರ ದಷ್ಟೇ ಅಂಶಗಳಿಂದ ಯುಕ್ತವಾಗಿದೆ—ಪರಮಾಣುವು.

20

ಕಣ್ಣುಳ್ಳವನು ; ವಿಶ್ವತಃ ಮುಖ ಏವ ಚ – ಅನಂತ ಮುಖಗಳುಳ್ಳವನೂ (ಆಗಿರುವನು) ; ಅಸೌ–ಈ, ಈಶಃ – ಮಹಾಸ್ವಾಮಿಯು (ಪರಮಾತ್ಮನು), ವಿಶ್ವತಃ ಬಾಹುಃ – ಅಸಂಖ್ಯ ಬಾಹುಗಳುಳ್ಳವನು ; ವಿಶ್ವತಃ ಪಾತ್–ಅನಂತ ಪಾದಗಳುಳ್ಳವನು, ಪರಃ ಪ್ರಭುಃ–ಸರ್ವೋತ್ತಮನಾದ (ಸರ್ವಭಿನ್ನನೂ ಆದ) ಪ್ರಭುವಾಗಿದ್ದಾನೆ ('ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್' ಇತ್ಯಾದಿ ಶ್ರುತಿಯನ್ನೇ, ರೂಪ, ಚಕ್ಷುರಾದಿ ಇಂದ್ರಿಯಗಳು ಮತ್ತು ಹಸ್ತಪಾದಾದಿ ಅವಯವಗಳೂ ಭಗವಂತನಿಗೆ ಉಂಟೆಂಬಲ್ಲಿ, ಪ್ರಮಾಣವನ್ನಾಗಿ ಉದಹರಿಸಿರುವರು).

**ಮಾಯಾಭಾವೇಽಪಿ ಯೋ ದೇಹೋ ಜ್ಞಾನಾನಂದಾತ್ಮಕೋ ಹ್ಯಸೌ।**
**ಸುಖರೂಪಂ ಹಿ ತದ್ಬ್ರಹ್ಮ ಜ್ಞಾನರೂಪಂ ನ ಮೃಣ್ಮಯಂ ॥ ೩೯೬ ॥**

ಭಗವಂತನು ಅಪ್ರಾಕೃತದೇಹವುಳ್ಳವನೆಂಬಲ್ಲಿ ಬೇರೆ ಯುಕ್ತಿಯನ್ನು ಹೇಳುತ್ತಾರೆ :—

ಮಾಯಾಭಾವೇ ಅಪಿ–('ತಮಸಃ ಪರಸ್ತಾತ್' ಎಂಬ ಶ್ರುತಿಯು) ಪ್ರಕೃತಿ (ಮಾಯಾ) ರಹಿತಸ್ಥಲದಲ್ಲಿರುವುದನ್ನು ಯುಕ್ತಿಯಿಂದ ಸಾಧಿಸಿದ್ದರೂ ಸಹ, ಯಃ ದೇಹಃ–ಯಾವ (ಭಗವಂತನ) ದೇಹವೋ, ಅಸೌ–(ಬಾಹ್ಯದಲ್ಲಿರುವ) ಈ ದೇಹವೂ, ಜ್ಞಾನಾನಂದಾತ್ಮಕಃ–ಜ್ಞಾನ, ಆನಂದಗಳ ಸ್ವರೂಪವಾದುದು (ಜ್ಞಾನಾನಂದಗಳ ಮೂರ್ತಿಯೇ ಆಗಿರುವುದು) ; ತದ್ಬ್ರಹ್ಮ–ಆ ಬ್ರಹ್ಮನು, ಸುಖರೂಪಂ–('ಆನಂದೋ ಬ್ರಹ್ಮ, ಕಂ ಬ್ರಹ್ಮ, ಖಂ ಬ್ರಹ್ಮ, ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಶ್ರುತಿಗಳೂ, 'ಜ್ಞಾನಿನೋಽಪಿ ಜ್ಞಾನಯುಜ್ಞೇನ

---

ಅನಂತಪಾದಗಳೂ, ಅನಂತಮುಖಗಳೂ ಉಳ್ಳ ವಿಶ್ವರೂಪಿಯೆಂದೇ ಸಿದ್ಧವಾಗುತ್ತದೆ; (ಪುರುಷಸೂಕ್ತವು, 'ವಿಶ್ವತಃ ಚಕ್ಷುರುತ ವಿಶ್ವತೋ ಮುಖೋ....' ಇತ್ಯಾದಿಯಾಗಿ, ಚಕ್ಷುರಾದಿ ಇಂದ್ರಿಯಗಳನ್ನೂ, ಕರಚರಣಾದಿ ಅವಯವಗಳನ್ನೂ, ಉಳ್ಳ ಭಗವಂತನ, ರೂಪವನ್ನು ವರ್ಣಿಸುತ್ತದೆ) (೩೯೫). 'ತಮಸಃ ಪರಸ್ತಾತ್', ಎಂದರೆ, ಪ್ರಕೃತಿಯ ಆಚೆಗಿರುವ (ಅಪ್ರಾಕೃತನಾದ) ಭಗವಂತನ ನಿರೂಪಣೆಯಿಂದ, ಭಗವಂತನು (ಯಾವ ದೇಹದಲ್ಲಿ, ಎಲ್ಲಿದ್ದರೂ) ಅಪ್ರಾಕೃತನೇ—ಜ್ಞಾನಾನಂದಾತ್ಮಕನೇ ಆಗಿರುವನೆಂದು ಸಿದ್ಧವಾಗುತ್ತದೆ;

ಯಜಂತಿ ಜ್ಞಾನವಿಗ್ರಹಂ' ಇತ್ಯಾದಿ ಸ್ಮೃತಿಗಳೂ ಎಂಬುದನ್ನು, ಎರಡೂ 'ಹಿ' ಶಬ್ದಗಳು ಸೂಚಿಸುತ್ತವೆ) ಆನಂದಸ್ವರೂಪನು, ಜ್ಞಾನರೂಪಂ–ಜ್ಞಾನ ಸ್ವರೂಪನೂ (ಆಗಿರುವನು) ; ನ ಮೃಣ್ಮಯಂ – ಘಟಾದಿ ಮೃಣ್ಮಯ ವಸ್ತುಗಳಂತೆ ಅಲ್ಲ (ಪಂಚಭೂತಾತ್ಮಕ ದೇಹವುಳ್ಳವನಾದರೆ, ಭಗವಂತನು ಮೃಣ್ಮಯನೂ ಆಗಿರುವನೆಂಬ ಹೀನತರ ಭಾವನೆಯೂ ಉಂಟಾಗುವುದೆಂದು, ವಿಪಕ್ಷಬಾಧಕವನ್ನು ಪರಿಹರಿಸಿರುವರು).

**ಸತ್ವಾದಿ ಮೃಣ್ಮಯಾಂತೋಽಯಂ ಮಾಯಾಸಂತಾನ ಏವ ಹಿ ।**
**ಮಾಯಾಮಯಮಿದಂ ವಿಶ್ವಂ ರೋಮಕೂಪೇಷ್ವಣುಃ ಕಿಲ ॥೩೯೭॥**

ಬೇರೆ ಯುಕ್ತಿಯನ್ನೂ ಹೇಳುತ್ತಾರೆ :—

ಸತ್ವಾದಿ ಮೃಣ್ಮಯಾಂತಃ–ಸತ್ವಗುಣವನ್ನಾರಂಭಿಸಿ, ಮೃತ್ತಿಕೆ(ಮಣ್ಣಿನ) ವರೆಗಿನ, ಅಯಂ – ಮಹದಹಂಕಾರಾದಿ ತತ್ವನಿರ್ಮಿತ ಜಡಪ್ರಪಂಚವು, ಮಾಯಾಸಂತಾನಃ ಏವ ಹಿ–ಮಾಯೆಯಿಂದ (ಜಡಪ್ರಕೃತಿಯ ವಿಕಾರಗಳಾದ) ಆದ ಕಾರ್ಯಪರಂಪರೆಯೇ ಆಗಿದೆ; ಮಾಯಾಮಯಂ – ಪ್ರಾಕೃತವಾದ (ಪ್ರಕೃತಿಯ ವಿಕಾರಗಳಿಂದಾದ), ಇದಂ – ಈ, ವಿಶ್ವಂ–ಈ ಜಗತ್ತೆಲ್ಲವೂ, ರೋಮಕೂಪೇ–(ಶ್ರೀವಿಷ್ಣುವಿನ) ರೋಮಕೂಪದಲ್ಲಿ, ಅಣುಃ ಕಿಲ–('ಯತ್ರ ಪ್ರವಿಷ್ಟಃ ಪರಮಾಣುವತ್' ಇತ್ಯಾದಿ ಭಾಗವತೋಕ್ತಿಯಂತೆ) ಅಣುವಿನಂತೆ ಸ್ಥಿತವಾಗಿದೆ.

---

ಆದ್ದರಿಂದ ಭಗವಂತನು ಸುಖರೂಪನು, ಜ್ಞಾನರೂಪನು; ಘಟಾದಿ ವಸ್ತುಗಳಂತೆ, ಪಂಚಭೂತಗಳಿಂದ ನಿರ್ಮಿತವಾದ ದೇಹವುಳ್ಳವನಲ್ಲ (೩೯೬). ಸತ್ವಗುಣದಿಂದ ಆರಂಭಿಸಿ, ಪೃಥಿವೀತತ್ವದವರೆಗಿನ, ಪ್ರಕೃತಿಯ ಕಾರ್ಯ (ವಿಕಾರಗಳ) ಪರಂಪರೆಯಿಂದಾದ, ಅಥವಾ ಅವುಗಳ ಮೂಲಭೂತ ಪ್ರಕೃತಿ (ಜಡ) ನಿರ್ಮಿತ ಪ್ರಪಂಚವು (ಈ ವಿಶ್ವವು), ಶ್ರೀವಿಷ್ಣುವಿನ ದೇಹಗತ ರೋಮಕೂಪವನ್ನು ತುಂಬಲಾಗದೆ, ಅಲ್ಲಿ ಅಣುರೂಪದಿಂದ ಸ್ಥಿತವಾಗಿದೆ; 'ಯತ್ರ ಪ್ರವಿಷ್ಟಃ ಪರಮಾಣುವತ್' ಎಂಬ ಮುಂತಾದ ಭಾಗವತೋಕ್ತಿಗಳು ಹೀಗೆಂದು ಭಗವಂತನ ದೇಹವನ್ನು ವರ್ಣಿಸುತ್ತವೆ (೩೯೭).

*

**ಮಹಾಕಾಯಸ್ಯ ಕಾಯೋಽಸೌ ಚಿನ್ಮಯೋ ನ ಹಿ ಮೃಣ್ಮಯಃ ।**
**ನ ಯತ್ರ ಶ್ರೂಯತೇ ಮಾಯಾ ಸತ್ವಾದೇಸ್ತತ್ರ ಕಾ ಕಥಾ ॥ ೩೯೮ ॥**

ಮಹಾಕಾಯಸ್ಯ–ಮಹಾದೇಹವುಳ್ಳ ಶ್ರೀ ನಾರಾಯಣನ, ಅಸೌ–ಈ ಕಾಯಃ – ದೇಹವು ('ಕೋಟಿಬ್ರಹ್ಮಾಂಡಗಳನ್ನು ಧರಿಸಿರುವ ದೇಹ[1] ವೆಂದು, 'ಕೋಟಿ ಬ್ರಹ್ಮಾಂಡ ವಿಗ್ರಹ' ಇತಿ, ವಾಸುದೇವ ಸಹಸ್ರನಾಮದಲ್ಲಿ, ಉಕ್ತವಾದಂತೆ ವಿಸ್ತಾರವಾದ ಮಹಾಶರೀರವು); ಚಿನ್ಮಯಃ – (ವ್ಯಾಪ್ತ ಸ್ವರೂಪನಾದ ಪರಮಾತ್ಮನ) ಜ್ಞಾನಾನಂದಾತ್ಮಕವಾದುದೇ, ನ ಮೃಣ್ಮಯಃ

---

ಈ ವಿಧ ಮಹಾಕಾಯನಾದ ಶ್ರೀವಿಷ್ಣುವಿನ ದೇಹ ಚಿನ್ಮಯ (ಜ್ಞಾನಾತ್ಮಕ) ವಲ್ಲದೇ ಪ್ರಾಕೃತವಲ್ಲ; ಎಲ್ಲಿ ಪ್ರಕೃತಿಯೇ (ಮಾಯೆಯೇ) ಇಲ್ಲವೋ (ಅದರ ಹೆಸರೂ ಇಲ್ಲವೋ), ಅದರ ವಿಕಾರಗಳಾದ ಸತ್ವಾದಿ ಗುಣಗಳಿಲ್ಲವೆಂದು

---

[1] 'ಏಕಮಂಡಂ ಬಹುತ್ವೇನ ಪ್ರತ್ಯೇಕಂ ರೋಮಕೂಪಗಂ।
ಬ್ರಹ್ಮಾಽಪಶ್ಯತ್ತಥಾತ್ಮಾನಂ ಹರೇಸ್ತೇಷು ಪೃಥಕ್ ಪೃಥಕ್।' ಎಂಬ ಭಾರತ ವಾಕ್ಯವು ಮತ್ತು 'ಶರೀರಾಣಾಂ ಬಹುತ್ವೇನ ಅತೀತಾನಗತೈಸ್ತಥಾ।
ಅಸ್ಯೈವ ದೇವಕಾಯೇಷು ಪ್ರತಿ ಪ್ರತಿ ಚ ದರ್ಶನಾತ್।
ವಿಷ್ಣುಸಾಮರ್ಥ್ಯತೋಽಂಡಾನಾಂ ಬಹುತ್ವಂ ನಾನ್ಯಥಾ ಭವೇತ್।'

ಎಂಬ ಗೀತಾತಾತ್ಪರ್ಯ ವಾಕ್ಯವೂ, ಕೋಟಿ (ಅನಂತ) ಬ್ರಹ್ಮಾಂಡ ವಿಷಯಕ ನಿರ್ಣಯ ವನ್ನು ಹೇಳುತ್ತವೆ. ಶ್ರೀಹರಿಯು ಆವರಣಸಹಿತವಾದ ಬಹುಕೋಟಿಯೋಜನ ವಿಸ್ತಾರದ ಬ್ರಹ್ಮಾಂಡವನ್ನು, ಒಂದೇ ಆದ ಆತನ ಒಂದೊಂದು ರೋಮಕೂಪವೂ ಬ್ರಹ್ಮಾಂಡ ವನ್ನು ಸ್ವಸಾಮರ್ಥ್ಯದಿಂದ ಆಶ್ರಯವಿತ್ತು, ಧರಿಸುತ್ತದೆ; ಭೂತಭವಿಷ್ಯತ್ಕಾಲಗಳಲ್ಲಿ ಸೃಷ್ಟವಾಗುವ ಬ್ರಹ್ಮಾಂಡಗಳು ಅಸಂಖ್ಯಗಳಾದ್ದರಿಂದಲೂ, ಶ್ರೀಹರಿಯು ಅನಂತ ಕೋಟಿ ಬ್ರಹ್ಮಾಂಡನಾಯಕನು; ತ್ರಿಕಾಲಗಳ ಎಲ್ಲ ಬ್ರಹ್ಮಾಂಡಗಳೂ, ಸದಾ ಶ್ರೀಹರಿಯ ಅನಂತರೂಪಗಳಲ್ಲಿ, ಅವುಗಳ ಅನಂತ ರೋಮಕೂಪಗಳಲ್ಲಿ ಸ್ಥಿತವಾಗಿರುತ್ತವೆ; ಶ್ರೀ ಹರಿಗೆ ಕಾಲವ್ಯವಧಾನವೆಂಬುದಿಲ್ಲ; ಒಂದು ದೇಶದಲ್ಲಿರುವ ಒಂದೇ ವಸ್ತುವನ್ನು, ನಾನಾ ದೇಶಗಳಲ್ಲಿ ಬಹುತ್ವೇನ ಸ್ಥಾಪಿಸುವ ಸಾಮರ್ಥ್ಯವೂ ಆತನಲ್ಲಿದೆ; ಹೀಗೆ ದೇಶ ಕಾಲಾತಿಗನೂ, ಅವುಗಳ ನಿಯಾಮಕನೂ ಆದ ಶ್ರೀಹರಿಯ ಲೋಕವಿಲಕ್ಷಣ ವಿರುದ್ಧಾ ನಂತ ಮಹಾತ್ಮ್ಯೆಯು ರಮಾದಿಗಳಿಗೂ ಮನೋವಾಗಗೋಚರವಾಗಿದೆ; ಅನ್ಯರಲ್ಲಿ ಈ ಮಹಾತ್ಮ್ಯೆಯ ನಿರೂಪಣೆಗಿಂತ ಮೂಕತ್ವವೇ ಶೋಭಿಸುತ್ತದೆ.

ಹಿ [1]–ಪ್ರಾಕೃತವಲ್ಲವೆಂಬುದು ಶಾಸ್ತ್ರಸಿದ್ಧವಿದೆ; ಯತ್ರ–ಯಾವ ಭಗವಂತನಲ್ಲಿ (ಭಗವಂತನ ಸ್ವರೂಪದಲ್ಲಿ ಮತ್ತು ಆತನ ವಾಸಸ್ಥಾನಗಳಾದ ವೈಕುಂಠಾದಿಗಳಲ್ಲಿ), ಮಾಯಾ–ಪ್ರಕೃತಿಯು, ನ ಶ್ರೂಯತೇ – ಕೇಳಿಬರುವುದಿಲ್ಲವೋ (ಅದರ ಹೆಸರಿಲ್ಲವೋ), ತತ್ರ–ಅಲ್ಲಿ, ಸತ್ವಾದೇಃ–ಪ್ರಕೃತಿಯ ವಿಕಾರಗಳಾದ ಸತ್ವಾದಿ ಗುಣಗಳ, ಕಥಾ–ನಿರೂಪಣೆಯು (ಇರುವುದೆಂದು ಹೇಳುವುದು), ಕಾ–ಎಲ್ಲಿಂದ? (ಸತ್ವಾದಿಗಳು ಸುತರಾಂ ಇಲ್ಲವೆಂದರ್ಥ).

**ಸ್ವಕಾರ್ಯೈಃ ಸಹ ಮಾಯಾ ಯದ್ರೋಮಕೂಪಂ ನ ಪೂರಯೇತ್।**
**ತಸ್ಯಾವ್ಯಾಪ್ತಂ ಶರೀರಂ ತಚ್ಚಿದ್ರೂಪಂ ನ ಜಡೋದ್ಭವಂ ॥ ೩೯೯ ॥**

ಯದ್ರೋಮಕೂಪಂ – ಯಾವ ನಾರಾಯಣನ ರೋಮಕೂಪವನ್ನೂ, ಸ್ವಕಾರ್ಯೈಃ ಸಹ – ತನ್ನ (ಪ್ರಕೃತಿಯ) ಕಾರ್ಯಗಳಾದ (ವಿಕಾರಗಳಾದ) ಮಹದಾದಿಗಳಿಂದ ಸಹಿತವಾದ, ಮಾಯಾ–ಪ್ರಕೃತಿಯು, ನ ಪೂರಯೇತ್–

---

ಹೇಳಲೇನು? (೩೯೮). ತನ್ನ ವಿಕಾರಗಳಿಂದ ಸಹಿತವಾದ ಅನಂತ ವ್ಯಾಪ್ತಿಯ ಪ್ರಕೃತಿಯೂ, ಭಗವಂತನ ಒಂದು ರೋಮಕೂಪವನ್ನು ತುಂಬದಿರಲು, ಅಂತಹ ಭಗವಂತನ ದೇಹವನ್ನು ಜಡದಿಂದ ಹುಟ್ಟಿದ್ದೆನ್ನಬಹುದೇ?

---

[1] ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ।
ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ।
ಎಂಬ (ಈ ಹಿಂದೆ ಪ್ರಸಕ್ತವಾಗಿ ಭಾವಾರ್ಥದ ವಿವರಣೆಯೂ ಬಂದಿರುವ) ಭಾಗವತ ಶ್ಲೋಕಗಳು, ಪ್ರಕೃತಿಯಾಗಲಿ, ಅದರ ವಿಕಾರಗಳಾದ ಸತ್ವ, ರಜಸ್ತಮೋಗುಣಗಳ ಸ್ಪರ್ಶವಾಗಲಿ ಭಗವಂತನಿಗಿರುವುದಿಲ್ಲವೆಂದು ಹೇಳುತ್ತದೆ; 'ಮಹಾಕಾಯ'ನೆಂಬುದರಿಂದ ಪೂರ್ಣಜ್ಞಾನಾನಂದ ದೇಹವುಳ್ಳವನೆಂದೂ ಸಿದ್ಧವಾಗುತ್ತದೆ; 'ಕ' ಶಬ್ದವು ಸುಖವಾಚಕವು, 'ಅಯ' ಪದವು ಜ್ಞಾನವಾಚಕವು; ಕಾಯನೆಂದರೆ ಜ್ಞಾನಾನಂದ ಸ್ವರೂಪನು, ಮಹಾಕಾಯನೆಂದರೆ, ಪೂರ್ಣಜ್ಞಾನಾನಂದ ದೇಹಿಯೆಂದರ್ಥ. ಹೀಗೆಯೇ 'ಶ' ಪದದಿಂದ ಸುಖವೂ, 'ರ' ಪದದಿಂದ ಕ್ರೀಡೆಯೂ, 'ಈರ' ಪದೋಕ್ತಜ್ಞಾನವೂ ಹೇಳಲ್ಪಡುವುದರಿಂದ, ಶರೀರನೆಂದರೂ ಅದೇ ಅರ್ಥವೇ ಸಿದ್ಧಿಸುತ್ತದೆ; ಈ ಅರ್ಥದಲ್ಲಿಯೇ ಶ್ರುತಿಯಲ್ಲಿ 'ಶರೀರ' ಶಬ್ದಪ್ರಯೋಗವಿರುತ್ತದೆಂದು ತಿಳಿಯಬೇಕು; 'ತನ್ವಾವೃಧಾನಾ' ಎಂಬ ಶ್ರುತಿಯೂ, ಸರ್ವವ್ಯಾಪಕನಾದ ಮಹಾಕಾಯನೆಂದು ವರ್ಣಿಸುತ್ತದೆ.

ತುಂಬಲಾರದೋ (ಪ್ರಕೃತಿ ವಿಕಾರಗಳು ವ್ಯಾಪ್ತಗಳಾದರೂ ಆ ಮೊತ್ತದ ಪರಿಮಾಣವು ಅಲ್ಪವೇ ಆದ್ದರಿಂದ), ತಸ್ಯ–ನಾರಾಯಣನ, ಶರೀರಂ–ದೇಹವು, ಅವ್ಯಾಪ್ತಂ–(ಶ್ರುತಿವಿರುದ್ಧವಾದ) ಅಲ್ಪವ್ಯಾಪ್ತಿಯುಳ್ಳದ್ದೆಂದು (ಪ್ರಾಪ್ತವಾಗುತ್ತದೆ); ತತ್ – ಆದ್ದರಿಂದ[1] (ನಾರಾಯಣನ ದೇಹವು), ಚಿದ್ರೂಪಂ – ಜ್ಞಾನಾತ್ಮಕವೇ, ನ ಜಡಾತ್ಮಕಂ–ಜಡಸ್ವರೂಪವಾದುದಲ್ಲ.

**ಸುಖಜ್ಞಾನಸುಖಸ್ಪರ್ಶಃ ಸುಖಗಂಧಃ ಸುಖಾಕೃತಿಃ ।**
**ನಖಾದಿಸ್ವಶಿಖಾಂತಂ ಚ ಸುಖತೇಜೋಮಯಃ ಪ್ರಭುಃ ॥ ೪೦೦ ॥**

ಸುಖ (ಆನಂದ) ಸ್ವರೂಪನೆಂಬುದನ್ನು ವಿಸ್ತಾರದಿಂದ ನಿರೂಪಿಸುತ್ತಾರೆ :–

ಸುಖಜ್ಞಾನಸುಖಸ್ಪರ್ಶಃ – ಆನಂದಮಯವಾದ ಜ್ಞಾನ, ಸ್ಪರ್ಶವೂ, ಸುಖಗಂಧಃ – ಸುಖಾತ್ಮಕ ಗಂಧವೂ, ಸುಖಾಕೃತಿಃ – ಸುಖಾತ್ಮಕ ರೂಪವೂ, ನಖಾದಿಸ್ವಶಿಖಾಂತಂ ಚ – ಕಾಲುಗುರಿನಿಂದ ತಲೆಯ ತುದಿಯವರೆಗೆ, ಸುಖ-ತೇಜೋಮಯಃ – ಸುಖರೂಪವೂ ತೇಜೋರೂಪವೂ ಆದ (ಸುಖಮಯಾ-ಕಾರವು ಅನುಭವಗೋಚರವಲ್ಲದ್ದರಿಂದ ತೇಜೋಮಯವೂ ಆದುದೆಂದೂ

---

ಚಿದ್ರೂಪವೇ ಸರಿ (೩೯೯). ಸುಖಸ್ವರೂಪದ ಆಕಾರವು ಅನುಭವಗೋಚರ ವಲ್ಲವೆಂದು ಶಂಕಿಸುವ ಕಾರಣವಿಲ್ಲ; ಭಗವಂತ, ಜ್ಞಾನವೂ ಸುಖಾತ್ಮಕವೇ; ಒಂದೊಂದು ಗುಣವೂ ಸರ್ವಗುಣಾತ್ಮಕವೂ (ಸರ್ವಗುಣರೂಪವೂ) ಆಗಿದೆ; ಸ್ಪರ್ಶ, ಗಂಧ, ಆಕಾರ, ನಖಾದಿ ಶಿಖಾಂತವಾದ ಸರ್ವಾವಯವಗಳೂ,

---

[1] ಬ್ರಹ್ಮಾಂಡದೊಳಗೆ ಹಾಗೂ ಬ್ರಹ್ಮಾಂಡದ ಹೊರಗೆ ಅಪಾರ ವಿಸ್ತಾರದ ದೇಹವುಳ್ಳವನು, ಭಗವಂತನು; ಜಡದೇಹಕ್ಕೆ ಉಪಾದಾನವು, ಪ್ರಕೃತಿಯ ವಿಕಾರಗಳಾದ ಮಹದಹಂಕಾರಾದಿ ತತ್ವಗಳು; 'ತಮಸಃ ಪರಸ್ತಾತ್' ಇತ್ಯಾದಿ ವೇದವಾಕ್ಯಗಳು, ಪ್ರಕೃತಿ ಇಲ್ಲದ ಸ್ಥಲದಲ್ಲಿ ವ್ಯಾಪ್ತವಾದ ದೇಹವುಳ್ಳವನೆಂದು, ಭಗವಂತನನ್ನು ವರ್ಣಿಸುತ್ತವೆ; ಉಪಾದಾನವಿಲ್ಲದ ಸ್ಥಲದಲ್ಲಿ ಉಪಾದೇಯವು (ಅದರಿಂದ ರಚಿತವಾದ ದೇಹವು) ಇರಲು ಶಕ್ಯವಿಲ್ಲದ್ದರಿಂದ, ಭಗವಂತನ ಒಂದು ರೋಮಕೂಪವನ್ನೂ ತುಂಬದ ಪ್ರಕೃತಿಯು, ಭಗವಂತನ ವ್ಯಾಪ್ತವಾದ ದೇಹಕ್ಕೆ ಉಪಾದಾನವಾಗಲಾರದೆಂಬ ಯುಕ್ತಿಯಿಂದ, ಬ್ರಹ್ಮಾಂಡದ ಒಳಹೊರಗೆ ಸರ್ವತ್ರ ವ್ಯಾಪ್ತನಾದ ಭಗವಂತನು ಜಡದೇಹವುಳ್ಳವನಲ್ಲವೆಂದೂ, ಚಿದ್ರೂಪನಾಗಿ, ಸರ್ವತ್ರ ಪ್ರಾಕೃತ ಲೇಪರಹಿತನಾಗಿರುವನೆಂದೂ ಸಾಧಿಸಿರುವರು.

ಹೇಳಲಾಗಿದೆ), ಪ್ರಭುಃ – (ಅಚಿಂತ್ಯಶಕ್ತಿಯುಳ್ಳ) ಸರ್ವನಿಯಾಮಕನಾಗಿದ್ದಾನೆ.[1]

**ಅಲೌಕಿಕಶರೀರೇಷು ವಿದ್ಯತೇ ಹ್ಯಶರೀರತಾ ।**
**ಯಥಾಽದೃಶ್ಯಶರೀರೋತ್ಥದೈವೀವಾಗಶರೀರವಾಕ್ ॥ ೪೦೧ ॥**

ಭಗವಂತನು ಅಶರೀರನೆಂದು ಹೇಳುವ ಶ್ರುತಿಸಮರ್ಥನೆಗಾಗಿ ದೃಷ್ಟಾಂತವನ್ನು ಹೇಳುತ್ತಾರೆ:—

ಅದೃಶ್ಯಶರೀರೋತ್ಥದೈವೀವಾಕ್ – ಕಾಣದಿರುವ ದೇವಶರೀರದಿಂದ ಹುಟ್ಟಿದ ವಾಣಿಯು (ದೈವೀವಾಣಿಯು), ಯಥಾ–ಹೇಗೆ (ಸರ್ವಥಾ ಶರೀರವಿಲ್ಲದಿದ್ದರೆ ಉಚ್ಚಾರವೇ ಕೂಡುವುದಿಲ್ಲವಾದ್ದರಿಂದ), ಅಶರೀರವಾಕ್–(ಆಕಾಶವಾಣೀ) ಅಶರೀರವಾಣಿಯೆಂದು ಹೇಳಲ್ಪಡುವುದೋ (ತಥಾ) (ಹಾಗೆ), ಅಲೌಕಿಕ ಶರೀರೇಷು–ಜ್ಞಾನಾನಂದಾತ್ಮಕವಾದ ದೇಹಗಳಲ್ಲಿ (ಲೋಕಾನುಭವಸಿದ್ಧವಲ್ಲದ ದೇಹವಿಷಯದಲ್ಲಿ), ಅಶರೀರತಾ ಶರೀರವಿಲ್ಲದ್ದೆಂಬುದು, ವಿದ್ಯತೇ ಹಿ–ಯೋಗ್ಯವಾಗುತ್ತದೆಯಷ್ಟೆ.

---

ಸುಖಾತ್ಮಕವೇ; ಆ ಎಲ್ಲವೂ ಅಲೌಕಿಕ ತೇಜೋರೂಪವೂ ಆಗಿವೆ—ಅತ ಏವ ಅವುಗಳ ಭಾವನೆಗೆ ಯಾವ ತೊಂದರೆಯೂ ಇಲ್ಲ (೪೦೦). ಭಗವಂತನು ಅಶರೀರನೆಂದು ಹೇಳುವ ಶ್ರುತಿಯು ದೇಹಸಾಮಾನ್ಯವನ್ನು (ಎಲ್ಲ ದೇಹವನ್ನೂ) ನಿಷೇಧಿಸುತ್ತದೆಂದು ತಿಳಿಯಬೇಕಾಗಿಲ್ಲ; ಕಣ್ಣಿಗೆ ಕಾಣದ ದೇವಶರೀರದಿಂದ ಉಚ್ಚರಿಸಲಾದ ವಾಣಿಯನ್ನು ಅಶರೀರವಾಣೀ (ಆಕಾಶವಾಣೀ) ಎಂದು ಕರೆಯುವಂತೆ, ಭೌತಿಕ ದೃಗ್ಗೋಚರಶರೀರವಿಲ್ಲವೆಂದು ಮಾತ್ರ ತಿಳಿದು, ಭಗವಂತನು ಅಲೌಕಿಕವಾದ ದೇಹವುಳ್ಳವನೆಂದೇ ತಿಳಿಯಬೇಕು (೪೦೧).

---

[1] ತೇಜಸ್ಸೂ ಅಪ್ರಾಕೃತವೇ ಅದರೂ ತೇಜಸ್ಸು ಅನುಭವಗೋಚರವಿದೆ; 'ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ । ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ।' ಎಂಬ ಗೀತೋಕ್ತ, ಸಹಸ್ರ ಸೂರ್ಯರು ಏಕಕಾಲಕ್ಕೆ ಉದಿತರಾದರೆ ಉಂಟಾಗುವ ಪ್ರಕಾಶದಂತಿರುವ ತೇಜಸ್ಸು, ಎಂದು ವರ್ಣಿತವಾದ ತೇಜಸ್ಸು, ಲೌಕಿಕವಲ್ಲ–ಅಪ್ರಾಕೃತವೇ ಸರಿ.

**ವಿಲಕ್ಷಣಶರೀರತ್ವಾನ್ನ ತದ್ದುಃಖಾದಿಕಾರಣಂ ।**
**ಅಜೀರ್ಣತಾ ಮನುಷ್ಯಾನ್ನಾದ್ದೇವಾನ್ನಾದಜರೋಽಮರಃ ॥ ೪೦೨ ॥**

ದೇಹವಿದ್ದರೆ ದುಃಖವೂ ಇರಲಿ, ಎಂಬುದು ಸರಿಯಲ್ಲವೆನ್ನುತ್ತಾರೆ :—

ತತ್—ಭಗವಂತನ ಶರೀರವು, ವಿಲಕ್ಷಣಶರೀರತ್ವಾತ್—ವಿಲಕ್ಷಣ (ಲೋಕ ದಲ್ಲಿರದ—ಅಲೌಕಿಕ ಅಥವಾ ವಿಚಿತ್ರ) ದೇಹವಾದ್ದರಿಂದ, ದುಃಖಾದಿಕಾರಣಂ—ದುಃಖಾದಿ (ಭಯರೋಗಾದಿ) ಕಾರಣವು, ನ—ಅಲ್ಲ; (ದೃಷ್ಟಾಂತವನ್ನು ಹೇಳುತ್ತಾರೆ); ಮನುಷ್ಯಾನ್ನಾತ್—ಮನುಷ್ಯರ ಅನ್ನದಿಂದ, ಅಜೀರ್ಣತಾ—ಅಜೀರ್ಣ (ತಜ್ಜನ್ಯನಾನಾರೋಗಾದಿಗಳಿಗೆ) ಕಾರಣವಾಗುತ್ತದೆ; ದೇವಾನ್ನಾತ್—ದೇವತೆಗಳ ಅನ್ನವಾದ ಅಮೃತದಿಂದ, ನ—ರೋಗಾದಿ ಭಯವಿಲ್ಲ; (ದೇವಾನ್ನಾತ್ — ಅಮೃತದಿಂದ), ಅಜರಃ — ಮುಪ್ಪಿಲ್ಲದವನೂ, ಅಮರಃ — ಮರಣವಿಲ್ಲದವನೂ (ಆಗುವನಷ್ಟೆ).

**ಕರ್ತೃತಾ ನ ಚಿತಶ್ಚೇತ್ಸ್ಯಾದಕೃತಾಗಮಸಂಕಟಂ ।**
**ಕರ್ತೃತಾ ಮಿಲಿತೇ ಚೇತ್ಸ್ಯಾದುಭಯೋರಪಿ ಕರ್ತೃತಾ ॥ ೪೦೩ ॥**

ಚಿತಃ—ಚೇತನನಿಗೆ, ಕರ್ತೃತಾ—ಕರ್ತೃತ್ವವು (ಕರ್ಮಕರಣಶಕ್ತಿಯು—ಭೌತಿಕ ದೇಹೇಂದ್ರಿಯಗಳಲ್ಲದೇ), ನ — ಯುಕ್ತವಲ್ಲ, ಚೇತ್ — ಎಂದರೆ,

---

ಶರೀರವಿದ್ದರೆ ದುಃಖಾದಿಗಳೂ ಇರಬೇಕೆಂಬ ಊಹೆಯೂ ಸರಿಯಲ್ಲ; ಆ ಶರೀರವು ವಿಲಕ್ಷಣವಾದುದು—ದಿವ್ಯವಾದುದು; ಮನುಷ್ಯಾನ್ನ ಭೋಜನ ದಿಂದ ಅಜೀರ್ಣಾದಿ ರೋಗಗಳಿಗೆ ಕಾರಣವಾದರೆ, ದೇವಾನ್ನವಾದ ಅಮೃತ ಭೋಜನದಿಂದ, ಜರಾಮರಣರಾಹಿತ್ಯವೇ ಲಭಿಸುವುದಿಲ್ಲವೇ ? ದುಃಖಾದಿ ದೋಷಗಳಿಗೆ ಶರೀರವು ಕಾರಣವಲ್ಲ ; ಅದರ ಉಪಚಯ (ವೃದ್ಧಿ—ಬೆಳವಣಿಗೆ) ಕಾರಣವಾದ ಆಹಾರವು ಕಾರಣವು. ಭಗವಂತನು ನಿರನ್ನನೆಂದು, ಈ ಹಿಂದೆ 'ದ್ವಾಸುಪರ್ಣಾ' ಶ್ರುತಿಯು ನಿರ್ಣಯಿಸಿ ಹೇಳಿದೆ (೪೦೨). ಶುಭಾಶುಭ ಕರ್ಮಾನುಸಾರವಾದ ಫಲವನ್ನು ಹೊಂದಿ ಭೋಗಿಸುವವನು, ಕರ್ಮಕರ್ತ ನಾದ ಜೀವನೇ ಆಗಿದ್ದಾನೆ; ಜೀವನು ಕರ್ತನಲ್ಲದಿದ್ದರೆ, ಬಹುಸಂಕಟಪರಿಸ್ಥಿತಿ ಯುಂಟಾಗುತ್ತದೆ; ಚೇತನನಿಗೆ ಕರ್ತೃತ್ವವು ದೇಹೇಂದ್ರಿಯಾದಿಗಳಿಂದ ಕೂಡಿ ದ್ದಾಗ ಮಾತ್ರವೇ, ಎಂದರೆ, ಚೇತನನಿಗೂ, ದೇಹಾದಿಗೂ (ಉಭಯಕ್ಕೂ)

ಅಕೃತಾಗಮಸಂಕಟಂ – ತನ್ನಿಂದ ಮಾಡಲ್ಪಡದ ಸಾಧನಕ್ಕೆ ಮೋಕ್ಷರೂಪ ಫಲಪ್ರಾಪ್ತಿಯು ಹೇಗೆಂಬ ಸಂಕಟವು (ತೊಂದರೆಯು), ಸ್ಯಾತ್–ಉಂಟಾಗುತ್ತದೆ; ಮಿಲಿತೇ – ಚೇತನ ಮತ್ತು ದೇಹಾದಿಗಳು ಸೇರಿದಲ್ಲಿ (ಕೂಡಿದಲ್ಲಿ), ಕರ್ತೃತಾ ಚೇತ್–ಕರ್ತೃತ್ವವೆಂದರೆ, ಉಭಯೋಃ ಅಪಿ – ಚೇತನ ಮತ್ತು ದೇಹಾದಿ, ಎರಡಕ್ಕೂ, ಕರ್ತೃತಾ–ಕರ್ತೃತ್ವವು, ಸ್ಯಾತ್–ಉಂಟಾಗಬೇಕಾಗುತ್ತದೆ (ವಿಶಿಷ್ಟನಲ್ಲಿ—ದೇಹವುಳ್ಳ ಜೀವನಿಗೆ, ಕರ್ತೃತ್ವಶಕ್ತಿಯನ್ನು ಹೇಳಿದರೆ, ವಿಶೇಷ್ಯನಾದ ಜೀವನಲ್ಲಿ ಹಾಗೂ ದೇಹೇಂದ್ರಿಯಾದಿಗಳಲ್ಲಿ ಕರ್ತೃತ್ವವು ಉಂಟೆಂದು ಪ್ರಾಪ್ತವಾಗುತ್ತದೆ).[1]

**ವಿಶಿಷ್ಟಸ್ಯ ಹಿ ಕರ್ತೃತ್ವೇ ವಿಶೇಷ್ಯಸ್ಯಾಪಿ ಕರ್ತೃತಾ ।**
**ವಸ್ತುತಃ ಕರ್ತೃತಾಂ ಕೋ ವಕ್ತ್ಯನಾತ್ಮನಿ ಯುಕ್ತಿಮಾನ್ ॥ ೪೦೪ ॥**

ಅದೇ ವಿಷಯವನ್ನು ಉಪಪಾದಿಸುತ್ತಾರೆ:—

ವಿಶಿಷ್ಟಸ್ಯ – ದೇಹಿಯಾದ ಜೀವನಿಗೆ, ಕರ್ತೃತ್ವೇ – ಕರ್ತೃತ್ವವಿದ್ದಲ್ಲಿ, ವಿಶೇಷಸ್ಯ ಅಪಿ – ದೇಹಕ್ಕೂ, ಕರ್ತೃತಾ – ಕರ್ತೃತ್ವವು, ಹಿ – ಇರಬೇಕಷ್ಟೆ; ವಸ್ತುತಃ–(ಆದರೆ) ಸ್ವಾಭಾವಿಕವಾಗಿ, ಕರ್ತೃತಾಂ–ಕರ್ತೃತ್ವವನ್ನು, ಕಃ–ಯಾವ, ಯುಕ್ತಿಮಾನ್–ಯುಕ್ತಿಯ ಸ್ಥಾನವನ್ನರಿತವನು, ಅನಾತ್ಮನಿ–ಜಡ ದೇಹದಲ್ಲಿ, ವಕ್ತಿ–ಹೇಳುತ್ತಾನೆ? (ಘಟವು ಚಲಿಸುತ್ತದೆ, ಇತ್ಯಾದಿ ವ್ಯವಹಾರದಲ್ಲಿ, ಕೇವಲ ಔಪಚಾರಿಕ ಕ್ರಿಯಾತ್ವವು ಘಟಕ್ಕೆ ಹೇಳಲಾಗುತ್ತದೆ—ಲೋಕಾನುಭವವನ್ನಾಶ್ರಯಿಸಿದ ದೋಷರಹಿತ ಯುಕ್ತಿಯೂ ಸಹ, ಯಾವ

---

ಕರ್ತೃತ್ವವನ್ನು ತಿಳಿಯಬೇಕಾಗುತ್ತದೆ (೪೦೩). ವಿಶಿಷ್ಟನಿಗೆ (ದೇಹಿಗೆ) ಕರ್ತೃತ್ವವನ್ನು ಹೇಳಿದರೆ, ವಿಶೇಷಕ್ಕೂ (ದೇಹಕ್ಕೂ) ಕರ್ತೃತ್ವವು ಇರಬೇಕಾಗುತ್ತದೆ; ವಸ್ತುತಃ ಜಡವಾದ ದೇಹಕ್ಕೆ ಯಾವ ವಿವೇಕಿಯೂ

---

[1] ಕರ್ತೃತ್ವವೆಂಬುದು ಧರ್ಮವಾಚಕವು–ವಿಶೇಷಣವು; ಜೀವಚೇತನನು ವಿಶೇಷ್ಯನು—ಆ ಧರ್ಮವುಳ್ಳವನು; ಈ ವಿಶೇಷಣ ವಿಶೇಷ್ಯಗಳೆರಡೂ ಉಳ್ಳದ್ದು ವಿಶಿಷ್ಟವು; ದೇಹಿಯಾದ ಜೀವನು, ವಿಶಿಷ್ಟನು; ದೇಹೇಂದ್ರಿಯಾದಿಗಳು ವಿಶೇಷಣ; ದೇಹಗತ ಚೇತನನು (ಜೀವನು) ವಿಶೇಷ್ಯನು.

ಪ್ರಮೇಯವನ್ನು ನಿಶ್ಚಯಿಸಿಕೊಳ್ಳಲು ಅವಶ್ಯಕವೆಂಬುದನ್ನರಿತವನು, ಯುಕ್ತಿಮಾನ್, ಎನಿಸುವನು).

**ಮರ್ತ್ಯೈರ್ವರ್ತ್ಯೇ ಯತ್ಸ್ವತಂತ್ರಃ ಕರ್ತೇತ್ಯಾಹುರ್ವಿಪಶ್ಚಿತಃ॥ ೪೦೫॥**

ಮರ್ತ್ಯೈಃ–ಮನುಷ್ಯರಿಂದ, ವರ್ತ್ಯೇ–ಪ್ರವರ್ತನೆಯಲ್ಲಿ (ಗಮನಾದಿ ಕ್ರಿಯಾವಿಷಯಗಳಲ್ಲಿ), ಯತ್–ಯಾವ ಕಾರಣದಿಂದ, ವಿಪಶ್ಚಿತಃ–ಜ್ಞಾನಿಗಳು (ವಿವೇಕಿಗಳು), ಸ್ವತಂತ್ರಃ – ಸ್ವತಂತ್ರನಾದವನು (ಕರ್ಮಸಾಧನ ಸಾಮಗ್ರಿಗಳನ್ನು ಪ್ರೇರಿಸಿ, ಸ್ವೇಚ್ಛಾಧೀನನಾಗಿ ವರ್ತಿಸುವ ಜೀವನು), ಕರ್ತಾ ಇತ್ಯಾಹುಃ–ಕರ್ತನೆಂದು ಹೇಳುವರು (ಹಸ್ತಪಾದಾದಿಗಳು, ದೇವದತ್ತಾದಿ ವ್ಯಕ್ತಿಗಳ ಕರಣಗಳೆಂಬ ವಿವಕ್ಷೆಯಿಂದ ದೃಷ್ಟಾಂತದಲ್ಲಿ ಪ್ರಸಕ್ತವೆಂದು ತಿಳಿಯಬೇಕು).

**ಯಥಾ ದಂಡಮೃದಾದ್ಯರ್ಥೈರ್ವಿಶಿಷ್ಟೋ ಲಕ್ಷಿತೋಽಪಿ ವಾ ।**
**ಕುಲಾಲ ಏವ ಘಟಕೃತ್ತೇ ಸರ್ವೇ ಕಾರಕಾಂತರಂ ॥ ೪೦೬ ॥**
**ದೇಹಾಂತಃಕರಣಾದ್ಯೈಶ್ಚ ವಿಶಿಷ್ಟೋ ಲಕ್ಷಿತೋಽಪಿ ವಾ ।**
**ಜೀವ ಏವ ತಥಾ ಕರ್ತಾ ತತ್ಸರ್ವಂ ಕಾರಕಾಂತರಂ ॥ ೪೦೭ ॥**

ಇದನ್ನೇ ಉದಾಹರಣದ್ವಾರಾ ತೋರಿಸುತ್ತಾರೆ :—

ದಂಡಮೃದಾದ್ಯರ್ಥೈಃ – (ಘಟಕಾರಣಗಳಾದ) ಮಣ್ಣು ಮೊದಲಾದ ವಸ್ತುಗಳಿಂದ, ವಿಶಿಷ್ಟಃ– ಅವುಗಳಿಂದ ಸಹಿತನಾದ ಕುಂಬಾರನು, ಲಕ್ಷಿತಃ ಅಪಿ–ಸೂಚಿತನಾದರೂ, ಕುಲಾಲಃ ಏವ – ಕುಂಬಾರನೇ, ಯಥಾ – ಹೇಗೆ,

---

ಕರ್ತೃತ್ವವನ್ನು ತಿಳಿಯುವುದಿಲ್ಲ; ಜಡವು ಸ್ವಭಾವದಿಂದಲೇ ಕರ್ತೃತ್ವವಿಲ್ಲದ ವಸ್ತುವಾಗಿದೆ (೪೦೪). ಗಮನಾದಿ ವಿವಿಧ ಕ್ರಿಯೆಗಳನ್ನು, ತನ್ನ ಅಧೀನಗಳಾದ, ಆಯಾ ಕರ್ಮಸಾಮಗ್ರಿಗಳನ್ನು ಪ್ರೇರಿಸಿ, ಪ್ರವರ್ತಿಸುವ (ತನ್ನ ಇಚ್ಛೆಯಂತೆ ನಡೆಸಿಕೊಳ್ಳುವ) ಜೀವನೇ (ಮನುಷ್ಯನೇ) ಕರ್ತನೆಂದು ತಿಳಿಯುತ್ತಾರೆ (ಜೀವನ ಕರ್ತೃತ್ವವು, ಯದ್ಯಪಿ ಭಗವದಧೀನವಾಗಿಯೇ ಪ್ರವೃತ್ತವಾಗುವುದೆಂಬುದನ್ನು ಮರೆಯಲಾಗದು) (೪೦೫). ಮಣ್ಣು, ಕೋಲು, ಚಕ್ರ ಮೊದಲಾದವುಗಳಿಂದ, ಗಡಿಗೆಯನ್ನು ನಿರ್ಮಾಣ ಮಾಡುವ

ಘಟಕೃತ್—ಗಡಿಗೆಯ ನಿರ್ಮಾಣಕರ್ತನೋ, ತೇ ಸರ್ವೇ—ಮಣ್ಣು, ದಂಡ, ಚಕ್ರ ಮೊದಲಾದವುಗಳೆಲ್ಲವೂ, ಕಾರಕಾಂತರಂ—ಕರ್ತೃಭಿನ್ನಕಾರಕಗಳೋ, ತಥಾ—ಹಾಗೆ (ಕುಂಬಾರನಂತೆ), ದೇಹಾಂತಃಕರಣಾದ್ಯೈಃ—ದೇಹ ಮನಸ್ಸು ಇತ್ಯಾದಿಗಳಿಂದ, ವಿಶಿಷ್ಟಂ – ಯುಕ್ತನಾದ ಜೀವನು, ಲಕ್ಷಿತಃ ಅಪಿ ವಾ– ಸೂಚಿತನೇ ಆದರೂ, ಜೀವಃ ಏವ – (ನಿಮಿತ್ತಕಾರಣನಾದ) ಜೀವನೇ, ಕರ್ತಾ—ಕರ್ತನು ; ತತ್ಸರ್ವಂ—ದೇಹಾದಿ ಎಲ್ಲವೂ, ಕಾರಕಾಂತರಂ—ಕಾರ್ಯ ಸಾಧಕ ಸಾಮಗ್ರಿ ಮಾತ್ರವೇ (ಆಗಿವೆ).

**ಮನೋ ಹಿ ಕಾರಣಂ ತಸ್ಯ ದೇಹೋಧಿಕರಣಂ ಸ್ಮೃತಂ ।**
**ಕರ್ತೃತ್ವೇ ಕೋಸ್ತಿ ದಾಯಾದೀ ಮಾಯಾಪಿ ಕರಣಾಂತರಂ ॥ ೪೦೮ ॥**

ಇದೇ ವಿಷಯವನ್ನು ವಿಶದಗೊಳಿಸುತ್ತಾರೆ :—

ತಸ್ಯ—ಚೇತನನಿಗೆ (ಜೀವನಿಗೆ), ಮನಃ—ಮನಸ್ಸು, ಕಾರಣಂ—ಮುಖ್ಯ ಸಾಧನವು (ಕರ್ಮಕರಣದಲ್ಲಿ ಪ್ರಧಾನಕಾರಕವು); ಹಿ—ಹೀಗೆಂಬುದು ಸಕಲ ರಿಗೂ ಅನುಭವಸಿದ್ಧವಾಗಿದೆ; ದೇಹಃ—ಈ ದೇಹವು, ಅಧಿಕರಣಂ—ಆಶ್ರಯ ಸ್ಥಾನವು (ಜೀವನು ದೇಹದಲ್ಲಿ ಹೃದ್ಗುಹಾವಾಸಿಯಾಗಿರುವುದರಿಂದ, ದೇಹ ದಲ್ಲಿದ್ದೇ ಶುಭಾಶುಭ ಸರ್ವ ಕರ್ಮಗಳನ್ನು ಮಾಡುತ್ತಾನಷ್ಟೆ), ಸ್ಮೃತಂ—

---

ಕುಂಬಾರನು, ಸಾಕ್ಷಾತ್ತಾಗಿ ಕರ್ತನೆಂದು ತೋರದೇ, ಸೂಚಿತನು ಮಾತ್ರ ನಾಗಿರುವನೋ, ಹಾಗೆ, ದೇಹಾಂತಃಕರಣಾದಿಗಳಿಂದ ವಿಶಿಷ್ಟನಾದ ಜೀವನು, ಕರ್ಮಕರ್ತನೆಂದು ಸೂಚಿತನು ಮಾತ್ರನೆಂದು ತಿಳಿಯಬೇಕು; (ಸಾಕ್ಷಾತ್ತಾಗಿ ಕರ್ಮವು ಸಂಭವಿಸುವುದು, ಮನಸ್ಸು, ಇಂದ್ರಿಯಗಳು ಮತ್ತು ಕರಚರಣಾದಿ ದೇಹದ ಅಂಗಗಳಿಂದ ಎಂದು ತೋರುತ್ತದೆ). ಮಣ್ಣು ಚಕ್ರಾದಿಗಳು ಘಟ ಸೃಷ್ಟಿರೂಪ ಕರ್ಮದಲ್ಲಿ ಕಾರಕ ಸಾಮಗ್ರಿಗಳು ಮಾತ್ರ; ಕುಂಬಾರನೇ ಕರ್ತ; ಅದರಂತೆ ದೇಹೇಂದ್ರಿಯಗಳು ಕರ್ಮಸಾಧನಗಳು; ಜೀವನು ಕರ್ತನು (೪೦೬—೪೦೭). ಜೀವನಿಗೆ, ಕರ್ಮಕರಣದಲ್ಲಿ ಮುಖ್ಯಸಾಧನವಾದುದು, ಮನಸ್ಸು; ದೇಹವು ಆಶ್ರಯಸ್ಥಾನವು; ಅಲ್ಲಿದ್ದೇ (ಹೃದ್ಗುಹೆಯಲ್ಲಿ ವಾಸ ವಾಗಿದ್ದೇ) ಸಕಲ ಶುಭಾಶುಭಾದಿ ಕರ್ಮಗಳನ್ನು ಮಾಡುತ್ತಾನೆ; ಜೀವನಿಷ್ಠ ವಾದ ಕರ್ತೃತ್ವದಲ್ಲಿ ಭಾಗಿಯಾದುದು ಯಾವುದೂ ಇಲ್ಲ; ಮಾಯೆಯೂ

(ಎಂದು) ತಿಳಿಯಲ್ಪಟ್ಟಿದೆ; ಕರ್ತೃತ್ವೇ–ಜೀವನಿಷ್ಠ ಕರ್ತೃತ್ವದಲ್ಲಿ, ದಾಯಾದೀ –ತಾನೂ ಏಕಾಂಶಭಾಗಿ ಎಂಬುವ, ಕೋಪಿ – ಯಾವನಾದರೂ (ಯಾವುದೊಂದು ವಸ್ತುವೂ), ಅಸ್ತಿ–ಇರುವುದೇ ? (ಇಲ್ಲ); ಮಾಯಾಪಿ–ಜೀವನನ್ನು ವಿವಿಧ ಕರ್ಮಗಳಲ್ಲಿ ಪ್ರೇರಿಸುವ, ಮಾಯಾ ಅಪಿ–ಮಾಯೆಯೂ (ಹೆಣ್ಣು, ಹೊನ್ನು, ಮಣ್ಣುಗಳ ಅಸಕ್ತಿಯೂ—ಅಥವಾ ಪ್ರಾಕೃತ ಗುಣಗಳೂ), ಕಾರಣಾಂತರಂ–ಸಾಧಕ ಸಾಮಗ್ರಿಯಲ್ಲದೇ ಕರ್ತೃಗಳಲ್ಲ.[1]

**ವಿಶಿಷ್ಟಾರ್ಥವಿಮರ್ಶೇಽಭೂದ್ಯತಶ್ಚಿನ್ಮಾತ್ರಕರ್ತೃತಾ ।**
**ಮುಸಲಾಚ್ಚ ತ್ವಚಂ ಕಶ್ಚಿನ್ಮೋಚಯೇತ್ತದ್ವಿಚಕ್ಷಣಃ ॥ ೪೦೯ ॥**

ಚಿನ್ಮಾತ್ರನಿಗೆ (ಜೀವನಿಗೆ) ಕರ್ತೃತ್ವವಿಲ್ಲೆಂದೂ, ಮಾಯಾ, ಅಂತಃಕರಣ, ದೇಹಾದಿಗಳಿಗೆ, ಮಾಯಾವಾದಿಯು ಹೇಳುವಂತೆ, ಕರ್ತೃತ್ವವಿರುತ್ತದೆಂಬ ವಾದವನ್ನು ನಿರಾಕರಿಸಿ, ಇವುಗಳಿಗೆ ಕೇವಲ ಕಾರಕಾಂತರತ್ವವನ್ನೂ (ಸಾಧನಗಳು ಮಾತ್ರವೆಂದೂ) ಜೀವನೇ ಕರ್ತನೆಂದೂ ಸಾಧಿಸಿದ ಕುಶಲತೆಯನ್ನು, ದೃಷ್ಟಾಂತವನ್ನು ನಿರೂಪಿಸಿ, ಪ್ರಶಂಸಿಸಿರುತ್ತಾರೆ:—

ವಿಶಿಷ್ಟಾರ್ಥವಿಮರ್ಶೇ – ದೇಹೇಂದ್ರಿಯಾದಿಗಳಿಂದ ಯುಕ್ತನಾದ ಆತ್ಮನ ವಿಮರ್ಶೆಯಲ್ಲಿ (ದೇಹಿಯ ವಿಚಾರದಲ್ಲಿ), ಯತಃ–ಯಾವ ಕಾರಣದಿಂದ, ಚಿನ್ಮಾತ್ರಕರ್ತೃತಾ–ಚೇತನನಿಗೆ ಮಾತ್ರವೇ ಕರ್ತೃತ್ವವು, ಅಭೂತ್–

---

ಸಹ, ಸಾಧನಸಾಮಗ್ರಿ ಮಾತ್ರವಲ್ಲದೇ, ಮಾಯಾವಾದಿ ಹೇಳುವಂತೆ, ಅದಕ್ಕೆ ಕರ್ತೃತ್ವವಿಲ್ಲ (೪೦೮). ದೇಹ, ಅಂತಃಕರಣ, ಮಾಯಾದಿಗಳಿಗೆ ಯಾವ ಕರ್ತೃತ್ವವೂ ಇರುವುದಿಲ್ಲವೆಂಬುದು, ಹೀಗೆ, ದೇಹಾದ್ಯುಕ್ತ ಚೇತನನ

[1] ಮಾಯಾ ಶಬಲಿತ (ಮಿಶ್ರಿತ) ಬ್ರಹ್ಮನೇ (ಜೀವನೇ) ಮನಸ್ಸು ಮತ್ತು ಚಕ್ಷುರಾದಿ ಇಂದ್ರಿಯಗಳ ದ್ವಾರಾ ಸ್ತ್ರೀ ಮೊದಲಾದ ವಿಷಯಗಳ ಕಡೆಗೆ ಆಕರ್ಷಿಸಲ್ಪಟ್ಟು, ವಿವಿಧ ಕರ್ಮಗಳಲ್ಲಿ ತೊಡಗುತ್ತಾನಷ್ಟೆ. ಕರ್ಮ ಕರ್ತೃಗಳಲ್ಲಿ ಏಕತ್ವವನ್ನು ಅಂಗೀಕರಿಸದ ಪರನು, ಸ್ವನ್ಯಾಯಕ್ಕೆ ವಿರುದ್ಧವಾಗಿ, ಅಂತಃಕರಣಾದಿ ಸಾಮಗ್ರಿಗಳಿಗೆ ಕರ್ತೃತ್ವವನ್ನು ತಿಳಿಯಕೂಡದಷ್ಟೆ; ದೇಹವಿಶಿಷ್ಟನಾದ ಜೀವನೇ ಯಾಗದ ಯಜಮಾನನು; ಆವನಿಗೇ ದೇಹತ್ಯಾಗ ನಂತರ ಸ್ವರ್ಗಪ್ರಾಪ್ತಿಯಾದರೆ, ಅದು, ಅವನೇ ಏಕಮಾತ್ರಕರ್ತನಲ್ಲಿದ್ದರೆ ಆಕಸ್ಮಿಕವೆಂದು ತಿಳಿಯಬೇಕಾದ ಪ್ರಸಂಗ ಪ್ರಾಪ್ತವಾಗುತ್ತದೆಯಲ್ಲವೇ ?

ಸಿದ್ಧವಾಯಿತೋ, ತತ್ – ಆದ್ದರಿಂದ, ವಿಚಕ್ಷಣಃ – ಕುಶಲನಾದ ಈತನು, ಮುಸಲಾತ್ – ಒನಿಕೆಯಿಂದ, ತ್ವಚಂ – ಅದರ (ಚರ್ಮ) ತೊಗಟೆಯನ್ನು, ಮೋಚಯೇತ್–ಬಿಡಿಸಿದನೆಂಬ (ಅನ್ಯರಿಗೆ ಅಸಾಧ್ಯವಾದ ಕಾರ್ಯವನ್ನು ಸಾಧಿಸಿದ), ಕಶ್ಚಿತ್–ಒಬ್ಬ ಕುಶಲ ವಾದಿಯೇ ಸರಿ.

**ಅತೋ ವಿಶಿಷ್ಟಕರ್ತೃತ್ವವಾದಂ ಶಿಷ್ಟಾ ನ ಮೇನಿರೇ ।**
**ಸಹಕಾರ್ಯೇವ ತತ್ರಾಪಿ ಜಡಂ ಕರ್ತಾ ತು ಚೇತನಃ ॥ ೪೧೦ ॥**

ಕರ್ತೃತ್ವ ವಾದವನ್ನು ಉಪಸಂಹರಿಸುತ್ತಾರೆ :—

ಅತಃ–ವಿಶೇಷಣಗಳಾದ ದೇಹಾಂತಃಕರಣಾದಿಗಳೆಲ್ಲವೂ ಕಾರಣಾಂತರ ಗಳಲ್ಲಿ ಸೇರುವುದರಿಂದ, ವಿಶಿಷ್ಟಕರ್ತೃತ್ವವಾದಂ–ವಿಶಿಷ್ಟನಿಗೇ ಕರ್ತೃತ್ವವೆಂಬ ವಾದವನ್ನು (ಚೇತನಮಾತ್ರನಿಗೆ ಕರ್ತೃತ್ವವಿಲ್ಲೆಂದೂ, ದೇಹಯುಕ್ತನಾದ ವಿಶಿಷ್ಟಚೇತನನಿಗೆ ಮಾತ್ರ ಕರ್ತೃತ್ವವೆಂದೂ ಹೇಳುವ ವಾದವನ್ನು), ಶಿಷ್ಟಾಃ– ಸಜ್ಜನರು, ನ ಮೇನಿರೇ–ಅನುಮೋದಿಸಲಿಲ್ಲ (ಸರಿಯೆಂದು ತಿಳಿಯಲಿಲ್ಲ); ತತ್ರಾಪಿ – ವಿಶಿಷ್ಟನಲ್ಲಿಯೂ (ದೇಹಿಯಾದ ಜೀವನಲ್ಲಿಯೂ), ಜಡಂ–ಜಡ ವಾದುದು (ದೇಹ, ಅಂತಃಕರಣಾದಿಗಳಾಗಿರುತ್ತವೆ); ಕರ್ತಾ ತು – ಕರ್ತ ನಾದರೋ, ಚೇತನಃ–ಚೇತನನೇ (ಸರಿ).

**ದ್ವಾವುದ್ದಿಶ್ಯಕೃತೇ ಯಾಗೇ ದೇವತಾತ್ವಂ ದ್ವಯೋರಪಿ ।**
**ದ್ವಿದೈವತ್ವಂ ಹಿ ತತ್ಕರ್ಮ ಸಂಕಲ್ಪೋ ದೇವತೇ ಇತಿ ॥ ೪೧೧ ॥**

---

(ವಿಶಿಷ್ಟನ—ಜೀವನ–ದೇಹಿಯ) ಸ್ವರೂಪವನ್ನು ವಿಚಾರಮಾಡುವುದರಲ್ಲಿ, ಜೀವನಿಗೆ ಮಾತ್ರ ಕರ್ತೃತ್ವವಿರುತ್ತದೆಂಬ ಪ್ರಮೇಯವು ಸಿದ್ಧಿಸಿತು; ಈ ವಾದ ನೈಪುಣ್ಯವು, ಒನಿಕೆಯಲ್ಲಿನ ತೊಗಟೆಯನ್ನು ಬಿಡಿಸಿದಂತೆ, ಅಸಾಧಾರಣಕೃತಿ ಯಾಯಿತು (೪೦೯). ಆದ್ದರಿಂದ ವಿಶಿಷ್ಟನೇ ಕರ್ತನು (ದೇಹಾದಿಗಳಲ್ಲಿರುವ ಚೇತನನೇ ಕರ್ತನು, ಚೇತನಮಾತ್ರನಿಗೆ ಕರ್ತೃತ್ವವಿರುವುದಿಲ್ಲ) ಎಂಬ ವಾದ ವನ್ನು ಸಜ್ಜನರು ಅನುಮೋದಿಸುವುದಿಲ್ಲ; ವಿಶೇಷಣಗಳಾದ ದೇಹಾದಿಗಳು ಜಡ—ಕರ್ತೃತ್ವವಿಲ್ಲದವುಗಳು — ಜೀವನೇ ಕರ್ತನು (೪೧೦). ಜೀವ (ಚೇತನ) ಮತ್ತು ದೇಹಾದಿ ಸಾಧನಗಳು, ಎಂಬ ಎರಡಕ್ಕೂ ಕರ್ತೃತ್ವವನ್ನೇಕೆ ಅಂಗೀಕರಿಸಕೂಡದೆಂಬಲ್ಲಿ, 'ಅಗ್ನೀಷೋಮೌ ದೇವತೇ' ಎಂದು ಸಂಕಲ್ಪಿಸಿ

ದ್ವೌ ಉದ್ದಿಶ್ಯ–ಇಬ್ಬರನ್ನು ಉದ್ದೇಶಿಸಿ (ಕೂಗಿ ಕರೆದು—ಆಹ್ವಾನಿಸಿ), ಕೃತೇ–ಮಾಡಲ್ಪಡುವ, ಯಾಗೇ–ಯಾಗದಲ್ಲಿ, ದ್ವಯೋಃ ಅಪಿ–ಇಬ್ಬರಿಗೂ (ಇಬ್ಬರಲ್ಲಿಯೂ), ದೇವತಾತ್ವಂ – (ಯಾಗ) ದೇವತ್ವವಿದೆ; ತತ್ಕರ್ಮ – ಆ ಕರ್ಮವೇ (ಯಾಗವೇ), ದ್ವಿದೈವತ್ವಂ – ಇಬ್ಬರು ದೇವತೆಗಳುಳ್ಳದ್ದು; ಸಂಕಲ್ಪಃ – (ಆ ಯಾಗಕ್ಕಾಗಿ ಮಾಡಲಾಗುವ) ಸಂಕಲ್ಪವು, ದೇವತೇ– (ಉಭಯ) ದೇವತೆಗಳೇ ! (ಅಗ್ನೀಷೋಮೌ ಎಂದೇ), ಇತಿ–ಎಂದೇ (ಇರುತ್ತದೆ).[1]

**ಸಮೂಹಾಲಂಬನಜ್ಞಾನೇ ವಿಷಯತ್ವಂ ಯಥಾ ಪೃಥಕ್ ।**
**ತಥಾ ವಿಶಿಷ್ಟವಿಜ್ಞಾನೇ ವಿಷಯತ್ವಂ ಪೃಥಕ್ ಪೃಥಕ್ ॥ ೪೧೨ ॥**

ದೇವದತ್ತನನ್ನು ನೋಡಿದಾಗ, ಅವನ ದೇಹಾದಿಯು ಕಾಣುತ್ತದೆ— ಚೇತನನಲ್ಲ; ಯಾವುದು ದೃಗ್ವಿಷಯವೋ (ದೃಶ್ಯತ್ವವುಳ್ಳದ್ದೋ) ಅದು

---

ಯಜಮಾನನಿಂದ ಮಾಡಲ್ಪಡುವ ದ್ವಿದೇವತಾಕವಾದ (ಅಗ್ನಿ ಮತ್ತು ಸೋಮರೆಂಬ ಇಬ್ಬರು ದೇವತೆಗಳಿಗಾಗಿ ಆಚರಿಸಲಾಗುವ) ಈ ಯಾಗವು, ಉಭಯಕ್ಕೂ (ದೇಹ ಮತ್ತು ಚೇತನರಿಬ್ಬರಿಗೂ) ಕರ್ತೃತ್ವವನ್ನು ತಿಳಿಯಬೇಕೆಂಬಲ್ಲಿ ದೃಷ್ಟಾಂತವಾಗುವುದಿಲ್ಲ; ಉಭಯ ದೇವತೆಗಳನ್ನು ಒಟ್ಟಿಗೆ ಆಹ್ವಾನಿಸಿ ಮಾಡಲಾಗುವ ಯಾಗವು, ಉಭಯಾತ್ಮಕವೇ ಸರಿ; ಉಭಯರೂ ಚೇತನರು—ದೇಹಾದಿ ಸ್ಥಾನದಲ್ಲಿರಬೇಕಾದ ಜಡವಸ್ತುವು ಅಲ್ಲಿಲ್ಲ (೪೧೧). ದೇಹಾದಿ ಸಹಕಾರಿ ಸಾಮಗ್ರಿಗಳು ದೃಷ್ಟಿವಿಷಯವಾಗುವಂತೆ, ದೇಹಸ್ಥಿತ

---

1 ಅಗ್ನಿಷ್ಟೋಮ ಯಾಗವು, ಅಗ್ನಿ ಮತ್ತು ಸೋಮರೆಂಬ ಇಬ್ಬರು ದೇವತೆಗಳ ಉದ್ದೇಶವಾಗಿ ಆಚರಿಸುವ ಯಾಗವು; ಯಾಗದೇವತ್ವವು ಉಭಯರಿಗೂ ಇರುವಂತೆ, ಕರ್ತೃತ್ವವೂ, ಜೀವನಿಗೂ, ದೇಹೇಂದ್ರಿಯಾದಿಗಳಿಗೂ, ಉಭಯಕ್ಕೂ ಇರಲಿ, ಎಂಬ ವಾದವನ್ನು ನಿರಾಕರಿಸುತ್ತಾರೆ: ಯಾಗವು 'ಅಗ್ನೀಷೋಮೌ ದೇವತೇ' ಎಂದು ಸಂಕಲ್ಪಿಸಿ, ಕರ್ತೃತ್ವಗಳಿಂದ ಮಾಡಲ್ಪಡುತ್ತದೆ; ಇಲ್ಲಿ ವಿಭಾಗಪ್ರದರ್ಶನವಿಲ್ಲ (ಒಟ್ಟಾಗಿ ಆಹ್ವಾನಿಸಲ್ಪಡುವ ದೇವತೆಗಳು, ಅವರು); ವಿಶಿಷ್ಟನಾದ ಜೀವನಲ್ಲಿ ವಿಶೇಷಣಗಳಾದ ದೇಹಾದಿಗಳು ಜಡವಾಗಿವೆ; ಮತ್ತು ಸಹಕಾರಿ ಕಾರಣಗಳಾಗಿ ಕಾಣಲ್ಪಡುತ್ತವೆ; ಎಂಬ ವೈಲಕ್ಷಣ್ಯದಿಂದ ಯಾಗದೃಷ್ಟಾಂತವೇ ಕೂಡುವುದಿಲ್ಲವೆಂದೂ ಸೂಚಿತವಾಗಿದೆ.

ಮಿಥ್ಯೆಯು ; ಚಿನ್ಮಾತ್ರನಲ್ಲಿ (ಚೇತನಮಾತ್ರದಲ್ಲಿ ದೃಶ್ಯತ್ವದ) ವ್ಯಭಿಚಾರ ವಿಲ್ಲ; ದೇಹದ ಕರ್ತೃತ್ವವನ್ನು ಕಂಡು, ಅದು ಮಿಥ್ಯಾಭೂತವಾಗಿರಲು, ಅದನ್ನು (ಕರ್ತೃತ್ವವನ್ನು) ಚೇತನನಲ್ಲಿ ಆರೋಪಿಸುವುದು ಸರಿಯಲ್ಲವೆಂಬ ಮಾಯಾವಾದದ ವಾದವನ್ನು, ದೃಗವಿಷಯತ್ವವೆಂಬಲ್ಲಿ, (ಚೇತನನು— ಆತ್ಮನು ಜ್ಞಾನವಿಷಯನಲ್ಲವೆಂದರೆ) ಅಪ್ರಾಮಾಣಿಕತ್ವವೆಂಬ ದೋಷವನ್ನು ಹೇಳಿ ತಳ್ಳಿಹಾಕುತ್ತಾರೆ:—

ಸಮೂಹಾಲಂಬನಜ್ಞಾನೇ – (ಹೋಗುತ್ತಿರುವ ಬಹುಮಂದಿಯನ್ನು ಕಂಡು) ಸಮೂಹದ ಜ್ಞಾನವುಂಟಾದಲ್ಲಿ, ಯಥಾ–ಹೇಗೆ, ವಿಷಯತ್ವಂ–ಜ್ಞಾನ ಗೋಚರವಾಗುವಿಕೆಯು, ಪೃಥಕ್–ಪ್ರತ್ಯೇಕವಾಗಿಯೇ (ಬೇರೆ ಬೇರೆ) ಇರುವುದೋ, ತಥಾ–ಹಾಗೆ, ವಿಶಿಷ್ಟ ವಿಜ್ಞಾನೇ–ವಿಶೇಷಣಸಹಿತನಾದ ವಿಶೇಷ್ಯನನ್ನು ತಿಳಿಯುವುದರಲ್ಲಿ, ವಿಷಯತ್ವಂ–(ವಿಶೇಷಣ ವಿಶೇಷ್ಯಗಳ) ಗ್ರಹಿಸಲ್ಪಡುವಿಕೆಯು, ಪೃಥಕ್ ಪೃಥಕ್–ಬೇರೆ ಬೇರೆಯೇ (ಆಗಿರುತ್ತದೆ).[1]

---

ಚೇತನನು ದೃಷ್ಟಿವಿಷಯನಾಗುವುದಿಲ್ಲ ; ದೃಶ್ಯವಾದುದು ಮಿಥ್ಯೆಯು, ಎಂಬ ಮಾಯಾವಾದಿಯು ಸಹ ಅಂಗೀಕರಿಸಲು ಸುಕರವಾದ ಅನ್ಯದೃಷ್ಟಾಂತವನ್ನು ಹೇಳುತ್ತಾರೆ ; ವಸ್ತುಸಮೂಹದ ಜ್ಞಾನವಾದಾಗ, ಸಮೂಹದಲ್ಲಿನ ಬೇರೆ ಬೇರೆ ವಸ್ತುವಿಷಯಕಜ್ಞಾನವೂ ಆಗುತ್ತದೆ; ಅದರಂತೆ ವಿಶಿಷ್ಟದ ಜ್ಞಾನವಾದಾಗ, ವಿಶೇಷಗಳ ಜ್ಞಾನವೂ ಬೇರೆಬೇರೆಯಾಗಿ ಆಗಿರುತ್ತದೆ (೪೧೨).

---

[1] ಒಂದು ಗುಂಪಿನ ಜನರನ್ನು ಕಂಡಾಗ ಸಾಮೂಹಿಕವಾದ ಒಂದು ಜ್ಞಾನವು ಉಂಟಾದರೂ, ಅಲ್ಲಿರುವ ಭಿನ್ನ ಭಿನ್ನ ವ್ಯಕ್ತಿಗಳ ಜ್ಞಾನವೂ (ಒಂದಿಗೇ) ಉಂಟಾಗಿರುವುದೋ, ಹಾಗೆ, ವಿಶಿಷ್ಟವಸ್ತುವಿನ ಜ್ಞಾನದಲ್ಲಿ, ವಿಶೇಷ್ಯನಲ್ಲಿರುವ ವಿಶೇಷಣಗಳ ಬೇರೆ ಬೇರೆ ಜ್ಞಾನವು ಇದ್ದೇ ಇರುತ್ತದೆ ; ಸಮೂಹದಲ್ಲಿ ಒಬ್ಬನು ದಂಡವನ್ನೂ, ಮತ್ತೊಬ್ಬನು ಛತ್ರಿಯನ್ನೂ ಹಿಡಿದಿರಬಹುದು ಮತ್ತು 'ದಂಡೀ ದೇವದತ್ತಃ' ಎಂಬ ಜ್ಞಾನವಾದಾಗ, ದೇವದತ್ತನ (ವಿಶೇಷ್ಯ) ಹಾಗೂ ಆತನ ದಂಡದ ಪ್ರತ್ಯೇಕಜ್ಞಾನವೂ ಉಂಟಾಗುತ್ತದೆ; ದೇವದತ್ತನ ಶರೀರವನ್ನು ಮಾತ್ರ (ಶವವನ್ನು) ಕಂಡು ದೇವದತ್ತನೆಂಬ ಜ್ಞಾನ ಬರುವುದಿಲ್ಲ—ಹೆಣವೆಂಬ ಜ್ಞಾನವೇ ಉಂಟಾಗುತ್ತದೆ; ಚಾರ್ವಾಕಮತ ನಿರಾಕರಣೆಯಲ್ಲಿ, ದೇಹಭಿನ್ನನಾಗಿ, ಸ್ವಲಕ್ಷಣಗಳಿಂದ ಜ್ಞಾನವಿಷಯನಾಗುವ ಚೇತನನ್ನು ಸಾಧಿಸಲಾಗಿದೆ— ಅದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು; ಮುಂದಿನ ಶ್ಲೋಕದಲ್ಲಿ ಅಡಕವಾದ ವಾದವನ್ನೂ ಇಲ್ಲಿ ಗಮನಿಸಬೇಕು.

**ವ್ಯಾಸಜ್ಯವೃತ್ತಿರ್ಧರ್ಮೋಽಯಂ ನ ಹಿ ದ್ವಿತ್ವಪೃಥಕ್ತ್ವವತ್ ॥ ೪೧೩ ॥**

ಅಯಂ – ಜ್ಞಾನವಿಷಯವಾಗುವುದೆಂಬ ಧರ್ಮವು (ವಿಷಯತ್ವವು), ವ್ಯಾಸಜ್ಯವೃತ್ತಿಧರ್ಮಃ – ಭೇದಸಾಧಕ ಧರ್ಮವು ; ದ್ವಿತ್ವಪೃಥಕ್ತ್ವವತ್ – ದ್ವಿತ್ವಪೃಥಕ್ತ್ವಗಳಂತೆ, ನ ಹಿ–ಅಲ್ಲವೇ ಅಲ್ಲ (ದ್ವಿತ್ವವು ಜ್ಞಾನವಿಷಯವಾಗದಿದ್ದರೆ, ವಿಶೇಷ್ಯವಾದ ವಸ್ತುವಿನ ವಿಶೇಷಣವಾಗಿದ್ದೂ—ಇದು ವಿಶೇಷ್ಯ, (ಎರಡನೆಯದು—ದ್ವಿತ್ವವುಳ್ಳದ್ದು) ಇದು ವಿಶೇಷಣವೆಂದು ಬೋಧಿಸುವಾಗ, (ಬ್ರಹ್ಮಚೇತನನಂತೆ, ದ್ವಿತ್ವವು ಅದೃಶ್ಯವಾಗಿರುವುದರಿಂದ, ವಿಶಿಷ್ಟದ ಉಪದೇಶವೇ ಇಲ್ಲದಂತಾಗಬೇಕಾಗುವುದು).[1]

---

ಅನೇಕ ಪದಾರ್ಥಗಳಲ್ಲಿ ಒಂದನೆಯದು, ಎರಡನೆಯದು, ಇತ್ಯಾದಿ ಸಂಖ್ಯಾವಾಚಕ ವಿಶೇಷಣಗಳಿರುತ್ತವೆಯಷ್ಟೆ; ಈ ಸಂಖ್ಯಾವಿಶೇಷಣಗಳು ಮತ್ತು ಪರಮತೀಯನು ಹೇಳುವ ಪೃಥಕ್ತ್ವವೆಂಬ ಭೇದಕಧರ್ಮವು, ಹೇಗೋ ಹಾಗೆ ದೃಶ್ಯತ್ವವು ವ್ಯಾಸಜ್ಯಧರ್ಮವಲ್ಲ; ಜ್ಞಾನಗೋಚರವಾದ, ವಿಶೇಷಣವು, ವಿಶೇಷ್ಯದಿಂದ ತಾನು ಸ್ವಯಂ ಭಿನ್ನವೆಂಬುದನ್ನು ಸಾಧಿಸಿ ಕೊಡುತ್ತದೆ (೪೧೩).

---

1 ದ್ವಿತ್ವಧರ್ಮವು ಒಂದು ವಸ್ತುವಿನಿಂದ ಮತ್ತೊಂದನ್ನು (ಒಂದನೆಯದು, ಎರಡನೆಯದು ಎಂದು) ಭಿನ್ನವೆಂದು ಸಾಧಿಸುವ ಧರ್ಮವು; ಒಂದರಿಂದ ಮತ್ತೊಂದು ಬೇರೆ, ಎಂದು ತಿಳಿಸುವ ಪೃಥಕ್ತ್ವವಿದ್ದಂತೆ; ಈ ವಿಶೇಷಣವು, 'ಇದರ ಭೇದ ಅದರಲ್ಲಿ–ಅದರ ಭೇದ ಇದರಲ್ಲಿ' ಎಂಬಂತೆ, ಉಭಯ ಪದಾರ್ಥಗಳಲ್ಲಿರುತ್ತದೆ; ಭೇದವು ಜ್ಞಾನ ವಿಷಯವಾಗುತ್ತದೆ—ಯದ್ಯಪಿ ಅದು ಅದೃಶ್ಯವೇ; ದ್ವಿತ್ವವನ್ನು ದೃಷ್ಟಾಂತವಾಗಿಟ್ಟು ಕೊಂಡಂತೆ, ಪೃಥಕ್ತ್ವವನ್ನೂ ಇಟ್ಟುಕೊಳ್ಳಬಹುದು; ಇವೆರಡರಲ್ಲಿರುವ ವೈಲಕ್ಷಣ್ಯ ವನ್ನು ಮಾತ್ರ ಗಮನದಲ್ಲಿಟ್ಟಿರಬೇಕು; ಪೃಥಕ್ತ್ವವೆಂದರೆ ಭೇದ; ಭೇದವು ಸಿದ್ಧಾಂತ ದಂತೆ (ನಮ್ಮಲ್ಲಿ) ವಸ್ತು (ಧರ್ಮಿ) ಸ್ವರೂಪವಾದುವು; ಪರನಂತೆ ಪೃಥಕ್ತ್ವವೆಂಬ ಭೇದವು, ಘಟದಿಂದ ಭೇದವು, ಘಟೇತರ ಎಲ್ಲ ವಸ್ತುಗಳಲ್ಲಿಯೂ ಇದೆ; ಅದು ಒಂದೇ ಆಗಿದೆ; ಆಶ್ರಯ ಭೇದದಿಂದ ಭಿನ್ನ ಭಿನ್ನವಾಗಿಲ್ಲ; ಆದ್ದರಿಂದ ಪರಮತದಲ್ಲಿ ಭೇದವು ಧರ್ಮಸ್ವರೂಪವಲ್ಲ; ಒಂದೇ ಭೇದವು ಅನೇಕಾಶ್ರಯಗಳಲ್ಲಿ (ವಸ್ತುಗಳಲ್ಲಿ) ಇರುವುದ ರಿಂದ, ಅದರಂತೆ ಪೃಥಕ್ತ್ವದಂತೆ ದೃಶ್ಯತ್ವವು (ಜ್ಞಾನವಿಷಯತ್ವವು) ವ್ಯಾಸಜ್ಯಧರ್ಮ ವಾಗುವುದಿಲ್ಲ; ಒಟ್ಟು ತಾತ್ಪರ್ಯವೇನೆಂದರೆ, ದ್ವಿತ್ವ, ಪೃಥಕ್ತ್ವಗಳು ವ್ಯಾಸಜ್ಯವೃತ್ತಿ ಗಳಾದಂತೆ, ದೃಶ್ಯತ್ವವು ವ್ಯಾಸಜ್ಯವೃತ್ತಿಯಲ್ಲ.

**ಕೇವಲಸ್ಯ ಹ್ಯಕರ್ತೃತ್ವೇ ಕಿಂ ನಶ್ಛಿನ್ನಂ ಹರಿಶ್ಚ ನಃ ।**
**ಕಾಲಪ್ರಕೃತಿಕರ್ಮಾದ್ಯೈಃ ಸಹೈವ ಕುರುತೇ ಜಗತ್ ॥ ೪೧೪ ॥**

ಯುಕ್ತಿಯುಕ್ತವಾದ್ದರಿಂದ, ಚೇತನನಿಗೆ ಕರ್ತೃತ್ವವನ್ನು ಉಪಪಾದಿಸಿ, ಈಗ ಜಗತ್ಸೃಷ್ಟ್ಯಾದಿ ಕರ್ತನಾದ ಭಗವಂತನಿಗೂ ಸಾಧನಸಾಮಗ್ರಿಗಳ ಸಹಕಾರವಿರುತ್ತದೆಂದು ಹೇಳುತ್ತಾರೆ:—

ಕೇವಲಸ್ಯ—ಚೇತನಮಾತ್ರನಿಗೆ (ಕಾರಕಾಂತರ ಸಹಕಾರವೆಲ್ಲದ ಚೇತನನಿಗೆ), ಅಕರ್ತೃತ್ವೇ—ಕರ್ತೃತ್ವವಿಲ್ಲವೆಂದೂ, ನಃ—ನಮಗೆ, ಕಿಂ ಛಿನ್ನಂ—ಏನು ಹಾನಿ? (ನಮ್ಮ ಸಿದ್ಧಾಂತಕ್ಕೆ ಹಾನಿಯಿಲ್ಲ); (ಏಕೆಂದರೆ), ನಃ – ನಮ್ಮ (ಜಗತ್ತಿನ ಸೃಷ್ಟ್ಯಾದಿ ಕರ್ತನೆಂದು ನಾವು ಹೇಳುವ), ಹರಿಃ—ಶ್ರೀಹರಿಯು, ಕಾಲಪ್ರಕೃತಿಕರ್ಮಾದ್ಯೈಃ – ಕಾಲ, ಪ್ರಕೃತಿ, ಕರ್ಮ (ಸೃಷ್ಟರಾಗಲಿರುವ ಜೀವಚೇತನರ ಪೂರ್ವಕರ್ಮಾದಿ) ಮೊದಲಾದವುಗಳಿಂದ, ಸಹೈವ—ಕೂಡಿಕೊಂಡೇ (ಅವುಗಳಿಂದ ಸಹಿತನಾಗಿಯೇ), ಜಗತ್—ಜಗತ್ತನ್ನು, ಕುರುತೇ—ನಿರ್ಮಿಸುತ್ತಾನೆ.

**ದೇಹಾಂತಃಕರಣಾದ್ಯೇವ ಕರ್ತೃತ್ವೇ ಘಟಕಂ ಯದಿ ।**
**ಆನಂದಮಾತ್ರಕರಣದೇಹಾದೇರಸ್ತು ಕರ್ತೃತಾ ॥ ೪೧೫ ॥**

ದೇಹಾಂತಃಕರಣಾದಿ ಏವ – ದೇಹ, ಅಂತಃಕರಣ (ಮನಸ್ಸು) ಮೊದಲಾದವುಗಳೇ, ಕರ್ತೃತ್ವೇ – (ಚೇತನನಿಗೆ) ಕರ್ತೃತ್ವವಿಷಯದಲ್ಲಿ, ಯದಿ ಘಟಕಂ – ಸಂಪಾದಕಗಳೆಂದರೆ (ಕರ್ತೃತ್ವವನ್ನು ತಂದುಕೊಡುತ್ತವೆಂದರೆ),

---

ಕೇವಲ ಚೇತನನಿಗೆ (ಚಿನ್ಮಾತ್ರನಿಗೆ – ಕಾರಕಾಂತರ ಸಹಕಾರವಿಲ್ಲದವನಿಗೆ) ಕರ್ತೃತ್ವವಿಲ್ಲೆಂದರೂ, ನಮಗೇನೂ ಹಾನಿಯಿಲ್ಲ – ನಮ್ಮ ಸಿದ್ಧಾಂತವು ಭಗ್ನವಾಗುವುದಿಲ್ಲ; ಜಗತ್ಸೃಷ್ಟ್ಯಾದಿ ಕರ್ತನೆಂದು ನಾವು ಹೇಳುವ ಶ್ರೀಹರಿಯೂ, ಕಾಲ, ಪ್ರಕೃತಿ, ಕರ್ಮಾದಿಗಳಿಂದ ವಿಶಿಷ್ಟನಾಗಿಯೇ, ಕಾರ್ಯಸಾಧಕ ಅನ್ಯವಸ್ತುಗಳ ಸಹಕಾರದಿಂದಲೇ ಜಗತ್ತನ್ನು ನಿರ್ಮಿಸುತ್ತಾನೆ (೪೧೪). ದೇಹ, ಅಂತಃಕರಣ (ಮನಸ್ಸು) ಮುಂತಾದ ಸಾಮಗ್ರಿಗಳು, ಚೇತನನಿಗೆ, ಕರ್ತೃತ್ವವನ್ನು ಸಾಧಿಸಿಕೊಡುತ್ತವೆಂದರೂ ಬಾಧಕವಿಲ್ಲ;

ಆನಂದಮಾತ್ರಕರಣದೇಹಾದೇಃ – ಆನಂದಮಾತ್ರದ (ಆನಂದಸ್ವರೂಪದ), ಇಂದ್ರಿಯ, ದೇಹಾದಿಗಳಿಗೇ, ಕರ್ತೃತಾ–ಕರ್ತೃತ್ವಸಂಪಾದಕತ್ವವು, ಅಸ್ತು– ಇರಲಿ (ಏನು ಬಾಧಕ? ಭಗವಂತನಿಗೂ ದೇಹೇಂದ್ರಿಯಾದಿಗಳಿವೆ; ಆದರೆ ಅವೆಲ್ಲವೂ ಕೇವಲ ಆನಂದಸ್ವರೂಪಗಳೇ ಆಗಿವೆ).

**ವಿದಿತೋಽಸಿ ಭವಾನ್ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ ।**
**ಕೇವಲಾನುಭವಾನಂದಸ್ವರೂಪಃ ಸರ್ವಬುದ್ಧಿದೃಕ್ ।**
**ಇತಿ ಭಾಗವತೇ ಪ್ರೋಕ್ತೇಃ ಕಾ ನೋ ಹಾನಿರತೋ ವದ ॥ ೪೧೬ ॥**

ಭವಾನ್–ನೀನು, ಸಾಕ್ಷಾತ್–(ಸ್ವಯಂ) ಪ್ರತ್ಯಕ್ಷವಾಗಿ, ಪ್ರಕೃತೇಃ– ಪ್ರಕೃತಿಯಿಂದ(ಲಕ್ಷ್ಮೀದೇವಿಯಿಂದಲೂ), ಪರಃ–ಉತ್ತಮನಾದ (ಅಪ್ರಾಕೃತ ನಾದ), ಪುರುಷಃ–ಪುರುಷನೆಂದು (ಗುಣಪೂರ್ಣನೆಂದು), ಕೇವಲಾನುಭವಾ ನಂದಸ್ವರೂಪಃ–ಕೇವಲ (ಅಮಿಶ್ರಿತ) ಜ್ಞಾನಾನಂದಸ್ವರೂಪನೂ, ಸರ್ವಬುದ್ಧಿ ದೃಕ್–ಸರ್ವರ ಮನಸ್ಸನ್ನು ತಿಳಿದವನೂ (ಸರ್ವಜ್ಞನೂ), ವಿದಿತಃ ಅಸಿ– (ಆಗಿರುವಿ) ಎಂದು (ನನ್ನಿಂದ) ತಿಳಿಯಲ್ಪಟ್ಟಿರುವಿ; ಇತಿ–ಹೀಗೆ, ಭಾಗವತೇ– ಭಾಗವತದಲ್ಲಿ, ಪ್ರೋಕ್ತೇಃ–ಸ್ಪಷ್ಟವಾದ ಉಕ್ತಿಯಿರುವುದರಿಂದ, ನಃ–ನಮಗೆ (ನಿನ್ನ ವಾದಿಗಳಾದ ಸಿದ್ಧಾಂತಿಗಳಿಗೆ), ಅತಃ–ಆದ್ದರಿಂದ (ಆನಂದಾದ್ಯಾತ್ಮಕ ದೇಹವುಳ್ಳವನೆಂಬುದರಿಂದ), ಕಾ ಹಾನಿಃ–ಏನು ಹಾನಿಯು? (ಅದೇ ಕರ್ತೃತ್ವ ಸಾಮಗ್ರಿಯು; ಆದ್ದರಿಂದ ಸಿದ್ಧಾಂತಕ್ಕೆ ಹಾನಿಯಿಲ್ಲ); ವದ–(ಇದ್ದರೆ) ನೀನೇ ಹೇಳು.

---

ಏಕೆಂದರೆ, ಕೇವಲ ಚೇತನನು, ದೇಹಾದಿ ಸಾಮಗ್ರಿರಹಿತನಲ್ಲ; ಆತನಿಗೂ, ರೂಪ (ದೇಹ) ಅಂತಃಕರಣಾದಿ ಸ್ವರೂಪಭೂತವಾದ, ಆನಂದಾದಿ ಸ್ವರೂಪದ ದೇಹಾದಿಗಳು ಇದ್ದೇ ಇವೆ; ಅವೇ ಕರ್ತೃತ್ವ ಸಂಪಾದಕಗಳೆಂದೂ ತಿಳಿಯಲು ಬರುತ್ತದೆ–ಹಾಗೆ ತಿಳಿಯುವುದರಿಂದ, ನಮ್ಮ ಸಿದ್ಧಾಂತಕ್ಕೆ ಯಾವ ಬಾಧಕವೂ ಉಂಟಾಗುವುದಿಲ್ಲ (೪೧೫). 'ಜ್ಞಾನಾನಂದಾತ್ಮಕ ಸ್ವರೂಪನೆಂದೂ, ಪ್ರಕೃತಿಗೆ ಅಭಿಮಾನಿಯಾದ ಶ್ರೀ ಲಕ್ಷ್ಮೀದೇವಿಯಿಂದ ಸಹ ಶ್ರೇಷ್ಠನಾದ, ಸ್ವಯಂ ಅಪ್ರಾಕೃತ ಪುರುಷನಾಗಿ, ಸರ್ವರ ಅಂತರ್ಯಾಮಿಯಾಗಿದ್ದು, ಸರ್ವ ಚೇತನರ ಸರ್ವ ವ್ಯಾಪಾರಗಳನ್ನು ಬಲ್ಲ ಸರ್ವಜ್ಞನೆಂದೂ, ನೀನು ತಿಳಿಯಲ್ಪಟ್ಟಿರುವಿ,'

**ಯದಿ ದೃಷ್ಟಂ ಜಡಸ್ಯೈವ ಸಹಾಯತ್ವಂ ಗೃಹೇ ಗೃಹೇ ।**
**ತದಾ ದರಿದ್ರದೇಶಸ್ಥಃ ಸ್ವರ್ಣಕುಂಭಜಲಂ ತ್ಯಜೇತ್ ॥ ೪೧೭ ॥**

ಜಡದೇಹಕ್ಕೆ ಕರ್ತೃತ್ವೋಪಯೋಗವಿದ್ದರೆ, ಎಂಬ ಶಂಕೆಗೆ ಉಪಹಾಸ ಕರವಾದ ಉತ್ತರವನ್ನು ಹೇಳುತ್ತಾರೆ :—

ಗೃಹೇ ಗೃಹೇ—ಪ್ರತಿಯೊಂದು ಮನೆಯಲ್ಲಿ, ಜಡಸ್ಯ ಏವ—ಜಡದೇಹಾದಿ ಪದಾರ್ಥಗಳಿಗೇ (ನೀರು ತರಲಿಕ್ಕೆ ಉಪಯೋಗವಾಗುವ ಮಣ್ಣಿನ ಗಡಿಗೆ ಮುಂತಾದವುಗಳಿಗೇ), ಸಹಾಯತ್ವಂ—ಕರ್ತೃತ್ವೋಪಯೋಗಿತ್ವವು, ಯದಿ ದೃಷ್ಟಂ—ಕಾಣಲ್ಪಡುವುದಾದರೆ (ಜಡ ಉಪಕರಣಗಳೇ ಕರ್ತೃತ್ವಕ್ಕೆ ಸಹಾಯಕ ವೆಂದು ತಿಳಿದರೆ), ತದಾ—ಆಗ, ದರಿದ್ರದೇಶಸ್ಥಃ—ಬಡಗ್ರಾಮದಲ್ಲಿರುವವನು (ಗಡಿಗೆಯಲ್ಲಿ ನೀರು ತರುವುದನ್ನು ನೋಡುತ್ತಿರುವವನು), ಸ್ವರ್ಣಕುಂಭಜಲಂ —ಭಂಗಾರದ ಕೊಡದಲ್ಲಿ ನೀರು ತರುವುದನ್ನು ಕಂಡು (ಶ್ರೀಮಂತರ ಗ್ರಾಮ ದಲ್ಲಿ ಕಂಡು) ಆ ಜಲವನ್ನು, ತ್ಯಜೇತ್ — ಉಪಯೋಗಿಸದಿರಬೇಕಾಗುತ್ತದೆ (ಅಲ್ಲವೇ ?) (ಭಂಗಾರದ ಕೊಡಕ್ಕೆ ಜಲಾಹರಣದ ಉಪಯೋಗವನ್ನು ಕಂಡಿಲ್ಲ ವಾದ್ದರಿಂದ, ಆ ನೀರನ್ನೇ ತ್ಯಜಿಸುವಂತೆ ಜ್ಞಾನಾತ್ಮಕ ಇಂದ್ರಿಯಾದಿಕಾರಕ ಗಳಿಂದ, ಕರ್ತೃತ್ವವನ್ನು ನಿರ್ವಹಿಸುವ ಭಗವಂತನ ಕರ್ತೃತ್ವವನ್ನೇ ನಿರಾಕರಿಸ ಬಹುದೇ ?—ಇಲ್ಲ.

---

ಹೇ ಕೃಷ್ಣ !' ಎಂದು, ಭಾಗವತದಲ್ಲಿ ಸ್ಪಷ್ಟೋಕ್ತಿಯಿರುವುದರಿಂದ, ಪ್ರಾಕೃತ ದೇಹಾದಿ ಸಾಧನಗಳಿಲ್ಲದೇ, ಕೇವಲ ಚೇತನನಿಗೆ ಸಹ ಕರ್ತೃತ್ವವಿರುತ್ತದೆಂಬ ಸಿದ್ಧಾಂತಕ್ಕೆ ಯಾವ ಹಾನಿಯೂ ಇಲ್ಲ (೪೧೬). ಜಲಾಹರಣರೂಪ ಕರ್ತೃತ್ವ ವನ್ನು ಜಡವಾದ ಕುಂಭವು, (ಮಣ್ಣಿನ ಗಡಿಗೆಯು) ಸಾಧಿಸಿಕೊಡುವಂತೆ, ಜಡದೇಹಾದಿಗಳು ಕರ್ತೃತ್ವೋಪಯೋಗಿಗಳೆಂದು ಭಾವಿಸುವುದೂ ಸರಿಯಲ್ಲ; ಪ್ರತಿಗೃಹದಲ್ಲಿ ಘಟಕ್ಕೆ ಈ ಸಹಾಯಕತ್ವವು ಕಂಡರೂ, ಜಡ ಉಪಕರಣಗಳೇ ಕರ್ತೃತ್ವಸಹಾಯಕವೆಂದು ತಿಳಿಯುವುದೂ ಯುಕ್ತವಾಗುವುದಿಲ್ಲ; ಶ್ರೀಮಂತರ ಗ್ರಾಮದಲ್ಲಿ ಭಂಗಾರದ ಕುಂಭದಲ್ಲಿ ಜಲ ತರುವುದನ್ನು ಕಂಡು, ಆ ಜಲವನ್ನೇ ತ್ಯಜಿಸಬಹುದೇ ? ಭಂಗಾರದ ಕುಂಭಕ್ಕೆ ಜಲಾಹರಣ ಕರ್ತೃತ್ವಕಾರಕಶಕ್ತಿಯು ಕಂಡಿಲ್ಲದ್ದರಿಂದ, ಅದರಲ್ಲಿರುವ ಜಲವನ್ನೇ ತ್ಯಜಿಸುವುದು ಸರಿಯೇ ? ಹೀಗೆಯೇ

*

**ಸುವರ್ಣಗರುಡಸ್ಥಸ್ಯ ಯಾತ್ರಾ ಸ್ವಸ್ಥಾ ಭವೇತ್ ಕಿಲ ।**
**ಸಾಕ್ಷಾದ್ಗರುಡಕಂಠಸ್ಥಶ್ಚಿತ್ರಂ ಯಾತ್ರಾಽಕ್ಷಮಃ ಕಿಲ ॥ ೪೧೮ ॥**

ಅದೇ ಪ್ರಮೇಯವನ್ನು ಉಪಪಾದಿಸುತ್ತಾರೆ :—

ಸುವರ್ಣಗರುಡಸ್ಥಸ್ಯ — ಭಂಗಾರದ ಗರುಡನ ಮೇಲೆ (ಜಡವಿಗ್ರಹದ ಮೇಲೆ) ಕೂತವನ, ಯಾತ್ರಾ — ಪ್ರಯಾಣವು, ಸ್ವಸ್ಥಾ — ಸಮಾಧಾನಕರವಾದುದು, ಭವೇತ್ ಕಿಲ—ಆಗುವುದಲ್ಲವೇ ? ಸಾಕ್ಷಾದ್ಗರುಡಕಂಠಸ್ಥಃ—ಸ್ವಯಂ (ಸಚೇತನ) ಗರುಡನ ಕಂಠ (ಹೆಗಲಲ್ಲಿ) ಏರಿ ಕುಳಿತವನು, ಯಾತ್ರಾಽಕ್ಷಮಃ—ಪ್ರಯಾಣಮಾಡುವುದರಲ್ಲಿ ಅಸಮರ್ಥನು, ಕಿಲ—ಆಗುತ್ತಾನೆಂಬುದು, ಚಿತ್ರಂ—ಆಶ್ಚರ್ಯವು ! (ಜಡದೇಹಕ್ಕಿಂತ ಚಿದಾತ್ಮಕ ದೇಹಕ್ಕೆ ಕಾರ್ಯಕಾರಿತ್ವವು ಕೈಮುತ್ಯದಿಂದ ಸಿದ್ಧವಾಗುವುದಷ್ಟೆ).

**ಯದಾ ಹಿ ರೂಪನಿಷ್ಪತ್ತಿರ್ಮುಕ್ತೌ ಜೀವಸ್ಯ ಜಾಯತೇ ।**
**ನ ಹಿ ತತ್ಪ್ರಾಕೃತಂ ರೂಪಂ ಸ್ವೇನೇತ್ಯಸ್ಯ ವಿರೋಧತಃ ॥ ೪೧೯ ॥**

ಚೇತನಸ್ವರೂಪದೇಹಕ್ಕೆ ಕಾರ್ಯಕಾರಿತ್ವವನ್ನು ಅಂಗೀಕರಿಸದಿದ್ದರೆ ಬಾಧಕವನ್ನು ಹೇಳುತ್ತಾರೆ :—

ಜೀವಸ್ಯ—ಜೀವನಿಗೆ, ಯದಾ—ಯಾವಾಗ, ಮುಕ್ತೌ—ಮುಕ್ತಿಯಲ್ಲಿ, ರೂಪನಿಷ್ಪತ್ತಿಃ—ಸ್ವರೂಪದ ಪ್ರಾಪ್ತಿಯು ('ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಸ ತತ್ರಪರ್ಯೇತಿ । ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾಯಾನೈರ್ವಾ ।' ಎಂಬ ಶ್ರುತಿಯಲ್ಲಿ ಹೇಳುವ ಸ್ವರೂಪದ ಅಭಿವ್ಯಕ್ತಿಯು), ಜಾಯತೇ—ಉಂಟಾಗುತ್ತದೆಯೋ, ತತ್—ಆ (ಶ್ರುತ್ಯುಕ್ತ),

---

ಜ್ಞಾನಾನಂದಸ್ವರೂಪ ದೇಹಾದಿಕಾರಕಗಳಿಂದಾಗುವ, ಭಗವಂತನ ಕರ್ತೃತ್ವವನ್ನು ತಿರಸ್ಕರಿಸಬಹುದೇನು ? (ಹಾಗೆ ಮಾಡುವುದು ಸರ್ವಥಾ ಯುಕ್ತವಲ್ಲ) (೪೧೭). ಭಂಗಾರದ ಗರುಡನನ್ನೇರಿ ಪ್ರಯಾಣಮಾಡಬಹುದಾದರೆ, ಸಾಕ್ಷಾತ್ ಗರುಡನ ಭುಜವನ್ನು ಹತ್ತಿ ಕೂತವನು, ಸಂಚಾರಮಾಡಲು ಅಸಮರ್ಥನಾಗುವನೇ ? (೪೧೮). 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।' ಎಂಬ ಶ್ರುತಿಯು ಮುಕ್ತಿಯಲ್ಲಿ ಜೀವನಸ್ವರೂಪದ ಅಭಿವ್ಯಕ್ತಿ

ರೂಪಂ–ರೂಪವು, ಪ್ರಾಕೃತಂ ನ ಹಿ–ಪ್ರಾಕೃತರೂಪವಲ್ಲವಷ್ಟೆ; (ಏಕೆಂದರೆ), ಸ್ವೇನ ಇತಿ – 'ಸ್ವೇನ ರೂಪೇಣ' ಎಂಬಲ್ಲಿರುವ ಸ್ವೇನ (ಸ್ವಭಾವವಾದ—ಚೇತನಾತ್ಮಕವಾದ) ಎಂಬ, ಅಸ್ಯ–(ಬಾಹ್ಯದೇಹವನ್ನು ವ್ಯಾವರ್ತಿಸುವ—ಹೊರತು ಮಾಡುವ) ವಿಶೇಷಣದ, ವಿರೋಧತಃ – ವಿರೋಧವಿರುವುದರಿಂದ, (ಪ್ರಾಕೃತರೂಪವಲ್ಲ),

**ಮುಕ್ತತ್ವವ್ಯಾಹತೇಶ್ಚಾತಶ್ಚಿದ್ರೂಪಂ ರೂಪಮುಚ್ಯತೇ ॥ ೪೨೦ ॥**

ಅತಃ–ಆದ್ದರಿಂದ, ಮುಕ್ತತ್ವವ್ಯಾಹತೇಃ–ಮುಕ್ತನೆಂಬುದು ವ್ಯರ್ಥವಾಗುವುದರಿಂದಲೂ (ಮುಕ್ತಿಯನ್ನು ಹೊಂದಿದವನೆಂದು ವ್ಯವಹರಿಸುವುದು ವಿರುದ್ಧವೂ ಆಗುತ್ತದೆಯಾದ್ದರಿಂದಲೂ), ಚಿದ್ರೂಪಂ – ಜ್ಞಾನಾತ್ಮಕವಾದ ರೂಪವೇ, ರೂಪಂ–(ಸ್ವರೂಪ) ದೇಹನೆಂದು, ಉಚ್ಯತೇ–ಹೇಳಲ್ಪಡುತ್ತದೆ.

**ಯೇನ ಪರ್ಯೇತಿ ಸಸ್ತ್ರೀಕೋ ಯಾನೈರ್ಗಚ್ಛತಿ ಪಶ್ಯತಿ ।**
**ಹಸತಿ ಕ್ರೀಡತೇ ರೂಪಂ ದೇಹೋಯಂ ನಾತ್ರ ಸಂಶಯಃ ॥ ೪೨೧ ॥**

'ರೂಪ' ಪದವು ಸ್ವರೂಪಪರವಾದುದು, ಜಡದೇಹಪರವಲ್ಲವೆಂದು ಹೇಳುತ್ತಾರೆ :—

(ಶ್ರುತಿಯಲ್ಲಿ 'ಸಃ ನಿಷ್ಪನ್ನರೂಪಃ' ಎಂಬ ಹೇತುಗರ್ಭವಿಶೇಷಣದಿಂದ, ಅದೇ ರೂಪದಿಂದ ಪರ್ಯಟನಾದಿ (ಸಂಚರಿಸುವ, ವಿಹರಿಸುವ ಮೊದಲಾದವುಗಳನ್ನು ಹೇಳಿರುವುದರಿಂದ,) ಯೇನ–ಯಾವ ಕಾರಣದಿಂದ, ಸಸ್ತ್ರೀಕಃ–ಸ್ತ್ರೀಸಹಿತನಾಗಿ, ಪರ್ಯೇತಿ–ಸುತ್ತುತ್ತಾನೆ; ಯಾನೈಃ–ವಾಹನಗಳಿಂದ, ಗಚ್ಛತಿ–

---

ಯಾಗುವುದೆಂದು ಹೇಳುತ್ತದೆ; 'ಸ್ವೇನ' ಪದವು, ಸ್ವಭಾವಸಿದ್ಧವಾದ ಸ್ವರೂಪವನ್ನು ಹೇಳುವುದರಿಂದ ಮುಕ್ತನಿಗೆ ಪ್ರಾಕೃತದೇಹವನ್ನು ವ್ಯಾವರ್ತಿಸುತ್ತದೆ (ಇಲ್ಲವೆಂದು ಹೇಳುತ್ತದೆ) (೪೧೯). ಮುಕ್ತನಿಗೆ ಪ್ರಾಕೃತದೇಹವನ್ನು ಹೇಳುವುದು, ವ್ಯಾಹತಭಾಷಣವು—ಮುಕ್ತತ್ವವೂ, ಪ್ರಾಕೃತ ದೇಹತ್ವವೂ ವಿರೋಧಿಗಳಾಗಿವೆ; ಮುಕ್ತನ ಚಿದ್ರೂಪವೆಂಬುದು, ಜ್ಞಾನಾತ್ಮಕದೇಹವನ್ನೇ ಹೇಳುತ್ತದೆ (೪೨೦). 'ಪರಂಜ್ಯೋತಿರುಪಸಂಪದ್ಯ' ಎಂಬ ಶ್ರುತಿಯೇ ಪರಂಜ್ಯೋತಿಸ್ಸ್ವರೂಪನಾದ ಪರಮಾತ್ಮನನ್ನು ಹೊಂದಿ, 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ' ಎಂದು ಮುಕ್ತನ

ಸಂಚರಿಸುತ್ತಾನೆ; ಪಶ್ಯತಿ—ನೋಡುತ್ತಾನೆ; ಹಸತಿ—ನಗುತ್ತಾನೆ; ಕ್ರೀಡತೇ—ರಮಣಮಾಡುತ್ತಾನೆ; (ಎಂದು ಮುಕ್ತರ ಕ್ರಿಯೆಗಳ ವಿವರವು ಶ್ರುತಿಯಲ್ಲಿಯೇ ನಿರೂಪಿತವಾಗಿರುವುದರಿಂದ), ಅಯಂ – ಈ, ರೂಪಂ—ರೂಪವು, ದೇಹಃ—(ಮುಕ್ತನ) ದೇಹವೇ, ಅತ್ರ—ಈ ವಿಷಯದಲ್ಲಿ (ದೇಹವೆಂಬಲ್ಲಿ), ನ ಸಂಶಯಃ—ಯಾವ ಸಂಶಯವೂ ಇಲ್ಲ.[1]

**ಫಲಾಧ್ಯಾಯೇ ಹಿ ಸಂಪದ್ಯಾವಿಹಾಯೇತಿ ಯಮಾದರಾತ್ ।**
**ಅಸೂತ್ರಯತ್ಸೂತ್ರಕಾರಃ ಸಮೋಕ್ಷಃ ಪರಮೋಧ್ರುವಃ ॥ ೪೨೨ ॥**

ಬೇರೆ ಯುಕ್ತಿಯನ್ನೂ ಹೇಳುತ್ತಾರೆ :—

ಸೂತ್ರಕಾರಃ—ಸೂತ್ರನಿರ್ಮಾತರಾದ ಶ್ರೀಬಾದರಾಯಣರು (ಶ್ರೀ ವೇದವ್ಯಾಸರು), ಫಲಾಧ್ಯಾಯೇ – (ತಮ್ಮಿಂದ ರಚಿತವಾದ ಬ್ರಹ್ಮಸೂತ್ರಗಳ) ಫಲಾಧ್ಯಾಯದಲ್ಲಿ, ಸಂಪದ್ಯಾವಿಹಾಯ ಇತಿ – 'ಸಂಪದ್ಯಾವಿಹಾಯ ಸ್ವೇನ ಶಬ್ದಾತ್[2]' ಎಂದು, ಯಂ—ಯಾವುದನ್ನು, ಆದರಾತ್—ಆದರದಿಂದ (ಭಕ್ತರ

---

ಸ್ವಸ್ವರೂಪವನ್ನು ಹೊಂದಿ, ಸ್ತ್ರೀಸಮೇತ ಕ್ರೀಡಿಸುತ್ತಾನೆ, ಯಾನಗಳಿಂದ ಸಂಚರಿಸುತ್ತಾನೆ, ನಗುತ್ತಾನೆ, ವಿಹರಿಸುತ್ತಾನೆಂದು, ದೇಹಸಾಧ್ಯವಾದ ಬಹುಕ್ರಿಯೆಗಳನ್ನು ಮಾಡುವನೆಂದು, ಹೇಳುತ್ತದೆ; ಆದ್ದರಿಂದ ಸಹ ಮುಕ್ತಜೀವನಿಗೆ (ಸ್ವರೂಪ) ದೇಹವುಂಟೆಂದು ಸಿದ್ಧವಾಗುತ್ತದೆ (೪೨೧). ಶ್ರೀ ವೇದವ್ಯಾಸರೂ, ತಮ್ಮಿಂದ ರಚಿತವಾದ ಬ್ರಹ್ಮಸೂತ್ರಗಳ ಫಲಾಧ್ಯಾಯದಲ್ಲಿ 'ಸಂಪದ್ಯಾವಿಹಾಯ ಸ್ವೇನ ಶಬ್ದಾತ್' ಎಂಬ ಸೂತ್ರವನ್ನು ರಚಿಸಿ, ಮುಕ್ತಜೀವನು ಪರಮಾತ್ಮನನ್ನು ಹೊಂದಿ, ಆತನೊಂದಿಗೇ ಇರುತ್ತಾ, ತನ್ನ ಸ್ವರೂಪ

---

[1] ಇಲ್ಲಿ ನಿರೂಪಿತವಾದ ಮುಕ್ತಿಯು, ಜೀವನ್ಮುಕ್ತಿಯಲ್ಲ—ಜೀವನ್ಮುಕ್ತನು ಪ್ರಾಕೃತದೇಹವನ್ನೂ ಹೊಂದುವುದುಂಟು; ಜೀವನ್ಮುಕ್ತ್ಯವಸ್ಥೆಯಲ್ಲಿ ಸ್ವಸ್ವರೂಪದ ಅಭಿನಿಷ್ಪತ್ತಿಯೂ ಇಲ್ಲ.

[2] ಸಂಪದ್ಯಾವಿಹಾಯ ಸ್ವೇನ ಶಬ್ದಾತ್—(ಮುಕ್ತಜೀವನು), ಸಂಪದ್ಯ—ಪರಮಾತ್ಮನನ್ನು ಹೊಂದಿ, ಅವಿಹಾಯ—(ಪರಮಾತ್ಮನನ್ನು) ಬಿಡದೇ, ಸ್ವೇನ—ತನ್ನ ಸ್ವರೂಪದಿಂದಲೇ, (ಭೋಗಗಳನ್ನು ಅನುಭವಿಸುತ್ತಾನೆಂದು), ಶಬ್ದಾತ್—ವೇದವಾಕ್ಯವಿರುವುದರಿಂದ, ಎಂಬುದಾಗಿ, ನಿತ್ಯವಾದ ಸ್ವಸ್ವರೂಪದಿಂದ ವಿವಿಧ ಭೋಗಗಳುಳ್ಳವನೆಂದು ಈ ಸೂತ್ರದಿಂದ ನಿರ್ಣಯಿಸಲಾಗಿದೆ.

ಜ್ಞಾನಾರ್ಥವಾಗಿ ವಿಶ್ವಾಸದಿಂದ), ಅಸೂತ್ರಯತ್–ಸೂತ್ರವನ್ನು ರಚಿಸಿರುವರೋ, ಸಃ – ಅದೇ ಮೋಕ್ಷವೇ, ಪರಮಃ ಮೋಕ್ಷಃ–(ಅಪರೋಕ್ಷಜ್ಞಾನವೆಂಬ ಜೀವನ್ಮುಕ್ತಿನ ಫಲವೆಂದು ಹೇಳಲ್ಪಡುವ) ಮುಖ್ಯ ಮೋಕ್ಷವು (ಯಾವ ವಿಧದ ಅವಾಂತರಮೋಕ್ಷವೂ ಅಲ್ಲ), ಧ್ರುವಃ–ನಿತ್ಯವಾದುದು (ನಿಶ್ಚಯವು).

**ಯತ್ರತ್ವಸ್ಯೇತಿ ವಾಕ್ಯಂ ತು ಪ್ರವೃತ್ತಂ ತರ್ಕಮುದ್ರಯಾ ।**
**ದೃಢೀಕರೋತೀಮಮರ್ಥಂ ಯತ್ತರ್ಕೋಽಂತವಿಪರ್ಯಯಃ ॥೪೨೩॥**

ಸಾವಕಾಶಶ್ರುತಿಯು ಬೇರೆ ವಿಧವಾಗಿ ಮೋಕ್ಷವನ್ನು ನಿರೂಪಿಸುತ್ತದೆಂಬ ಸಂಶಯವನ್ನು ಪರಿಹರಿಸಿ, ಉಕ್ತಾರ್ಥವನ್ನು ದೃಢೀಕರಿಸುತ್ತದೆಂದು ತೋರಿಸುತ್ತಾರೆ :—

ಯತ್ರತ್ವಸ್ಯ ಇತಿ ವಾಕ್ಯಂ ತು–'ಯತ್ರತ್ವಸ್ಯಸರ್ವಮಾತ್ಮೈವಾಭೂತ್। ತತ್ಕೇನ ಕಂ ಪಶ್ಯೇತ್। ಕೇನ ಕಂ ಜಿಘ್ರೇತ್' ಎಂಬ ಶ್ರುತಿವಾಕ್ಯವಾದರೋ, ತರ್ಕಮುದ್ರಯಾ – ತರ್ಕ ರೀತಿಯಿಂದ (ಮುಕ್ತನು ತನ್ನಿಂದ ಭಿನ್ನವಾದ ಒಂದೂ ಇಲ್ಲದಂತೆ ಎಲ್ಲವೂ ತಾನೇ ಆಗುವನೆಂಬ ಮಾಯಾವಾದಿಯ ಅಭಿಪ್ರಾಯವನ್ನು ಸಮರ್ಥಿಸುವುದೆಂಬ ಶ್ರುತ್ಯರ್ಥವನ್ನು ಯಾವುದರಿಂದ ಏನನ್ನು ನೋಡುತ್ತಾನೆ, ಇತ್ಯಾದಿ ತರ್ಕರೂಪದಿಂದ), ಪ್ರವೃತ್ತವಾಗಿದೆ (ಹೇಳಲು ಹೊರಟಿದೆ); ಯತ್–ಯಾವ ಕಾರಣದಿಂದ, ತರ್ಕಃ–ತರ್ಕವು;

---

ದೇಹದಿಂದ, ಇಚ್ಛಿತ ಭೋಗಗಳನ್ನು ಅನುಭವಿಸುವನೆಂದು, ನಿರವಕಾಶ ಶ್ರುತಿಯು ನಿರೂಪಿಸುತ್ತದೆಂಬ ನಿರ್ಣಯವನ್ನು ಹೇಳಿರುವರು; ಭಕ್ತಜನರ ಮೇಲಿನ ಸ್ನೇಹದಿಂದ ಹೇಳಲಾದ ಈ ಸೂತ್ರನಿರ್ಣಯವು, ಪರಮ ಮೋಕ್ಷವನ್ನು (ಮುಖ್ಯ ಮೋಕ್ಷವನ್ನು) ಹೇಳುತ್ತದೆ—ಜೀವನ್ಮುಕ್ತಿ ಲಭ್ಯವಾದ ಮುಖ್ಯ ಫಲವನ್ನು ನಿರೂಪಿಸುತ್ತದೆ—ಯಾವ ವಿಧದ ಅವಾಂತರ ಮೋಕ್ಷವನ್ನೂ ಅಲ್ಲ (೪೨೨). 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್। ತತ್ಕೇನ ಕಂ ಪಶ್ಯೇತ್....'ಇತ್ಯಾದಿ ಶ್ರುತಿಯು, ಮುಕ್ತಿಯಲ್ಲಿ ಆತ್ಮನು ತಾನೇ ತಾನಾಗಿರುವವನಾಗಿ, ಯಾವ ಭೋಗವೂ ಇಲ್ಲದವನೆಂದು ಹೇಳಿ, ಚಕ್ಷುರಾದಿ ಇಂದ್ರಿಯಗಳಾಗಲಿ, ತದ್ಗೋಚರ ವಿಷಯಗಳಾಗಲಿ ಇಲ್ಲದ ಕಾರಣ ಯಾವುದರಿಂದ ಏನನ್ನು ನೋಡುತ್ತಾನೆ? ಇತ್ಯಾದಿ ವಾಕ್ಯಗಳಿಂದ, ಮಾಯಾವಾದಿಯ

ಅಂತವಿಪರ್ಯಯಃ–ಅವಸಾನದಲ್ಲಿ (ಅಂತ್ಯದಲ್ಲಿ) ವಿರೋಧದಲ್ಲಿ ಕೊನೆಗಾಣು ವುದೋ, (ತಸ್ಮಾತ್) ಆದ್ದರಿಂದ, ಇಮಂ – ಈ ಸ್ವರೂಪೇಂದ್ರಿಯಗಳಿಂದ ಅಪ್ರಾಕೃತ ವಿಷಯಗಳನ್ನು ಭೋಗಿಸುತ್ತಾನೆಂಬ), ಅರ್ಥಂ – ಅರ್ಥವನ್ನು, ದೃಢೀಕರೋತಿ – ಭದ್ರವಾಗಿ ಸ್ಥಾಪಿಸುತ್ತದೆ (ಈ ಶ್ರುತಿಯು, ಮುಕ್ತನು ಚೈತನ್ಯಮಾತ್ರನಾದರೆ, ಇಂದ್ರಿಯಾದಿಗಳಿಲ್ಲದೇ, ಯಾವ ಭೋಗವನ್ನು ಯಾವ ಇಂದ್ರಿಯದಿಂದ ಭೋಗಿಸುವನು? ಎಂದು ಆಕ್ಷೇಪಿಸಿ, 'ಜಕ್ಷನ್ ಕ್ರೀಡನ್ ರಮಮಾಣಃ' ಇತ್ಯಾದಿ ಶ್ರುತಿವಾಕ್ಯಗಳ ವಿರೋಧ ಬಾರದಂತೆ, ಉತ್ತರರೂಪದಿಂದ ಇಂದ್ರಿಯ, ವಿಷಯಾದಿಗಳೆಲ್ಲವೂ ಮುಕ್ತಿಯಲ್ಲಿರುತ್ತ ವೆಂಬುದನ್ನು ದೃಢಪಡಿಸುವ, ಆಕ್ಷೇಪಿಕೀ ತರ್ಕವನ್ನು ಮಾತ್ರ ನಿರೂಪಿಸು ತ್ತದೆ).

**ಅನ್ಯಯೋಕ್ತೇರನೇಕಾರ್ಥೇ ಶಾಸನೇ ತ್ವನುಶಾಸನಾತ್ ।**
**ಸಾಮಾನ್ಯವಚನಂ ಹ್ಯೇತತ್ಪೂರ್ವವಾಕ್ಯೇ ವಿಶೇಷವಾಕ್ ॥ ೪೨೪ ॥**

'ಯತ್ರತ್ವಸ್ಯ' ಎಂಬ ಶ್ರುತಿಯಲ್ಲಿ, ಯತ್ರ ಎಂಬ ಪದಕ್ಕೆ 'ಯದಿ' (ಹೀಗಿರುವ ಪಕ್ಷದಲ್ಲಿ) ಎಂಬರ್ಥವನ್ನು ತಿಳಿಯಬೇಕು; ಹಾಗಲ್ಲದೇ 'ಯಾವ ಮುಕ್ತಿಯಲ್ಲಿ' ಎಂಬರ್ಥವನ್ನು ತಿಳಿದರೆ ಆಕ್ಷೇಪಿಕೀ ತರ್ಕಪರವಾದ ಅರ್ಥವು

---

ಅಭಿಪ್ರಾಯವನ್ನು ಸಮರ್ಥಿಸುವಂತೆ ತೋರುತ್ತದೆ; ಆದರೆ ವಸ್ತುತಃ ಮುಕ್ತಿ ಯಲ್ಲಿ, ಮುಕ್ತಜೀವನಿಗೆ ಸ್ವರೂಪದಲ್ಲಿ ಚಕ್ಷುರಾದಿ ಸಕಲ ಇಂದ್ರಿಯಗಳೂ, ಅಪ್ರಾಕೃತಗಳಾದ ವಿಷಯಗಳೂ, ಅವುಗಳ ಭೋಗವೂ ಉಂಟೆಂಬ ನಮ್ಮ (ವಾದಿಗಳ) ಸಿದ್ಧಾಂತವನ್ನೇ ಸಮರ್ಥಿಸುತ್ತದೆ; ಈ ಶ್ರುತಿವಾಕ್ಯವು, ಆಕ್ಷೇಪ ರೂಪದ ತರ್ಕವನ್ನು ಮುಂದಿಟ್ಟು ಕಣ್ಣಿಲ್ಲದೇ ಏನನ್ನು ನೋಡುತ್ತಾನೆಂದರೆ, ಕಣ್ಣಿರುವುದರಿಂದ ಸರ್ವವನ್ನೂ ನೋಡುತ್ತಾನೆಂದು ಮುಂತಾದ ಉತ್ತರವನ್ನೇ ಸಾಧಿಸುತ್ತದೆ; 'ಜಕ್ಷನ್, ಕ್ರೀಡನ್, ರಮಮಾಣಃ....' ಇತ್ಯಾದಿ ಶ್ರುತಿವಾಕ್ಯ ಗಳಿಗೆ ವಿರೋಧವಾಗದ ಅರ್ಥವನ್ನೇ ತಿಳಿಯಲು, ಪ್ರಶ್ನಾರ್ಥಕ ವಾಕ್ಯಗಳು ಸೂಚಿಸಿ, ಮುಕ್ತನು ಸ್ವರೂಪೇಂದ್ರಿಯಗಳುಳ್ಳವನೆಂದೂ, ಅಪ್ರಾಕೃತ ವಿಷಯ ಗಳನ್ನು ಭೋಗಿಸುವನೆಂಬ ಸಿದ್ಧಾಂತವನ್ನೇ ದೃಢೀಕರಿಸುತ್ತವೆ (೪೨೩). ಇಲ್ಲಿ ಪ್ರಸಕ್ತವಾದ 'ಯತ್ರ ತು' ಎಂಬಲ್ಲಿನ ಯತ್ರ ಶಬ್ದಕ್ಕೆ 'ಯದಿ' ಎಂಬ

ದೊರೆಯುವುದಿಲ್ಲ ; ಆದ್ದರಿಂದ 'ಯತ್ರ' ಎಂಬುದಕ್ಕೆ 'ಯದಿ' ಎಂಬರ್ಥವು ಹೇಗೆ ಯುಕ್ತವೆಂದರೆ, ಹೇಳುತ್ತಾರೆ :—

ಅವ್ಯಯೋಕ್ತೇಃ–ಅವ್ಯಯ ಪದಕ್ಕೆ, ಶಾಸನೇ–ಶಾಸ್ತ್ರದಲ್ಲಿ, ಅನೇಕಾರ್ಥೇ –ಅನೇಕಾರ್ಥದಲ್ಲಿ (ವಿವಿಧಾರ್ಥದಲ್ಲಿ ಪ್ರಯೋಗವುಂಟೆಂದು), ಅನು-ಶಾಸನಾತ್–ವಿಧಿ ಇರುವುದರಿಂದ (ಯತ್ರ ಎಂಬುದಕ್ಕೆ ಯದಿ ಎಂಬರ್ಥವನ್ನು ತಿಳಿಯಲವಕಾಶವಿದೆ); ಏತತ್–ಯತ್ರತ್ವಸ್ಯ, ಎಂಬ ಈ ವಾಕ್ಯವು, ಸಾಮಾನ್ಯ ವಚನಂ– ಸಾಮಾನ್ಯವಾಕ್ಯವು (ಸಾವಕಾಶವಾಕ್ಯವು); ಪೂರ್ವವಾಕ್ ತು– 'ಪರಂಜ್ಯೋತಿರುಪಸಂಪದ್ಯ' ಎಂಬ ಹಿಂದಿನ ವಾಕ್ಯವು ವಿಶೇಷವಾಕ್– (ಪರ್ಯಟನ, ವಾಹನಸಂಚಾರ, ಸ್ತ್ರೀರಮಣಾದಿಗಳನ್ನು ಹೇಳುವುದರಿಂದ) ವಿಶೇಷವಾಕ್ಯವು (ನಿರವಕಾಶ ವಾಕ್ಯವು) (ಸಾಮಾನ್ಯ ವಿಶೇಷ ವಾಕ್ಯಗಳೆರಡೂ ಒಂದೇ ವಿಷಯದಲ್ಲಿ ಪ್ರವೃತ್ತವಾಗಿದ್ದರೆ, ಸಾಮಾನ್ಯಕ್ಕಿಂತ ವಿಶೇಷವಾಕ್ಯವು ಪ್ರಬಲಪ್ರಮಾಣವೆಂಬ ನಿಯಮವಿದೆ).

**ಜಂಬುಕೋ ಮೇಷಯುದ್ಧಾರ್ಥೀ ವೃದ್ಧ್ಯರ್ಥೀ ಪೋಷಕೋಜನಃ ||**

ಒಂದು ಶ್ರುತಿಗೆ ವ್ಯಾವಹಾರಿಕವೆಂದು ಹೇಳಿ ಅಪ್ರಾಮಾಣ್ಯವನ್ನು ಮತ್ತೊಂದು ವಾಕ್ಯಕ್ಕೆ ಪ್ರಾಮಾಣ್ಯವನ್ನು ಹೇಳುವುದು ವ್ಯಾಖ್ಯಾನದ ನೀತಿ ವಿರುದ್ಧವೆನ್ನುತ್ತಾರೆ :—

---

ಅರ್ಥವನ್ನು ತಿಳಿಯಬೇಕು; ಆಗ 'ಮುಕ್ತಿಯಲ್ಲಿ ಕೇವಲ ಆತ್ಮನೇ ಇರುವನಾದರೆ, ಏನನ್ನು ನೋಡುತ್ತಾನೆ? ಎಂಬ ಆಕ್ಷೇಪಕರವಾದ (ಕಣ್ಣೂ ಇದೆ, ವಿಷಯಗಳೂ ಇವೆ, ಎಂಬ ಅರ್ಥವನ್ನು ಸೂಚಿಸುವ) ತರ್ಕರೂಪದ ವಾಕ್ಯವೆಂದು ಸಿದ್ಧವಾಗುತ್ತದೆ ; ಅವ್ಯಯಗಳಿಗೆ ನಾನಾರ್ಥಗಳುಂಟೆಂಬ ನಿಯಮವು ಶಾಸ್ತ್ರಸಮ್ಮತವಾಗಿದೆ; ಯತ್ರ ಎಂಬುದಕ್ಕೆ ಯದಿ ಎಂಬರ್ಥವನ್ನು ತಿಳಿದರೆ, ಮೊದಲಿನ ಶ್ರುತಿವಾಕ್ಯವಾದ 'ಪರಂಜ್ಯೋತಿರುಪಸಂಪದ್ಯ........ಜಕ್ಷನ್, ಕ್ರೀಡನ್, ರಮಮಾಣಃ' ಇತ್ಯಾದಿ ವಿಶೇಷ(ನಿರವಕಾಶ)ವಾಕ್ಯದ ವಿರೋಧವು, ಈ 'ಯತ್ರ ತು' ಎಂಬ ಸಾಮಾನ್ಯ (ಸಾವಕಾಶ) ವಾಕ್ಯಕ್ಕೆ ಇಲ್ಲದಂತಾಗುತ್ತದೆ (೪೨೪). ಎರಡು ಟಗರುಗಳ ಕಾಳಗವನ್ನು, ಅವುಗಳಲ್ಲಿ ಒಂದು ಮೃತವಾದರೆ ತನಗೆ ರಕ್ತಪಾನವು ದೊರೆಯುವುದೆಂದು ನರಿಯು ಇಚ್ಛಿಸುತ್ತದೆ;

ಜಂಬುಕಃ – ನರಿಯು, ಮೇಷಯುದ್ಧಾರ್ಥೀ – ಟಗರುಗಳ ಪರಸ್ಪರ ಯುದ್ಧವನ್ನೇ (ಕಾಳಗ) ಇಚ್ಛಿಸುತ್ತದೆ (ಯಾವುದೊಂದು ಮೃತವಾದರೆ, ತನಗೆ ಪಾನಕ್ಕೆ ರಕ್ತವು ದೊರೆಯುತ್ತದೆಂಬ ಕಾರಣದಿಂದ ಇಚ್ಛಿಸುತ್ತದೆ); ಪೋಷಕಃ ಜನಃ–ಆ ಟಗರುಗಳ ರಕ್ಷಕನು, ವೃದ್ಧ್ಯರ್ಥೀ–ಅವುಗಳ ವೃದ್ಧಿಯನ್ನೇ ಇಚ್ಛಿಸುತ್ತಾನೆ (ಒಂದರ ಮರಣವನ್ನು ಇಚ್ಛಿಸುವುದಿಲ್ಲ—ಸಹಿಸುವುದಿಲ್ಲ) (ಹೀಗೆ ಶ್ರುತಿಘಾತಕನಾದ ಮಾಯಾವಾದಿಯು, ತನಗೆ ಇಚ್ಛಿತವಾದ ಅರ್ಥವನ್ನು ಬಡಬಡಿಸುತ್ತಾನೆ; ಆದರೆ ಶ್ರುತಿರಕ್ಷಕರಾದ ಶ್ರೀ ವೇದವ್ಯಾಸರು ಮತ್ತು ಅವರ ಭಕ್ತರು, ಶ್ರುತಿವಿರೋಧಗಳನ್ನು ಪರಿಹರಿಸುತ್ತಾರಲ್ಲದೇ ಒಂದನ್ನು ಅಪ್ರಮಾಣವೆಂದು ಕೈಬಿಡಲು ಸಿದ್ಧರಲ್ಲ).

**ನ ಚೇತ್ ಕಾಮಾನ್ನಿತಾ ಕಾಮರೂಪಿತಾ ಗಾನಕರ್ತೃತಾ ।**
**ಭೋಕ್ತೃತಾ ಸರ್ವಕಾಮಾನಾಂ ಕುಪ್ಯಂತ್ಯೇತೇ ವಿಮುಕ್ತಿಗಾಃ ॥**

ನ ಚೇತ್–ಪರಸ್ಪರಾರ್ಥಗಳಲ್ಲಿ ವಿರೋಧವಿಲ್ಲದಂತೆ ಶ್ರುತಿಗಳ ಅರ್ಥವನ್ನು ಹೇಳದಿದ್ದರೆ, ಕಾಮಾನ್ನಿತಾ –(ಮುಕ್ತರು) ಇಚ್ಛಿತವಾದ ಆಹಾರ (ಅನ್ನಾದಿ) ಗಳುಳ್ಳವರೆಂಬುದೂ, ಕಾಮರೂಪಿತಾ – ಇಚ್ಛಿತ ರೂಪ (ದೇಹ) ವನ್ನು ಹೊಂದಿ ವಿಹರಿಸುವರು) ಎಂಬುದೂ, ಗಾನಕರ್ತೃತಾ–ಗಾನಮಾಡುವರೆಂಬುದೂ, ಸರ್ವಕಾಮಾನಾಂ–(ಇಚ್ಛಿತ) ಸರ್ವಕಾಮಗಳ, ಭೋಕ್ತೃತಾ–ಭೋಗವುಳ್ಳವರೆಂಬುದೂ, ವಿಮುಕ್ತಿಗಾಃ–ಮೋಕ್ಷವನ್ನು ಹೊಂದಿದವರಲ್ಲಿರುವ (ಜೀವನ್ಮುಕ್ತರಲ್ಲಿ–ಅಪರೋಕ್ಷಜ್ಞಾನಿಗಳಲ್ಲಿ ಇರದ), ಏತೇ–ಈ ಧರ್ಮಗಳು, ಕುಪ್ಯಂತಿ–(ನಿರವಕಾಶ ಬಹುಶ್ರುತಿಗಳ ಶುಭಕರಗಳಾದ ಅರ್ಥಗಳನ್ನು

---

ಆದರೆ ಆ ಟಗರುಗಳ ಪೋಷಕನು ಅವುಗಳೆರಡರ ವೃದ್ಧಿಯನ್ನೇ ಇಚ್ಛಿಸುತ್ತಾನಲ್ಲದೇ ಯಾವುದೊಂದರ ಮರಣವನ್ನೂ ಅಲ್ಲ; ಹೀಗೆಯೇ ಶ್ರುತಿರಕ್ಷಕರಾದ ಶ್ರೀ ವೇದವ್ಯಾಸರೂ ಅವರ ಭಕ್ತರೂ, ಶ್ರುತಿಗಳಲ್ಲಿ ಪರಸ್ಪರ ವಿರೋಧ ಪರಿಹಾರವನ್ನೇ ಇಚ್ಛಿಸುತ್ತಾರಲ್ಲದೇ, ಯಾವುದೊಂದನ್ನೂ ಅಪ್ರಮಾಣವೆಂದು ಕೈಬಿಡಲು (ಕಳೆದುಕೊಳ್ಳಲು) ಅಪೇಕ್ಷಿಸುವುದಿಲ್ಲ (೪೨೫). ಹೀಗೆ, ಶ್ರುತಿಗಳಲ್ಲಿ ಪರಸ್ಪರ ವಿರೋಧವಿಲ್ಲದಂತೆ, ಅರ್ಥಗಳನ್ನು ತಿಳಿಯದಿದ್ದರೆ, ಮುಕ್ತರ ಧರ್ಮಗಳನ್ನು ನಿರೂಪಿಸುವ 'ಕಾಮಾನ್ನೀಕಾಮರೂಪ್ಯನುಸಂಚರನ್,

ಅಪಹರಿಸುವ ಮಾಯಾವಾದಿಯ ಮೇಲೆ) ಸಿಟ್ಟಾಗುತ್ತವೆ (ಸಿಟ್ಟಾಗಿ ಆತನನ್ನು ಅಂಧತಮಸ್ಸಿನಲ್ಲಿ ತಳ್ಳುತ್ತವೆ); (ನಿರವಕಾಶವಾದ ಬಹುಶ್ರುತಿಗಳು ಅಪ್ರಮಾಣಗಳೆಂದು ಹೇಳಿ, ಸಾವಕಾಶಾರ್ಥದ ಒಂದು ಶ್ರುತಿಗೆ ತನ್ನ ಮನೋನುಕೂಲವಾದ ಅರ್ಥವನ್ನು ಹೇಳುವವಗೆ, ಅಥವಾ ನಿರವಕಾಶ ಶ್ರುತಿಗೆ ಅನುಕೂಲವಾದ ಅರ್ಥವನ್ನು ಹೇಳುವವಗೆ, ಈ ಶಿಕ್ಷೆಯು ನ್ಯಾಯವೇ ಆಗಿರುವುದು).

**ತವ ತ್ವಾಪಾತವಾಕ್ಯಾರ್ಥಾತ್ ಶೂನ್ಯತೈವೇತ್ಯಪಾರ್ಥತಾ ।**
**ಚಿತ್ರಚಿದ್ರೂಪದೇಹಾಸ್ತಜ್ಜೀವಾಃ ಸರ್ವೇಽಪಿ ಸರ್ವದಾ ॥ ೪೨೭ ॥**

ತವ ತು–ನಿನಗಾದರೂ (ಮಾಯಾವಾದಿಗೆ), ಆಪಾತವಾಕ್ಯಾರ್ಥಾತ್–ಮೇಲೆ ತೋರುವ ವಾಕ್ಯಾರ್ಥದಿಂದ, ಶೂನ್ಯತಾ ಏವ–('ವಿಜ್ಞಾತಾರಮೇಕೇನ ವಿಜಾನೀಯಾತ್ ಯೇನೇದಮಖಿಲಂ ವೇದ, ತಂ ಚ ಕೇನ ವಿಜಾನೀಯಾತ್', ಎಂಬ ವೇದವಾಕ್ಯಗಳಿಂದ ಸ್ವಸ್ವರೂಪಜ್ಞಾನವಾಗಲಿ, ಬ್ರಹ್ಮಸ್ವರೂಪಜ್ಞಾನವಾಗಲಿ, ಇಲ್ಲವೆಂದು ತೋರುವುದರಿಂದ) ಶೂನ್ಯತ್ವವೇ ಉಂಟಾಗುತ್ತದೆ; ಇತಿ–ಹೀಗೆ, ಅಪಾರ್ಥತಾ – (ತನಗೆ ಅಭಿಮತವಾದ ಚಿದ್ರೂಪತ್ವವೂ, ಸ್ವಪ್ರಕಾಶತ್ವವೂ ಈ ವಾಕ್ಯಗಳಿಂದ ಸಿದ್ಧವಾಗದೇ) ಈ ವೇದವಾಕ್ಯಗಳೇ ವ್ಯರ್ಥಗಳೆಂದೂ (ಪ್ರಾಪ್ತವಾಗುತ್ತದೆ); ತತ್–ಆದ್ದರಿಂದ (ಪ್ರಸಕ್ತ ಶ್ರುತಿವಾಕ್ಯಗಳಿಗೆ ತರ್ಕ ರೀತಿಯಿಂದ ಆಕ್ಷೇಪಿಸುತ್ತವೆಂಬರ್ಥವನ್ನು,

---

ಏತತ್ಸಾಮಗಾಯನ್ನಾಸ್ತೇ' ಎಂಬ ಶ್ರುತಿಯು, ಇಚ್ಛಿತವಾದ ಆಹಾರವುಳ್ಳವರು, ಇಚ್ಛಿತ ದೇಹಗಳುಳ್ಳವರು, ಗಾಯನಮಾಡುತ್ತ ಆನಂದದಿಂದ ವಿಹರಿಸುವರು, ಇಚ್ಛಿತವಾದ ಸರ್ವಭೋಗಗಳುಳ್ಳವರೆಂಬುದನ್ನು ನಿರಾಕರಿಸುವ ಮಾಯಾವಾದಿಯ ಮೇಲೆ ಕೋಪಗೊಂಡು, ಅಧೋಗತಿಯನ್ನು ಹೊಂದಿಸುತ್ತದೆ (೪೨೬). ಆಪಾತತಃ ತೋರುವ ಅರ್ಥಗಳಿಂದ ಮೋಹಿತರಾಗಿ, ಅನ್ಯ ನಿರವಕಾಶ ಶ್ರುತಿವಾಕ್ಯಗಳಿಗೆ ಅವಿರೋಧವಾದ ಅರ್ಥಗಳನ್ನು ತಿಳಿಯದ ಮಾಯಾವಾದಿಗೆ, ಶೂನ್ಯತ್ವವೇ ಸಿದ್ಧವಾಗುವುದಲ್ಲದೇ, ಆತ್ಮನಿಗೆ, ತನಗೆ ಅಭಿಮತವಾದ ಚಿದ್ರೂಪತ್ವವಾಗಲಿ, ಸ್ವಪ್ರಕಾಶತ್ವವಾಗಲಿ, 'ವಿಜ್ಞಾತಾರಮೇಕೇ ನ ವಿಜಾನೀಯಾತ್' ಇತ್ಯಾದಿ ಶ್ರುತಿಯಿಂದ ಸಿದ್ಧಿಸುವುದಿಲ್ಲವಾದ್ದರಿಂದ, ಈ ಶ್ರುತಿಗಳು ಆಕ್ಷೇಪಕೇ ತರ್ಕಪರವೆಂಬ ಅರ್ಥವನ್ನು ನಮ್ಮಂತೆ

ನಮ್ಮಂತೆ ತಿಳಿಯಲೇಬೇಕಾದ್ದರಿಂದ), ಸರ್ವೇಽಪಿ–ಸಮಸ್ತ, ಜೀವಾಃ–ಮುಕ್ತ ಜೀವರೂ (ಸ್ತ್ರೀಪುರುಷರೆಲ್ಲರೂ), ಸರ್ವದಾ–ನಿತ್ಯದಲ್ಲಿಯೂ, ಚಿತ್ರಚಿದ್ರೂಪ ದೇಹಾಃ–ಆಶ್ಚರ್ಯಕರವಾದ ಚೇತನಸ್ವರೂಪ ದೇಹವುಳ್ಳವರೇ (ಆಗಿರುವರು).

**ಚಿದ್ರೂಪಾಕಾರಹೇತುತ್ವಾಲ್ಲಿಂಗದೇಹೇಽಪಿ ತತ್ಪದಂ ।**
**ಬಂಧೇ ತು ಪ್ರಾಕೃತೋಽಪ್ಯಸ್ತಿ ಮುಕ್ತೌ ಚಿನ್ಮಾತ್ರಕಂ ವಪುಃ ॥ ೪೨೮॥**

ಚಿದ್ರೂಪಾಕಾರಹೇತುತ್ವಾತ್–ಚೇತನ ಸ್ವರೂಪವೇ (ಅದರ ಆಕಾರವೇ) (ತನ್ನ ಆಕಾರದ) ಹೇತುವಾಗಿವುಳ್ಳದ್ದರಿಂದ, ಲಿಂಗದೇಹೇ ಅಪಿ–ಲಿಂಗದೇಹ ದಲ್ಲಿ ಸಹ, ತತ್ಪದಂ–ದೇಹ ಪದವಿದೆ; ಬಂಧೇ ತು–ಸಂಸಾರದಲ್ಲಿ (ಆವರಣ ರೂಪದ ಲಿಂಗದೇಹದಿಂದ ಬಂಧಿತವಾದಾಗ) ಮಾತ್ರ, ಪ್ರಾಕೃತಃ ಅಪಿ–ಪ್ರಾಕೃತವಾದ ದೇಹವೂ, ಅಸ್ತಿ – ಇರುತ್ತದೆ; ಮುಕ್ತೌ – ಮುಕ್ತಿಯಲ್ಲಿ (ಆ ಬಂಧದ ಮೋಚನೆಯಾದಮೇಲೆ), ಚಿನ್ಮಾತ್ರಕಂ ವಪುಃ–ಚಿನ್ಮಾತ್ರನಾದ (ಕೇವಲ ಚೇತನಾತ್ಮಕವಾದ) ದೇಹವು (ಇರುತ್ತದೆ).

**ಹರೇಸ್ತು ನಿತ್ಯಮುಕ್ತಸ್ಯ ದೇಹಃ ಸರ್ವತ್ರ ಸರ್ವದಾ ।**
**ಬಲಜ್ಞಾನಪ್ರಭಾಸೌಖ್ಯಸೌಂದರ್ಯಾದಿ ಗುಣಾತ್ಮಕಃ ॥ ೪೨೯ ॥**

ನಿತ್ಯಮುಕ್ತಸ್ಯ – 'ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ' ಎಂದು ನಿತ್ಯಮುಕ್ತನೆಂದು ಶ್ರುತಿಸಿದ್ಧನಾದ, ಹರೇಃ–ಶ್ರೀಹರಿಯ, ದೇಹಃ ತು–ದೇಹ ವಾದರೋ (ಒಂದು ಕಾಲದಲ್ಲಿ ಬದ್ಧನಾಗಿದ್ದು ನಂತರ ಮುಕ್ತನಾದ ಜೀವ

---

ತಿಳಿಯಲೇಬೇಕಾದ್ದರಿಂದ, ಮುಕ್ತಜೀವರೆಲ್ಲರೂ ಸರ್ವದಾ ಆಶ್ಚರ್ಯಕರವಾದ, ಚಿದ್ರೂಪ (ಜ್ಞಾನದೇಹ) ಗಳುಳ್ಳವರೆಂದೇ ಅಂಗೀಕರಿಸಬೇಕು (೪೨೭). ಚೇತನ ಸ್ವರೂಪವೇ ತನ್ನ ಆಕಾರದ ಕಾರಣವಾಗಿ ಉಳ್ಳದ್ದಾದ್ದರಿಂದಲೇ ಲಿಂಗ ದೇಹವು, ಆ ನಾಮ (ಲಿಂಗವೆಂಬ) ವುಳ್ಳದ್ದಾಗಿದೆ; ಜೀವನು, ಲಿಂಗದೇಹ ದಿಂದ ಬಂಧಿತನಾಗಿರುವವರೆಗೆ, ಪ್ರಾಕೃತದೇಹವನ್ನೂ, ಹೊಂದುತ್ತಾನೆ; ಲಿಂಗದೇಹದ ಮೋಚನೆಯಾದ ನಂತರ ಚಿನ್ಮಾತ್ರವಾದ ದೇಹವು ಮಾತ್ರ ನಿಲ್ಲುತ್ತದೆ (೪೨೮). ಶ್ರೀಹರಿಯು ನಿತ್ಯಮುಕ್ತನು; ಆತನ ದೇಹವು ಸರ್ವದಾ ಚೇತನಾತ್ಮಕವೇ ಆಗಿದೆ—ಒಂದು ಕಾಲದಲ್ಲಿ ಬದ್ಧನಾಗಿದ್ದು ಜೀವನಂತೆ ಮುಕ್ತನಾದವನಲ್ಲ; ಆತನ ದೇಹವು ನಿತ್ಯಗಳಾದ, ಬಲ, ಜ್ಞಾನ, ಪ್ರಭಾ,

ನಿಂದ ವಿಲಕ್ಷಣವಾದ ದೇಹವು), ಸರ್ವದಾ – ನಿತ್ಯವೂ, ಸರ್ವತ್ರ – ಎಲ್ಲ (ಅವತಾರಾದಿ ಸಮಸ್ತ) ರೂಪಗಳಲ್ಲಿಯೂ, ಬಲಜ್ಞಾನಪ್ರಭಾಸೌಖ್ಯ ಸೌಂದರ್ಯಾದಿಗುಣಾತ್ಮಕಃ–ಬಲ, ಜ್ಞಾನ, ಕಾಂತಿ, ಆನಂದ, ಸೌಂದರ್ಯಾದಿ ಶುಭಗುಣಸ್ವರೂಪವೇ (ಆಗಿರುತ್ತದೆ) (ಸದಾ ಸರ್ವತ್ರ ಅಪ್ರಾಕೃತದೇಹಿ ಯಾಗಿರಲು ನಿತ್ಯಮುಕ್ತನೆಂಬುದು ಕಾರಣವಾಗಿದೆ).

**ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮಿತಿ ಶ್ರುತಿಃ ।**
**ಭಗವತ್ಪ್ರಾಪ್ತಿತಃ ಪಶ್ಚಾತ್ತನುಂ ವಕ್ತಿ ವಿಮುಕ್ತಿಗಾಂ ॥ ೪೩೦ ॥**

ನಿರವಕಾಶಾರ್ಥದ ಅನ್ಯಶ್ರುತಿಯೂ, ನಿತ್ಯಮುಕ್ತನಾದ ಶ್ರೀಹರಿಯು, ಜೀವರಿಗೆ, ಅವರ ಸ್ವರೂಪಭೂತ ನಿತ್ಯಚಿದಾನಂದಾತ್ಮಕ ದೇಹವನ್ನೂ (ದುಃಖ ಸ್ಪರ್ಶವಿಲ್ಲದ ನಿತ್ಯಸುಖಕ್ಕೆ ಕಾರಣವಾದ ದೇಹವನ್ನು) ದೊರಕಿಸುವನೆಂದು ಹೇಳುತ್ತದೆನ್ನುತ್ತಾರೆ :—

ತಸ್ಯೈಷಃ ಆತ್ಮಾ–ಈ (ನಿತ್ಯಮುಕ್ತನಾದ) ಭಗವಂತನು ಮುಕ್ತಜೀವ ನಿಗೆ, ಸ್ವಾಂ–ತನ್ನ, ತನೂಂ–ಸ್ವರೂಪವನ್ನು, ವಿವೃಣುತೇ–ಪ್ರಕಾಶಗೊಳಿಸು ತ್ತಾನೆ; ಇತಿ ಶ್ರುತಿಃ – 'ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ, ನ ಬಹುನಾ ಶ್ರುತೇನ। ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ' ಎಂಬ ಶ್ರುತಿಯು, ಭಗವತ್ ಪ್ರಾಪ್ತಿತಃ ಪಶ್ಚಾತ್ – ಭಗವಂತನ ಪ್ರಾಪ್ತಿಯಾದ ನಂತರ (ಜೀವನು, ಭಗವಂತನ ಪ್ರಸಾದ ಪಾತ್ರನಾಗಿ, ಆತನನ್ನು ಹೊಂದಿದ ನಂತರ),

---

ಸೌಖ್ಯ, ಸೌಂದರ್ಯಾದಿ ಗುಣಸ್ವರೂಪವಾಗಿರಲು, ನಿತ್ಯಮುಕ್ತನಾಗಿರುವುದೇ ಕಾರಣವು (೪೨೯). ■ ನಿತ್ಯಮುಕ್ತನಾದ ಭಗವಂತನು, ಯಾವ ಜೀವನನ್ನು ತನ್ನವನೆಂದು ಅಂಗೀಕರಿಸುವನೋ, ಆತನಿಗೆ ಸ್ವರೂಪದೇಹದ ನಿತ್ಯಾಭಿವ್ಯಕ್ತಿ ಯನ್ನು ಅನುಗ್ರಹಿಸುತ್ತಾನೆ; ಭಗವಂತನನ್ನು ಹೊಂದಿದ ನಂತರ, ಮುಕ್ತ ನಾಗಿ ಜೀವನು, ಸ್ವಸ್ವರೂಪದಿಂದ ಸದಾ ಸ್ಥಿತನಾಗುವನೆಂದು, 'ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ। ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥'

ವಿಮುಕ್ತಿಗಾಂ–ಮುಕ್ತಿಯಲ್ಲಿ ಸ್ಥಿತವಾಗುವ, ತನೂಂ – ಮುಕ್ತ ಜೀವದೇಹವನ್ನು, ವಕ್ತಿ–ಹೇಳುತ್ತದೆ.[1]

**ತದಾಪೀಶತನೋಃ ಸಾಕ್ಷಾತ್ಕಾರಂ ವಾ ವಕ್ತಿ ವಾಗ್ಘಿ ಸಾ ।**
**ಅರ್ಥದ್ವಯಂ ಯತೋ ವಾಕ್ಯಸ್ಯಾಸ್ಯ ಶ್ಲೋಕ್ಯಂ ಬುಧೈಃ ಸದಾ ॥**

'ಯಮೇವೈಷ ವೃಣುತೇ' ಎಂಬ ಶ್ರುತಿಗೆ ಅರ್ಥಾಂತರವನ್ನೂ ಹೇಳುತ್ತಾರೆ :—

ಸಾ ವಾಕ್ – 'ಯಮೇವೈಷ ವೃಣುತೇ....' ಶ್ರುತಿವಾಕ್ಯವು, ತದಾ–ಮುಕ್ತಿಯಲ್ಲಿ, ಈಶತನೋಃ–ಶ್ರೀನಾರಾಯಣರೂಪದ, ಸಾಕ್ಷಾತ್ಕಾರಂ ಅಪಿ ವಾ–ಪ್ರತ್ಯಕ್ಷ ದರ್ಶನವನ್ನು ಸಹ, ವಕ್ತಿ–ಹೇಳುತ್ತದೆ (ವಿವೃಣುತೇ, ಎಂದು ಹೇಳಿರುವುದರಿಂದ, ಯಾವ ಪ್ರತಿಬಂಧಕವೂ ಇಲ್ಲದ್ದರಿಂದ ಸಾಕ್ಷಾತ್ಕಾರವು ಸದಾಕಾಲದಲ್ಲಿರುತ್ತದೆಂದೂ ಸೂಚಿತವಾಗಿದೆ) ; ಹಿ – ಹೀಗಿರುವುದರಿಂದ, ಅಸ್ಯ ವಾಕ್ಯಸ್ಯ–ಈ ಶ್ರುತಿವಾಕ್ಯಕ್ಕೆ, ಯತಃ – ಯಾವ ಕಾರಣದಿಂದ, ಅರ್ಥದ್ವಯಂ–ಎರಡರ್ಥಗಳೂ ('ಸ್ವಾಂ ತನೂಂ' ಎಂಬಲ್ಲಿರುವ ಸ್ವಶಬ್ದದಿಂದ ಮುಕ್ತನ ಸ್ವರೂಪವೂ, ಸ್ವಶಬ್ದವಾಚ್ಯನಾದ ಶ್ರೀ ನಾರಾಯಣನ ವಿಗ್ರಹವೂ, ನಿತ್ಯದಲ್ಲಿ ಸಾಕ್ಷಾತ್ತಾಗಿ ತೋರುವುವೆಂಬ ಎರಡು ಅರ್ಥಗಳೂ ಹೊಂದುತ್ತವೆಯಾಗಿ), ಸದಾ–ಸರ್ವದಾ, ಬುಧೈಃ–ವಿವೇಕಿಗಳಿಂದ, ಶ್ಲೋಕ್ಯಂ–ಸ್ತುತ್ಯವೇ (ಆಗಿರುತ್ತವೆ).

---

ಎಂಬ ಶ್ರುತಿಯು ಹೇಳುತ್ತದೆ (೪೩೦). ಇದೇ ಶ್ರುತಿಯು, ಮುಕ್ತಿಯಲ್ಲಿ ಶ್ರೀ ನಾರಾಯಣರೂಪದ ಪ್ರತ್ಯಕ್ಷ ನಿತ್ಯದರ್ಶನವನ್ನೂ, ಜೀವನಿಗೆ ಹೇಳುತ್ತದೆ; ಹೀಗೆ ಸ್ವಸ್ವರೂಪವನ್ನೂ, ಜೀವಸ್ವರೂಪವನ್ನೂ ಅಭಿವ್ಯಕ್ತಿಗೊಳಿಸುವನೆಂಬ ಅರ್ಥದ್ವಯವುಳ್ಳ ಈ ಶ್ರುತಿಯು, ಜ್ಞಾನಿಗಳಿಂದ ಸ್ತುತ್ಯವೇ ಆಗಿದೆ (೪೩೧).

1 ಶಾಸ್ತ್ರಪ್ರವಚನದಿಂದಾಗಲಿ, ಬುದ್ಧಿಬಲದಿಂದಾಗಲಿ, ಬಹುಶ್ರುತನೆಂದಾಗಲಿ ಭಗವಂತನು ಲಭ್ಯನಲ್ಲ; ಕಿಂತು, ಯಾವ ಜೀವನನ್ನು ಬಂಧಮುಕ್ತನನ್ನಾಗಿ ಮಾಡುವ ಇಚ್ಛೆಯುಳ್ಳವನಾಗುವನೋ ಈ ವಿಧ ಪ್ರಸಾದಪಾತ್ರನಾದವನಿಗೆ ಮಾತ್ರ ('ಏನಂ ಮೋಚಯಾಮಿ' ಎಂಬ ಇಚ್ಛೆಗೆ ಪಾತ್ರನಾದ ಜೀವನಿಗೆ ಮಾತ್ರ), ತನ್ನ ರೂಪದ ನಿತ್ಯದರ್ಶನವನಿತ್ತು, ಜೀವನು ತನ್ನ ಅನಾದಿನಿತ್ಯನಾದ ಸ್ವರೂಪದಿಂದ (ದೇಹದಿಂದ) ಸ್ಥಿತನಾಗುವಂತೆ ಅನುಗ್ರಹಿಸುತ್ತಾನೆಂದು, ಉದಾಹೃತಶ್ರುತಿಯು ಭಾವಾರ್ಥವಾಗಿದೆ.

**ತನುಃ ಶರೀರಮೇವೇಯಂ ರೂಪಮಾತ್ರಂ ನ ವೈ ತನುಃ ।**
**ಘಟಸ್ವರೂಪೇ ಕಿಂ ಕಶ್ಚಿದ್ವಿಪಶ್ಚಿತ್ ಪ್ರಾಹ ದೇಹತಾಂ ॥ ೪೩೨ ॥**

ಹಿಂದೆ ಹೇಳಿದ ಶ್ರುತಿಯಿಂದ ಈ ಶ್ರುತಿಯು ಹೇಗೆ ಸ್ಪಷ್ಟವಾಗುತ್ತದೆ, ಎಂದರೆ ಹೇಳುತ್ತಾರೆ:—

ಇಯಂ—ಈ, ತನುಃ – 'ಸ್ವಾಂ ತನೂಂ' ಎಂಬಲ್ಲಿರುವ ತನು ಎಂಬ ಶಬ್ದವು, ಶರೀರ ಏವ—ದೇಹವೆಂಬ ಅರ್ಥವುಳ್ಳದ್ದೇ ಆಗಿದೆ; ರೂಪಮಾತ್ರಂ—ಕೇವಲ ರೂಪವು, ತನುಃ ನ ವೈ—ದೇಹವಲ್ಲವಷ್ಟೆ; ಕಶ್ಚಿತ್—ಯಾವನೊಬ್ಬ, ವಿಪಶ್ಚಿತ್—ಜ್ಞಾನಿಯು, ಘಟಸ್ವರೂಪೇ – ಘಟ (ಪಟಾದಿ) ಸ್ವರೂಪದಲ್ಲಿ, ದೇಹತಾಂ – ದೇಹತ್ವವುಳ್ಳದ್ದೆಂದು, ಪ್ರಾಹ ಕಿಂ—ಹೇಳಿರುವನೇ? (ಇಲ್ಲ—ಯಾರೂ ಘಟಸ್ವರೂಪವನ್ನು, ಘಟದ ದೇಹವೆಂದು ಹೇಳುವುದಿಲ್ಲ—ಆದ್ದರಿಂದ ಪರಮಾತ್ಮನಿಗಾಗಲಿ, ಮುಕ್ತನಿಗಾಗಲಿ, ಸ್ವರೂಪವಿದೆ—ದೇಹವಿಲ್ಲ, ಎಂದು ಹೇಳಲು ಬರುವುದಿಲ್ಲ).

**ಸ್ವಾಮಿತ್ಯುಕ್ತ್ಯಾ ತನುಃ ಸಾ ಚ ಸ್ವರೂಪೈವೇತಿ ಸಿದ್ಧ್ಯತಿ ।**
**ಜಡಾನ್ಯದೇಹನಿರ್ಮೋಕ್ಷಾತ್ ಸ್ವೀಯತ್ವಾರ್ಥೋ ಹ್ಯಪಾರ್ಥಕಃ ॥**

ಆ ದೇಹಕ್ಕೆ, ಸ್ವರೂಪಭೂತವೇ, ಎಂಬುದು ಹೇಗೆಂದರೆ ಹೇಳುತ್ತಾರೆ:

ಸ್ವಾಂ ಇತ್ಯುಕ್ತ್ಯಾ—'ಸ್ವಾಂ ತನೂಂ' ಎಂದು ಸ್ವಾಂ ಪ್ರಯೋಗದಿಂದಲೇ, ಸಾ ಚ ತನುಃ—ಆ ದೇಹವು, ಸ್ವರೂಪಾ ಏವ ಇತಿ—ಸ್ವರೂಪಭೂತವಾದುದೇ

---

ಈ ಶ್ರುತಿವಾಕ್ಯದಲ್ಲಿ ಪ್ರಸಕ್ತವಾದ 'ತನು' ಶಬ್ದವು ದೇಹವನ್ನು ಹೇಳುತ್ತದೆಯಲ್ಲದೇ ರೂಪಮಾತ್ರವನ್ನಲ್ಲ; ಯಾವ ಪಂಡಿತನು, ಘಟಸ್ವರೂಪವನ್ನು, ಘಟದ ದೇಹವೆಂದು ಹೇಳುವನು? ಯಾರೂ ಹಾಗೆ ಹೇಳುವುದಿಲ್ಲ; ಆದ್ದರಿಂದ ಪರಮಾತ್ಮನಿಗಾಗಲಿ, ಮುಕ್ತಜೀವನಿಗಾಗಲಿ, ಸ್ವರೂಪವಿದೆ—ದೇಹವಿಲ್ಲ ಎಂಬುದು ಸರಿಯಲ್ಲ (೪೩೨). ಮತ್ತು 'ಸ್ವಾಂ' ತನೂಂ ಎಂದು ಹೇಳಿದುದರಿಂದಲೇ, ಅದು ಸ್ವರೂಪದೇಹವೆಂದೂ ಸಿದ್ಧವಾಗುತ್ತದೆ; 'ಸ್ವಾಂ' ಎಂಬ ಪದಕ್ಕೆ 'ಸ್ವೀಯ'ವೆಂಬರ್ಥವೂ ಯುಕ್ತವಾಗುವುದಿಲ್ಲ; ಜೀವನಿಗೆ ತನ್ನಿಂದ ಭಿನ್ನವಾದ ಲಿಂಗದೇಹ ಪ್ರಾಕೃತ ದೇಹಗಳು ನಿತರಾಂ ಬಿಡುಗಡೆಯನ್ನು ಹೊಂದಿರುತ್ತವೆ; ಪರಮಾತ್ಮನಿಗೆ ಅವು, ಎಂದೂ ಇಲ್ಲದವು;

ಎಂದು, ಸಿದ್ಧ್ಯತಿ – ಸಿದ್ಧವಾಗುತ್ತದೆ; (ಸ್ವಾಂ ಎಂಬುದಕ್ಕೆ 'ಸ್ವೀಯ' (ತನ್ನದೇ) ಎಂಬರ್ಥವಾಗಬಹುದಲ್ಲವೇ? ಎಂದರೆ), ಜಡಾನ್ಯದೇಹ ನಿರ್ಮೋಕ್ಷಾತ್ – ತನ್ನಿಂದ ಭಿನ್ನವಾದ ಜಡದೇಹ ನಿತರಾಂ ಮೋಚನವು (ಸರ್ವಪ್ರಕಾರದ ಬಿಡುಗಡೆಯು), ಸ್ವೀಯತ್ವಾರ್ಥಃ–(ಮುಕ್ತನಾಗುವ ಕಾಲದಲ್ಲಿ ಲಿಂಗಶರೀರ ಮತ್ತು ಸ್ಥೂಲಶರೀರಗಳು ತೊಲಗಿರುವುದರಿಂದ) 'ಸ್ವೀಯ' (ತನ್ನದೆಂಬ) ಅರ್ಥವು, ಮುಕ್ತಿಯಲ್ಲಿ ನಿತ್ಯ ಅಭಿವ್ಯಕ್ತವಾಗಿರುವುದೆಂಬ ದೇಹಕ್ಕೆ, ಅಪಾರ್ಥಕಃ ಹಿ – ವ್ಯರ್ಥವಾಗುತ್ತದೆ ; ಭಿನ್ನದೇಹಕ್ಕೆ ಮಾತ್ರ ಸ್ವೀಯತ್ವವನ್ನು ಹೇಳಬಹುದು.[1]

**ದೃಙ್ಮಾತ್ರಂ ಜಡದೇಹಸ್ಯ ಕಿಂ ಮಹಾಕರುಣಾಫಲಂ ॥ ೪೩೪ ॥**

ಜಡದೇಹವೆಂಬ ಅರ್ಥವನ್ನು ಹೇಳಿದರೆ ಬೇರೆ ಬಾಧಕವನ್ನು ಹೇಳುತ್ತಾರೆ :—

ಜಡದೇಹಸ್ಯ–ಜಡದೇಹದ, ದೃಙ್ಮಾತ್ರಂ–(ನಿತ್ಯ) ದರ್ಶನಮಾತ್ರವು, ಮಹಾಕರುಣಾಫಲಂ ಕಿಂ–(ಮುಕ್ತಜೀವನಲ್ಲಿ ಶ್ರೀ ನಾರಾಯಣನು ಕರುಣಾ ಸಮುದ್ರನಾಗಿ ಅನುಗ್ರಹಿಸುವ ಫಲವಿಶೇಷವೇನು? (ಅಲ್ಲ) (ವೃಣುತೇ— ಎಂದರೆ ಅಂಗೀಕರಿಸುವುದೆಂಬ ಮಹಾಕಾರುಣ್ಯದ ಫಲವೆಂಬುದು, ಶ್ರವಣ

---

ಆದ್ದರಿಂದ ಸ್ವೀಯತ್ವವನ್ನು ಹೇಳಲು ಬರುವುದಿಲ್ಲ; ತನ್ನಿಂದ ಭಿನ್ನವಾದ ದೇಹಕ್ಕೆ ಮಾತ್ರ ಸ್ವೀಯತ್ವವನ್ನು ಹೇಳಬಹುದು—ನಿತ್ಯದೇಹವು ಸ್ವೀಯವಲ್ಲ—ಸ್ವರೂಪವೇ ಸರಿ; ಸ್ವೀಯ ಎಂಬ ಅರ್ಥವು ಸ್ವರೂಪಕ್ಕೆ ಅನ್ವಯಿಸುವುದಿಲ್ಲವಾದ್ದರಿಂದ, ಶ್ರುತಿಯು ಅರ್ಥವಿಲ್ಲದ್ದಾಗುತ್ತದೆ (೪೩೩). ಶ್ರವಣ ಮನನಾದಿಗಳಿಂದ ಲಭಿಸಿದ ಭಗವಂತನ ಮಹಾಪ್ರಸಾದದ ನಂತರ, ಮುಕ್ತಿಯಲ್ಲಿ (ದೇಹಕ್ಕೆ ಜಡದೇಹವೆಂಬರ್ಥವನ್ನು ತಿಳಿದರೆ), ನಿತ್ಯ ಜಡದೇಹ ದರ್ಶನಲಾಭವಾಗುವುದೆಂಬುದು, 'ವೃಣುತೇ' ಎಂಬುದರಿಂದ ಹೇಳಲಾದ

---

1 ಸ್ವಾಂ ಪದಕ್ಕೆ ಸ್ವರೂಪಭೂತವೆಂಬರ್ಥವೇ ಯುಕ್ತವಾಗುತ್ತದೆ; ಆತ್ಮ ಆತ್ಮೀಯರೆಂಬ (ತನ್ನವರೆಂಬ) ಜ್ಞಾತಿ, ಧನಾದಿಗಳಲ್ಲಿ ಪ್ರಯೋಗಿಸುವಂತೆ, ಇಲ್ಲಿ ಸ್ವಶಬ್ದವು ಪ್ರಥಮಾವಿಭಕ್ತಿಯಲ್ಲಿಲ್ಲದಿರುವುದರಿಂದ, ಸ್ವರೂಪಭೂತವೆಂಬರ್ಥವನ್ನು ತಿಳಿಯುವುದೇ ಯೋಗ್ಯವಾಗುತ್ತದೆ.

ಮನನಾದಿಗಳಿಂದ ದೊರೆತ ಮಹಾಪ್ರಸಾದದ ನಂತರ ಪುನಃ ಜಡದೇಹದ ದರ್ಶನವು ಸಂಸಾರಹೇತುವಾದ್ದರಿಂದ, ವಿರುದ್ಧವೆನಿಸುತ್ತದೆ.).

**ಅನಾದಿನಿತ್ಯತಾ ಚಾಸ್ಯ ವ್ಯಕ್ತಿಮಾತ್ರಪ್ರಕೀರ್ತನಾತ್ ।**
**ಸಿದ್ಧಾ ತೇನ ಚ ಸಂಸಿದ್ಧಾ ಜಡಾನ್ಯೈವ ತನೂರಿಯಂ ॥ ೪೩೫ ॥**

ಅಸ್ಯ–(ಸ್ವಾಂ ತನೂಂ) ಎಂದು ಪ್ರಸಕ್ತವಾದ ಈ ದೇಹಕ್ಕೆ, ವ್ಯಕ್ತಿಮಾತ್ರಪ್ರಕೀರ್ತನಾತ್–ಕೇವಲ ಪ್ರಕಟವಾಗುವಿಕೆಯನ್ನು ಹೇಳುವುದರಿಂದ, (ಅನಾದಿತ್ವವೂ, 'ವಿವೃಣುತೇ' ಎಂಬುದರಿಂದ ಸದಾ ಇರುತ್ತದೆಂಬರ್ಥವನ್ನು ಹೇಳುವುದರಿಂದ ನಿತ್ಯತ್ವವೂ,) ಅನಾದಿನಿತ್ಯತಾ ಚ – ಅನಾದಿ ನಿತ್ಯತ್ವವೂ, ಸಿದ್ಧಾ–ಸಿದ್ಧವಾಗುತ್ತದೆ; ತೇನ–ಆದರಿಂದ (ಅನಾದಿ ನಿತ್ಯತ್ವದಿಂದ), ಇಯಂ ತನೂಃ–ಈ ದೇಹವು, ಜಡಾನ್ಯಾ ಏವ–ಜಡಭಿನ್ನವಾದುದೇ (ಅಪ್ರಾಕೃತವೇ ಎಂದೂ), ಸಂಸಿದ್ಧಾ–ದೃಢವಾಗುತ್ತದೆ (ಸ್ಥಿರವಾಗಿ ಸಮರ್ಥಿಸಲ್ಪಡುತ್ತದೆ).

**ಅತಃ ಶ್ರುತ್ಯರ್ಥತತ್ವಜ್ಞಾಸ್ತನುಂ ಮುಕ್ತಪರಾತ್ಮನೋಃ ।**
**ಚಿದಾನಂದಮಯೀಂ ಪ್ರಾಹುರ್ನ ಪ್ರಾಹುರ್ಜಡದೇಹಿತಾಂ ॥ ೪೩೬ ॥**

ಅತಃ – ಶ್ರುತಿಯು ಪ್ರಯೋಗಿಸಿರುವ ಪದಪರ್ಯಾಲೋಚನೆಯಿಂದ ಅನಾದಿನಿತ್ಯ ಸ್ವರೂಪಭೂತ ದೇಹವೇ ಸಿದ್ಧಿಸುವುದರಿಂದ, ಶ್ರುತ್ಯರ್ಥತತ್ವಜ್ಞಾಃ –ಶ್ರುತ್ಯರ್ಥದ ಯಥಾರ್ಥಜ್ಞಾನಿಗಳು, ಮುಕ್ತಪರಾತ್ಮನೋಃ – ಮುಕ್ತರಿಗೂ ಮತ್ತು ಪರಮಾತ್ಮನಿಗೂ, ಚಿದಾನಂದಮಯೀಂ–ಜ್ಞಾನಾನಂದ ಪ್ರಚುರವಾದ

---

ಭಗವಂತನ, ಮಹಾಕಾರುಣ್ಯದ ಫಲವೆಂಬುದಕ್ಕೆ ವಿರುದ್ಧವೆನಿಸುತ್ತದೆ ; ಜಡ ದೇಹ ದರ್ಶನವು ಸಂಸಾರಹೇತುವಾದ್ದರಿಂದ, ಮಹಾ ಕರುಣಾಶಾಲಿಯಾದ ಭಗವಂತನಿಗೆ ಇದು ಉಚಿತವೆನಿಸುವುದಿಲ್ಲ (೪೩೪). 'ಸ್ವಾಂ ತನೂಂ' ಎಂದು ಹೇಳಿದ ದೇಹವು, ಅಭಿವ್ಯಕ್ತಿಗೊಳಿಸಲ್ಪಡುವುದೆಂದು ಹೇಳಿರುವುದರಿಂದ ಮೊದಲೇ ಇದ್ದುದೆಂದೂ (ಅನಾದಿಯೆಂದೂ), ವಿವೃಣುತೇ ಎಂಬುದರಿಂದ ನಿತ್ಯವೆಂದೂ ಸಿದ್ಧವಾಗುತ್ತದೆ; ಆದ್ದರಿಂದ ಈ ದೇಹವು ಜಡಭಿನ್ನವಾದುದೇ ಸರಿ –ಅಪ್ರಾಕೃತವೆಂದೇ ನಿಶ್ಚಯವಾಗುತ್ತದೆ (೪೩೫). ಶ್ರುತಿಯು ಪ್ರಯೋಗಿಸುವ ಪದ ಪರ್ಯಾಲೋಚನೆಯಿಂದ, ಶ್ರುತ್ಯರ್ಥಗಳ ಯಥಾರ್ಥವನ್ನು ಬಲ್ಲ ಜ್ಞಾನಿಗಳು, ಮುಕ್ತರಿಗೂ, ಪರಮಾತ್ಮನಿಗೂ ಜ್ಞಾನಾನಂದಾತ್ಮಕ ದೇಹವನ್ನೇ ಹೇಳುತ್ತಾರೆ–

(ಕೇವಲ ಗುಣಾತ್ಮಕ), ತನುಂ–ದೇಹವನ್ನು, ಪ್ರಾಹುಃ–ಹೇಳುವರು ; ಜಡ ದೇಹಿತಾಂ–ಜಡದೇಹವುಳ್ಳವರೆಂದು, ನ ಪ್ರಾಹುಃ–(ಎಂದೂ) ಹೇಳುವುದಿಲ್ಲ.

**ಸಾ ಚ ಜನ್ಮಜರಾರೋಗಹ್ರಾಸನಾಶಾದ್ಯಭಾವತಃ ।**
**ನ ಕ್ಲೇಶದಾ ತಯೋಸ್ತಸ್ಮಾತ್ಕಥಂ ದೋಷಾವಹಾ ವದ ॥ ೪೩೭ ॥**

ಸಾ ಚ–ಆ ಸ್ವರೂಪಭೂತದೇಹವಾದರೋ (ಜೀವ ಪರಮಾತ್ಮರಿಬ್ಬರ ದೇಹಗಳೂ), ಜನ್ಮಜರಾರೋಗಹ್ರಾಸನಾಶಾದ್ಯಭಾವತಃ–ಜನ್ಮ, ಮುಪ್ಪು, ರೋಗ, ಕುಗ್ಗುವಿಕೆ, ನಾಶ ಮೊದಲಾದವುಗಳಿಲ್ಲದ ಕಾರಣದಿಂದ, ಕ್ಲೇಶದಾ ನ–ದುಃಖಪ್ರದವಲ್ಲ ; ತಸ್ಮಾತ್–ಆದ್ದರಿಂದ, ತಯೋಃ–ಜೀವಪರಮಾತ್ಮರಿಗೆ, ಕಥಂ – ಹೇಗೆ, ದೋಷಾವಹಾ – ಮಾಲಿನ್ಯವನ್ನುಂಟುಮಾಡುವುದು (ಆಗುತ್ತದೆ ?), ವದ–(ನೀನೇ) ಹೇಳು (ಜಡದೇಹವಿದ್ದರೆ ಮಲಿನದಿಂದ ಶಬಲತ್ವ ಪ್ರಾಪ್ತವಾಗುತ್ತದೆ; ಚಿದಾನಂದಾತ್ಮಕ ದಿವ್ಯದೇಹವಿರಲು, ಮಾಲಿನ್ಯವು ಹೇಗುಂಟಾದೀತು ? ಅದರೊಂದಿಗೆ ಜಡದೇಹವೂ ಸೇರಿದರೆ ಶಬಲತ್ವವೇ ಉಂಟಾಗುತ್ತದೆ).

**ಕಿಂ ತು ಸೌಂದರ್ಯಸೌರಭ್ಯಪ್ರಭಾಮುಂದಸ್ಮಿತೇಕ್ಷಿತೈಃ ।**
**ಆಲಿಂಗನೈರಾಲಪನೈಶ್ಚಿತ್ರಮಾಲ್ಯಾನುಲೇಪನೈಃ ॥ ೪೩೮ ॥**
**ಪರಾರ್ಘ್ಯಭೂಷಣೈರ್ಮಾಕ್ತನೃತ್ತವಾದಿತ್ರಕೀರ್ತನೈಃ ।**
**ಭೋಗೈಶ್ಚ ವಿವಿಧೈರ್ನಿತ್ಯಂ ಮಹೋತ್ಸಾಹಾವಹೈವ ಹಿ ॥ ೪೩೯ ॥**

---

ಜಡದೇಹವುಳ್ಳವರೆಂದಲ್ಲ (೪೩೬). ಆ ಸ್ವರೂಪಭೂತವಾದ ಚಿದಾನಂದಾತ್ಮಕ ದೇಹವು, ಜನ್ಮ, ರೋಗ, ಜರಾ, ಹ್ರಾಸ, ನಾಶಾದಿ ಭಾವಗಳಿಲ್ಲದ್ದು; ಅದರಿಂದ ಕ್ಲೇಶಪ್ರದವಲ್ಲ; ಆದ್ದರಿಂದ ಈ ಸ್ವಭಾವದ ದೇಹಗಳು, ಜೀವ ಪರಮಾತ್ಮರಿಗೆ, ದೋಷರೂಪದ ಶಬಲತ್ವವನ್ನುಂಟುಮಾಡುವುವು ? ನೀನೇ ಹೇಳು; ಜಡಮಿಶ್ರಣವಿಲ್ಲದೇ ಶಬಲತ್ವವಿಲ್ಲ–ಮಾಲಿನ್ಯವಿಲ್ಲ (೪೩೭). ಆದರೆ ಬೇರೊಂದು ದೃಷ್ಟಿಯಿಂದ ಗುಣರೂಪದ ಶಬಲತ್ವವಿದೆ (ಮಿಶ್ರಣವಿದೆ) ; ಎಲ್ಲ ಮುಕ್ತರೂ ನಿರ್ದೋಷಿಗಳು ಮಾತ್ರವಲ್ಲ ; ದೋಷವು ಯಾವುದೂ ಅವರನ್ನು ಸ್ಪರ್ಶಿಸಲಾರದು ; ಸೌಂದರ್ಯ, ಸೌಗಂಧ್ಯ, ಕಾಂತಿ, ಮಂದಹಾಸಯುಕ್ತ ನೋಟ, ಆಲಿಂಗನ, ಆಲಾಪ, ವಿಚಿತ್ರಮಾಲಾ, ಅನುಲೇಪನಗಳು, ಅನರ್ಘ್ಯ

**ಅತಸ್ತಯಾ ಶಬಲತಾ ನ ವಿದ್ವಜ್ಜನಸಂಮತಾ ॥ ೪೪೦ ॥**

ಮುಕ್ತರ ದೇಹವು ಯಾವ ದೋಷಕ್ಕೂ ಎಡೆಗೊಡದುದು ಮಾತ್ರವಲ್ಲ; ಮುಕ್ತಿಯಲ್ಲಿನ ಸಕಲ ಮಹೋತ್ಸಾಹ ಸಂಪಾದಕವಾಗಿ ಮಹಾಶ್ರೇಯಸ್ಕರವಾದುದೂ, ಎಂದು ಹೇಳುತ್ತಾರೆ :—

ಕಿಂತು—(ದೋಷರಹಿತವೆಂದು ಮಾತ್ರವಲ್ಲ) ಮತ್ತೇನೆಂದರೆ, ಸೌಂದರ್ಯ ಸೌರಭ್ಯಪ್ರಭಾಮಂದಸ್ಮಿತೇಕ್ಷಿತೈಃ—ಸೌಂದರ್ಯ, ಸುಗಂಧ, ಕಾಂತಿ, ಮಂದ ಹಾಸಯುಕ್ತ ನೋಟಗಳಿಂದಲೂ, ಆಲಿಂಗನೈಃ—ಆಲಿಂಗನಗಳಿಂದ, ಆಲಪನೈಃ—ಆಲಾಪಗಳಿಂದಲೂ, ಚಿತ್ರಮಾಲ್ಯಾನುಲೇಪನೈಃ—ವಿಚಿತ್ರವಾದ ಪುಷ್ಪಮಾಲೆ ಮತ್ತು ಸುಖಾಭಿವೃದ್ಧಿಕರ ಅನುಲೇಪನಗಳಿಂದಲೂ, ಪರಾರ್ಘ್ಯಭೂಷಣೈಃ—ಬೆಲೆ ಕಟ್ಟಲಾಗದ (ಅನರ್ಘ್ಯವಾದ) ಒಡಿವೆಗಳಿಂದಲೂ, ಮೌಕ್ತನೃತ್ತವಾದಿತ್ರ ಕೀರ್ತನೈಃ—ಮುಕ್ತಲೋಕದ ನರ್ತನ, ವಾದ್ಯ, ಕೀರ್ತನಗಳಿಂದಲೂ, ಚ—ಮತ್ತು, ವಿವಿಧೈಃ—ಬಹುಪ್ರಕಾರದ (ಕಲ್ಪನೆಯನ್ನು ಮೀರಿದ), ಭೋಗೈಃ—ಸುಖಭೋಗಗಳಿಂದ, ನಿತ್ಯಂ—ಸರ್ವಕಾಲದಲ್ಲಿ, ಮಹೋತ್ಸಾಹಾವಹಾ ಏವ—ಮಹಾ ಉತ್ಸಾಹದಿಂದ ಪ್ರವೃತ್ತಿಸುವುದಕ್ಕೆ ಯೋಗ್ಯವಾದುದೇ (ಮುಕ್ತರ ದೇಹವು ಆಗಿರುವುದೆಂಬುದು), ಹಿ—ಶ್ರುತಿಸಿದ್ಧವೇ ಆಗಿದೆ ; ಅತಃ—ಆದ್ದರಿಂದ (ಉಕ್ತರೀತಿಯಲ್ಲಿ ದೋಷಕ್ಕೆಡೆಯಿಲ್ಲದ ಗುಣಸಂಪಾದಕ ದೇಹವಾದ್ದರಿಂದ), ತಯಾ—ಆ ಮುಕ್ತದೇಹದಿಂದ, ಶಬಲತಾ—ದೋಷಮಿಶ್ರತೆಯು (ಆ ದೇಹಕ್ಕೆ ಶಬಲತ್ವವನ್ನು ತಿಳಿಯುವುದು), ವಿದ್ವಜ್ಜನಸಂಮತಾ ನ — ವಿದ್ವಜ್ಜನರಿಗೆ (ಜ್ಞಾನಿಗಳಿಗೆ) ಸಂಮತವಾದುದು (ಅಂಗೀಕಾರಾರ್ಹವಾದುದು) ಅಲ್ಲ (ನಿತ್ಯ ಶುದ್ಧಸ್ವರೂಪದ ದೇಹದಲ್ಲಿ ಶಬಲತ್ವಕ್ಕೆ ಅವಕಾಶವೇ ಇಲ್ಲ).

---

ವಾದ ಆಭರಣಗಳು, ನರ್ತನ, ವಾದ್ಯ, ಕೀರ್ತನ, ವಾದ್ಯ, ಕೀರ್ತನೆಗಳು ; ಈ ಮೊದಲಾದವುಗಳಿಂದ, ಮುಕ್ತರು ಮಹಾ ಉತ್ಸವಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತ, ವಿವಿಧ (ಇಚ್ಛಿತ) ಭೋಗಗಳುಳ್ಳವರಾಗಿ, ಪರಿಶುದ್ಧಸ್ವರೂಪವುಳ್ಳವರೇ ಆಗಿರುತ್ತಾರೆ—ಯಾವ ದೋಷಾತ್ಮಕ ವಸ್ತುಗಳ ಮಿಶ್ರಣಕ್ಕೂ (ಶಬಲತೆಗೂ) ಅವಕಾಶವಿಲ್ಲ; ಹೀಗೆಂಬುದು, ವಿದ್ವಜ್ಜನಸಂಮತವಾದ ನಿಶ್ಚಿತಾಭಿಪ್ರಾಯವಾಗಿರುತ್ತದೆ (೪೩೮—೪೪೦).

*

**ದದತೀಶಂ ಬಲಂ ಚ ತ್ವಚ್ಛಬಲತ್ವಂ ಬಹಿಃ ಕ್ಷಿಪೇತ್ ।**
**ಬಿಂದುಮಾತ್ರಾಧಿಕತ್ವೇಽಪಿ ಪ್ರಬಲೋ ದುರ್ಬಲಂ ಕ್ಷಿಪೇತ್ ॥ ೪೪೧ ॥**

ಪೂರ್ಣ ಜ್ಞಾನಾನಂದಸ್ವರೂಪನಾದ ಭಗವಂತದಲ್ಲಿ ಶಬಲತ್ವ (ದೋಷ ಮಿಶ್ರಿತತ್ವ) ವಿಲ್ಲೆಂಬುದನ್ನು ಸಾಹಿತ್ಯಮುದ್ರೆಯಿಂದ ಸಾಧಿಸುವುದನ್ನು ಇಲ್ಲಿ ನೋಡಬೇಕು :—

ಶಂ—ಸುಖವನ್ನೂ, ಬಲಂ ಚ—ಶಕ್ತಿಯನ್ನೂ (ಕಲ್ಪನಾತೀತ ಶಕ್ತಿವಿಶೇಷ ಗಳನ್ನೂ), ದದತೀ—ಕೊಡುವ (ಮುಕ್ತಜೀವರಿಗೆ ಅನುಗ್ರಹಿಸುವ ಭಗವಂತನ ಸ್ವರೂಪವು), ತ್ವಚ್ಛಬಲಂ—ನಿನ್ನ(ಮಾಯಾವಾದಿಯು ಭಗವಂತನಿಗೆ ಹೇಳುವ) ಶಬಲರೂಪವನ್ನು, ಬಹಿಃ—(ತನ್ನಿಂದ) ಹೊರಗೆ (ಅಮುಕ್ತ ಜೀವಾದಿಗಳಲ್ಲಿ), ಕ್ಷಿಪೇತ್ – ದೂಡುತ್ತದೆ (ಪಂಚಭೂತಾತ್ಮಕ ದೇಹವುಳ್ಳವರಲ್ಲಿಯೇ ಶಬಲತ್ವ ವೆಂದರ್ಥ) ; ಬಿಂದುಮಾತ್ರಾಧಿಕತ್ವೇ ಅಪಿ – ಬಿಂದುಮಾತ್ರದಿಂದ ಅಧಿಕ ನಾದರೂ (ಶಂಬಲನು ಭಗವಂತನು, ನಿನ್ನ ಭಗವಂತನು ಶಬಲನು—ಶಂಬಲನಲ್ಲಿ ಬಿಂದುಮಾತ್ರವೇ ಅಧಿಕವಷ್ಟೆ); ಪ್ರಬಲಃ—ಬಲಿಷ್ಠನು, ದುರ್ಬಲಂ—ದುರ್ಬಲ ನನ್ನು (ಬಲರಹಿತನನ್ನು), ಕ್ಷಿಪೇತ್—ನಾಶಗೊಸುತ್ತಾನೆ (ಸುಖಜ್ಞಾನರೂಪ ನಾದ ಭಗವಂತನು, 'ಶಬಲ'ನು, ನಿನ್ನ 'ಶಬಲತ್ವ'ವನ್ನು ನಿರಾಕರಿಸುವನು).

**ಚಿತ್ರಪ್ರಕಾಶಬಲತಃ ಶಬಲೋ ವಾಸ್ತು ನಃ ಪ್ರಭುಃ ।**
**ಯತೋಽಸ್ಯ ಹಾಸೋ ಧವಲಸ್ತನುರ್ನೀಲಾಽಧರೋಽರುಣಃ ॥ ೪೪೨ ॥**

---

ಸುಖ ಶಕ್ತಿಗಳನ್ನು—ಅಲೌಕಿಕ ವಿಶೇಷ ಧರ್ಮಗಳನ್ನು, ಮುಕ್ತಜೀವ ರಿಗೆ ಅನುಗ್ರಹಿಸುವುದರಿಂದ ಭಗವಂತನ ಸ್ವರೂಪವು (ಶಂ, ಬಲಂ, ಚ) ಶಂಬಲನೆನಿಸುವನು ; ಮಾಯಾವಾದಿಯ ಭಗವಂತನು ಶಬಲನು ; ನಮ್ಮ ಭಗವಂತನು ಬಿಂದು ಮಾತ್ರ ಆಧಿಕ್ಯವುಳ್ಳವನಾದರೂ, ಮಹಾಬಲಿಷ್ಠನು ; ದುರ್ಬಲನಾದ ಶಬಲನನ್ನು ನಾಶಗೊಳಿಸುತ್ತಾನೆ (ಇಲ್ಲವೆಂದು ಲೀಲೆಯಿಂದ ತಿರಸ್ಕರಿಸುತ್ತಾನೆ); ಪ್ರಾಕೃತದೇಹವಿದ್ದರೆ ಮಾತ್ರ ದೋಷಗಳಿಂದ ಶಬಲತ್ವವು ಮುಕ್ತರಿಗೆ ಉಂಟಾಗಬಹುದು; ಅದಿಲ್ಲದ ಕಾರಣ, ದೋಷರೂಪದ ಶಬಲತ್ವವು ಮುಕ್ತಚೇತನರಿಗಿಲ್ಲ (೪೪೧). ವಿಚಿತ್ರಗಳಾದ (ಆಶ್ಚರ್ಯಕರ) ಕಾಂತಿ ವಿಶೇಷಗಳಿಂದ ನಮ್ಮ ಸ್ವಾಮಿಯು ಶಬಲನೂ ಆಗಿದ್ದಾನೆ; ಅದರಿಂದ ನಮ್ಮ

ಮಾಯಾವಾದಿಯು ಹೇಳುವ ದೋಷರೂಪದ ಶಬಲತ್ವವನ್ನು ನಿರಾಕರಿಸಿ, ಗುಣರೂಪದ ಕೆಲವು ಶಬಲತ್ವವನ್ನು (ಮಿಶ್ರಣವನ್ನು) ಅಂಗೀಕರಿಸುತ್ತಾರೆ :—

ಯತಃ—ಯಾವ ಕಾರಣದಿಂದ, ಅಸ್ಯ – ಪರಮಾತ್ಮನ, ಹಾಸಃ—ನಗುಮುಖವು (ಮಂದಹಾಸವು), ಧವಲಃ—ಶ್ವೇತವರ್ಣವೋ, ತನುಃ—ದೇಹವು, ನೀಲಃ—ನೀಲವರ್ಣದ್ದೋ, ಅಧರಃ – ಕೆಳದುಟಿಯು, ಅರುಣಃ—ಕೆಂಪಗಿರುವುದೋ, (ಹಸ್ತಪಾದತಲಗಳು ರಕ್ತವರ್ಣದವುಗಳೋ ಇತ್ಯಾದಿ, ದೇಹದ ಅನ್ಯ ಅವಯವಗಳ ಹಾಗೂ ನಖಗಳ ವಿವಿಧ ವರ್ಣಗಳೋ ಎಂದು ಉಪಲಕ್ಷಣದಿಂದ ಗ್ರಹಿಸಬೇಕು), ಚಿತ್ರಪ್ರಕಾಶಬಲತಃ—ವಿಚಿತ್ರ ಕಾಂತಿಗಳ ಬಲದಿಂದ, ನಃ—ನಮ್ಮ, ಪ್ರಭುಃ – ಸ್ವಾಮಿಯಾದ ಶ್ರೀ ನಾರಾಯಣನು (ಪರಬ್ರಹ್ಮನು), ಶಬಲಃ ವಾ ಅಸ್ತು – ಶಬಲನು (ಮಿಶ್ರನು) ಆದರೂ ಆಗಿರಲಿ (ಈ ಶಬಲತೆಯಿಂದ ನಮ್ಮ ಸಿದ್ಧಾಂತಕ್ಕೆ ಏನೂ ಹಾನಿಯಿಲ್ಲ).[1]

**ನಾಂತಂ ನ ಮಧ್ಯಂ ನೈವಾದಿಂ ಯಸ್ಯಾಪಶ್ಯದ್ರಣೇಽರ್ಜುನಃ ।**
**ಅನಂತಬಾಹುಜಠರವಕ್ತ್ರನೇತ್ರಭ್ರುಮದ್ಭ್ರುವಃ ।**
**ವಿಶ್ವರೂಪಾಖ್ಯರೂಪಸ್ಯ ದೃಷ್ಟಸ್ಯ ಜ್ಞಾನಚಕ್ಷುಷಾ ॥ ೪೪೩ ॥**

---

ಸಿದ್ಧಾಂತಕ್ಕೆ ಯಾವ ಹಾನಿಯೂ ಇಲ್ಲ ; ಆತನ ಮಂದಹಾಸವು ಧವಲಕಾಂತಿಯುಳ್ಳದ್ದಾದರೆ, ದೇಹವು ನೀಲವರ್ಣದ ಕಾಂತಿಯುಳ್ಳದ್ದೂ, ಅಧರೋಷ್ಠವು (ಕೆಳದುಟಿಯು) ರಕ್ತವರ್ಣವುಳ್ಳದ್ದೂ ಆಗಿರುತ್ತದೆ; ಈ ವಿಧದ ಕಾಂತಿಗಳಿಂದ ಮಿಶ್ರ(ಶಬಲ)ನೆಂದರೆ, ಯಾವ ದೋಷವೂ ಇಲ್ಲ(೪೪೨). 'ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ' ಎಂದು ಮುಂತಾಗಿ ಗೀತೆಯಲ್ಲಿ ವರ್ಣಿತವಾದ ವಿಶ್ವರೂಪವನ್ನು, ಅರ್ಜುನನು, ಆದಿಮಧ್ಯಾಂತರಹಿತವಾದ, ನಿತ್ಯವೂ, ವ್ಯಾಪ್ತವೂ ಆದ ದಿವ್ಯರೂಪವನ್ನು, ಶ್ರೀಕೃಷ್ಣಾನುಗ್ರಹ

---

[1] ಭಗವಂತನು ತನ್ನ ಶಬಲತ್ವವನ್ನು ಸಾಹಿತ್ಯಮುದ್ರೆಯಿಂದ ಪ್ರತಿಪಾದಿಸುತ್ತ, ಪರನಿರಾಕರಣವನ್ನು ಸಾಧಿಸುವ ಕುಶಲತೆಯನ್ನು ಕಂಡು ಮಂದಹಾಸ ಮಾಡುವನೋ ಎಂಬುದನ್ನು ಸೂಚಿಸುವಂತೆ, ಧವಲ ಮಂದಹಾಸವನ್ನೇ ಮೊದಲಲ್ಲಿ ನಿರೂಪಿಸಿರುವರೆಂದು ತಿಳಿಯಬಹುದಾಗಿದೆ.

**ಅನಂತಗಂಧಾಭರಣಾನ್ಯನಂತಕುಸುಮಾನಿ ಚ ।**
**ಅನಂತಾನ್ಯಂಬರಾಣ್ಯಸ್ಯ ಕೇನ ದತ್ತಾನಿ ಸರ್ವದಾ ॥ ೪೪೪ ॥**

ಅಮಾಯಿಕವೂ ನಿತ್ಯವೂ ಆದ ದೇಹವು ಭಗವಂತನಿಗೆ ಉಂಟೆಂದು ಗೀತಾವಾಕ್ಯದಿಂದ ಸಾಧಿಸುತ್ತಾರೆ :—

ಯಸ್ಯ—ಯಾವ (ದೇಹಕ್ಕೆ), ಜ್ಞಾನಚಕ್ಷುಷಾ—ಜ್ಞಾನದೃಷ್ಟಿಯಿಂದ, ದೃಷ್ಟಸ್ಯ—ಕಾಣಲ್ಪಟ್ಟ, ವಿಶ್ವರೂಪಾಖ್ಯರೂಪಸ್ಯ—ವಿಶ್ವರೂಪವೆಂಬ (ಶ್ರೀಕೃಷ್ಣನ) ರೂಪಕ್ಕೆ,[1] ಅಂತಂ ನ—ಅಂತವಿಲ್ಲ(ನಿತ್ಯವೂ) ; ಮಧ್ಯಂ ನ—ಮಧ್ಯವಿಲ್ಲ ; ಆದಿಂ ನೈವ—ಆದಿಯೂ (ಮೊದಲು) ಇಲ್ಲದುದನ್ನಾಗಿ, ಅರ್ಜುನಃ—ಅರ್ಜುನನು, ರಣೇ—ಯುದ್ಧಭೂಮಿಯಲ್ಲಿ, ಅಪಶ್ಯತ್—ಕಂಡನೋ ('ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ' ಎಂಬ ಗೀತಾವಾಕ್ಯವು ಸೂಚಿತವೆಂದು ತಿಳಿಯಬೇಕು) ; (ಅದು) ಅನಂತಬಾಹುಜಠರವಕ್ತ್ರನೇತ್ರಭ್ರಮದ್ಭ್ರುವಃ—ಅಸಂಖ್ಯವಾದ ಬಾಹುಗಳು, ಉದರ, ಮುಖ, ನೇತ್ರ (ಕಣ್ಣು), ಚಲಿಸುವ ಭ್ರುವ (ಹುಬ್ಬು) ಗಳುಳ್ಳದ್ದು (ಉತ್ಪತ್ತಿ ವಿನಾಶಾದಿ ರಹಿತ ನಿತ್ಯದೇಹಗಳುಳ್ಳವನನ್ನಾಗಿಯೇ ಅರ್ಜುನನು ಕಂಡನು) ; ಅನಂತಗಂಧಾಭರಣಾನಿ—ನಿತ್ಯಗಳಾದ ಗಂಧಾಭರಣಗಳುಳ್ಳವುಗಳು (ಬಾಹೂದರಾದಿ ಆ ದೇಹದ ಅವಯವಗಳು), ಅನಂತಕುಸುಮಾನಿ ಚ — ನಿತ್ಯವಾದ ಪುಷ್ಪಮಾಲಾದಿಗಳನ್ನೂ, ಅನಂತಾನಿ—ನಿತ್ಯಗಳಾದ, ಅಂಬರಾಣಿ—(ಪೀತಾಂಬರಾದಿ)

---

ದಿಂದ ಲಭ್ಯವಾದ ಜ್ಞಾನದೃಷ್ಟಿಯಿಂದ ಯುದ್ಧದಲ್ಲಿ ಕಂಡನು; ಆ ವಿಶ್ವರೂಪವು ಅನಂತ, ಬಾಹು, ಉದರ, ಮುಖ, ಕಣ್ಣು, ಚಲಿಸುವ ಭ್ರುವಗಳನ್ನುಳ್ಳದ್ದಾಗಿತ್ತು; ಅಸಂಖ್ಯಗಳಾದ, ಗಂಧ ಆಭರಣಗಳನ್ನು, ಅಸಂಖ್ಯಪುಷ್ಪಮಾಲೆಗಳನ್ನು, ಅಸಂಖ್ಯಪೀತಾಂಬರಾದಿ ದಿವ್ಯವಸ್ತ್ರಗಳನ್ನು ಧರಿಸಿದ್ದುದೂ ಆಗಿದ್ದನ್ನು ಕಂಡನು ; ಈ ಎಲ್ಲ ವಸ್ತ್ರಾಭರಣಾದಿ ವಸ್ತುಗಳನ್ನು, ಅರ್ಜುನನು ಆ ವಿಶ್ವರೂಪವನ್ನು ಕಾಣುವ ಸಮಯದಲ್ಲಿ, ಯಾರು ಕೊಟ್ಟರು ? ಕೊಟ್ಟವರು

---

[1] 'ಪಶ್ಯಾಮಿ ದೇವಾಂಸ್ತವ ದೇವ ದೇಹೇ', (ಗೀತಾ) ಎಂದು ವಿಶ್ವರೂಪವು ದೇಹ ಶಬ್ದದಿಂದ ಪ್ರಸ್ತುತವಾಗಿರುವುದರಿಂದ, ರೂಪವೆಂದರೆ ದೇಹವೆಂದೇ ತಿಳಿಯಬೇಕು ; ವಿಶ್ವರೂಪ ದೇಹವನ್ನೇ ಕಂಡು, ಅರ್ಜುನನು ವರ್ಣಿಸಿರುವನು.

ವಸ್ತ್ರಗಳು ; ಸರ್ವದಾ[1]—ಎಲ್ಲ ಕಾಲದಲ್ಲಿ ವಿದ್ಯಮಾನವಾದ, ಅಸ್ಯ—ಈ ವಿಶ್ವ ರೂಪಕ್ಕೆ, ಕೇನ—ಯಾರಿಂದ, ದತ್ತಾನಿ—ಕೊಡಲ್ಪಟ್ಟಿವೆ ? (ಯಾರೂ ಕೊಡಲು ಶಕ್ಯವಿಲ್ಲದ ವಸ್ತ್ರಾಭರಣಗಳೂ ನಿತ್ಯಗಳೇ ಆಗಿವೆ) (ಅರ್ಜುನನು ವಿಶ್ವರೂಪ ವನ್ನು ಕಂಡ ಸಮಯದಲ್ಲಿ ಈ ವಸ್ತುಗಳನ್ನು ಕೊಟ್ಟವರು ಯಾರೂ ಇಲ್ಲದ ಕಾರಣ ಅವೆಲ್ಲವೂ ನಿತ್ಯವೇ ; ಅವುಗಳನ್ನು ಧರಿಸಿದ ದೇಹವೂ ನಿತ್ಯವೆಂದು ಹೇಳಲೇನಿದೆ ?).

**ಸವಿತ್ರೀ ತಸ್ಯ ದೇಹಸ್ಯ ನಾದಿತಿರ್ನಾಪಿ ದೇವಕೀ ।**
**ಯೋ ದೌತ್ಯಮಾಚರದ್ದೇಹಃ ಸ ಏವೈತಾದೃಶಃ ಕಿಲ ॥ ೪೪೫ ॥**

ತಸ್ಯ ದೇಹಸ್ಯ—ಈ ವಿಶ್ವರೂಪದೇಹದ, ಸವಿತ್ರೀ—ಜನನಿಯು, ಅದಿತಿಃ—ಅದಿತೀದೇವಿಯು, ನ – ಅಲ್ಲ (ದೇವಮಾತೆಯಾದ ಅದಿತಿಯಲ್ಲ) ; ನಾಪಿ ದೇವಕೀ—ವಸುದೇವಭಾರ್ಯಳಾದ ದೇವಕಿಯೂ ಅಲ್ಲ ; ಯಃ ದೇಹಃ—ಯಾವ ದೇಹವು, ದೌತ್ಯಂ—ಅರ್ಜುನ ಸಾರಥ್ಯವನ್ನು, ಆಚರತ್—ಆಚರಿಸಿತೋ, ಸಃ ಏವ—ಅದೇ ದೇಹವೇ, ಏತಾದೃಶಃ ಕಿಲ—ವಿಶ್ವದೇಹವಷ್ಟೆ ; (ಕಿಲ ಎಂಬುದು,

---

ಯಾರೂ ಇಲ್ಲ ; ಅವೆಲ್ಲವೂ ನಿತ್ಯವೇ—ಲಕ್ಷ್ಮೀಸ್ವರೂಪಾತ್ಮಕಗಳೇ—ಅವು ಗಳನ್ನು ಧರಿಸಿದ ವಿಶ್ವರೂಪದ ದೇಹವೂ ನಿತ್ಯವೆಂದೇ ತಿಳಿದುಬರುತ್ತದೆ (೪೪೩—೪೪೪). ಈ ವಿಶ್ವರೂಪ ದೇಹದ ಜನನಿಯು, ದೇವಮಾತೆಯಾದ ಅದಿತಿಯಲ್ಲ ; ವಸುದೇವಪತ್ನಿಯಾದ ದೇವಕೀದೇವಿಯೂ ಅಲ್ಲ ; ಅರ್ಜುನನ

---

[1] 'ಸರ್ವದಾ' ಎಂಬುದರಿಂದ, ವಿಶ್ವರೂಪದ ಗಂಧಾಭರಣ ಪುಷ್ಪ, ವಸ್ತ್ರಾದಿ ಗಳಿಗೆ, ಲಕ್ಷ್ಮ್ಯಾತ್ಮಕವಿರುವುದರಿಂದ, ಅನಾದ್ಯನಂತತ್ವವನ್ನು ಸೂಚಿಸಿರುವರು ; ಆದಿ, ಅಂತ್ಯ, ಮಧ್ಯರಹಿತಗಳೆಂಬ ಪದಗಳು, ನಿತ್ಯತ್ವವನ್ನು ವ್ಯಾಪ್ತತ್ವವನ್ನು ಹೇಳುತ್ತವೆ ; (ನ ಮಧ್ಯಂ—ಎಂಬುದು ವ್ಯಾಪ್ತಸೂಚಕವು) ; ಶ್ರೀವಿಷ್ಣುವು, ಧರಿಸುವ ವಸ್ತ್ರ, ಆಭರಣ, ಆಯುಧಾದಿಗಳು ಸ್ವಸ್ವರೂಪಾತ್ಮಕವಾದವುಗಳನ್ನು, ಅವುಗಳನ್ನು ನಿತ್ಯವೂ ಧರಿಸಿರು ವನು ; ಹಾಗೆಯೇ ಲಕ್ಷ್ಮ್ಯಾತ್ಮಕ ವಸ್ತ್ರಾಭರಣಾದಿಗಳನ್ನೂ, ಏಕಾಂತಭಕ್ತಶ್ರೇಷ್ಠಳಾದ ಶ್ರೀ ಲಕ್ಷ್ಮೀದೇವಿಯ, ಪ್ರೀತಿಗಾಗಿ ಧರಿಸಿರುವನು ; ಕಾಲವಿಶೇಷಗಳಲ್ಲಿ, ಸಂದರ್ಭಾನು ಸಾರ, ಅನ್ಯದೇವತೆಗಳಿಂದ ಅಭಿಮನ್ಯವಾದವುಗಳನ್ನು (ಚಕ್ರ—ಕಾಮದೇವ ; ಶಂಖ—ಅನಿರುದ್ಧ ಇತ್ಯಾದಿ) ಧರಿಸುತ್ತಾನೆ ; ಭಕ್ತರು ಭಕ್ತಿಯಿಂದ ಅರ್ಪಿಸುವ ಪ್ರಾಕೃತ ವಸ್ತ್ರ ಪುಷ್ಪಾದಿಗಳನ್ನು ಧರಿಸುತ್ತಾನೆಂಬ ವಿಶೇಷ ವಿವೇಕವನ್ನು ನೆನಪಿನಲ್ಲಿಡಬೇಕು.

ಸಾರಥ್ಯವನ್ನು ಮಾಡಿದ ಶ್ರೀಕೃಷ್ಣದೇಹವೇ ವಿಶ್ವರೂಪವು, ಅನ್ಯದೇಹವಲ್ಲ–ದೇಹದ್ವಯಕ್ಕೆ ಅವಕಾಶವಿಲ್ಲೆಂಬುದನ್ನು ಹೇಳುತ್ತದೆ).[1]

**ಅನಾದ್ಯನಂತದೇಹೇಽಸ್ಮಿನ್ ಕ್ವ ನಿರಾಕಾರತಾ ಚ ತೇ ।**
**ದಿವ್ಯದೃಷ್ಟ್ಯೈವ ದೃಷ್ಟೋಽಯಂ ಕಥಂ ಮಾಯಾಮಯೋ ಭವೇತ್॥**

ಅಸ್ಮಿನ್–ಈತನಲ್ಲಿ (ಪರಮಾತ್ಮನಲ್ಲಿ), ಅನಾದ್ಯನಂತದೇಹೇ (ಸತಿ)–ನಿತ್ಯಗಳಾದ ಅನಂತದೇಹಗಳಿರುತ್ತಿರಲು, ತೇ – ನಿನ್ನ (ಮಾಯಾಮತದ), ನಿರಾಕಾರತಾ–(ಪರಮಾತ್ಮನು) ನಿರಾಕಾರನೆಂಬ ಪ್ರಮೇಯವು, ಕ್ವ–ಎಲ್ಲಿದೆ? (ಉಕ್ತರೀತಿಯಿಂದ ದೇಹವು ಅನಾದಿನಿತ್ಯವಾಗಿರಲು, ನಿರಾಕಾರತ್ವವು ದೇಶಾಂತರಕ್ಕೆ ಹೋಯಿತು; ಮತ್ತು 'ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ' ಎಂಬ ವಚನದಿಂದ, ಅರ್ಜುನನು ದಿವ್ಯದೃಷ್ಟಿಯಿಂದ ವಿಶ್ವರೂಪವನ್ನು ಕಂಡನು; ಭ್ರಾಂತದೃಷ್ಟಿಗೋಚರವು ಮಾಯಾವಸ್ತುವು; ಆದ್ದರಿಂದ ವಿಶ್ವರೂಪವು ಮಾಯಾಮಯವು ಹೇಗಾದೀತು?); ದಿವ್ಯದೃಷ್ಟ್ಯೈವ –ದಿವ್ಯದೃಷ್ಟಿಯಿಂದಲೇ, ಅಯಂ–ವಿಶ್ವರೂಪವು, ದೃಷ್ಟಃ–ಕಾಣಲ್ಪಟ್ಟಿದೆ; ಮಾಯಾಮಯಃ – ಮಾಯಾಮಯವಾದುದು, ಕಥಂ ಭವೇತ್–ಹೇಗಾಗುತ್ತದೆ? (ಅಲ್ಲವೇ ಅಲ್ಲ).

---

ಸಾರಥ್ಯವನ್ನು ನಡೆಸಿದ ಶ್ರೀಕೃಷ್ಣರೂಪವೇ ಈ ವಿಶ್ವರೂಪವು; ಬೇರೆಯಲ್ಲ (೪೪೫). ಈ ಪರಮಾತ್ಮನು, ಹೀಗಿರುವ ಅನಾದಿನಿತ್ಯಗಳಾದ ಅನಂತದೇಹಗಳುಳ್ಳವನಾಗಿದ್ದಾನೆ—ಹೀಗಿರಲು, ನಿನ್ನ (ಮಾಯಾವಾದಿಯ) ನಿರಾಕಾರನೆಂಬ ಪ್ರಕ್ರಿಯೆಯು, ದೇಶಾಂತರವನ್ನು ಸೇರಿತು; ದಿವ್ಯದೃಷ್ಟಿಯಿಂದ, (ಜ್ಞಾನದೃಷ್ಟಿಯಿಂದ) ಜ್ಞಾನಿಗಳು ಕಂಡ (ಕಾಣುವ) ಈತನ (ಭಗವಂತನ) ದೇಹಗಳು, ಮಾಯಾಮಯಗಳು ಹೇಗಾಗುತ್ತವೆ? (ಅಲ್ಲ); 'ದಿವ್ಯಂ ದದಾಮಿ ತೇ ಚಕ್ಷುಃ' ಎಂದು ದಿವ್ಯದೃಷ್ಟಿಯನ್ನು ಅನುಗ್ರಹಿಸಿ, ತನ್ನ ದಿವ್ಯದೇಹಸಂದರ್ಶನವನ್ನು ಮಾಡಿಸಿರುವನಷ್ಟೆ (೪೪೬).

---

[1] 'ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವವಿಶ್ವಮೂರ್ತೇ' ಎಂದು, ವಿಶ್ವರೂಪವನ್ನೇ ಚತುರ್ಭುಜದ ಆಕಾರವನ್ನು ತೋರಿಸೆಂದು ಪ್ರಾರ್ಥಿಸಿರುವುದರಿಂದ, ಭಿನ್ನದೇಹಗಳಲ್ಲವೆಂದು ಸಿದ್ಧವಾಗುತ್ತದೆ; ಅದೇ ರೂಪಕ್ಕೆ ಸ್ಥೂಲ ಸೂಕ್ಷ್ಮ ಆಕಾರಗಳನ್ನು ಸ್ವಶಕ್ತಿಯಿಂದ ಪ್ರದರ್ಶಿಸುವ ಸಾಮರ್ಥ್ಯವಿದೆ.

**ಮಾಯಾದೂರತ್ವವಾಚಾ ಚ ನೇದಂ ಮಾಯಾಮಯಂ ವಪುಃ ॥**

ಮಾಯಾದೂರತ್ವವಾಚಾ ಚ – (ಭಗವಂತನು) ಮಾಯಾದೂರನೆಂಬ ಪ್ರಮಾಣವಾಕ್ಯಗಳಿಂದಲೂ ಮತ್ತು ಪೂರ್ವೋಕ್ತ ಯುಕ್ತಿಗಳಿಂದಲೂ, ಇದಂ –ವಿಶ್ವರೂಪವು, ಮಾಯಾಮಯಂ – ಮಾಯಾನಿರ್ಮಿತ, ವಪುಃ–ದೇಹವು, ನ–ಅಲ್ಲ.

**ಅಪರಿಚ್ಛಿನ್ನದೇಹೋಽಯಂ ಪಾರ್ಥಪ್ರತ್ಯಕ್ಷಗೋಚರಃ ।**
**ಪರಿಚ್ಛಿನ್ನಭವನ್ಮಾಯಾಮಯೋ ನೈವೇತಿ ಮೇ ಮತಿಃ ॥ ೪೪೮ ॥**

ಪಾರ್ಥಪ್ರತ್ಯಕ್ಷಗೋಚರಃ – ಪಾರ್ಥನು ಕಂಡ (ದೃಷ್ಟಿವಿಷಯವಾದ), ಅಯಂ – ಈ ವಿಶ್ವದೇಹವು, ಅಪರಿಚ್ಛಿನ್ನದೇಹಃ – ವ್ಯಾಪ್ತವಾದ (ಕೊನೆ ಮೊದಲಿಲ್ಲದ) ದೇಹವು; ಪರಿಚ್ಛಿನ್ನಭವನ್ಮಾಯಾಮಯಃ–ಪರಿಮಿತಿಯುಳ್ಳ (ನೀನು ತಿಳಿದಿರುವ) ಮಾಯಾಮಯವಾದ ದೇಹವು, ನೈವೇತಿ–ಅಲ್ಲವೆಂದೇ, ಮೇ–ನನ್ನ, ಮತಿಃ–ಅಭಿಪ್ರಾಯವು (ನಾನು ಅವಲಂಬಿಸಿರುವ ಗ್ರಂಥಕಾರರ ಅಭಿಪ್ರಾಯವೂ ಅದೇ).

**ತತ ಏವ ಸ ಸತ್ಯೋಽಭೂನ್ನಿತ್ಯಶ್ಚ ಪರಮಾತ್ಮವತ್ ।**
**ಬ್ರಹ್ಮವಚ್ಚಿನ್ಮಯೋಽಪ್ಯಾಸೀತ್ತ್ವನ್ಮಯಾನ್ನೈವಮನ್ಮಯಾತ್ ॥ ೪೪೯ ॥**

'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಇತ್ಯಾದಿ ಈ ಹಿಂದೆ ಉದಾಹರಿಸಲಾದ ಬಹುಪ್ರಮಾಣಗಳಿಂದಲೂ, ಯುಕ್ತಿಗಳಿಂದಲೂ, ಭಗವಂತನ ಈ ರೂಪವು ಮಾಯಾನಿರ್ಮಿತದೇಹವಲ್ಲವೆಂದು ಸಿದ್ಧವಾಗುತ್ತದೆ (೪೪೭). ಅರ್ಜುನನು ಕಂಡ ವಿಶ್ವರೂಪವು ವ್ಯಾಪ್ತವಾದುದು—ಅನಂತವಿಸ್ತಾರವುಳ್ಳದ್ದು—ಆದಿ ಮಧ್ಯ ಅಂತಗಳಿಲ್ಲದ್ದು; ಅರ್ಜುನನು ಪ್ರತ್ಯಕ್ಷವಾಗಿ ಕಂಡದ್ದು; ನಿನ್ನ ಮಾಯಾ ನಿರ್ಮಿತವೆಂಬ ಭಗವದ್ದೇಹವು ಪರಿಚ್ಛಿನ್ನವಾದುದು, (ಪರಿಮಿತಿ ಯುಳ್ಳದ್ದು); ಅದು ಮಾಯಾಮಯವಲ್ಲವೆಂದೇ ನನ್ನ ಅಭಿಪ್ರಾಯವು (ನಾನು ಅವಲಂಬಿಸಿರುವ ಗ್ರಂಥಕಾರರ—ಶ್ರೀ ವೇದವ್ಯಾಸರ, ಹಾಗೂ ಶ್ರೀಮದಾಚಾರ್ಯರ ಅಭಿಪ್ರಾಯವೂ ಆಗಿದೆ) (೪೪೮). ಈ ವಿಶ್ವರೂಪವು ಸತ್ಯವೂ ನಿತ್ಯವೂ ಆದುದು; ನಮ್ಮ ಮತದಂತೆ ಮಾತ್ರವಲ್ಲ—ನಿನ್ನ

ತತ ಏವ–ಅಪರಿಚ್ಛಿನ್ನ (ವ್ಯಾಪ್ತ) ವಾದುದರಿಂದಲೇ, ಸಃ–ಆ ದೇಹವು, ಪರಮಾತ್ಮವತ್–ಪರಮಾತ್ಮನಂತೆ,[1] ಸತ್ಯಃ–ಸತ್ಯವಾದುದೂ, ನಿತ್ಯಶ್ಚ–ನಿತ್ಯವಾದುದೂ, ಅಭೂತ್–ಆಯಿತು (ಎಂದು ಸಿದ್ಧವಾಯಿತು) ; ಬ್ರಹ್ಮವತ್–ಬ್ರಹ್ಮನಂತೆ, ಚಿನ್ಮಯಃ ಅಪಿ–ಜ್ಞಾನಾನಂದಮಯನೂ (ಜ್ಞಾನಸ್ವರೂಪನೂ), ತ್ವನ್ನಯಾತ್–ನಿನ್ನ(ಮಾಯಾವಾದಿಯ) ಸಿದ್ಧಾಂತದಂತೆಯೇ, ಮನ್ನಯಾತ್ ಏವ ನ – ನನ್ನ (ಸಿದ್ಧಾಂತಿಯ) ಮತದಂತೆ ಮಾತ್ರವಲ್ಲ, ಆಸೀತ್ – ಆದನು. (ಪರಮತದಲ್ಲಿ ಬ್ರಹ್ಮನನ್ನುಳಿದು ಅನ್ಯವಸ್ತುಗಳು ಅಪರಿಚ್ಛಿನ್ನಗಳಲ್ಲ—ವ್ಯಾಪ್ತಗಳಲ್ಲ—ಬ್ರಹ್ಮನಂತೆ ವ್ಯಾಪ್ತಗಳಲ್ಲ,—ಆದ್ದರಿಂದ ಆದಿಮಧ್ಯಾಂತರಹಿತವಾದುದನ್ನಾಗಿ ಕಂಡ ವಿಶ್ವರೂಪವು ಆತನ (ಅದ್ವೈತಿಯ) ಬ್ರಹ್ಮನಂತೆ ಚಿನ್ಮಯನೂ ಆದನು).

**ಕ್ವಾನಂತಸೂರ್ಯಸಂಕಾಶಪ್ರಕಾಶೋ ಮುಕ್ತಿದಃ ಪ್ರಭುಃ ।**
**ಕ್ವತೇ ತಮೋಮಯೀ ಮಾಯಾಯಂ ಪ್ರಪನ್ನೋऽಪಿ ಯಾಂ ತರೇತ್**

ಭಗವಂತನ ದೇಹವು ಅಮಾಯಿಕವೆಂಬಲ್ಲಿ ಯುಕ್ತಿಗಳನ್ನು ಹೇಳುತ್ತಾರೆ :–

ಅನಂತಸೂರ್ಯಸಂಕಾಶಪ್ರಕಾಶಃ–ಅನಂತ ಸೂರ್ಯಸದೃಶ ಪ್ರಕಾಶನಾದ, ಮುಕ್ತಿದಃ – ಮೋಕ್ಷಪ್ರದನಾದ, ಪ್ರಭುಃ – ಮಹಾಸ್ವಾಮಿಯು, ಕ್ವ – ಎಲ್ಲಿ ?

(ಮಾಯಾ) ಮತದಂತೆ, ಜ್ಞಾನಾನಂದಸ್ವರೂಪನಾದ ಬ್ರಹ್ಮನೇ ಈ ವಿಶ್ವರೂಪನು; ಅದ್ವೈತಶಾಸ್ತ್ರದಂತೆ, ಬ್ರಹ್ಮಭಿನ್ನವಾದ ಅನ್ಯವಸ್ತುಗಳು ಪರಿಚ್ಛಿನ್ನಗಳು—ವ್ಯಾಪ್ತಗಳಲ್ಲ; ಅಪರಿಚ್ಛಿನ್ನನೆಂದು (ಅಪರಿಮಿತವ್ಯಾಪ್ತಿಯುಳ್ಳವನೆಂದು, ಆದಿಮಧ್ಯಾಂತಶೂನ್ಯನೆಂದು) ಪುರುಷಸೂಕ್ತವು ಪ್ರತಿಪಾದಿಸುವುದರಿಂದ, ಅದ್ವೈತಿಗಳ ಬ್ರಹ್ಮನಂತೆ (ಪರಮಾತ್ಮನಂತೆ), ಚಿದಾನಂದಸ್ವರೂಪನೂ ಆಗಿ, ವಿಶ್ವರೂಪನು ಪರಮಾರ್ಥಸತ್ಯನೂ ನಿತ್ಯನೂ ಎಂದೂ ಸಿದ್ಧವಾಗುತ್ತದೆ (೪೪೯). ಅನಂತ ಸೂರ್ಯಪ್ರಕಾಶಸದೃಶನಾದ ಮೋಕ್ಷಪ್ರದನಾದ ನಮ್ಮ ಮಹಾಪ್ರಭು, ಶ್ರೀ ನಾರಾಯಣನಿಗೂ, ಮಾಯಾ (ಅವಿದ್ಯಾ–ಅಜ್ಞಾನ–ಅಂಧಕಾರ) ಮಯನಾದ ನಿನ್ನ ಮಾಯಿಕ ಬ್ರಹ್ಮನಿಗೂ ಎಲ್ಲಿಯ ಹೋಲಿಕೆ ?

1 ' ವಿವಾದಾಸ್ಪದವಾದ ಭಗವದ್ದೇಹವು ಪರಮಾರ್ಥಸತ್ಯವೂ, ಸರ್ವಕಾಲದಲ್ಲಿಯೂ ಇರುವುವರಿಂದ ನಿತ್ಯವೂ ಆದುದು, ವ್ಯಾಪ್ತವಾದುದರಿಂದ, ಪರಮಾತ್ಮನಂತೆ ' ಎಂಬುದಾಗಿ ಇಲ್ಲಿ ಸೂಚಿತ ಅನುಮಾನದ ಸ್ವರೂಪವಾಗಿದೆ.

ತೇ – ನಿನ್ನ (ಮತೋಕ್ತವಾದ), ತಮೋಮಯೀ – ಅವಿದ್ಯಾಸ್ವರೂಪದ (ಅಜ್ಞಾನರೂಪದ ಅಂಧಕಾರಮಯವಾದ), ಮಾಯಾ–ಮಾಯೆಯು, ಕ್ವ– ಎಲ್ಲಿ ? ಯಂ – ಯಾವ ಪರಮಾತ್ಮನನ್ನು, ಪ್ರಪನ್ನಾಃ ಅಪಿ – ಶರಣುಹೊಂದಿದವನು ಸಹ, ಯಾಂ–ಯಾವುದನ್ನು (ಯಾವ ಮಾಯೆಯನ್ನು), ತರೇತ್– ದಾಟುವನೋ, ('ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ '–ನನ್ನನ್ನು ಶರಣುಹೊಂದಿದವರು ಈ ಮಾಯೆಯನ್ನು ದಾಟುವರು, ಎಂಬ ಗೀತಾವಚನದಂತೆ, ಮಾಯಾತರಣವು ಆತನ ಶರಣರಿಗೇ ಸುಲಭವಾಗಿರಲು, ಆತನು ಮಾಯಾತೀತನೆಂದು ಹೇಳಲೇನು ? ಎಂಬ ಯುಕ್ತಿಯು ಸೂಚಿತವಾಗಿದೆ) (ಆದ್ದರಿಂದ ಭಗವಂತ ದೇಹವು ಅಮಾಯಿಕವೇ ಸರಿ.)

**ಪ್ರಾಯೋ ದಗ್ಧಪಟಪ್ರಾಯಾ ಯಾ ಯಜ್ಜ್ಞಾನೋದಯೇ ಹೃದಿ ।**
**ಮಾಯಾನಿಸ್ತರಣೋಪಾಯಃ ಸೋಽಯಂ ಮಾಯಾಮಯಃ ಕಿಲ ॥**
**॥ ೪೫೧ ॥**

ಬೇರೆ ಯುಕ್ತಿಯನ್ನೂ ಹೇಳುತ್ತಾನೆ :—

ಹೃದಿ–ಮನಸ್ಸಿನಲ್ಲಿ, ಯಜ್ಜ್ಞಾನೋದಯೇ (ಸತಿ)–ಯಾರ ಅಪರೋಕ್ಷ ದರ್ಶನವಾಗುತ್ತಿರಲು, ಯಾ–ಯಾವ ಮಾಯೆಯು, ಪ್ರಾಯಃ–ಬಹುಶಃ, ದಗ್ಧಪಟಪ್ರಾಯಾ–ದಹಿಸಲ್ಪಟ್ಟ ವಸ್ತ್ರದಂತೆ (ಆಕಾರಮಾತ್ರವುಳ್ಳದ್ದು–ಉಪಯೋಗಕ್ಕೆ ಬಾರದುದು) ತನ್ನ ಕಾರ್ಯದಲ್ಲಿ ಅಸಮರ್ಥವಾಗುವುದೋ, ಮಾಯಾನಿಸ್ತರಣೋಪಾಯಃ–ಮಾಯೆಯನ್ನು ಅತಿಕ್ರಮಿಸುವ ಉಪಾಯವೋ (ಯಾರ ದರ್ಶನವು ಮಾಯಾಪರಿಹಾರಕವೋ), ಸಃ ಅಯಂ–ಆ ಭಗವಂತನು, ಮಾಯಾಮಯಃ ಕಿಲ – ಮಾಯಾಮಯನೇ ? (ಮಾಯಾವಶನೇ, ಎಂದು,

---

ನಮ್ಮ ಶ್ರೀ ನಾರಾಯಣನನ್ನು ಶರಣುಹೊಂದಿದವರು ಸಹ ' ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ' ಎಂದು ಗೀತೆಯಲ್ಲಿ ಹೇಳಿರುವಂತೆ, ಮಾಯೆಯನ್ನು ಅತಿಕ್ರಮಿಸುತ್ತಿರಲು ಆ ಭಗವಂತನು ಸ್ವಯಂ ಮಾಯಾತೀತನೆಂದು ಹೇಳಬೇಕಾಗಿಲ್ಲ (೪೫೦). ಭಗವಂತನನ್ನು ಹೃದಯದಲ್ಲಿ ಕಂಡರೆ, ಮಾಯೆಯು, ಸುಟ್ಟವಸ್ತ್ರದಂತೆ ಯಾವ ಕಾರ್ಯದಲ್ಲಿಯೂ ಸಮರ್ಥವಾಗುವುದಿಲ್ಲ ; ಯಾರ ದರ್ಶನವು ಮಾಯಾಪರಿಹಾರಕವೋ,

ಉಪಹಾಸಚೂಚಕವು); (ಯಾರ ದರ್ಶನದಿಂದ ಮಾಯಾನಾಶವೋ ಆತನೇ ಮಾಯಾವಶನಲ್ಲವೆಂಬ ಯುಕ್ತಿಸೂಚಕವು).

**ಅಸ್ತ್ಯಸ್ತೀತ್ಯುಕ್ತೌ ನಾಸ್ತೀತಿ ಪ್ರತಿವಾಗತಿವಾದಿನಿ ।**
**ಸಹಸ್ರಶೀರ್ಷಾ ಶ್ರೌತೋ ಯೋ ನೈಕಶೀರ್ಷಾಪ್ಯಸೌ ಕಿಲ ॥ ೪೫೨ ॥**

ಪುರುಷಸೂಕ್ತಾರ್ಥವನ್ನು ನಿರೂಪಿಸಲು ಪ್ರಸಕ್ತಿಗಾಗಿ ಒಂದು ಲೋಕ ನೀತಿಯನ್ನು ಹೇಳುತ್ತಾ ಅಪಹಾಸಮಾಡುತ್ತಾರೆ :—

ಅಸ್ತೀತ್ಯುಕ್ತೌ—(ಒಂದು ವಿಷಯವು) ಹೀಗಿದೆ ಎಂದು ಹೇಳಿದರೆ, ಅತಿವಾದಿನಿ—ಬಹುಭಾಷಿಯಾದ ದುಷ್ಟನಲ್ಲಿ, ನಾಸ್ತೀತಿ – ಇಲ್ಲವೆಂಬ, ಪ್ರತಿವಾಕ್—ಎದುರುನುಡಿಯು (ವಿರುದ್ಧನುಡಿಯು), ಅಸ್ತಿ—ಇರುತ್ತದೆ; ಯಃ—ಯಾವಾತನು (ಭಗವಂತನು), ಶ್ರೌತಃ—ಶ್ರುತ್ಯುಕ್ತವಾದ, ಸಹಸ್ರಶೀರ್ಷಾ—ಅನಂತ ಶಿರಸ್ಸುಗಳುಳ್ಳವನೋ (ಪುರುಷಸೂಕ್ತ ಪ್ರತಿಪಾದ್ಯವಾದ ಸಹಸ್ರ ಶೀರ್ಷಗಳುಳ್ಳವನೋ), ಅಸೌ – ಈತನು, ಏಕಶೀರ್ಷಾ ಅಪಿ—ಒಂದು ತಲೆಯುಳ್ಳವನೂ ಸಹ, ನ—ಅಲ್ಲ, ಕಿಲ—ಎಷ್ಟು ಅಪಹಾಸಕರವು ! (ಪುರುಷಸೂಕ್ತದಲ್ಲಿ ಹೇಳಿದಂತೆ ಬಹುಶೀರ್ಷಗಳುಳ್ಳವನೆಂದು ಒಬ್ಬನು ಹೇಳಿದರೆ, ಒಂದೂ ತಲೆಯೇ ಇಲ್ಲವೆಂದು ವಾದಿಸುವವನು, ದುರ್ಜನನೇ ಅಲ್ಲವೇ ?)

**ಛಲೀ ಸೂರ್ಯಚ್ಛಾದನಾಯ ಕರಂ ಕೋಽಪಿ ಪ್ರಸಾರಯೇತ್ ।**
**ಸಪ್ರಕಾರಂ ಹಿ ಯಂ ವಿದ್ವಾನ್ಮುಚ್ಯೇತ ಸ ಕಿಲಾಲ್ಪಕಃ ॥ ೪೫೩ ॥**

---

ಆ ಭಗವಂತನು, ಮಾಯಾಮಯನೇ ? ಮಾಯಾವಶನಾಗಿರುವನೇ ? (ಅದು ಅಸಂಭವವೇ ಸರಿ) (೪೫೧). ಬಹುಭಾಷಿಯಾದ ದುರ್ಜನನು, ಯಾರಾದರೊಂದು ವಿಷಯವನ್ನು ಇದೆ ಎಂದು ಹೇಳಿದರೆ ಅದನ್ನು ಪ್ರತಿಭಟಿಸಿ, ಇಲ್ಲವೆನ್ನುವನು; 'ಸಹಸ್ರ ಶೀರ್ಷಾ ಪುರುಷಃ' ಎಂದು ಭಗವಂತನು ಸಾವಿರಾರು ತಲೆಗಳುಳ್ಳವನೆಂದು ಹೇಳಿದರೆ, ಅದ್ವೈತಿಯು, ಆತನಿಗೆ ಒಂದೂ ತಲೆಯಿಲ್ಲವೆನ್ನುವನು (ನಿರಾಕಾರನೆನ್ನುತ್ತಾನೆ) (೪೫೨). ಹಠಮಾರಿಯಾದವನೊಬ್ಬನು, ಸೂರ್ಯನೇ ಇಲ್ಲವೆಂದು ಸಾಧಿಸಲು, ತನ್ನ ಕೈ ಚಾಚಿ ಸೂರ್ಯನನ್ನು ಮುಚ್ಚುತ್ತಾನೆ; ಪುರುಷಸೂಕ್ತವು (ಯಜುರ್ವೇದದ ಪುರುಷಸೂಕ್ತವು), 'ತಮೇವಂ ವಿದ್ವಾನ್ ಅಮೃತ ಇಹ ಭವತಿ', ಎಂದು, ತನ್ನಿಂದ ಪ್ರತಿಪಾದ್ಯ ಭಗವಂತ

ಛಲೀ–ಛಲವುಳ್ಳವನು (ತಾನೇ ಸರಿ ಎಂದು ಸಾಧಿಸುವ ಹಠವುಳ್ಳವನು), ಕಃ ಅಪಿ–ಯಾವನೊಬ್ಬನು, ಸೂರ್ಯಾಚ್ಛಾದನಾಯ–ಸೂರ್ಯನನ್ನು (ಇಲ್ಲವೆಂದು ಸಾಧಿಸಲು) ಮುಚ್ಚಲಿಕ್ಕಾಗಿ, ಕರಂ–(ತನ್ನ) ಕೈಯನ್ನು, ಪ್ರಸಾರಯೇತ್–ಚಾಚಿ ಹಿಡಿಯುತ್ತಾನೆ; ಸಪ್ರಕಾರಂ–ಪುರುಷಸೂಕ್ತದಲ್ಲಿ ಹೇಳಿದ ಪ್ರಕಾರವಾಗಿ, ಯಂ–ಭಗವಂತನನ್ನು, ವಿದ್ವಾನ್–ತಿಳಿದವನು ('ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂದು ಯಜುರ್ವೇದದ ಪುರುಷಸೂಕ್ತದಲ್ಲಿ, ಪುರುಷಸೂಕ್ತ ಪ್ರತಿಪಾದ್ಯನಾದ ಭಗವಂತನನ್ನು ತಿಳಿದವನು ಮುಕ್ತನಾಗುತ್ತಾನೆಂದು ಹೇಳಿದಂತೆ, ತಿಳಿದವನು), ಮುಚ್ಯೇತ–ಮುಕ್ತನಾಗುವನೋ, ಸಃ–ಆತನು (ಆ ಭಗವಂತನು), ಅಲ್ಪಕಃ ಕಿಲ–ಮುಕ್ತಿದಾತನಲ್ಲದ ವಿಷ್ಣುಭಿನ್ನ ಒಬ್ಬ ನೀಚಪುರುಷನೇ ಅಲ್ಲವೇ! (ಹೀಗೆ ಪುರುಷಸೂಕ್ತಪ್ರತಿಪಾದ್ಯನನ್ನು ವಿಷ್ಣುಭಿನ್ನ ಅಲ್ಪಪುರುಷ (ಮಾಯಾಮಯ) ನೆಂದು ತಿಳಿಯುವವನು, ಸೂರ್ಯನನ್ನು ಕೈಗಳಿಂದ ಮುಚ್ಚುವ ಛಲವುಳ್ಳ ದುರ್ಜನಸದೃಶನೆಂದು ಭಾವ).

**ಅತಃ ಪುರುಷಸೂಕ್ತಸ್ಯ ವಿರಾಟ್‌ಪುರುಷಸೂಕ್ತತಾಂ ।**
**ವದಂತೋ ವಾದಿನಃ ಪೂರ್ವೋತ್ತರಜ್ಞಾನವಿವರ್ಜಿತಃ ॥ ೪೫೪ ॥**

ಅದನ್ನೇ ವಿವೇಚಿಸುತ್ತಾರೆ :—

ಅತಃ – ಹೀಗಿರುವುದರಿಂದ (ಇದು ಯುಕ್ತಿಸಿದ್ಧವಾದ್ದರಿಂದ), ಪುರುಷಸೂಕ್ತಸ್ಯ–ಪುರುಷಸೂಕ್ತಕ್ಕೆ, ವಿರಾಟ್‌ಪುರುಷಸೂಕ್ತತಾಂ–ವಿರಾಟ್ ಪುರುಷನನ್ನು (ಅಮಿತ ತೇಜೋರೂಪನಾದ ಭಗವಂತನನ್ನು) ಪ್ರತಿಪಾದಿಸುವ ಮಂತ್ರವೆಂದು, ವದಂತಃ – ಹೇಳುವವರನ್ನು (ಅವರನ್ನು ವಿರೋಧಿಸಿ), ವಾದಿನಃ–ವಾದಮಾಡುವವರು, ಪೂರ್ವೋತ್ತರಜ್ಞಾನವಿವರ್ಜಿತಾಃ–'ತಮೇವಂ ವಿದ್ವಾನಮೃತ ಇಹ ಭವತಿ' ಎಂಬ ಮುಂದಿನ (ಉತ್ತರ) ವಾಕ್ಯದ ಪರಿಜ್ಞಾನ

---

ನನ್ನು ಯಥಾವತ್ತಾಗಿ ತಿಳಿದವನು ಮುಕ್ತನಾಗುತ್ತಾನೆಂದು ಹೇಳಿದರೆ, ಪುರುಷಸೂಕ್ತ ಪ್ರತಿಪಾದ್ಯನು, ಮಾಯಾಮಯನಾದ, ವಿಷ್ಣುಭಿನ್ನ, ನೀಚಪುರುಷನೆಂದು ತಿಳಿಯುವ ಅದ್ವೈತಿಯು, ತನ್ನ ಕೈಯಿಂದ ಸೂರ್ಯನನ್ನು ಆಚ್ಛಾದಿಸಲು ಯತ್ನಿಸುವವನಂತೆಯೇ ಸರಿ (೪೫೩). ಆದ್ದರಿಂದ, ಪುರುಷಸೂಕ್ತ ಪ್ರತಿಪಾದ್ಯ ವಿರಾಟ್‌ಪುರುಷನು, ಅಮಿತ ತೇಜೋರೂಪನಾದ ಭಗವಂತನೇ

ವಿಲ್ಲದ (ಮತ್ತು ಮೊದಲಿನ ಋಗ್ವೇದ ಪುರುಷಸೂಕ್ತಸಮಾಖ್ಯಾರೂಪದಿಂದ ಹೇಳಲ್ಪಡುವ ಯಜುರ್ವೇದ ಪುರುಷಸೂಕ್ತದ ಅಜ್ಞಾನವುಳ್ಳವರೂ (ಆಗಿರುವರು) (ಪೂರ್ವೋತ್ತರ ಜ್ಞಾನವಿಲ್ಲದವರೇ ಸರಿ).

**ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ ।**
**ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಂ ॥ ೪೫೫ ॥**

**ಇತಿ ನಾರಾಯಣಸ್ಯೈವ ಯಾಜುಷೋಪನಿಷಜ್ಜಗೌ ।**
**ಯತಃ ಸಹಸ್ರಶೀರ್ಷತ್ವಂ ತತಃ ಪುಂಸೂಕ್ತಗೋಪ್ಯಸೌ ॥ ೪೫೬ ॥**

ಹಾಗೆ ತಿಳಿಯುವವರು ಪೂರ್ವೋತ್ತರ ಜ್ಞಾನಶೂನ್ಯರೆಂಬುದನ್ನು ಬೇರೆ ರೀತಿಯಿಂದಲೂ ತೋರಿಸುತ್ತಾರೆ :—

ಸಹಸ್ರಶೀರ್ಷಂ – ಸಹಸ್ರ (ಅನಂತ) ಶಿರಗಳುಳ್ಳವನು, ದೇವಂ– ಕ್ರೀಡಾದಿ ಗುಣವಿಶಿಷ್ಟನು, ವಿಶ್ವಾಕ್ಷಂ – ಅನಂತನೇತ್ರಗಳುಳ್ಳವನು, ವಿಶ್ವಶಂಭುವಂ–ಸರ್ವರ (ವಿಶ್ವದ) ಸುಖಕಾರಣನು, ವಿಶ್ವಂ – ವಿಶ್ವನು (ಜಗದ್ವ್ಯಾಪ್ತನು, ಜಗದಂತರ್ಯಾಮಿಯು), ನಾರಾಯಣಂ – ನಾರಾಯಣನು, ದೇವಂ – ಆರಾಧ್ಯದೇವತೆಯು, ಅಕ್ಷರಂ – ನಾಶರಹಿತನು, ಪರಮಂ ಪದಂ– ನಿತ್ಯನಿರ್ದುಷ್ಟ ಪರಿಶುದ್ಧಸ್ವರೂಪನು, ಇತಿ – ಈ ಗುಣಗಳುಳ್ಳನನನ್ನಾಗಿ, ನಾರಾಯಣಸ್ಯ ಏವ – (ಪುರುಷಸೂಕ್ತಪ್ರತಿಪಾದ್ಯವಾದ ಈ ಗುಣಗಳು) ನಾರಾಯಣನಿಗೆ ಮಾತ್ರವೇ ಎಂದು, ಯತಃ–ಯಾವ ಕಾರಣದಿಂದ, ಸಹಸ್ರಶೀರ್ಷತ್ವಂ – ಸಹಸ್ರ ಶೀರ್ಷಗಳುಳ್ಳವನೆಂಬ ಮುಂತಾದ ಧರ್ಮಗಳನ್ನು, ಯಾಜುಷೋಪನಿಷತ್–ಯಜುರ್ವೇದೋಪನಿಷತ್ತು (ಯಜುಃಶಾಖಾಂತರ್ಗತ ನಾರಾಯಣೋಪನಿಷತ್ತು), ಜಗೌ–ಸ್ತುತಿಸುತ್ತದೆಯೋ, ತತಃ–ಆ ಕಾರಣ

---

ಎಂಬುದನ್ನು ಅಂಗೀಕರಿಸದೆ ವಿರೋಧಿಸುವವನು, ಪೂರ್ವೋತ್ತರಜ್ಞಾನವಿಲ್ಲದ ಅಜ್ಞಾನಿಯೇ ಸರಿ ; ಸಾಕ್ಷಾತ್ ನಾರಾಯಣನನ್ನು ಪ್ರತಿಪಾದಿಸುವ ಮಂತ್ರವು, ಪುರುಷಸೂಕ್ತವೆಂಬುದು ಪ್ರಸಿದ್ಧ (೪೫೪). 'ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ । ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಂ ।' ಎಂದು ಯಜುಃಶಾಖಾಂತರ್ಗತ ನಾರಾಯಣೋಪನಿಷತ್ತು, ಪುರುಷಸೂಕ್ತ ಪ್ರತಿಪಾದ್ಯನು ನಾರಾಯಣನೇ ಎಂದು ಸಹಸ್ರಶೀರ್ಷಾದಿ ಧರ್ಮ

ದಿಂದ, ಅಸೌ – ಈ ನಾರಾಯಣನೇ, ಪುಂಸೂಕ್ತಗಃ ಅಪಿ – ಪುರುಷಸೂಕ್ತ ಪ್ರತಿಪಾದ್ಯನೂ (ಆಗಿರುವನೆಂದು ತಿಳಿಯಬರುತ್ತದೆ).

**ಅಗ್ನಿರ್ಮುಖಂ ತ ಇತ್ಯಾದ್ಯೈಃ ಪದ್ಯೈರ್ಯಂ ಕೃಷ್ಣಮಂಬುನಿ ।**
**ಅಕ್ರೂರೋಽಸ್ತೌತ್ಸ ಏವಾರ್ಥಾತ್ ಪುಂಸೂಕ್ತಾರ್ಥೋ ಹಿ ಧೀಮತಾಂ**

ಪುರುಷಸೂಕ್ತ ಪ್ರತಿಪಾದ್ಯನನ್ನು, ಪೂರ್ವೋತ್ತರ ಜ್ಞಾನಶೂನ್ಯರು ಮಾತ್ರ, ತಿಳಿಯರೆಂಬುದನ್ನು, ಪ್ರಕಾರಾಂತರದಿಂದ ಸಮರ್ಥಿಸುತ್ತಾರೆ :—

ಅಗ್ನಿರ್ಮುಖಂ ತೇ ಇತ್ಯಾದ್ಯೈಃ ಪದ್ಯೈಃ—'ಅಗ್ನಿರ್ಮುಖಂ ತೇಽವನಿರಂಘ್ರಿರೀಕ್ಷಣಂ ಸೂರ್ಯೋ ನಭೋ ನಾಭಿರತೋ ದಿಶಃ ಶ್ರುತಿಃ' ಇತ್ಯಾದಿ ಪದ್ಯಗಳಿಂದ, (ಮುಖವೇ ಅಗ್ನಿಯು, ಪಾದವೇ ಭೂಮಿಯು, ಕಣ್ಣೇ ಸೂರ್ಯನು, ನಾಭೀ (ಹೊಕ್ಕಳು) ಆಕಾಶವು, ಕಿವಿಗಳು ದಿಕ್ಕುಗಳು, ಇತ್ಯಾದಿಯಾಗಿ),[1] ಅಂಬುನಿ–(ಯಮುನಾ) ಜಲದಲ್ಲಿ ಕಂಡು, ಅಕ್ರೂರಃ– ತತ್ವಜ್ಞಾನಿಯಾದ ಭಕ್ತ ಅಕ್ರೂರನು, ಯಂ ಕೃಷ್ಣಂ–ಯಾವ ಶ್ರೀಕೃಷ್ಣನನ್ನು,

---

ಗಳನ್ನೇ ಅವೇ ವಿಶೇಷಣಗಳಿಂದ (ಶಬ್ದಗಳಿಂದ) ನಿರೂಪಿಸಿ, ಈ ಪ್ರಮೇಯವನ್ನು ಸಮರ್ಥಿಸುತ್ತದೆ (೪೫೫–೪೫೬). ಯಮುನಾ ಜಲದಲ್ಲಿ ಸ್ನಾನಕಾಲದಲ್ಲಿ ಪ್ರತ್ಯಕ್ಷವಾಗಿ ಭಗವಂತನನ್ನು ಕಂಡ ಅಕ್ರೂರನು, ಶ್ರೀಕೃಷ್ಣನನ್ನು, 'ಅಗ್ನಿರ್ಮುಖಂ ತೇಽವನಿರಂಘ್ರಿರೀಕ್ಷಣಂ ಸೂರ್ಯೋ'—ಇತ್ಯಾದಿಯಾಗಿ ಸ್ತುತಿಸಿದುದು ಭಾಗವತದಲ್ಲಿ ವರ್ಣಿಸಲಾಗಿದೆ; ಪುರುಷಸೂಕ್ತ ಪ್ರತಿಪಾದ್ಯ ಪುರುಷನ ಸ್ತೋತ್ರಕ್ಕೂ, ಈ ಸ್ತುತಿಗೂ ಏಕಾರ್ಥತ್ವವಿರುವುದರಿಂದ, ಶ್ರೀ ಕೃಷ್ಣನೇ ಪುರುಷಸೂಕ್ತ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ; ಶ್ರುತಿಸ್ಮೃತಿಗಳು ಪರಸ್ಪರ ಉಪಕಾರಿಗಳೆಂಬ (ಪುರುಷಸೂಕ್ತ ಮತ್ತು ಭಾಗವತಗಳ) ಸಖ್ಯ

---

1 ಅಗ್ನಿದೇವನು, ಪುರುಷನ ಮುಖದಿಂದ ಜನಿಸಿ, ಮುಖವನ್ನಾಶ್ರಯಿಸಿಕೊಂಡಿರುವವನು ; ಸೂರ್ಯನು ಭಗವಂತನ ಚಕ್ಷುಸ್ಸಿನಿಂದ ಜನಿಸಿ, ಆ ಅಂಗವನ್ನೇ ಆಶ್ರಯಿಸಿಕೊಂಡಿರುವನು ; ಹೀಗೆ ಸರ್ವತ್ರ ತಿಳಿಯಬೇಕು—ಮುಖವೇ ಅಗ್ನಿಯು ಇತ್ಯಾದಿ ಅಭೇದವಚನವನ್ನು ಹೀಗೂ ತಿಳಿಯಬೇಕು. 'ಕಾರ್ಯಕಾರಣಯೋರೈಕ್ಯ ವ್ಯಪದೇಶಃ' ಕಾರ್ಯಕಾರಣಗಳನ್ನು ಅಭೇದದಿಂದ ಹೇಳಲಾಗುವುದೆಂಬ ನ್ಯಾಯದಿಂದ, ಹೀಗೆ ಅರ್ಥವನ್ನು ಗ್ರಹಿಸಬೇಕು.

ಅಸ್ತೌತ್ – (ಭಾಗವತದಲ್ಲಿ) ಸ್ತುತಿಸಿರುವನೋ, ಸಃ ಏವ–ಆ ಕೃಷ್ಣನೇ, ಅರ್ಥಾತ್–ಅರ್ಥೈಕ್ಯದಿಂದ (ಏಕಾರ್ಥವಿರುವುದರಿಂದ), ಧೀಮತಾಂ–ಜ್ಞಾನಿಗಳ ಮತದಲ್ಲಿ, ಪುಂಸೂಕ್ತಾರ್ಥಃ ಹಿ–ಪುರುಷಸೂಕ್ತಪ್ರತಿಪಾದ್ಯನೇ ಸರಿಯಷ್ಟೆ ('ಮುಖಾದಿಂದ್ರಶ್ಚಾಗ್ನಿಶ್ಚ । ಪದ್ಭ್ಯಾಂ ಭೂಮಿಃ । ಚಕ್ಷೋಃ ಸೂರ್ಯಃ । ನಾಭ್ಯಾ ಆಸೀದಂತರಿಕ್ಷಂ । ದಿಶಃ ಶ್ರೋತ್ರಾತ್ ।' ಇತ್ಯಾದಿ ಪುರುಷಸೂಕ್ತ ಸಮಾಖ್ಯೆಯು, ಅಕ್ರೂರನ ಸ್ತುತಿಗೆ ಇರುತ್ತದೆ; ಹೀಗೆ ಸ್ಮೃತಿಯೂ, ಶ್ರೀ ಕೃಷ್ಣನೇ ಪುರುಷಸೂಕ್ತ ಪ್ರತಿಪಾದ್ಯನೆಂದು ನಿರ್ಣಯಿಸುತ್ತದೆ—ಶ್ರುತಿಸ್ಮೃತಿಗಳ, ಪರಸ್ಪರ ಉಪಕಾರಿಗಳೆಂಬ ಸಖ್ಯವನ್ನು, ಉಲ್ಲಂಘಿಸುವುದು ಯುಕ್ತವಲ್ಲ).

**ತತ್ರ ಗತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಂ ।** [1]
**ಪುರುಷಂ ಪುರುಷಸೂಕ್ತೇನ ಉಪತಸ್ಥೇ ಸಮಾಹಿತಃ ॥ ೪೫೮ ॥**

**ಇತಿ ಭಾಗವತೇ ವಿಷ್ಣೌ ಪುರುಷಾಖ್ಯಾಮುದೀರಯನ್ ।**
**ಯತಃ ಪುರುಷಸೂಕ್ತಂ ಚ ತತ್ಸೂಕ್ತಂ ಸ್ಪಷ್ಟಮುಕ್ತವಾನ್ ।**
**ಅತೋಽಪ್ಯಕುಶಲಾಸ್ತೇ ವೈ ವೇದಾರ್ಥಕಥನೋದ್ಯತಾಃ ॥ ೪೫೯ ॥**

ಪ್ರಕಾರಾಂತರದಿಂದ ಪರರ ಅಜ್ಞತೆಯನ್ನು ಪ್ರದರ್ಶಿಸುತ್ತಾರೆ :—

ತತ್ರ–ಅಲ್ಲಿ (ಕ್ಷೀರಸಮುದ್ರದ ಉತ್ತರದ ತೀರದಲ್ಲಿ), ಗತ್ವಾ–ಹೋಗಿ, ದೇವದೇವಂ – ದೇವೋತ್ತಮನಾದ, ವೃಷಾಕಪಿ–ವೃಷಾಕಪಿ ನಾಮಕನಾದ,

---

ವನ್ನು ಉಲ್ಲಂಘಿಸುವುದು ಯುಕ್ತವಲ್ಲ (೪೫೭). ಬ್ರಹ್ಮದೇವನು ಭೂಭಾರವನ್ನು ಸಹಿಸಲಾಗದೆ ದುಃಖಿಸುತ್ತ ತನ್ನಲ್ಲಿಗೆ ಬಂದ ಧರಣೀದೇವಿಯನ್ನು ಮುಂದಿಟ್ಟುಕೊಂಡು, ಇತರ ದೇವತೆಗಳೊಡನೆ ಕ್ಷೀರಸಮುದ್ರದ ತೀರಕ್ಕೆ ಹೋಗಿ, ಅಲ್ಲಿ ದೇವಶ್ರೇಷ್ಠನಾದ, ಜಗದೊಡೆಯನಾದ ಪುರುಷನನ್ನು, ಪುರುಷಸೂಕ್ತದಿಂದ ಸ್ತುತಿಸಿ, ರಕ್ಷಣೆಗಾಗಿ ಶರಣುಹೊಂದಿದನು, ಎಂದು ಭಾಗವತದಲ್ಲಿ ಶ್ರೀವಿಷ್ಣುವೇ ಪುರುಷಸೂಕ್ತದ ಪುರುಷನೆಂದು ಸ್ಪಷ್ಟವಾಗಿ, ಪುರುಷನೆಂಬ

---

1 'ವೃಷಶ್ಚಾಸೌ ಆಕಪಿಶ್ಚ' ಎಂದರೆ, ಭಕ್ತಾಭೀಷ್ಟಗಳನ್ನು ಮಳೆಗರೆಯುವವನೂ, ಸ್ವಸುಖದಿಂದ ಪೂರ್ಣನೆಂದೂ, ಶ್ರೀವಿಷ್ಣುಸಹಸ್ರನಾಮೋಕ್ತ ಶ್ರೀವಿಷ್ಣುವನ್ನೇ ಸ್ವಾಭೀಷ್ಟ (ಭೂಭಾರಹರಣಕ್ಕಾಗಿ) ಪ್ರಾಪ್ತಿಗಾಗಿ ಸ್ತುತಿಸಿದನು.

ಪುರುಷಂ—ಪುರುಷನನ್ನು (ಭಗವಂತನನ್ನು), ಸಮಾಹಿತಃ—ಏಕಾಗ್ರಮನಸ್ಕನಾಗಿ, ಜಗನ್ನಾಥಂ—ಜಗದೊಡೆಯನನ್ನು, ಪುರುಷಸೂಕ್ತೇನ—ಪುರುಷಸೂಕ್ತದಿಂದ, ಉಪತಸ್ಥೇ[1]—ಸೇವಿಸಿದನು (ಹೊಂದಿದನು—ಸ್ತುತಿಸಿದನು); ಇತಿ—ಹೀಗೆಂದು, ಭಾಗವತೇ – ಭಾಗವತದಲ್ಲಿ, ವಿಷ್ಣೌ – ಶ್ರೀವಿಷ್ಣುವಿನಲ್ಲಿ, ಪುರುಷಾಖ್ಯಾಂ—ಪುರುಷನೆಂಬ ನಾಮವನ್ನು, ಉದೀರಯನ್—(ನಿರವಕಾಶವಾದ ಪುರುಷ ಶಬ್ದದಿಂದ) ಹೇಳುವವರಾಗಿ, ಶ್ರೀಶುಕಾಚಾರ್ಯರು, ಯತಃ—ಯಾವ ಕಾರಣದಿಂದ, ಪುರುಷಸೂಕ್ತಂ ಚ—ಪುರುಷಸೂಕ್ತವನ್ನೇ, ತತ್ಸೂಕ್ತಂ—ವಿಷ್ಣುಸೂಕ್ತವೆಂದು, ಸ್ಪಷ್ಟಂ ಉಕ್ತವಾನ್—ಸ್ಪಷ್ಟವಾಗಿ ಹೇಳಿರುವರೋ, ಅತಃ ಅಪಿ—ಆದ್ದರಿಂದ ಸಹ, ವೇದಾರ್ಥಕಥನೋದ್ಯತಾಃ—ವೇದಾರ್ಥಗಳನ್ನು (ಸ್ವಬುದ್ಧಿಗೆ ತೋರಿದಂತೆ)ಹೇಳುವುದರಲ್ಲಿ ಆಸಕ್ತರಾದ, ತೇ ವೈ—ಆ ಮಾಯಾವಾದಿಗಳೇ (ಪರರೇ), ಅಕುಶಲಾಃ—ಅಜ್ಞಾನಿಗಳು (ಬುದ್ಧಿಶಾಲಿಗಳಲ್ಲ).

**ಸಾಕ್ಷಾನ್ಮೋಕ್ಷಾಂಗತೋಕ್ತೇಃ ಸಾ ಮೂರ್ತಿರಪ್ರಾಕೃತೈವ ಹಿ ।**
**ನ ಹಿ ಪ್ರಾಕೃತವಿಜ್ಞಾನಾದಪ್ರಾಕೃತಪದಂ ಭವೇತ್ ॥ ೪೬೦ ॥**

ಹಿ—(ಯಸ್ಮಾತ್) ಯಾವ ಕಾರಣದಿಂದ (ಪ್ರಾಕೃತ ವಸ್ತುವಿಜ್ಞಾನದಿಂದ ಅಪ್ರಾಕೃತ ವೈಕುಂಠಾದಿ ಮುಕ್ತಸ್ಥಾನವು ಲಭ್ಯವಲ್ಲವಾದ್ದರಿಂದ), (ತಸ್ಮಾತ್) ಆ ಕಾರಣದಿಂದ, ಸಾಕ್ಷಾನ್ಮೋಕ್ಷಾಂಗತೋಕ್ತೇಃ—'ಏವಂ ವಿದ್ವಾನ್ ಅಮೃತಃ' ಎಂದು ಸ್ಪಷ್ಟವಾಗಿ ಮೋಕ್ಷೋಪಯೋಗಿ ಜ್ಞಾನವಿಷಯಕವಾದುದೆಂದು ಹೇಳಿರುವುದರಿಂದ, ಸಾ ಮೂರ್ತಿಃ – ಆ (ಸಹಸ್ರಶೀರ್ಷಾದ್ಯಾಕಾರವುಳ್ಳ)

---

ನಾಮವನ್ನೇ ಹೇಳಿರುವುದರಿಂದ, ಸಹಸ್ರಶೀರ್ಷಾದಿ ವಿಶೇಷಣಗಳಿಂದ ಪ್ರತಿಪಾದಿಸಲ್ಪಟ್ಟ ಪುರುಷನನ್ನು ಅದಕ್ಕೆ ಸ್ವಬುದ್ಧಿಯಿಂದ ಅನ್ಯನೆಂದು ತಿಳಿಯುವ ಮಾಯಾವಾದಿಯು, ಅಕುಶಲನೇ ಸರಿ; ಬುದ್ಧಿಶಾಲಿಯಲ್ಲ (೪೫೮—೪೫೯). ಪುರುಷಸೂಕ್ತ ಪ್ರತಿಪಾದ್ಯ ಪುರುಷನು ಅಪ್ರಾಕೃತನಾದ ಗುಣತ್ರಯಸಂಬಂಧಶೂನ್ಯನಾದ (ಮಾಯಾರಹಿತನಾದ) ಮೋಕ್ಷಪ್ರದ ಭಗವಂತನೇ ಆಗಿದ್ದಾನೆ; ಆ ಪುರುಷನೇ ಸಾಕ್ಷಾತ್ ಮೋಕ್ಷೋಪಯೋಗಿಯಾದ ಜ್ಞಾನವಿಷಯನೆಂದೂ

---

[1] 'ಉಪತಸ್ಥೇ' ಎಂಬುದರಿಂದ ಪುರುಷಸೂಕ್ತಕ್ಕೆ ವಿಷ್ಣುಮಂತ್ರತ್ವವು (ವಿಷ್ಣುವನ್ನು ಪ್ರಸನ್ನೀಕರಿಸಿಕೊಳ್ಳುವ ಮಂತ್ರವೆಂದು) ಸೂಚಿತವಾಗಿದೆ.

ರೂಪವು, ಅಪ್ರಾಕೃತಾ ಏವ–ಪ್ರಾಕೃತಗುಣಸಂಬಂಧವುಳ್ಳದ್ದಲ್ಲ ( ಅಪ್ರಾಕೃತ ವಾದುದೇ ) ; ಪ್ರಾಕೃತವಿಜ್ಞಾನಾತ್ – ಪ್ರಾಕೃತ ವಸ್ತುವಿಜ್ಞಾನದಿಂದ, ಅಪ್ರಾಕೃತಪದಂ–ಮುಕ್ತಸ್ಥಾನವು, ನ ಹಿ ಭವೇತ್–ಉಂಟಾಗುವುದಿಲ್ಲವಷ್ಟೆ.

**ಸಹಸ್ರಾಕ್ಷಿಶಿರಃಪಾದ್ಯೈರ್ಯತೋಽತ್ಯಂತವಿಲಕ್ಷಣಃ ।**
**ಪುರುಷಃ ಪೂರ್ವವಾಕ್ಯೇನ ವಿಶ್ವವ್ಯಾಪ್ತಶ್ಚ ಕೀರ್ತ್ಯತೇ ॥ ೪೬೧ ॥**

'ಪುರುಷ ಏವೇದಂ ಸರ್ವಂ' ಎಂದು ಹೇಳುವುದರಿಂದ, ಈ ಜಗತ್ತೆಲ್ಲವೂ ಪುರುಷನಿಂದ ಅಭಿನ್ನವೇ ಎಂಬ ಐಕ್ಯಾರ್ಥಕ್ಕೆ ಬಾಧಕವನ್ನು ನಿರೂಪಿಸಿ, ಜ್ಞಾನಿಗಳಿಗೆ ಅಭಿಮತವಾದ ಅರ್ಥವನ್ನು ಹೇಳುತ್ತಾರೆ :—

ಸಹಸ್ರಾಕ್ಷಿಶಿರಃಪಾದ್ಯೈಃ–ಸಹಸ್ರಾರು ಕಣ್ಣುಗಳು, ತಲೆಗಳು, ಪಾದಗಳು ಇವುಗಳಿಂದ, ಯತಃ–ಯಾವ ಕಾರಣದಿಂದ, ಅತ್ಯಂತ ವಿಲಕ್ಷಣಃ–( 'ಅನಂತ ಬಾಹೂದರವಕ್ತ್ರನೇತ್ರ' ಇತ್ಯಾದಿ ಸ್ಮೃತಿಯಿಂದ ಸಹಸ್ರಶಬ್ದವು ಅನಂತ ವೆಂಬರ್ಥವುಳ್ಳದುದೋ) ಜಡಚೇತನಗಳ ಮಧ್ಯದಲ್ಲಿ ಅತ್ಯಂತ ವಿಲಕ್ಷಣನಾದ, ಪುರುಷಃ–ಪುರುಷನು, ಪೂರ್ವವಾಕ್ಯೇನ–' ಸಹಸ್ರಶೀರ್ಷಾ ' ಎಂಬ ಹಿಂದಿನ ವಾಕ್ಯದಿಂದ(ಹೇಳಿ), ವಿಶ್ವವ್ಯಾಪ್ತಃ ಚ–' ಸ ಭೂಮಿಂ ವಿಶ್ವತೋ ವೃತ್ವಾತ್ಯ-ತಿಷ್ಠತ್ ಎಂಬ ವಾಕ್ಯದಿಂದ ಜಗದ್ವ್ಯಾಪ್ತನೆಂದೇ, ಕೀರ್ತ್ಯತೇ–ಹೇಳಲ್ಪಡು ತ್ತಾನೆ.

---

ಹೇಳಲಾಗಿದೆ; ಪ್ರಾಕೃತಜ್ಞಾನದಿಂದ ಅಪ್ರಾಕೃತ ಪದವು (ಮುಕ್ತಸ್ಥಾನವು) ದೊರೆಯಲಾರದು; ಆದ್ದರಿಂದ ಆ ಪುರುಷನು ಅಪ್ರಾಕೃತನೆಂದು ಸಿದ್ಧವಾಗು ತ್ತದೆ (೪೬೦). ಆ ಪುರುಷನು, ಅನಂತ ಶಿರಸ್ಸುಗಳುಳ್ಳವನು ; ಅಸಂಖ್ಯ ನೇತ್ರಗಳುಳ್ಳವನು ಮತ್ತು ಅನಂತ ಪಾದಗಳುಳ್ಳ ವಿಲಕ್ಷಣಪುರುಷನು ; 'ಪುರುಷ ಏವೇದಂ ಸರ್ವಂ', ಎಂಬುದಕ್ಕೆ ಜಗತ್ತಿನಿಂದ ಅಭಿನ್ನನೆಂದು ತಿಳಿಯಲು ಬರುವುದಿಲ್ಲ ; ಸಹಸ್ರ ಶೀರ್ಷಾದಿ ಅತ್ಯಂತ ವಿಲಕ್ಷಣರೂಪವುಳ್ಳವ ನಾದ್ದರಿಂದ, ' ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠತ್ ' ಎಂದು ಜಗತ್ತೆಲ್ಲ ವನ್ನೂ ವ್ಯಾಪಿಸಿ, ಅತಿಕ್ರಮಿಸಿ ನಿಂತಿರುವನೆಂದೂ, ಹೇಳಿರುವುದರಿಂದ, ಜಗತ್ತಿ ನಿಂದ ( ಪರಿಮಿತ ಪರಿಮಾಣವುಳ್ಳದ್ದರಿಂದ ) ಭಿನ್ನನೆಂದೇ ಸಿದ್ಧವಾಗುತ್ತದೆ;

**ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ।**
**ಏತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ ।**
**ಇತ್ಯುತ್ತರತ್ರ ಚೇಶತ್ವಪೂರ್ವೋಽಸ್ಯ ಮಹಿಮೋಚ್ಯತೇ ॥ ೪೬೨ ॥**

ಉತ—ಮತ್ತೂ ಏನೆಂದರೆ, ಅಮೃತತ್ವಸ್ಯ—ಮುಕ್ತವರ್ಗದ (ಮುಕ್ತಜೀವ ಸಮೂಹದ), ಈಶಾನಃ—ಸ್ವಾಮಿಯೂ (ನಿಯಾಮಕನೂ), ಯತ್—ಯಾವ ಕಾರಣದಿಂದ, ಅನ್ನೇನಾತಿರೋಹತಿ—ಸಂಸಾರಿ ಜೀವರೆಲ್ಲರನ್ನೂ ಅತಿಕ್ರಮಿಸಿದವನೂ, ಜ್ಯಾಯಾನ್ ಚ ಪೂರುಷಃ—ಪುರುಷೋತ್ತಮನೂ, (ಆಗಿದ್ದು), ಅಸ್ಯ—ಈತನ, ಮಹಿಮಾ—ಮಹಿಮೆಯು, ಏತಾವಾನ್—ಈ ಪ್ರಕಾರವಾದುದು; (ತತಃ—ಅದಕ್ಕಿಂತಲೂ, ಜ್ಯಾಯಾನ್—ಅತಿಶಯವಾದುದು); ಇತಿ—ಹೀಗೆ, ಉತ್ತರತ್ರ—(ಪುರುಷಸೂಕ್ತವು) ಮುಂದಿನ ವಾಕ್ಯಗಳಲ್ಲಿ, ಈಶತ್ವಪೂರ್ವಃ—(ಸರ್ವ) ನಿಯಾಮಕತ್ವಾದಿ, ಅಸ್ಯ—ಈತನ, ಮಹಿಮಾ—ಮಹಿಮೆಯು, ಉಚ್ಯತೇ—ಹೇಳಲ್ಪಡುತ್ತದೆ.

**ಅತಃ ಪುರುಷ ಏವೇದಂ ಸರ್ವಮಿತ್ಯಪಿ ನೈಕ್ಯವಾಕ್ ।**
**ಉಪಕ್ರಮೋಪಸಂಹಾರೌ ಯದ್ವಾಕ್ಯಾರ್ಥನಿಯಾಮಕೌ ॥ ೪೬೩ ॥**

ಅತಃ—ಆದ್ದರಿಂದ (ಹಿಂದುಮುಂದಿನ ವಾಕ್ಯಗಳಲ್ಲಿ ಸ್ಪಷ್ಟವಾಗಿ ಬಹು ವಿರುದ್ಧ ಧರ್ಮಗಳನ್ನು ಹೇಳಿರುವುದರಿಂದ, ಪ್ರತಿಪಾದ್ಯ ‘ಪುರುಷ’ನಿಗೆ ಅತ್ಯಂತ ವೈಲಕ್ಷಣ್ಯವೇ ಹೇಳಲ್ಪಡುತ್ತದೆಯಾಗಿ), ಪುರುಷಃ ಏವ—ಪುರುಷನೇ,

---

‘ಪುರುಷ ಏವೇದಂ ಸರ್ವಂ’ ಎಂಬುದು, ಸರ್ವತ್ರ ವ್ಯಾಪ್ತನೆಂದು (‘ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠತ್’ ಎಂದು ಹೇಳುವ ವ್ಯಾಪ್ತಿಯನ್ನೇ) ಹೇಳುತ್ತದೆ; ‘ಸಹಸ್ರಶೀರ್ಷಾದಿ’ ಹಿಂದಿನ ವಾಕ್ಯವು, ಪ್ರತಿಪಾದ್ಯನಾದ ಪುರುಷನು ಅತ್ಯಂತ ವಿಲಕ್ಷಣನೆಂದು ಹೇಳುತ್ತದೆ; ಹೀಗೆ ಪೂರ್ವೋತ್ತರ ವಾಕ್ಯಗಳಲ್ಲಿ ಯಾವ ವಿರೋಧವೂ ಇಲ್ಲ (೪೬೧). ಮತ್ತೂ ಏನೆಂದರೆ, ಆ ಪುರುಷನು ಮುಕ್ತಾಮುಕ್ತಚೇತನ ಸಮೂಹವನ್ನು ಅತಿಕ್ರಮಿಸಿ ಸ್ಥಿತನಾದ್ದರಿಂದ, ಬಹುಮಹಿಮೆಗಳುಳ್ಳ ಈತನು ಪುರುಷೋತ್ತಮನು; ಎಂಬುದಾಗಿ, ಮುಂದೆ, ಸರ್ವನಿಯಾಮಕತ್ವ ಮಹಿಮೆಯೂ ಹೇಳಲ್ಪಡುತ್ತದೆ (೪೬೨). ಅದ್ದರಿಂದ ‘ಪುರುಷ ಏವೇದಂ ಸರ್ವಂ’ ಎಂಬುದು, ಐಕ್ಯವನ್ನು ಹೇಳುವುದಿಲ್ಲ;

*

ಇದಂ ಸರ್ವಂ—ಈ ಎಲ್ಲವೂ, ಇತ್ಯಪಿ – ಎಂಬುದೂ ಸಹ, ಐಕ್ಯವಾಕ್—ಐಕ್ಯವನ್ನು ಹೇಳುವ ವಾಕ್ಯವು, ನ—ಅಲ್ಲ; ಯತ್ – ಏಕೆಂದರೆ, ಉಪಕ್ರಮೋಪಸಂಹಾರೌ – ಉಪಕ್ರಮ, ಉಪಸಂಹಾರಗಳು, ವಾಕ್ಯಾರ್ಥನಿಯಾಮಕೌ—ವಾಕ್ಯಾರ್ಥನಿಯಾಮಕೌ—ವಾಕ್ಯಾರ್ಥವನ್ನು ನಿಯಮಿಸುತ್ತವೆ (ನಿರ್ಣಯಿಸುತ್ತವೆ).[1]

**ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ ।**
**ರಾಜ್ಞೈವ ರಾಷ್ಟ್ರಮಿತ್ಯಾದಿ ಪ್ರಯೋಗಸ್ತನ್ನಿದರ್ಶನಂ ॥ ೪೬೪ ॥**

ಹಾಗಾದರೆ 'ಸರ್ವ ಏವೇದಂ ಪುರುಷಂ' ಎಂಬುದರ ಅರ್ಥವೇನೆಂದರೆ, ಹೇಳುತ್ತಾರೆ :—

ಯಸ್ಯ—ಯಾರ (ಯಾವುದರ), ಸತ್ತಾ—ಅಸ್ತಿತ್ವವು (ಪ್ರತೀತಿ ಪ್ರವೃತ್ತ್ಯಾದಿಗಳೂ), ಯದಧೀನಾ—ಯಾರ ಅಧೀನವೋ, ತತ್ತತ್—ಅದು ಅದೇ (ಪುರುಷನ ಅಧೀನವಾದುದರಿಂದ, ಜಗತ್ತು ಪುರುಷನೆಂದೇ), ಇತ್ಯೇವ ಭಣ್ಯತೇ—ಹೀಗೆಂದೇ ಕರೆಯಲ್ಪಡುತ್ತದೆ ; ರಾಷ್ಟ್ರಂ—ರಾಜ್ಯವು, ರಾಜಾ ಏವ—ರಾಜನೇ, ಇತ್ಯಾದಿ—

---

ಉಪಕ್ರಮದಲ್ಲಿ ಮತ್ತು ಉಪಸಂಹಾರದಲ್ಲಿ ಹೇಳುವ ವಾಕ್ಯಗಳಿಗನುಸಾರವಾಗಿ, ಮಧ್ಯದಲ್ಲಿನ ಇತರ ವಾಕ್ಯಗಳಿಗೆ ಅರ್ಥಗಳನ್ನು ಕಲ್ಪಿಸಬೇಕಲ್ಲದೇ, ಆ ವಾಕ್ಯಗಳ ವಿರುದ್ಧಾರ್ಥವನ್ನಲ್ಲ; ಉಪಕ್ರಮ ಉಪಸಂಹಾರಗಳು ವಾಕ್ಯಾರ್ಥವನ್ನು ನಿರ್ಣಯಿಸುತ್ತದೆ (೪೬೩). ಯಾವ ವಸ್ತುವಿನ ಸತ್ತಾದಿಗಳು ಯಾರ ಅಧೀನವೋ, ಆತನು, ಆ ವಸ್ತುನಾಮಗಳಿಂದಲೇ ಕರೆಯಲ್ಪಡುವನೆಂಬ ನ್ಯಾಯವೂ ಇದೆ; ರಾಷ್ಟ್ರವೂ ರಾಜನೆಂದೇ ವ್ಯವಹರಿಸಲ್ಪಡುತ್ತದೆ—ಅದು

---

[1] 'ಸಹಸ್ರಶೀರ್ಷಾ', ಇತ್ಯಾದಿಗಳು ಉಪಕ್ರಮ (ಆರಂಭದ) ವಾಕ್ಯಗಳು; ಅವು ಭಗವಂತನು (ಪ್ರತಿಪಾದ್ಯ ಪುರುಷನು) ವಿಲಕ್ಷಣಪುರುಷನೆಂದು ಅನ್ಯಪುರುಷರಿಂದ ಭೇದವನ್ನೇ ಹೇಳಿತು; ಉಪಸಂಹಾರದ (ಅಂತ್ಯದ) ವಾಕ್ಯಗಳು, 'ಉತಾಮೃತತ್ವಸ್ಯೇಶಾನಃ', 'ಜ್ಯಾಯಾಂಶ್ಚ ಪುರುಷಃ' ಎಂದು, ಮುಕ್ತನಿಯಾಮಕನೆಂದೂ, ಪುರುಷಶ್ರೇಷ್ಠನೆಂದೂ ಭೇದವನ್ನೇ ಹೇಳುತ್ತದೆ; 'ಪುರುಷ ಏವೇದಂ ಸರ್ವಂ' ಎಂಬುವ ಮಧ್ಯದಲ್ಲಿ ಬರುವ ವಾಕ್ಯಕ್ಕೆ ಆರಂಭ ಮತ್ತೆ ಉಪಸಂಹಾರಗಳಿಗೆ ವಿರೋಧವಿಲ್ಲದಂತೆ, ಅರ್ಥವನ್ನು ತಿಳಿಯಬೇಕು.

ಈ ಮೊದಲಾದ, ಪ್ರಯೋಗಃ–ಪ್ರಯೋಗವು (ವ್ಯವಹಾರವು), ತನ್ನಿದರ್ಶನಂ –(ಉಕ್ತ ನ್ಯಾಯದ) ಅದರ ದೃಷ್ಟಾಂತವು.[1]

**ಅತಃ ಪುರುಷ ಏವೇತಿ ಪುಂಸಃ ಸ್ವಾತಂತ್ರ್ಯವಾಗಿಯಂ || ೪೬೫ ||**

ಅತಃ–(ನಿಯಮ್ಯ ನಿಯಾಮಕರಲ್ಲಿ ಐಕ್ಯವ್ಯಪದೇಶವು ಕಂಡಿರುವುದು) ಆದ್ದರಿಂದ, ಪುಂಸಃ–ಪುರುಷನಿಗೆ, ಇಯಂ–ಈ ವಾಕ್ಯವು, ಸ್ವಾತಂತ್ರ್ಯವಾಕ್–ಸ್ವಾತಂತ್ರ್ಯವೆಂಬ ಮಹಿಮಾ ಪ್ರತಿಪಾದಕ ವಾಕ್ಯವಾಗಿದೆ.

**ಪೂರ್ವೋತ್ತರೋಕ್ತಸುಗುಣರತ್ನಮಾಲಾಮಹಾಮಣಿಂ |**
**ಮಧ್ಯೇ ಬಿಭರ್ತಿ ನ ಪುನಃ ಕಾಚಂ ವಾಚಾಮಗೋಚರಂ || ೪೬೬ ||**

ಪೂರ್ವೋತ್ತರ ವಾಕ್ಯಗಳಿಗನುಗುಣವಾಗಿ ಮಧ್ಯದ ವಾಕ್ಯಕ್ಕೆ ಅರ್ಥವನ್ನು ತಿಳಿಯಬೇಕೆಂಬಲ್ಲಿ ಲೋಕದೃಷ್ಟಾಂತವನ್ನು ಹೇಳುತ್ತಾರೆ :—

ಪೂರ್ವೋತ್ತರೋಕ್ತಸುಗುಣರತ್ನಮಾಲಾ–ಮೊದಲಿನ ಮತ್ತು ಕೊನೆಯ ವಾಕ್ಯಗಳು ಹೇಳುವ (ಸಹಸ್ರಶೀರ್ಷಾದಿ ಮತ್ತು ಅಮೃತತ್ವೇಶಾನಃ ಇತ್ಯಾದಿಗಳು) ಪುರುಷನ ಶುಭಗುಣಗಳ ರತ್ನಮಾಲಿಕೆಯು (ಬಹು ವಿಲಕ್ಷಣಗುಣಗಳನ್ನು

---

ರಾಜಾಧೀನವಾದುದರಿಂದ; ಎಂಬಂತೆ, ಎಲ್ಲವೂ ಪುರುಷನೇ ಎಂದರೆ, ಪುರುಷಾಧೀನವೇ—ಪುರುಷನಿಯಮ್ಯಗಳೇ ಎಂದು ಅರ್ಥ (೪೬೪). ಆದ್ದರಿಂದ 'ಪುರುಷ ಏವೇದಂ' ಎಂಬುದು, ಪುರುಷನು ಎಲ್ಲವನ್ನೂ ಆಳುವ ಸ್ವತಂತ್ರ ಪ್ರಭುವೆಂದೇ ಹೇಳುತ್ತದೆ (೪೬೫). ಪೂರ್ವವಾಕ್ಯ ಮತ್ತು ಉತ್ತರವಾಕ್ಯಗಳಲ್ಲಿ, ವಿಲಕ್ಷಣತ್ವ, ಮುಕ್ತಾಮುಕ್ತ ನಿಯಾಮಕತ್ವ ಮೊದಲಾದ ರತ್ನಪ್ರಾಯವಾದ ಮಹಿಮೆಗಳನ್ನು ಹೇಳಿ, ಆ ರತ್ನಮಾಲಿಕೆಯಲ್ಲಿ, ಮಧ್ಯದಲ್ಲಿರಬೇಕಾದ ಮಹಾರತ್ನ (ಅನರ್ಘ್ಯಮಣಿಯನ್ನು) (ಸ್ವಾತಂತ್ರ್ಯವೆಂಬ ಗುಣರೂಪದ ರತ್ನಪದಕವನ್ನು) ಧರಿಸದೇ, ಆ ಗುಣಮಾಲೆಯು, ಗಾಜಿನ ಕರೀಮಣಿಯನ್ನು

---

[1] 'ತದಧೀನತ್ವಾದರ್ಥವತ್' ಎಂಬ ಸೂತ್ರದಲ್ಲಿ (ಬ್ರಹ್ಮಸೂತ್ರ), 'ಯಥಾ ಜೀವಃ ಪರಾತ್ಮೇತಿ ಯಥಾ ರಾಜಾ ಜಯೀತ್ಯಪಿ |' ಎಂಬ ಪ್ರಮಾಣವು ಭಾಷ್ಯದಲ್ಲಿ ಉದಾಹೃತವಾಗಿದೆ; ಯೋಧನಲ್ಲಿನ ಜಯವು 'ರಾಜಾ ಜಯೀ' ಎಂದು ಹೇಳಲ್ಪಡುತ್ತದೆ —ಆತನು ರಾಜಾಧೀನನಾದ್ದರಿಂದ.

ನಿರೂಪಿಸುವುದರಿಂದ ಮಾಲೆ, ಎಂದಿರುತ್ತಾರೆ) ; ಮಧ್ಯೇ–ಮಧ್ಯದಲ್ಲಿ, ಮಹಾ ಮಣಿಂ–('ಪುರುಷ ಏವೇದಂ ಸರ್ವಂ' ಎಂಬ ಮಧ್ಯದ ವಾಕ್ಯವು ಸ್ವಾತಂತ್ರ್ಯ ವೆಂಬ ಅನರ್ಘ್ಯವಾದ ರತ್ನದಂತೆ) ಮಹಾಮಣಿಯನ್ನು,[1] ಬಿಭರ್ತಿ–ಧರಿಸುತ್ತದೆ; ಪುನಃ – ಮತ್ತೇನೆಂದರೆ, ವಾಚಾಮಗೋಚರಂ–(ಅನಿರ್ವಚನೀಯವಾದದ) ಐಕ್ಯವೆಂಬ, ಕಾಚಂ[2]–ಗಾಜಿನ ಮಣಿಯನ್ನು (ಕರೀಮಣಿಯನ್ನು), ನ–(ರತ್ನ ಮಾಲೆಗೆ ಪದಕದಂತೆ ಮಧ್ಯದಲ್ಲಿರಲು ಅಯೋಗ್ಯವಾದ್ದರಿಂದ) ಧರಿಸುವುದಿಲ್ಲ (ಆದ್ದರಿಂದ ಪುರುಷಸೂಕ್ತದ ಮಧ್ಯದ ವಾಕ್ಯಕ್ಕೆ ಐಕ್ಯವೆಂಬರ್ಥವು ಯೋಗ್ಯ ವಲ್ಲ).

**ಯತ್ಸ್ವಪ್ರಕಾಶಾತ್ಮರೂಪಮೈಕ್ಯಂ ತೇ ವಾಕ್ಯದೂರಗಂ ॥ ೪೬೭ ॥**

ಅದನ್ನೇ ಉಪಪಾದಿಸುತ್ತಾರೆ :—

ತೇ–ನಿನ್ನ ಮತದಲ್ಲಿ, ಯತ್–ಯಾವ ಕಾರಣದಿಂದ, ಸ್ವಪ್ರಕಾಶಾತ್ಮ ರೂಪಂ–ಸ್ವಪ್ರಕಾಶನಾದ ಆತ್ಮನೆಂಬ, ಐಕ್ಯಂ–ಐಕ್ಯವು (ಸ್ವಪ್ರಕಾಶನಾದ ಬ್ರಹ್ಮನು ಶಾಸ್ತ್ರದಿಂದ ಅವೇದ್ಯನಾಗಿರುವಂತೆ—ತಿಳಿಯಲಾಗದವನಂತೆ, ಬ್ರಹ್ಮ ನಿಂದ ಅಭಿನ್ನವಾದ ಐಕ್ಯವೂ), ವಾಕ್ಯದೂರಗಂ – ಅವಾಚ್ಯವೇ (ಶಾಸ್ತ್ರ ದಿಂದ ಅವೇದ್ಯವೇ), (ಈ ಕಾರಣದಿಂದ ಸಹ 'ಪುರುಷ ಏವೇದಂ ಸರ್ವಂ'

---

ಧರಿಸುವುದೇ ? ಐಕ್ಯವೆಂಬ ಹೀನಕರವಾದ ಅರ್ಥವನ್ನು ಹೇಳುವುದು ಅತ್ಯಂತ ಅಸಂಭವವಲ್ಲವೇ ? ಈ ಐಕ್ಯವು (ಮಾಯಾವಾದಿಯಂತೆ) ಅವಾಚ್ಯವೂ ಆಗಿದೆ—ಹೇಳಲಿಕ್ಕೂ ಬಾರದ ಈ ಹೀನ ಧರ್ಮವು, ಬ್ರಹ್ಮಾಭಿನ್ನವೆಂದೂ ಹೇಳಲಾಗುತ್ತದೆಯಷ್ಟೆ (೪೬೬). ಮಾಯಾವಾದ ಮತದಲ್ಲಿ ಸ್ವಪ್ರಕಾಶನೆಂಬ

---

1 ಸ್ವಾತಂತ್ರ್ಯವಿದ್ದಲ್ಲಿ ಮಾತ್ರ ದುಃಖಾದಿ ಸ್ಪರ್ಶವಿಲ್ಲದ ಆನಂದಾದಿಗಳು ಸಂಭಾವ್ಯ ವಾಗುತ್ತವೆ—ಸ್ವಾತಂತ್ರ್ಯವೆಂಬ ಗುಣವು ಮಹಾಮಣಿಯಂತೆ.

2 ಕಾಚವು ನೈಚ್ಯಾಪಾದಕ ಹೀನಗುಣ (ದೋಷ) ಸೂಚಕವು ; ಅನರ್ಘ್ಯ ರತ್ನ ಮಾಲಿಕೆಯಲ್ಲಿ, ನಾಯಕರತ್ನವನ್ನು ಪದಕವನ್ನಾಗಿ ಜೋಡಿಸದೇ, ಕರೀಮಣಿಯನ್ನು ಜೋಡಿಸಿದಂತಾಗುತ್ತದೆ—'ಪುರುಷ ಏವೇದಂ ಸರ್ವಂ' ಎಂಬುದಕ್ಕೆ ಪುರುಷನಿಗೆ ಜಗತ್ತಿನಿಂದ ಅಭೇದವನ್ನು (ಐಕ್ಯವನ್ನು) ಹೇಳುವುದು.

ಎಂಬುದಕ್ಕೆ ಐಕ್ಯವು ಅರ್ಥವೆಂಬುದು—ಶಬ್ದಾವಾಚ್ಯವಾದುದಕ್ಕೆ ಐಕ್ಯಾರ್ಥವು ಯುಕ್ತವಲ್ಲ).

**ವಿರುದ್ಧಧರ್ಮಾಸ್ತ ಇಮೇ ಸಾಕ್ಷಾನ್ಮೋಕ್ಷಾಂಗತಾಬಲಾತ್ ।**
**ಅನಿವರ್ತ್ಯಾಶ್ಚ ಸತ್ಯಾಶ್ಚ ಕದೈಕ್ಯಾವಸರೋ ವದ ॥ ೪೬೮ ॥**

ವಿರುದ್ಧಧರ್ಮಗಳು ಮಿಥ್ಯಾಭೂತಗಳಾದ್ದರಿಂದ ಐಕ್ಯವನ್ನು ಬಾಧಿಸುವುದಿಲ್ಲ ವೆಂಬ ಸಂಶಯವು ವೇದಾಪ್ರಾಮಾಣ್ಯಪ್ರಸಂಗ ಬರುವುದೆಂಬ ಕಾರಣದಿಂದ ದೂಷಿತವಾದರೂ, ಬೇರೆ ದೋಷದಿಂದ ಸಹ ಉಚಿತವಲ್ಲವೆನ್ನುತ್ತಾರೆ :—

ತೇ—ಆ (ನಿನ್ನ), ವಿರುದ್ಧಧರ್ಮಾಃ ಇಮೇ—ವಿರುದ್ಧ·ಧರ್ಮಗಳೆಂಬ ಇವು, ಸಾಕ್ಷಾನ್ಮೋಕ್ಷಾಂಗತಾಬಲಾತ್—(' ತಮೇವಂ ವಿದ್ವಾನಮೃತ ಇಹ ಭವತಿ ' ಎಂಬಲ್ಲಿರುವ, ತಂ, ಎಂದರೆ, ಪ್ರತಿಪಾದ್ಯಪುರುಷನನ್ನು, ಏವ, ಎಂದರೆ ಆತನ ಧರ್ಮಗಳೊಂದಿಗೆ, ತಿಳಿದವನು ಮುಕ್ತನಾಗುವನೆಂದು) ಆ ಧರ್ಮಜ್ಞಾನವು ಮೋಕ್ಷಪ್ರಾಪ್ತಿಗೆ ಅವ್ಯವಹಿತ ಸಾಧನವಾಗುವುದೆಂಬ ಬಲದಿಂದ, ಅನಿವರ್ತ್ಯಾಃ—ತ್ಯಾಜ್ಯಗಳಲ್ಲ (ನಿವಾರಿಸಲ್ಪಡತಕ್ಕವುಗಳಲ್ಲ), ಸತ್ಯಾಃ ಚ—ಸತ್ಯವೇ ಆಗಿವೆ (ಮಿಥ್ಯೆಗಳಲ್ಲ) ; ಐಕ್ಯಾವಸರಃ—ಐಕ್ಯಕ್ಕೆ ಅವಕಾಶವು, ಕದಾ—ಯಾವಾಗ ? (ಎಲ್ಲಿದೆ ?), ವದ—ನೀನೇ ಹೇಳು; (ವಿರುದ್ಧಧರ್ಮಗಳು ಮಿಥ್ಯೆಯಲ್ಲವೆಂಬಲ್ಲಿ ಅವುಗಳಿಗೆ ಮೋಕ್ಷಾಂಗತ್ವವನ್ನು ಹೇಳಿ, ಬೇರೆ ದೋಷವನ್ನೂ ಹೇಳಿ ಸಂಶಯ ವನ್ನು ನಿವಾರಿಸಿರುತ್ತಾರೆಂದು ತಿಳಿಯಬೇಕು).[1]

---

ಬ್ರಹ್ಮನಂತೆ, ಐಕ್ಯವೂ ಅವಾಚ್ಯವಾಗಿದೆ (೪೬೭). ನಿನ್ನ ಮತಕ್ಕೆ ವಿರುದ್ಧ ಗಳಾದ ಸೂಕ್ತದ ಪೂರ್ವೋತ್ತರ ವಾಕ್ಯಪ್ರತಿಪಾದ್ಯ ಧರ್ಮಗಳು ಮೋಕ್ಷಕ್ಕೆ ಅಂಗಭೂತಗಳೆಂದು, (ಅವುಗಳ ಜ್ಞಾನದಿಂದ, ಅಧಿಕಾರಿಯು ಮುಕ್ತನಾಗುವ ನೆಂದು) ಹೇಳಿರುವುದರಿಂದ, ಆ ಧರ್ಮಗಳು ತ್ಯಾಜ್ಯಗಳಲ್ಲ—ಸತ್ಯವಾದುವೇ—ಮಿಥ್ಯೆಯಲ್ಲ; ಹೀಗಿರಲು, ಐಕ್ಯಕ್ಕೆ ಎಲ್ಲಿ ಅವಕಾಶವಿದೆ? ನೀನೇ ಹೇಳು(೪೬೮).

---

1 'ಯಸ್ಮಿನ್ ವಿರುದ್ಧಗತಯೋಽಪ್ಯನಿಶಂ ಪತಂತಿ' ಇತ್ಯಾದಿ ಭಾಗವತವಾಕ್ಯವೂ, (೪-೧೦-೧೬) ಯಾವ ಭಗವಂತನಲ್ಲಿ, ಅಣುತ್ವ, ಮಹತ್ವಾದಿ ವಿರುದ್ಧಧರ್ಮಗಳು ನಿತ್ಯ ವಲ್ಲಿಯೂ ಇರುವುವೋ, ಆತನು ಆನಂದಾದಿ ಗುಣಪೂರ್ಣನೆಂದು ಹೇಳುತ್ತದೆ.

**ಏವಂ ವಿದ್ವಾನಿತಿ ಜ್ಞಾನಂ ಶ್ರೂಯತೇ ಸಪ್ರಕಾರಕಂ ।**
**ನಿಷ್ಪ್ರಕಾರಕಧೀವೇದ್ಯಂ ತೇಽದ್ವೈತಂ ನಾತ್ರ ಶೋಭತೇ ॥ ೪೭೯ ॥**

ಐಕ್ಯಾರ್ಥವು ಬೇರೊಂದು ಕಾರಣದಿಂದ ಸಹ ದೋಷಯುಕ್ತವಾಗುತ್ತದೆನ್ನುತ್ತಾರೆ :—

ಏವಂ ವಿದ್ವಾನ್ ಇತಿ ಜ್ಞಾನಂ–(ಏವಂ–ಈ ಪ್ರಕಾರದಿಂದ)ಹೀಗೆ ತಿಳಿದವನು (ಪುರುಷಸೂಕ್ತ ಪ್ರತಿಪಾದ್ಯ ಮಹಿಮೆಗಳುಳ್ಳವನೆಂಬ ಜ್ಞಾನವುಳ್ಳವನು) ಎಂಬ ಜ್ಞಾನವು, ಸಪ್ರಕಾರಕಂ–ವಿವಿಧ ಪ್ರಕಾರವುಳ್ಳದ್ದೆಂದು, ಶ್ರೂಯತೇ–ಶ್ರುತಿಯಲ್ಲಿ ಹೇಳಲಾಗುತ್ತದೆ; ತೇ–ನಿನ್ನ, ನಿಷ್ಪ್ರಕಾರಕಧೀವೇದ್ಯಂ–ಯಾವ ಪ್ರಕಾರವೂ ಇಲ್ಲದ (ಸ್ವಪ್ರಕಾಶ ರೂಪಮಾತ್ರನೆಂಬ) ಜ್ಞಾನಕ್ಕೆ ವಿಷಯನೆಂಬ, ಅದ್ವೈತಂ–ಅದ್ವೈತವು (ಐಕ್ಯವು), ಅತ್ರ–ಇಲ್ಲಿ (ಸಪ್ರಕಾರಕ ಜ್ಞಾನವಿಷಯನೆಂಬ ಧರ್ಮವನ್ನು ಬೋಧಿಸುವ ಈ ಸೂಕ್ತದಲ್ಲಿ), ನ ಶೋಭತೇ–ಶೋಭಿಸುವುದಿಲ್ಲ (ಹೊಂದುವುದೇ ಇಲ್ಲ).

**ಏತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ ।**
**ಇತಿ ಪೂರ್ವೋಕ್ತಮಹಿಮಾ ಜ್ಯಾಯಸ್ತ್ವೇ ಹೇತುರುಚ್ಯತೇ॥೪೭೦॥**
**ಅತಃ ಪೂರ್ವೋದಿತೋಽಪ್ಯರ್ಥಃ ಸರ್ವೋಽಪಿ ಮಹಿಮಾಭವೇತ್ ।**
**ನ ಚೇದ್ವಿರುದ್ಧೋ ಹೇತುಃ ಸ್ಯಾದನುವಾದೋಽಪ್ಯನನ್ವಿತಃ ॥ ೪೭೧ ॥**

---

'ಏವಂ ವಿದ್ವಾನ್', ಎಂದರೆ ಈ ಪ್ರಕಾರದಿಂದ ತಿಳಿದವನು (ಪುರುಷಸೂಕ್ತ ಪ್ರತಿಪಾದ್ಯ ಮಹಿಮೆಗಳನ್ನು ತಿಳಿದವನು) ಮುಕ್ತನಾಗುವನೆಂದು ಹೇಳುವುದರಿಂದ ಪರಬ್ರಹ್ಮನು ನಿಷ್ಪ್ರಕಾರಕನೆಂದು ಹೇಳುವ ಅದ್ವೈತವು ಸಪ್ರಕಾರಕ ಜ್ಞಾನವನ್ನು ಮೋಕ್ಷಪ್ರದವೆಂದು ಬೋಧಿಸುವ ಪುರುಷಸೂಕ್ತದಲ್ಲಿ ಶೋಭಿಸುವುದಿಲ್ಲ (೪೭೯). 'ಏತಾವಾನಸ್ಯ ಮಹಿಮಾ'–ಎಂದರೆ ಈವರೆಗೆ ನಿರೂಪಿಸಿದ ಬಹುಸಂಖ್ಯಾಕವಾದ ಮಹಿಮೆಯುಳ್ಳ ಪುರುಷನು ಸರ್ವೋತ್ತಮನು; ಎಂಬಲ್ಲಿ ಪೂರ್ವೋಕ್ತ ಮಹಿಮೆಗಳು, ಶ್ರೇಷ್ಠತೆಯ ವಿಷಯಕ್ಕೆ ಹೇತುವೆಂದು ಹೇಳಿರುವುದರಿಂದ, ಹಿಂದಿನ ವಾಕ್ಯಗಳಲ್ಲಿ ಹೇಳಲಾದವುಗಳೆಲ್ಲವೂ ಮಹಿಮೆಗಳೇ ಎಂದೂ ಸಿದ್ಧವಾಗುತ್ತವೆ; ಹೀಗೆ ಸರ್ವೋತ್ತಮತ್ವವನ್ನು ಹೇಳಿ, ಮಧ್ಯದಲ್ಲಿ 'ಪುರುಷ ಏವೇದಂ ಸರ್ವಂ' ಎಂದು ಐಕ್ಯವನ್ನು ಹೇಳುತ್ತದೆಂದರೆ,

'ಪುರುಷ ಏವೇದಂ ಸರ್ವಂ' ಎಂಬುದಕ್ಕೆ ಐಕ್ಯಾರ್ಥವಿಲ್ಲೆಂಬಲ್ಲಿ ಬೇರೆ ಯುಕ್ತಿಯನ್ನು ಹೇಳುತ್ತಾರೆ:—

(ಯತಃ—ಯಾವ ಕಾರಣದಿಂದ), ಅಸ್ಯ—ಈ ಪುರುಷನ, ಮಹಿಮಾ—ಮಹಿಮೆಯು, ಏತಾವಾನ್ – ಪೂರ್ವೋಕ್ತ ಪ್ರಕಾರವಾಗಿ ಬಹುಸಂಖ್ಯಾಕವಾದುದೋ, ತತಃ—ಆ ಕಾರಣದಿಂದ, ಪೂರುಷಃ—ಪುರುಷನು, ಜ್ಯಾಯಾನ್—ಸರ್ವೋತ್ತಮನು, ಇತಿ – ಎಂಬುದಾಗಿ, ಪೂರ್ವೋಕ್ತಮಹಿಮಾ – ಹಿಂದೆ ನಿರೂಪಿಸಿದ (ಸಹಸ್ರಾಕ್ಷತ್ವಾದಿ) ಮಹಿಮೆಯು, ಜ್ಯಾಯಸ್ತ್ವೇ—ಶ್ರೇಷ್ಠತೆಯ ವಿಷಯದಲ್ಲಿ, ಹೇತುಃ—ಕಾರಣವು, ಉಚ್ಯತೇ—(ಎಂದು) ಹೇಳಲ್ಪಡುತ್ತದೆ; ಅತಃ—ಆದ್ದರಿಂದ, ಪೂರ್ವೋದಿತೋಽಪ್ಯರ್ಥಃ—ಹಿಂದಿನ ವಾಕ್ಯಗಳಿಂದ ಹೇಳಲಾದ ಮಹಿಮೆಯು, ಸರ್ವೋಽಪಿ – ಎಲ್ಲವೂ, ಮಹಿಮಾಭವೇತ್ – ಅದು ಮಹಿಮೆ ರೂಪವೇ ಆಗುತ್ತದೆ; ನ ಚೇತ್—ಹಾಗಲ್ಲದಿದ್ದರೆ (ಮಧ್ಯದಲ್ಲಿ ಐಕ್ಯವನ್ನು ಹೇಳಿದ್ದರಿಂದ ಅದು ಮಹಿಮೆ ರೂಪವಲ್ಲದಿದ್ದಲ್ಲಿ), ಹೇತುಃ-'ಏತಾವಾನಸ್ಯ ಮಹಿಮಾ' ಎಂದು ಹೇಳಿದ ಹೇತುವು, ವಿರುದ್ಧಃ ಸ್ಯಾತ್—('ಜ್ಯಾಯಾಂಶ್ಚ ಪೂರುಷಃ' ಎಂಬ ಸರ್ವೋತ್ತಮತ್ವ ಸಾಧ್ಯವನ್ನು) ವಿರೋಧಿಸುತ್ತದೆ; ಅನುವಾದಃ ಅಪಿ—ಪುನಹ ಮಹಿಮಾಪದ ಪ್ರಯೋಗದಿಂದ 'ಏತಾವಾನಸ್ಯ ಮಹಿಮಾ' ಎಂದು ಮಾಡಿದ ಅನುವಾದವೂ, ಅನನ್ವಿತಃ—(ಐಕ್ಯವೆಂಬ ಅರ್ಥದೊಂದಿಗೆ) ಅನ್ವಿತವಾಗುವುದಿಲ್ಲ (ಹೊಂದುವುದಿಲ್ಲ).

**ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।**
**ಇತಿ ಸ್ಮೃತ್ಯನುಸಾರೇಣ ಮರ್ತ್ಯಾಮೃತಪದೋಕ್ತಯೋಃ ॥ ೪೭೨ ॥**
**ಮುಕ್ತಾಮುಕ್ತಚಿತೋರೀಶೋ ಹ್ಯುತ್ತರಾರ್ಧೇ ಸ ಕಥ್ಯತೇ**
**ಅತೋ ಜಡಪದಾರ್ಥಸ್ಯಾಪೀಶತ್ವಂ ವಕ್ತಿ ಪೂರ್ವವಾಕ್ ॥ ೪೭೩ ॥**

---

'ಜ್ಯಾಯಾಂಶ್ಚ ಪುರುಷಃ' ಎಂದು ಹೇಳಿದ ಸರ್ವೋತ್ತಮತ್ವವನ್ನು ವಿರೋಧಿಸುತ್ತದೆ; ಮತ್ತು 'ಏತಾವಾನಸ್ಯ ಮಹಿಮಾ' ಎಂಬ ಅನುವಾದವೂ, ಅಸಂಬದ್ಧವಾಗುತ್ತದೆ (೪೭೦—೪೭೧). ಸಂಸಾರಭಯಾದಿ ದೋಷಗಳಿಂದ ನಿತ್ಯಮುಕ್ತರಾದ, ಮುಕ್ತಜೀವಸಮುದಾಯದ ನಿಯಾಮಕನೂ, ಮರಣಶೀಲರಾದ ಸಾಂಸಾರಿಕ ಜೀವರಿಗೂ ನಿಯಾಮಕ ಪ್ರಭುವೂ ಎಂದು ಹೇಳುವ

'ಪುರುಷ ಏವೇದಂ ಸರ್ವಂ' ಎಂಬುದಕ್ಕೆ ತಾವು ಹೇಳಿದ ಅರ್ಥವೇ ಯೋಗ್ಯವೆಂಬಲ್ಲಿ ಬೇರೆ ಕಾರಣವನ್ನು ಹೇಳುತ್ತಾರೆ:—

ಅಭಯಸ್ಯ—ನಿತ್ಯ ಭಯಾದಿ ದೋಷರಹಿತರಾದ, ಅಮೃತಸ್ಯ—ಮುಕ್ತ ಚೇತನ ವರ್ಗದ, ಈಶಃ – ನಿಯಾಮಕನಾದ (ಸ್ವಾಮಿಯಾದ), ಸಃ – ಆ ಪರಮಾತ್ಮನು, ಯತ್—ಯಾವ ಕಾರಣದಿಂದ, ಮರ್ತ್ಯಂ ಅನ್ನಂ—ಮರಣ ಶೀಲರಾದ ಸಂಸಾರಿ ಜೀವಸಮುದಾಯವನ್ನು, ಅತ್ಯಗಾತ್ – ಅತಿಕ್ರಮಿಸಿರುವನೋ (ಮೀರಿರುವನೋ—ಶ್ರೇಷ್ಠನಾಗಿರುವನೋ), (ಅತಃ—ಆದ್ದರಿಂದ) ಇತಿ – ಹೀಗಿರುವ, ಸ್ಮೃತ್ಯನುಸಾರೇಣ – ಭಾಗವತ ವಾಕ್ಯಾನುಸಾರವಾಗಿ, ಮರ್ತ್ಯಾಮೃತಪದೋಕ್ತಯೋಃ—('ಮರ್ತ್ಯಮನ್ನಂ ಯದತ್ಯಗಾತ್'—ಎಂಬಲ್ಲಿ ಹೇಳಿದ) ಸಂಸಾರಿ ಜೀವ ಸಮುದಾಯವನ್ನು ('ಅಮೃತಸ್ಯ' ಎಂದು ಹೇಳಿದ) ಮುಕ್ತಚೇತನವರ್ಗವನ್ನು ಹೇಳುವ ಪದಗಳಿಗೆ, ಮುಕ್ತಾಮುಕ್ತಚಿತೋಃ—ಮುಕ್ತಾಮುಕ್ತ ಚೇತನರಿಗೆ, ಈಶಃ – ಸ್ವಾಮಿಯು (ನಿಯಾಮಕನು), ಉತ್ತರಾರ್ಧೇ – 'ಉತಾಮೃತತ್ವಸ್ಯ' ಎಂಬ ಉತ್ತರವಾಕ್ಯದಲ್ಲಿ, ಸಃ – ಆ ಪುರುಷನು, ಕಥ್ಯತೇ—(ಎಂದು) ಹೇಳಲ್ಪಡುತ್ತಾನೆ; ಅತಃ—ಅದೇ ಕಾರಣದಿಂದ (ಚೇತನಾಚೇತನ ವಸ್ತುಗಳ ಮಧ್ಯದಲ್ಲಿ ಚೇತನರಿಗೆ ಈಶನೆಂದು ಹೇಳಿದ್ದರಿಂದ), ಪೂರ್ವವಾಕ್—'ಪುರುಷ ಏವೇದಂ ಸರ್ವಂ' ಎಂಬ ಹಿಂದಿನ ವಾಕ್ಯವು, ಜಡಪದಾರ್ಥಸ್ಯ—ಜಡವಸ್ತುವಿನ (ಜಡಜಗತ್ತಿನ), ಈಶತ್ವಂ—ನಿಯಾಮಕತನವನ್ನು, ವಕ್ತಿ—ಹೇಳುತ್ತದೆ (ಜಡೇಶತ್ವವನ್ನು ಮೊದಲು ಹೇಳಿ ನಂತರ ಚೇತನೇಶತ್ವವನ್ನು ಹೇಳುವುದು ಯುಕ್ತವೇ ಆಗುತ್ತದೆ).

---

ಭಾಗವತ ವಚನಾನುಸಾರವಾಗಿ, ಮುಕ್ತಾಮುಕ್ತ ಸರ್ವಜೀವರಿಂದ ಶ್ರೇಷ್ಠನೆಂದು ತಿಳಿಯುಬರುವುದರಿಂದ, 'ಅಮೃತಸ್ಯೇಶಾನಃ', 'ಮರ್ತ್ಯಮನ್ನಂ ಯುದತ್ಯಗಾತ್', ಎಂಬಲ್ಲಿ ಮುಕ್ತಾಮುಕ್ತ ಸಕಲಚೇತನರಿಗೆ ಈಶನು (ನಿಯಾಮಕನು – ಪ್ರಭು) ಎಂಬುದು ಸಮರ್ಥಿತವಾಗುತ್ತದೆ; 'ಪುರುಷ ಏವೇದಂ ಸರ್ವಂ', ಎಂಬಲ್ಲಿ 'ಇದಂ ಸರ್ವಂ' ಎಂಬುದರಿಂದ ಪುರುಷನು, ಜಡಜಗತ್ತಿನ ನಿಯಾಮಕನೆಂದೂ ಹೇಳಲಾಗುತ್ತದೆ (೪೭೨—೪೭೩).

**ದೃಶ್ಯಮಾನಮಿದಂ ಸರ್ವಂ ಪ್ರಾಯಶೋ ಜಡಮೇವ ಹಿ ।**
**ನ ಚೇದತಿವಿರುದ್ಧೋಕ್ತಿರಿಯಂ ಸ್ಯಾತ್ ಸರ್ವವಾದಿನಾಂ ।**
**ಮುಕ್ತಾಮುಕ್ತಚಿತೋರೀಶಃ ಕಥಂ ಸರ್ವಜಡಾತ್ಮಕಃ ॥ ೪೭೪ ॥**

ಸೂಕ್ತದಲ್ಲಿ ಜಡತ್ವಜ್ಞಾಪಕವಾದುದು ಯಾವುದೆಂದರೆ ಹೇಳುತ್ತಾರೆ :–

ದೃಶ್ಯಮಾನಂ–(ಸರ್ವರಿಗೆ) ಪರಿದೃಶ್ಯಮಾನವಾದ, ಇದಂ–ಈ ಜಗತ್ತು, ಸರ್ವಂ–ಎಲ್ಲವೂ, ಪ್ರಾಯಶಃ–ಬಹುವಾಗಿ, ಜಡಂ ಏವ ಹಿ–ಜಡವೇ (ಆಗಿರುತ್ತದೆ) ಅಷ್ಟೆ (ಅದರ ನಿಯಾಮಕನೂ ಆ ಪುರುಷನೇ ಎಂದು ಸೂಕ್ತವು ಹೇಳುತ್ತದೆ); ನ ಚೇತ್–ಹೀಗೆಂದು ಅಂಗೀಕರಿಸದಿದ್ದರೆ, ಇಯಂ ಉಕ್ತಿಯು (ಇದಂ ಸರ್ವವೆಂಬುದು), ಅತಿವಿರುದ್ಧಾ–ಅತ್ಯಂತ ವಿರುದ್ಧವಾದುದು, ಸರ್ವವಾದಿನಾಂ–ಎಲ್ಲ ವಾದಿಗಳಿಗೂ, ಸ್ಯಾತ್–ಆಗುತ್ತದೆ (ಐಕ್ಯಾರ್ಥದಂತೆ, ಈ ಎಲ್ಲವೂ ಪುರುಷನಿಂದ ಅಭೇದವೆಂದು ತಿಳಿದರೆ, ಪುರುಷನು ಜಡಾತ್ಮಕನೂ (ಜಡಸ್ವರೂಪನೂ) ಆಗುತ್ತಾನೆ); ಮುಕ್ತಾಮುಕ್ತಯೋಃ–ಮುಕ್ತ ಮತ್ತು ಅಮುಕ್ತ ಸರ್ವಜೀವರ, ಈಶಃ–ನಿಯಾಮಕನು, ಕಥಂ–ಹೇಗೆ, ಸರ್ವಜಡಾತ್ಮಕಃ–ಸಕಲ ಜಡವಸ್ತುಸ್ವರೂಪನಾಗುತ್ತಾನೆ? (ಶಕ್ಯವಿಲ್ಲ).

**ದೇಹೋಽಪ್ಯಾತ್ಮಾ ನ ಚೇತ್ಸರ್ವಂ ದೃಶ್ಯಮಾನಮಿದಂ ಜಡಂ ।**
**ಕಥಂ ಪುರುಷ ಏವ ಸ್ಯಾದೇವೇತ್ಯತ್ಯಂತದುರ್ಘಟಂ ॥ ೪೭೫ ॥**

ಆ ಪ್ರಮೇಯವನ್ನೇ ಉಪಪಾದಿಸುತ್ತಾರೆ :—

ದೇಹಃ ಅಪಿ–(ದೃಶ್ಯಮಾನ) ದೇಹವೂ (ದೇಹವು ಅತಿಸಮೀಪದಲ್ಲಿರುತ್ತ, ಅದನ್ನು 'ಅಹಂ' ಎಂದು ವ್ಯವಹರಿಸುವುದರಿಂದ ಐಕ್ಯವು ಸಂಭಾವಿತವಾದರೂ),

---

ಪ್ರತ್ಯಕ್ಷಗೋಚರವಾದ ಈ ಜಗತ್ತೆಲ್ಲವೂ ಜಡರೂಪವಾದುದೇ ಆಗಿರುತ್ತದೆ (ಚೇತನನು ಪ್ರತ್ಯಕ್ಷಸಿದ್ಧನಲ್ಲವಷ್ಟೆ); ಆ ಪುರುಷನೇ ಜಡಪ್ರಪಂಚದ ನಿಯಾಮಕನೆಂದು ಅಂಗೀಕರಿಸದಿದ್ದರೆ, ಪುರುಷನೇ ಎಲ್ಲವೂ, ಎಂಬ ಅಭೇದವನ್ನು ತಿಳಿದರೆ, ಚಾರ್ವಾಕನ ವಿನಹ ಇತರ, ದೇಹಭಿನ್ನ ಚೇತನನನ್ನು ಒಪ್ಪುವ ವಾದಿಗಳ ವಿರೋಧವುಂಟಾಗುತ್ತದೆ; ಅಲ್ಲದೇ ಮುಕ್ತಾಮುಕ್ತ ನಿಯಾಮಕನು, ಜಡಸ್ವರೂಪನೆಂಬ ಅಸಂಭಾವನೆಯ ದೋಷವೂ ಉಂಟಾಗುತ್ತದೆ (೪೭೪). ದೇಹವನ್ನೇ 'ಅಹಂ' ಎಂದೂ ವ್ಯವಹರಿಸುವುದು ಲೋಕದಲ್ಲಿ

ಆತ್ಮಾ ನ ಚೇತ್–ಚೇತನನು ಅಲ್ಲದಿದ್ದರೆ, ದೃಶ್ಯಮಾನಂ–ಸರ್ವರ ಪ್ರತ್ಯಕ್ಷ ವಿಷಯನಾದ, ಇದಂ ಸರ್ವಂ ಜಡಂ – ಸಕಲ ಘಟಪಟಾದಿ ವಸ್ತುಗಳೆಲ್ಲವೂ, ಕಥಂ–ಹೇಗೆ, ಪುರುಷ ಏವ ಸ್ಯಾತ್–ಪುರುಷನೇ ಆಗುತ್ತಾನೆ? (ಏವ ಇತಿ–ಪುರುಷನೇ ಎಂಬುದಂತೂ), ಅತ್ಯಂತ ದುರ್ಘಟಂ–ಅತಿ ದುರ್ಘಟವು (ದೇಹ, ಮತ್ತು ಆತ್ಮರ ವಿವೇಕವನ್ನು ಒಪ್ಪದ, ಒಬ್ಬ ಚಾರ್ವಾಕನ ವಿನಹ, ಎಲ್ಲ ವಾದಿಗಳಿಗೂ ಪುರುಷನೇ ಎಂದು ಹೇಳುವುದು ಸುತರಾಂ ಶಕ್ಯವಲ್ಲ) (ಮತ್ತು ಅತ್ಯಂತ ದುರ್ಘಟವೆಂಬ ಈ ಪದವು, ಅತ್ಯಂತಾಭೇದವನ್ನು ಹೇಳದೇ, ಭೇದಾಭೇದವನ್ನು ಅಂಗೀಕರಿಸಿದರೂ, ಅದರ ನಿರ್ವಾಹವು ಶಕ್ಯವಲ್ಲವೆಂಬುದನ್ನು ಸೂಚಿಸುತ್ತದೆ).

**ವಿಶಿಷ್ಟೈಕ್ಯಂ ಹಿ ತಸ್ಯಾರ್ಥೋ ಯಜ್ಜೀವೇಪಿ ನ ಯುಜ್ಯತೇ ॥೪೭೬॥**

ಯತ್–ಯಾವುದು (ಯಾವ ಐಕ್ಯವು), ಜೀವೇ ಅಪಿ–ಜೀವನಲ್ಲಿ ಸಹ (ಚೇತನನಲ್ಲಿ ಸಹ), ನ ಯುಜ್ಯತೇ–ಯುಕ್ತವಾಗುವುದಿಲ್ಲವೋ (ಅಲ್ಪಜ್ಞತ್ವ, ಸರ್ವಜ್ಞತ್ವಾದಿ ವಿರುದ್ಧಧರ್ಮಗಳಿದ್ದ ಪ್ರಯುಕ್ತ (ಐಕ್ಯವು ಹೊಂದಿಕೆಯಾಗುವುದಿಲ್ಲವೋ), ತಸ್ಯ – ಆ ಏವಕಾರದ, ಅರ್ಥಃ – ಅರ್ಥವು, ವಿಶಿಷ್ಟೈಕ್ಯಂ–(ನಾನಾ ಶಿರಪಾದಾದಿಗಳುಳ್ಳವನೆಂಬ ಮುಂತಾದ ವಿಶೇಷಣಗಳಿಂದ ಕೂಡಿದ

---

ಕಂಡಿರುವುದರಿಂದ, ಪುರುಷನಿಗೂ ಜಗತ್ತಿಗೂ ಐಕ್ಯವು ಸಂಭಾವ್ಯವೆಂದು (ಮಿಥ್ಯಾದೃಷ್ಟಿಯಿಂದ) ಏರ್ಪಡಬಹುದಾದರೂ, ದೇಹವೇ ಆತ್ಮನಲ್ಲವಿದ್ದರೂ, ಸರ್ವರ ಪ್ರತ್ಯಕ್ಷವಿಷಯವಾದ, ಘಟಪಟಾದಿ ಸಕಲ ಜಡಜಗತ್ತು ಹೇಗೆ ಪುರುಷನೇ ಆಗುತ್ತಾನೆ? (ಚಾರ್ವಾಕಭಿನ್ನರಾದ), ದೇಹಾತ್ಮರ ವಿವೇಕವನ್ನು (ಭೇದವನ್ನು) ಒಪ್ಪುವ ವಾದಿಗಳಿಗೆ, 'ಏವ' ಶಬ್ದದಿಂದ ತಿಳಿಯಬೇಕಾದ ಅಭೇದವು, ಸುತರಾಂ ಅಸಂಭಾವಿತವೇ ಆಗುತ್ತದೆ (೪೭೫). 'ಪುರುಷ ಏವೇದಂ' ಎಂಬಲ್ಲಿ ಹೇಳಲಾಗುತ್ತದೆಂಬ ಐಕ್ಯವು, ಜೀವನಲ್ಲಿ ಸಹ (ಚೇತನನಲ್ಲಿ ಸಹ) ಅಲ್ಪಜ್ಞತ್ವ – ಸರ್ವಜ್ಞತ್ವ ಮೊದಲಾದ ವಿರುದ್ಧ ಧರ್ಮವುಳ್ಳವರಾದ್ದರಿಂದ, ಕೂಡದಿರುವಾಗ, ಆ ಐಕ್ಯದ ಅರ್ಥವು, ಸಹಸ್ರಶೀರ್ಷಾದಿ ವಿಲಕ್ಷಣ ವಿಶೇಷಣಗಳುಳ್ಳ ಪುರುಷನಿಂದ, ಜಡಜಗತ್ತು ಅಭಿನ್ನವೆಂಬುದು ಹೇಗೆ ಕೂಡುತ್ತದೆ? ಸುತರಾಂ ಅಸಂಭಾವಿತವೇ ಸರಿ; ಪುರುಷನು ಜಡಸ್ವರೂಪನೆಂಬುದು

ವಿಶಿಷ್ಟನಾದ ಪುರುಷನಿಂದ) ಐಕ್ಯವು, ಕಥಂ–ಹೇಗೆ? (ಕಥಂ ಜಡೇ ಸ್ಯಾತ್–ಹೇಗೆ ಜಡದಲ್ಲಿ ಕೂಡುತ್ತದೆ? ಸರ್ವಥಾ ಹೊಂದುವುದಿಲ್ಲ).[1]

**ನಷ್ಟಾನುತ್ಪನ್ನಜಡತೋ ಭೂತಭವ್ಯಪದೋದಿತಾತ್ ।**
**ಐಕ್ಯಂ ತ್ವನಾದಿನಿತ್ಯಸ್ಯ ಪುರುಷಸ್ಯೇತಿ ಕೋ ವದೇತ್ ॥ ೪೭೭ ॥**

ಐಕ್ಯಾರ್ಥವನ್ನು ತಿಳಿದರೆ ಉಂಟಾಗುವ ಬಾಧಕಾಂತರವನ್ನು ಹೇಳುತ್ತಾರೆ :—

ಭೂತಭವ್ಯಪದೋದಿತಾತ್–'ಭೂತ' (ಕಳೆದುಹೋದ), 'ಭವ್ಯ' (ಮುಂದಿನ), ಎಂಬ ಪದಗಳಿಂದ ಹೇಳಲ್ಪಡುವ, ನಷ್ಟಾನುತ್ಪನ್ನಜಡತಃ–ನಾಶ ಹೊಂದಿದ ಮತ್ತು ಇನ್ನು ಹುಟ್ಟದಿರುವ ಜಡಜಗತ್ತಿನಿಂದ, ಐಕ್ಯಂ–ಐಕ್ಯವನ್ನು, ಅನಾದಿನಿತ್ಯಸ್ಯ – ಪ್ರಾಗಭಾವ, ಪ್ರಧ್ವಂಸಾಭಾವಗಳಿಲ್ಲದ (ಸರ್ವದಾ ವಿದ್ಯಮಾನನಾದ), ಪುರುಷಸ್ಯ–(ಪುರುಷಸೂಕ್ತ ಪ್ರತಿಪಾದ್ಯನಾದ) ಪುರುಷನಿಗೆ, ಇತಿ–ಇರುವುದೆಂದು, ಕಃ–ಯಾರು, ವದೇತ್–ಹೇಳುವನು? (ಹೇಳುವವನು ಕುತ್ಸಿತನು—ವಿವೇಕಿಯಲ್ಲ).

**ಭಾವಾಭಾವವಿರೋಧಶ್ಚ ನಾಸ್ತಿ ಕಿಂ ಸರ್ವಸಂಮತಃ ।**
**ಘಟೋಽಪಿ ವಿದ್ಯಮಾನೋಽಯಂ ನ ಹಿ ನಷ್ಟಘಟಾತ್ಮಕಃ ॥ ೪೭೮ ॥**

ಸರ್ವಸಂಮತಃ–ಎಲ್ಲರೂ ಒಪ್ಪುವ, ಭಾವಾಭಾವವಿರೋಧಃ–ಭಾವ ಮತ್ತು ಅಭಾವಗಳ ವಿರೋಧವು, ನಾಸ್ತಿ ಕಿಂ–ಇರುವುದಿಲ್ಲವೇ? ವಿದ್ಯಮಾನಃ

---

ಆ ವಾಕ್ಯದ ಅರ್ಥವಲ್ಲ (೪೭೬). ಪರಮಾತ್ಮನು ಅನಾದಿ ನಿತ್ಯನು–ಉತ್ಪತ್ತಿ ನಾಶರಹಿತನು; ಆತನಿಗೆ ಪ್ರಾಗಭಾವ, ಪ್ರಧ್ವಂಸಾಭಾವಗಳಿಲ್ಲ; ಹಿಂದಿದ್ದ ಮತ್ತು ಮುಂದೆ ಸೃಷ್ಟವಾಗುವ ಜಡಜಗತ್ತಿನಿಂದ ಐಕ್ಯವನ್ನು ಯಾವ ವಿವೇಕಿಯು ಹೇಳುವನು? (೪೭೭). ಭಾವ ಮತ್ತು ಅಭಾವಗಳು ಪರಸ್ಪರ ವಿರುದ್ಧಗಳೆಂದು ಸರ್ವಸಂಮತವಲ್ಲವೇ? ಮಾಯಾವಾದಿಯು, ಈ ಐಕ್ಯಾರ್ಥ

---

[1] ಚಿನ್ಮಾತ್ರನಲ್ಲದ, ದೇಹವಿಶಿಷ್ಟನಾದ ಜೀವನಲ್ಲಿಯೇ, ಪುರುಷನಿಂದ ಐಕ್ಯವು ಕೂಡದಿದ್ದರೆ, ಕೇವಲ ಜಡಜಗತ್ತಿನೊಂದಿಗೆ ಐಕ್ಯವು ಹೇಗೆ ಯೋಗ್ಯವಾಗುತ್ತದೆ; ಆದ್ದರಿಂದ 'ಪುರುಷ ಏವೇದಂ ಸರ್ವಂ' ಎಂಬುದು ಪುರುಷನಿಗೂ ಜಗತ್ತಿಗೂ ಐಕ್ಯವನ್ನು ಹೇಳುವುದಿಲ್ಲವೆಂದೇ ಸಿದ್ಧವಾಗುತ್ತದೆ.

ಅಯಂ ಘಟಃ ಅಪಿ–ಈಗಿರುವ ಘಟವೂ, ನಷ್ಟಘಟಾತ್ಮಕಃ–ನಾಶಹೊಂದಿದ ಘಟಸ್ವರೂಪವೇ (ಘಟವೇ), ನ ಹಿ–ಅಲ್ಲವಷ್ಟೆ; (ಭಾವಪ್ರತಿಯೋಗಿಯಾದ ಅಭಾವವು ಜಡಾತ್ಮಕವೇ ಆದುದು; ಅದಕ್ಕೂ ವಿದ್ಯಮಾನ ಘಟಕ್ಕೂ ಐಕ್ಯವು ಕೂಡುವುದಿಲ್ಲ; ಹೀಗಿರುವಾಗ, ಭಾವರೂಪನಾದ ಪುರುಷನಿಗೂ ಜಡಕ್ಕೂ ಐಕ್ಯವಿರುವುದಾದರೆ, ಭಾವ ಮತ್ತು ಅಭಾವಗಳಲ್ಲಿರುವ ಸರ್ವಸಂಮತವಾದ ಭೇದಕ್ಕೆ ಜಲತರ್ಪಣವನ್ನು ಕೊಟ್ಟಂತೆಯೇ ಸರಿ).

**ಪೂರ್ವೋಕ್ತಮರ್ಥಂ ಸರ್ವಂ ಚ ತಚ್ಛಬ್ದೋಽಯಂ ಪರಾಮೃಶೇತ್ ।**
**ಕಥಂ ವಿರುದ್ಧಯೋರೇಕಫಲಸಾಧನತಾ ವದ ॥ ೪೭೯ ॥**

ಐಕ್ಯಾರ್ಥವಿರುವುದಾದರೆ ಬೇರೆ ಬಾಧವೂ ಇರುವುದೆನ್ನುತ್ತಾರೆ:—

ಅಯಂ–ಈ, ತಚ್ಛಬ್ದಃ–'ತಮೇವಂ ವಿದ್ವಾನ್' ಎಂಬಲ್ಲಿರುವ ತತ್ ಶಬ್ದವು, ಪೂರ್ವೋಕ್ತಂ–'ಸಹಸ್ರಶೀರ್ಷಾದಿ' ಹಿಂದಿನ ವಾಕ್ಯಗಳಲ್ಲಿ ಉಕ್ತವಾದ, ಸರ್ವಂ–ಎಲ್ಲ, ಅರ್ಥಂ–ಅರ್ಥವನ್ನು ('ಪುರುಷ ಏವೇದಂ' ಎಂಬುದನ್ನು), ಪರಾಮೃಶೇತ್–ಪರಾಮರ್ಶಿಸುತ್ತದೆ (ಗಣನೆಗೆ ತಂದು, ಅಮೃತ ಇಹ ಭವತಿ' ಎಂಬುದಾಗಿ ಹೇಳುತ್ತದೆ); ವಿರುದ್ಧಯೋಃ–(ಮಹಿಮಾ ಪ್ರತಿಪಾದಕ ವಾಕ್ಯಗಳಿಗೂ ಮತ್ತು ಐಕ್ಯಪ್ರತಿಪಾದಕ ವಾಕ್ಯಕ್ಕೂ) ವಿರೋಧವಿರುವವುಗಳಿಗೆ, ಏಕಫಲಸಾಧನತಾ – (ಅಮೃತತ್ವ–ಮೋಕ್ಷವೆಂಬ) ಒಂದೇ

---

ವನ್ನು ಅಂಗೀಕರಿಸಿ, ಈ ವಿರೋಧವನ್ನು ಗಮನಿಸದಿರಬಹುದೇ? ಈಗಿರುವ ಘಟವು, ನಾಶಹೊಂದಿರುವ ಘಟವೇ ಅಲ್ಲವಷ್ಟೆ (೪೭೮). 'ತಮೇವಂ ವಿದ್ವಾನ್', ಎಂಬಲ್ಲಿರುವ ತತ್ (ತಂ) ಶಬ್ದವು, ಹಿಂದಿನ ವಾಕ್ಯೋಕ್ತವಾದ 'ಪುರುಷ ಏವೇದಂ', ಎಂಬಲ್ಲಿರುವ ಪುರುಷ ಶಬ್ದಾರ್ಥವನ್ನು ಪರಾಮರ್ಶಿಸಿ, 'ಅಮೃತ ಇಹ ಭವತಿ', (ಮುಕ್ತನಾಗುತ್ತಾನೆ), ಎಂದು ಹೇಳುತ್ತದೆ; ಹಿಂದಿನ ವಾಕ್ಯಗಳಲ್ಲಿ ಪುರುಷನ ಮಹಿಮೆಗಳು ಪ್ರತಿಪಾದಿತವಾಗಿವೆ; 'ಪುರುಷ ಏವೇದಂ', ಎಂಬುದು ಐಕ್ಯಾರ್ಥ ಪ್ರತಿಪಾದಕವೆಂದರೆ, ಮಹಿಮಾಪ್ರತಿಪಾದಕ ವಾಕ್ಯ ಜ್ಞಾನಕ್ಕೂ, ಐಕ್ಯಪ್ರತಿಪಾದಕ ವಾಕ್ಯಜ್ಞಾನಕ್ಕೂ, ಮೋಕ್ಷರೂಪದ, ಒಂದೇ ಫಲಸಾಧನತ್ವವು ಕೂಡುವುದಿಲ್ಲ; ಭೇದಜ್ಞಾನಕ್ಕೂ, ಐಕ್ಯಜ್ಞಾನಕ್ಕೂ ಒಂದೇ ಫಲಸಾಧನತ್ವವು ಯುಕ್ತವೇ? ನೀನೇ ಹೇಳು (೪೭೯).

ಫಲಕ್ಕೆ ಸಾಧನವೆಂಬುದು, ಕಥಂ – ಹೇಗೆ? (ಕೂಡುತ್ತದೆ), ವದ – ಹೇಳು (ಭೇದಜ್ಞಾನಕ್ಕೂ, ಐಕ್ಯಜ್ಞಾನಕ್ಕೂ ಪರಸ್ಪರ ವಿರುದ್ಧವಿರುವಾಗ, ಒಂದೇ ಫಲಸಾಧನತ್ವವು ಅವುಗಳಿಗೆ ಕೂಡುವುದಿಲ್ಲವಷ್ಟೆ).[1]

**ಅನಪೇಕ್ಷಿತಸಂತ್ಯಾಗಃ ಸ್ವಾಪೇಕ್ಷಿತಪರಿಗ್ರಹಃ ।**
**ಕಥಂ ಸ್ಯಾತ್ಸೂಕ್ತಸೂತ್ರೇಽಸ್ಮಿನ್ ದೃಢಬದ್ಧಾರ್ಥಸನ್ಮಣೌ ॥ ೪೮೦ ॥**

'ತಮೇವಂ ವಿದ್ವಾನ್' ಎಂಬಲ್ಲಿರುವ ತಚ್ಛಬ್ದವು ಪೂರ್ವೋಕ್ತ ಅರ್ಥಗಳನ್ನು ಪರಾಮರ್ಶಿಸಿಯೇ, 'ಅಮೃತ ಇಹ ಭವತಿ' ಎಂಬ ಫಲವನ್ನು ಹೇಳುತ್ತದೆಂದು ಏಕೆ ತಿಳಿಯಬೇಕೆಂಬುವ ಸಂಶಯವನ್ನು ಪರಿಹರಿಸುತ್ತಾರೆ :—

ಅಸ್ಮಿನ್ ಸೂಕ್ತಸೂತ್ರೇ—ಈ (ಪುರುಷಸೂಕ್ತ) ಎಂಬ ಸೂತ್ರದಲ್ಲಿ (ತಂತುವಿನಲ್ಲಿ), ದೃಢಬದ್ಧಾರ್ಥಸನ್ಮಣೌ – (ಅಪೌರುಷೇಯವಾದ್ದರಿಂದ ಅರ್ಥವನ್ನು ತ್ಯಜಿಸಲು ಅಸಾಧ್ಯವಾದ್ದರಿಂದ ದೃಢಬದ್ಧವಾದ ಅರ್ಥವೆಂಬ ಶ್ರೇಷ್ಠಮಣಿಯಂತಿರುವ ಪುರುಷಸೂಕ್ತದಲ್ಲಿ, ಅನಪೇಕ್ಷಿತ ಸಂತ್ಯಾಗಃ–(ತನಗೆ) ಅಪೇಕ್ಷಿತವಲ್ಲದ್ದನ್ನು, (ವಾಕ್ಯಾರ್ಥಗಳನ್ನು) ತ್ಯಜಿಸುವುದು, ಸ್ವಾಪೇಕ್ಷಿತ ಪರಿಗ್ರಹಃ–ಅಪೇಕ್ಷಿತ ವಾಕ್ಯಾರ್ಥಗಳನ್ನು ಮಾತ್ರ ಸ್ವೀಕರಿಸುವುದು, ಕಥಂ—ಹೇಗೆ, ಸ್ಯಾತ್—ಕೂಡುತ್ತದೆ (ಯುಕ್ತವಾಗುತ್ತದೆ?) (ಅಪೌರುಷೇಯವಾದ ವೇದದಲ್ಲಿ ಒಂದು ಭಾಗಕ್ಕೆ ವ್ಯಾವಹಾರಿಕವೆಂಬ ಅರ್ಥವನ್ನು ಕಲ್ಪಿಸಿ, ಅದನ್ನು ತ್ಯಜಿಸುವುದು, ಬೇರೊಂದು, ಐಕ್ಯಬೋಧಕವೆಂಬರ್ಥಕ್ಕೆ ಎಡೆಗೊಡುವ ಭಾಗವನ್ನು ಅಂಗೀಕರಿಸುವುದು ಉಚಿತವಲ್ಲವೆಂದು ಭಾವ; ಪರಾಮರ್ಶ ಪಕ್ಷ ಪಕ್ಷಪಾತವಿಲ್ಲ).

---

ಅಪೌರುಷೇಯವಾದ್ದರಿಂದ, ಪ್ರತಿಪಾದ್ಯವಾದ ಅರ್ಥವನ್ನು ತ್ಯಜಿಸಲು ಬಾರದ್ದೆಂಬ ಮಹಿಮೆಯುಳ್ಳ ಈ ಪುರುಷಸೂಕ್ತದಲ್ಲಿ, ತನಗೆ ಇಷ್ಟವಲ್ಲದ ಭಾಗಕ್ಕೆ ವ್ಯಾವಹಾರಿಕವೆಂಬ ಅರ್ಥವನ್ನು ಕಲ್ಪಿಸಿ, ಸ್ವಾಪೇಕ್ಷಿತವಾದ ಐಕ್ಯವನ್ನು

---

[1] ಗ್ರಾಮವನ್ನು ಬಿಟ್ಟು ಅನ್ಯಮಾರ್ಗದಲ್ಲಿ ಹೋಗುವವನಿಗೂ, ಗ್ರಾಮಾಭಿಮುಖನಾಗಿ ಹೋಗುವವನಿಗೂ, ಗ್ರಾಮಪ್ರಾಪ್ತಿರೂಪವಾದ ಒಂದೇ ಫಲವು ದೊರೆಯುವುದಿಲ್ಲ ಮತ್ತು ಜಲಪಾನದಿಂದಲೂ, ಅಗ್ನಿಜ್ವಾಲೆಯ ಪಾನದಿಂದಲೂ ತೃಷಾಪರಿಹಾರರೂಪದ ಫಲವು ದೊರೆಯುವುದಿಲ್ಲ; ಪುರುಷನ ಸರ್ವೋತ್ತಮತ್ವಸಾಧಕವಾಗುವಂತೆ ಭೇದಪರವಾಗಿ ಎಲ್ಲ ವಾಕ್ಯಗಳೂ ಇರುವಾಗ, ಮಧ್ಯೆ ಇರುವ ಒಂದು ವಾಕ್ಯಕ್ಕೆ ಐಕ್ಯಪರತ್ವವನ್ನು ತಿಳಿಯುವುದು, ಸಮಾನಫಲಹೇತುವಾಗುವುದಿಲ್ಲ.

**ಸ್ವೇಚ್ಛಾನುಸಾರಿವ್ಯಾಖ್ಯಾಚೇನ್ಮೀಮಾಂಸಾ ಕಿಂ ನಿಬಂಧನಾ ।**
**ಸೂತ್ರಚ್ಛೇದಂ ವಿನಾ ಮಧ್ಯಮಣೇರ್ನೈವ ಹಿ ಸಂಗ್ರಹಃ ॥ ೪೮೦ ॥**

ಬೇರೆ ಯುಕ್ತಿಯನ್ನು ಹೇಳುತ್ತಾರೆ :—

ಸ್ವೇಚ್ಛಾನುಸಾರಿವ್ಯಾಖ್ಯಾ – ಇಚ್ಛಾನುಸಾರವಾದ ವ್ಯಾಖ್ಯಾನವು (ವೇದೋಕ್ತವಾದರೂ ಕೆಲವು ಅರ್ಥಗಳು ಮಿಥ್ಯಾ ಮತ್ತು ಕೆಲವು ಸತ್ಯವೆಂಬ ತನ್ನ ಇಚ್ಛೆಯಂತೆ ಅರ್ಥವನ್ನು ಹೇಳುವುದು), ಚೇತ್—ಎಂಬುದೇ ಸರಿಯಾದರೆ, ಮೀಮಾಂಸಾ – (ವಾಕ್ಯಗಳ ಪರಸ್ಪರ ವಿರೋಧವನ್ನು ಪರಿಹರಿಸಿ, ಅವಿರೋಧವಾದ ಅರ್ಥವನ್ನು ಹೇಳಿ ಪ್ರಾಮಾಣ್ಯವನ್ನು ರಕ್ಷಿಸುವುದೆಂಬ) ಮೀಮಾಂಸೆಯು, ಕಿಂ ನಿಬಂಧನಾ – ಏಕೆ ಅವಶ್ಯಕವು ? (ವ್ಯರ್ಥವೆಂದರ್ಥ) ( ನಮಗೆ ಅಪೇಕ್ಷಿತವಲ್ಲದ ವಾಕ್ಯಕ್ಕೆ ಮಿಥ್ಯಾಭೂತವಾದ ಅರ್ಥವೆಂದು ಅಪ್ರಾಮಾಣ್ಯವನ್ನು ಸಾಧಿಸಬಹುದಾದರೆ, ಮೀಮಾಂಸೆಯೇಕೆ ಬೇಕು ?); ಸೂತ್ರಚ್ಛೇದಂ ವಿನಾ – ತಂತುವನ್ನು (ಸೂತ್ರವನ್ನು) ಕತ್ತರಿಸದೇ, ಮಧ್ಯ-ಮಣೇಃ – ಮಾಲೆಯ ಮಧ್ಯದಲ್ಲಿರುವ ರತ್ನದ, ಸಂಗ್ರಹಃ – ಸ್ವೀಕಾರವು (ಬೇರ್ಪಡಿಸಿ ತೆಗೆದುಕೊಳ್ಳುವುದು), ನ ಏವ ಹಿ–ಇಲ್ಲವಷ್ಟೆ (ಹೀಗೆ ಸೂಕ್ತಕ್ಕೆ ಅಪ್ರಾಮಾಣ್ಯವನ್ನು ಹೇಳುವುದೆಂಬ ಸೂತ್ರಚ್ಛೇದವಿಲ್ಲದೇ, ಪೂರ್ವೋತ್ತರಗಳಲ್ಲಿ ಹೇಳಿದ ಮಹಿಮೆಗಳನ್ನು ಕೈಬಿಡದೇ, ಮಧ್ಯವಾಕ್ಯದ ಐಕ್ಯಪರಾಮರ್ಶವನ್ನು ಮಾಡುವುದು ಅವಶ್ಯಕವೇ ಸರಿ).

---

ಹೇಳದೇ ಭೇದವನ್ನು ಹೇಳುತ್ತದೆಂಬ ಕಾರಣದಿಂದ, ತ್ಯಜಿಸಿ, ತನಗೆ ಇಚ್ಛಿತವಾದ ಭಾಗವನ್ನು ಮಾತ್ರ ಅಂಗೀಕರಿಸುವುದು, ಯೋಗ್ಯವಲ್ಲ (೪೮೦). ಶಾಸ್ತ್ರಪ್ರಮಾಣವಾಕ್ಯಗಳ ಅನ್ಯೋನ್ಯ ವಿರೋಧಗಳನ್ನು ಪರಿಹರಿಸಿ ಅರ್ಥವನ್ನು ತಿಳಿಯುವ ನಿಬಂಧನೆಗಳನ್ನು ವಿಧಿಸುವುದೆಂಬ ವ್ಯಾಖ್ಯಾನಮೀಮಾಂಸೆಯು ವ್ಯರ್ಥವೆಂದೇ ಪ್ರಾಪ್ತವಾಗುತ್ತದೆ; ಪುರುಷಸೂಕ್ತದ ಪೂರ್ವೋತ್ತರ ವಾಕ್ಯಗಳಿಂದ ಪ್ರತಿಪಾದಿಸಲ್ಪಡುವ ಮಹಿಮೆಗಳನ್ನು ತ್ಯಜಿಸದೇ, ಅರ್ಥಾತ್, ಶ್ರೇಷ್ಠ ರತ್ನಮಾಲಿಕೆಯ ಸೂತ್ರವನ್ನು ಕತ್ತರಿಸದೇ, ವಿರೋಧಪರಿಹಾರದಿಂದ ಏಕವಾಕ್ಯತೆಯನ್ನು ಸಂಪಾದಿಸುವ ಯತ್ನವನ್ನು ತ್ಯಜಿಸದೇ, ಮಾಲಾಮಧ್ಯದಲ್ಲಿಸುವ ಪದಕರತ್ನವನ್ನು 'ಪುರುಷ ಏವೇದಂ' ಎಂಬುದರ ಐಕ್ಯಾರ್ಥವನ್ನು ಸಂಗ್ರಹಿಸಲು ಶಕ್ಯವಲ್ಲ (೪೮೧).

**ಛಿನ್ನೇ ಸೂತ್ರೇ ತ್ವನಾಲಂಬಃ ಪರಾಮರ್ಶೋಽಪ್ಯಯಂ ಪತೇತ್ ।**
**ಅತೋ ಜ್ಞಾನೈಕಸಾಧ್ಯೋಽರ್ಥೋಽ ನ ಸ್ಯಾತ್ತೇ ಸ್ಯಾತ್ತಮೋಽಂತತಃ ॥**
**॥ ೪೮೨ ॥**

ಸೂತ್ರಚ್ಛೇದವೇ ಆಗಲಿ, (ಅದಕ್ಕೆ ಅಪ್ರಾಮಾಣ್ಯವೇ ಆಗಲಿ) ಎಂದರೆ ಹೇಳುತ್ತಾರೆ :—

ಸೂತ್ರೇ – ಸೂಕ್ತವೆಂಬ ಸೂತ್ರವು (ಪೋಣಿಸಿದ ದಾರವು), ಛಿನ್ನೇ– ಕತ್ತರಿಸಲ್ಪಡಲು (ಅಪ್ರಮಾಣತ್ವವನ್ನು ಹೊಂದಿ ನಷ್ಟವಾಗುತ್ತಿರಲು), ಅನಾಲಂಬಃ ತು – ('ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂದು ಹೇಳುವ, ಸೂಕ್ತ ಮಧ್ಯದಲ್ಲಿರುವ ಪರಾಮರ್ಶವಾಕ್ಯಕ್ಕೂ ಅಪ್ರಾಮಾಣ್ಯವು ಪ್ರಾಪ್ತವಾಗಿ) ಆಶ್ರಯವಿಲ್ಲದೇ, ಅಯಂ ಪರಾಮರ್ಶಃ ಅಪಿ – ಈ ಐಕ್ಯ ಪರಾಮರ್ಶವೂ, ಪತೇತ್–ಬಿದ್ದುಹೋಗುತ್ತದೆ (ಅಪ್ರಮಾಣ ವಾಕ್ಯಮಧ್ಯ ದಲ್ಲಿರುವ ನಿನಗೆ ಅಭಿಮತವಾದ ಐಕ್ಯ ವಾಕ್ಯಕ್ಕೂ ('ಪುರುಷ ಏವೇದಂ ಸರ್ವಂ' ಎಂಬ ವಾಕ್ಯಕ್ಕೂ) ಅಪ್ರಾಮಾಣ್ಯವುಂಟಾಗುವುದರಿಂದ, ಐಕ್ಯವೇ ಸಿದ್ಧ ವಾಗುವುದಿಲ್ಲ); ಅತಃ–ಆದ್ದರಿಂದ (ತಮೇವಂ ವಿದ್ವಾನ್, ಎಂಬ ವಾಕ್ಯವು ಅಪ್ರಮಾಣವಾದ್ದರಿಂದ), ತೇ – ನಿನಗೆ (ಮಾಯಾವಾದಿಗೆ), ಜ್ಞಾನೈಕ ಸಾಧ್ಯೋಽರ್ಥಃ – (ಪುರುಷಸೂಕ್ತೋಕ್ತ) ಜ್ಞಾನದಿಂದಲೇ ಸಾಧ್ಯವಾದ

---

ಮಾಲೆಯ ಆಧಾರವಾದ ಸೂತ್ರವನ್ನು (ತಂತುವನ್ನು) ಕತ್ತರಿಸಿದರೆ, ಎಲ್ಲ ಮಣಿಗಳು ಬಿದ್ದುಹೋಗುತ್ತವೆ; ಆಶ್ರಯರಹಿತವಾದ 'ತಮೇವಂ ವಿದ್ವಾನ್' ಎಂಬ ಪರಾಮರ್ಶ ವಾಕ್ಯವೂ, 'ಪುರುಷ ಏವೇದಂ' ಎಂಬ ಆ ವಾಕ್ಯವೂ ಬಿದ್ದುಹೋಗುತ್ತವೆ; ಎಂದರೆ ಅಪ್ರಾಮಾಣ್ಯವು ಪ್ರಾಪ್ತವಾಗು ತ್ತದೆ; ಅದರಿಂದ ಐಕ್ಯವು ತಾನೇ ಹೇಗೆ ಸಿದ್ಧವಾಗುತ್ತದೆ? ಆಗುವುದಿಲ್ಲ; ಪುರುಷಸೂಕ್ತೋಕ್ತಜ್ಞಾನದಿಂದಲೇ ಸಾಧ್ಯವೆಂಬ ಮೋಕ್ಷರೂಪದ ಫಲವೂ ಇಲ್ಲದಂತಾಗುತ್ತದೆ; ಆಗ ಪುರುಷಸೂಕ್ತದಲ್ಲಿ ಇತರ ಎಲ್ಲ ವಾಕ್ಯಗಳಂತೆ, 'ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂಬ ವಾಕ್ಯಕ್ಕೂ ಅಪ್ರಾಮಾ ಣ್ಯವೇ ಪ್ರಾಪ್ತವಾಗಿ, ವ್ಯರ್ಥವೇ ಆಗುತ್ತದೆ; ಅಲ್ಲಿ ಉಕ್ತವಾದ ಮೋಕ್ಷ ರೂಪ ಫಲವು, ಸೂತ್ರಭೇದಕನಾದ ನಿನಗೆ (ಮಾಯಾವಾದಿಗೆ) ದೊರೆಯು ವುದಂತೂ ಸುತರಾಂ ಶಕ್ಯವಿಲ್ಲ—ಆ ಫಲದ ಆಶೆಗೂ ಅವಕಾಶವಿಲ್ಲ; ಅಂತ್ಯ

ಮೋಕ್ಷವು, ನ ಸ್ಯಾತ್–ಉಂಟಾಗುವುದಿಲ್ಲ ('ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂಬಲ್ಲಿ ಹೇಳಲಾದ ಮೋಕ್ಷವು ನಿನಗೆ ದೊರೆಯುವುದೆಂಬ ಆಶೆಯು ಇರಲವಕಾಶವಿಲ್ಲ); ತೇ–ನಿನಗೆ, ಅಂತತಃ–ಕೊನೆಗೆ (ನಿನ್ನ ಸಾಧನೆಗಳ ಪೂರ್ತಿಯ ನಂತರ), ತಮಃ–ತಮಸ್ಸೇ, ಸ್ಯಾತ್–ಉಂಟಾಗುತ್ತದೆ (ಇದೇ ವೇದಕ್ಕೆ ಅಪ್ರಮಾಣವನ್ನು ಹೇಳುವವರಿಗೆ ಲಭಿಸುವ ಫಲವು).

**ತಸ್ಮಾನ್ಮೀಮಾಂಸಕೈರಾರ್ಯೈರುಕ್ತ ಏವಾರ್ಥ ಇಷ್ಯತೇ ।**
**ಅನ್ಯೋಽಹ್ಯನರ್ಥಃ ಶ್ರೋತುರ್ವಾ ವಕ್ತುರ್ವಾ ನ ಮನೋಹರಃ ॥**

ತಸ್ಮಾತ್ – ಪರನು ಹೇಳುವ ಅರ್ಥವು ಬಹು ವಿರುದ್ಧವಾದ್ದರಿಂದ, ಮೀಮಾಂಸಕೈಃ–ಮೀಮಾಂಸಕರಾದ, ಆರ್ಯೈಃ–ಜ್ಞಾನಿಗಳಿಂದ, ಉಕ್ತಃ–ಹೇಳಲಾದ, ಅರ್ಥ ಏವ–ಅರ್ಥವೇ, ಇಷ್ಯತೇ–ಯೋಗ್ಯವೆನಿಸುತ್ತದೆ; ಅನ್ಯಃ–ಬೇರೆಯಾದ (ಎಲ್ಲವೂ ಬ್ರಹ್ಮಸ್ವರೂಪವೇ ಎಂಬ), ಅನರ್ಥಃ ಹಿ–(ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳುವುದರಿಂದ) ಅನರ್ಥಸಂಪಾದಕವು; ವಕ್ತುಃ ವಾ–ಹೇಳುವವನಿಗಾಗಲಿ, ಶ್ರೋತುಃ ವಾ–ಕೇಳುವವನಿಗಾಗಲಿ, ನ ಮನೋಹರಃ–ಹರ್ಷವನ್ನು ಉಂಟುಮಾಡತಕ್ಕದ್ದಲ್ಲ (ಮನೋಹರವಲ್ಲ—ಆಕರ್ಷಕವಲ್ಲ).

**ವ್ಯತ್ಯಾಸಶ್ಚ ವಿಭಕ್ತೀನಾಂ ವೇದವ್ಯಾಸಸ್ಯ ಸಂಮತಃ ।**
**ಅನ್ನೇನೇತಿ ತೃತೀಯಾಂ ಯೋ ದ್ವಿತೀಯಾರ್ಥೇಽನ್ವಶಿಕ್ಷತ ॥ ೪೬೪ ॥**

---

ದಲ್ಲಿ ನಿನಗೆ ತಮಸ್ಸೇ ಲಭಿಸುತ್ತದೆ—ಇದೇ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳುವವರಿಗೆ ಲಭಿಸುವ ಆತ್ಯಂತಿಕ ಫಲವು (೪೬೨). ಆದ್ದರಿಂದ (ನೀನು ಹೇಳುವ ಪುರುಷನು ಜಗತ್ತಿನಿಂದ ಅಭಿನ್ನನೆಂಬ ಅರ್ಥವು ಮೀಮಾಂಸಾ ಜ್ಞಾನಿಗಳ ಅಭಿಪ್ರಾಯಕ್ಕೆ ವಿರುದ್ಧವಾದುದರಿಂದ), ಸತ್ಯವಾದುದಲ್ಲ—ಅಷ್ಟು ಮಾತ್ರವಲ್ಲ, ಮಹಾ ಅನರ್ಥಕಾರಕವೂ ಆಗಿದೆ; ವೇದಾಪ್ರಾಮಾಣ್ಯವನ್ನು ಸಾಧಿಸುವ ನಿನ್ನ ಈ ವಾದವು, ಅರ್ಥಪ್ರತಿಪಾದನೆಯು, ಹೇಳುವವನ ಮನಸ್ಸಿಗೆ ಹರ್ಷಪ್ರದವಲ್ಲ, ಶ್ರೋತೃಗಳಿಗೂ ಆಹ್ಲಾದಕರವಲ್ಲ—ಕೇಳಬೇಕೆಂಬ ಇಚ್ಛೆಯನ್ನು ಹುಟ್ಟಿಸಿ, ಮನಸ್ಸನ್ನು ಆಕರ್ಷಿಸುವುದೂ ಇಲ್ಲ (ಮನೋಹರವೂ ಅಲ್ಲ) (೪೬೩). ನಾವು ಹೇಳುವ ಭೇದಪರವಾದ ಅರ್ಥವು ಸಪ್ರಾಮಾಣಿಕವೂ, ವೇದವ್ಯಾಸರಿಗೆ ಸಂಮತವೂ ಆಗಿದೆ; ವೇದವಾಕ್ಯಗಳಲ್ಲಿ ಪ್ರಯೋಗಿಸಲ್ಪಡುವ

'ಪುರುಷ ಏವೇದಂ ಸರ್ವಂ' ಎಂಬ ವಾಕ್ಯಕ್ಕೆ ಬೇರೆ ರೀತಿಯಿಂದ ಅರ್ಥ ವನ್ನು ಹೇಳಲಿಕ್ಕಾಗಿ ಪೀಠಿಕೆಯನ್ನು ರಚಿಸುತ್ತಾರೆ :—

ಯಃ – ವೇದವ್ಯಾಸರು, ಅನ್ನೇನ ಇತಿ – 'ಯದನ್ನೇನಾತಿರೋಹತಿ' ಎಂಬಲ್ಲಿರುವ ಅನ್ನೇನ ಎಂಬ, ತೃತೀಯಾಂ – ತೃತೀಯಾ ವಿಭಕ್ತಿಯನ್ನು, ದ್ವಿತೀಯಾರ್ಥೇ – ದ್ವಿತೀಯಾ ವಿಭಕ್ತಿಯ ಅರ್ಥಕ್ಕಾಗಿ, ಅನ್ವಶಿಕ್ಷತ – ('ಮರ್ತ್ಯಮನ್ನಂ ಯದತ್ಯಗಾತ್' ಎಂಬ ಭಾಗವತ ವಾಕ್ಯದಿಂದ ಈ ವಾಕ್ಯದ ವ್ಯಾಖ್ಯಾನರೂಪದಿಂದ) ತಿಳಿಸಿರುವನು; ವೇದವ್ಯಾಸಸ್ಯ[1]–ವೇದವ್ಯಾಸರಿಗೆ, ವಿಭಕ್ತೀನಾಂ ವ್ಯತ್ಯಾಸಃ – ಒಂದು ವಿಭಕ್ತಿಯಲ್ಲಿರುವ ಶಬ್ದಕ್ಕೆ ಮತ್ತೊಂದು ವಿಭಕ್ತಿಯ ಅರ್ಥವನ್ನು ತಿಳಿಯಬೇಕೆಂಬುದು, ಸಂಮತಃ-(ಭಾಗವತವಾಕ್ಯದಲ್ಲಿ 'ಅನ್ನಂ ಅತ್ಯಗಾತ್' ಎಂದು, ಸಂಸಾರಿಜೀವರನ್ನು ಅತಿಕ್ರಮಿಸಿರುವನೆಂಬ ದ್ವಿತೀಯಾರ್ಥವನ್ನು ತಿಳಿಸಿಕೊಟ್ಟಿರುವುದರಿಂದ) ಸಂಮತ (ಒಪ್ಪಿತ) ವೆಂದು (ತಿಳಿಯುತ್ತದೆ).

---

ಶಬ್ದಗಳ ವಿಭಕ್ತಿವ್ಯತ್ಯಾಸದಿಂದ, ಪೂರ್ವೋತ್ತರ ಅರ್ಥವಿರೋಧ ಬಾರದಂತೆ, ಯೋಜನೆಮಾಡಿಕೊಂಡು, ಅರ್ಥವನ್ನು ತಿಳಿಯಬೇಕೆಂಬುದು ವೇದಾರ್ಥಗಳ ವ್ಯಾಖ್ಯಾನದಂತಿರುವ ಭಾಗವತಾದಿ ಪುರಾಣಗಳನ್ನು ರಚಿಸಿರುವ ವೇದವ್ಯಾಸ ರಿಗೆ ಸಂಮತವೆಂಬುದು ಸ್ಪಷ್ಟವಿದೆ; 'ಯದನ್ನೇನಾತಿರೋಹತಿ' ಎಂಬ ಈ ಸೂಕ್ತಗತ ವಾಕ್ಯದ ಅರ್ಥವನ್ನೇ ಬಿಡಿಸಿ ಹೇಳುವ ಭಾಗವತ ವಾಕ್ಯವು, 'ಮರ್ತ್ಯಮನ್ನಂ ಯದತ್ಯಗಾತ್' ಎಂದರೆ, ಮರಣಶೀಲರಾದ ಸಂಸಾರಿ ಜೀವ ರನ್ನು ಅತಿಕ್ರಮಿಸಿರುವನೆಂದು ಹೇಳುತ್ತದೆ; ಇದರಿಂದ 'ಅನ್ನೇನ' ಎಂಬ ತೃತೀಯಾ ವಿಭಕ್ತಿಯಲ್ಲಿರುವ ಶಬ್ದವನ್ನು 'ಅನ್ನಂ ಅತ್ಯಗಾತ್' ಎಂಬಲ್ಲಿರುವ ದ್ವಿತೀಯಾ ವಿಭಕ್ತಿಯ ಅರ್ಥವುಳ್ಳದ್ದನ್ನಾಗಿ ಗ್ರಹಿಸಬೇಕೆಂದು ಸೂಚಿತವಾಗು ತ್ತದೆ (೪೮೪).

---

[1] 'ಸುಪಾಂಸುಲುಕ್' ಇತ್ಯಾದಿಗಳಲ್ಲಿ ಇದೇ ವಿಷಯವನ್ನು ಪ್ರಮಾಣತ್ವೇನ ಅಂಗೀಕರಿಸಿರುವ, ಪಾಣಿನಿ ಮೊದಲಾದ ವ್ಯಾಕರಣ ಪಂಡಿತರಿಗೂ ಸಂಮತವೆಂದು, ಉಪಲಕ್ಷಣದಿಂದ ತಿಳಿಯಬೇಕು–ವೇದವ್ಯಾಸರಿಗೆ ಮಾತ್ರವಲ್ಲ; ಅರ್ಥವು ಅನುಪಪನ್ನ ವಾದಲ್ಲಿ ವಿಭಕ್ತಿ ವ್ಯತ್ಯಾಸವನ್ನು ಮಾಡಿಕೊಳ್ಳುವುದು ವೇದವ್ಯಾಸರಿಗೆ ಸಂಮತವೆಂದು ತಿಳಿಯಬೇಕು.

*

**ಅತಃ ಪುರುಷ ಏವೇತಿ ಪ್ರಥಮಾ ಪಂಚಮೀ ಯದಾ ।**
**ಸದಾ ಸರ್ವನಿಮಿತ್ತತ್ವಮಹಿಮಾ ಪುಂಸಿ ವರ್ಣ್ಯತೇ ॥ ೪೮೫ ॥**

ಪೀಠಿಕಾ ರಚನೆಯಿಂದ ಲಬ್ಧವಾದ ಅರ್ಥವನ್ನು ಹೇಳುತ್ತಾರೆ :—

ಅತಃ – ಆದ್ದರಿಂದ (ವೇದದಲ್ಲಿ ವಿಭಕ್ತಿ ವ್ಯತ್ಯಾಸದಿಂದ ಅರ್ಥವನ್ನು ತಿಳಿಯುವುದು ಪ್ರಾಮಾಣಿಕವಾದ್ದರಿಂದ), ಪುರುಷ ಏವೇತಿ–ಪುರುಷನೇ ಎಂಬ, ಪ್ರಥಮಾ–ಪ್ರಥಮಾ ವಿಭಕ್ತಿಯು, ಯದಾ–ಯಾವಾಗ, ಪಂಚಮೀ–(ನಿಮಿತ್ತ ಪಂಚಮೀ) ಪಂಚಮ್ಯರ್ಥವುಳ್ಳದ್ದಾಗುವುದೋ, ಸದಾ–ಸರ್ವದಾ (ನಿತ್ಯವೂ), ನಿಮಿತ್ತತ್ವಮಹಿಮಾ–ನಿಮಿತ್ತಕಾರಣನೆಂಬ ಮಹಿಮೆಯು, ಪುಂಸಿ–(ಸೂಕ್ತ ಪ್ರತಿಪಾದ್ಯನಾದ) ಪುರುಷನಲ್ಲಿ, ವರ್ಣ್ಯತೇ – ವರ್ಣಿಸುತ್ತದೆ (ಪುರುಷನೇ ಸದಾ ಸರ್ವಕ್ರಿಯೆಗಳ ನಿಮಿತ್ತನು—ಪ್ರೇರಕನು, ಎಂಬ ಮಹಿಮೆಯನ್ನು ಹೇಳುತ್ತದೆ.

**ಯದಾ ತು ಸಪ್ತಮೀ ಸರ್ವಾಧಾರತ್ವಂ ವರ್ಣಯೇತ್ತದಾ ॥ ೪೮೬ ॥**

ಯದಾ ತು ಸಪ್ತಮೀ – (' ಪುರುಷ ಏವೇದಂ ಸರ್ವಂ ' ಎಂಬಲ್ಲಿರುವ ಪುರುಷನೆಂಬ ಪ್ರಥಮಾ ವಿಭಕ್ತಿಯಲ್ಲಿರುವುದಕ್ಕೆ) ವ್ಯತ್ಯಾಸದಿಂದ, ಸಪ್ತಮೀ ವಿಭಕ್ತಿಯ ಅರ್ಥವನ್ನು ತಿಳಿದರೆ, ತದಾ–ಆಗ, ಸರ್ವಾಧಾರತ್ವಂ–ಜಗದಾಧಾರತ್ವವನ್ನೇ (ಸರ್ವಾಶ್ರಯನೆಂಬ ಅರ್ಥವನ್ನೇ), ವರ್ಣಯೇತ್–ವರ್ಣಿಸುತ್ತದೆ.

---

ಇದರಂತೆ, ' ಪುರುಷ ಏವೇದಂ ' ಎಂಬಲ್ಲಿರುವ ಪ್ರಥಮಾ ವಿಭಕ್ತಿಯ ಪುರುಷ ಶಬ್ದಕ್ಕೆ, ಪಂಚಮ್ಯಂತದ ಅರ್ಥವನ್ನು, ಎಂದರೆ ' ಪುರುಷಾತ್ ಇದಂ ಸರ್ವಂ' ಎಂಬ ಅರ್ಥವನ್ನು ತಿಳಿದು, ಜಗತ್ತಿನಸೃಷ್ಟ್ಯಾದಿಗಳು ಆತನಿಂದಲೇ ಸಂಭವಿಸುತ್ತವೆಂದು ದೊರೆಯುತ್ತದೆ; ಆಗ ಇದೂ ಅನ್ಯವಾಕ್ಯಗಳಂತೆ, ಪುರುಷನ ಮಹಿಮಾ ಪ್ರತಿಪಾದಕವೇ ಆಗುತ್ತದೆ (೪೮೫). ಮತ್ತು ಅದೇ ಪ್ರಥಮಾ ವಿಭಕ್ತಿಯಲ್ಲಿರುವ ಪುರುಷ ಶಬ್ದಕ್ಕೆ ಸಪ್ತಮೀ ವಿಭಕ್ತಿಯ ಅರ್ಥವನ್ನು ತಿಳಿದರೆ, ಪುರುಷನಲ್ಲಿ ಈ ಜಗತ್ತೆಲ್ಲ ಸ್ಥಿತವಾಗಿದೆ, ಎಂಬ ಅರ್ಥವು ದೊರೆತು, ಪುರುಷನಿಗೆ ಜಗದಾಧಾರತ್ವ (ಸರ್ವಾಶ್ರಯನೆಂಬ) ಮಹಿಮೆಯೂ ಸಿದ್ಧವಾಗುತ್ತದೆ (೪೮೬).

**ಸೂಕ್ತಸ್ಯೈಕಾರ್ಥತಾ ಚೈವಂ ಸತ್ಯೇವ ಸ್ಯಾನ್ನಚಾನ್ಯಥಾ ।**
**ಯತಃ ಸರ್ವಜಗತ್ಕರ್ತಾ ಪುರುಷಃ ಸೋತ್ರ ಕೀರ್ತ್ಯತೇ ॥ ೪೮೭ ॥**

ಮೇಲೆ ತೋರುವ ಪರಕೀಯನ ಅರ್ಥದಲ್ಲಿ ('ಪುರುಷ ಏವೇದಂ ಸರ್ವಂ'—ಪುರುಷನಿಗೆ ಜಗದೈಕ್ಯವೆಂಬ ಅರ್ಥದಲ್ಲಿ) ಬೇರೆ ಬಾಧಕವನ್ನು ಸೂಚಿಸಿ, ವಿಭಕ್ತಿ ವ್ಯತ್ಯಾಸದಿಂದ ಹಿಂದೆ ಹೇಳಿದಂತೆ ಅರ್ಥವನ್ನು ತಿಳಿಯುವುದೇ (ನ್ಯಾಯುವೆಂದು) ಯುಕ್ತವೆಂದು ಹೇಳುತ್ತಾರೆ:—

ಏವಂ—ಹೀಗೆ (ವಿಭಕ್ತಿ ವ್ಯತ್ಯಾಸದಿಂದ, 'ಅನ್ನೇನ' ಶಬ್ದಕ್ಕೆ ಅನ್ನವನ್ನು ಎಂಬ ದ್ವಿತೀಯಾರ್ಥವನ್ನು, ಪುರುಷ ಶಬ್ದಕ್ಕೆ ಪುರುಷನ ದೆಸೆಯಿಂದ, ಎಂಬುವ ಪಂಚಮ್ಯರ್ಥವನ್ನು ತಿಳಿದರೆ, ಅಮುಕ್ತಚೇತನ ನಿಯಾಮಕತ್ವ ಮತ್ತು ಸರ್ವಕರ್ತೃತ್ವ ಮಹಿಮೆಗಳು ಸಿದ್ಧವಾಗುವಂತೆ), ಸತ್ಯೇವ—ಇದ್ದರೆ ಮಾತ್ರ (ಅರ್ಥವನ್ನು ತಿಳಿದರೆ ಮಾತ್ರ), ಸೂಕ್ತಸ್ಯ—(ಪುರುಷ) ಸೂಕ್ತಕ್ಕೆ, ಏಕಾರ್ಥತಾ—(ಪೂರ್ವೋತ್ತರ ವಿರೋಧವಿಲ್ಲದ) ಏಕಪ್ರಕಾರದ ಅರ್ಥವು, ಸ್ಯಾತ್—ಉಂಟಾಗುತ್ತದೆ (ಲಭಿಸುತ್ತದೆ); ನ ಚ ಅನ್ಯಥಾ—(ಆಪಾತತಃ—ತೋರುವ ಪರಕೀಯನು ಹೇಳುವ ಅರ್ಥವನ್ನು ಒಪ್ಪುವುದರಿಂದ) ಹಾಗಲ್ಲದಿದ್ದರೆ ಏಕಪ್ರಕಾರದ ಅರ್ಥವು ದೊರೆಯುವುದೇ ಇಲ್ಲ; ಯತಃ—ಏಕೆಂದರೆ, ಅತ್ರ—'ಪುರುಷ ಏವೇದಂ ಸರ್ವಂ' ಎಂಬ ವಾಕ್ಯದಲ್ಲಿ, ಸಃ—ಆ (ಸೂಕ್ತಪ್ರತಿಪಾದ್ಯ), ಪುರುಷಃ—ಪುರುಷನು, ಸರ್ವಜಗತ್ಕರ್ತಾ—ಸಮಸ್ತ ಜಗತ್ತಿನ (ಸೃಷ್ಟ್ಯಾದಿ) ಕರ್ತನೆಂದು, ಕೀರ್ತ್ಯತೇ—ಸ್ತುತಿಸಲ್ಪಟ್ಟಿರುವನು (ಸ್ತುತ್ಯನಾಗಿದ್ದಾನೆ).

---

ಆದ್ದರಿಂದ 'ಪುರುಷ ಏವೇದಂ ಸರ್ವಂ' ಎಂಬುದರಿಂದ, ಯಾವ ಯುಕ್ತಿಗೂ ಹೊಂದಿಕೆಯಾಗದ, ಐಕ್ಯಾರ್ಥವನ್ನು ತ್ಯಜಿಸಿ, ಜ್ಞಾನಿಸಮ್ಮತವಾದ ರೀತಿಯಲ್ಲಿ ವಿಭಕ್ತಿವ್ಯತ್ಯಾಸದಿಂದ ಅರ್ಥಗಳನ್ನು ತಿಳಿದರೆ, ಪೂರ್ವೋತ್ತರ ವಾಕ್ಯಗಳ ವಿರೋಧವೂ ಪರಿಹಾರವಾಗಿ, ಮಹಾಫಲಪ್ರದವಾದ ಜ್ಞಾನಕ್ಕೆ ಸಾಧನವಾದ, ಪುರುಷನ ಮಹಾಮಹಿಮೆಯೂ ತಿಳಿದು, ಸೂಕ್ತಕ್ಕೆ ಏಕಾರ್ಥತ್ವವೂ ಲಭಿಸುತ್ತದೆ; ಆಪಾತತಃ (ಮೇಲೆ ತೋರುವ) ಐಕ್ಯಾರ್ಥವನ್ನು, ಗ್ರಹಿಸಿದರೆ, ಮಹಾ ಅನರ್ಥಪ್ರಾಪಕ ಮಿಥ್ಯಾಜ್ಞಾನಕ್ಕೇ ಕಾರಣವಾಗುತ್ತದೆ (೪೮೭).

**ಅಪಿ ಭಿಕ್ಷಾಟನಂ ಕೃತ್ವಾ ಜ್ಞಾತೀನ್ ರಕ್ಷಿತುಮರ್ಹತಿ।**
**ಯದಿಯಂ ಭಾರತೀ ಭೀಮಸೇನದರ್ಶಿತಪದ್ಧತಿಃ ॥ ೪೮೮ ॥**

'ಪುರುಷ ಏವೇದಂ ಸರ್ವಂ' ಎಂಬಲ್ಲಿ ಪ್ರಥಮಾದಲ್ಲಿರುವ ಪುರುಷ ಶಬ್ದಕ್ಕೆ ಸಪ್ತಮ್ಯರ್ಥವನ್ನು ತಿಳಿಯುವುದು, ಅಧಿಕವಾಗಿ ಉಚಿತವೆಂದು ಸಾಹಿತ್ಯ ಭಂಗಿಯಲ್ಲಿ (ಆಲಂಕಾರಿಕ ಭಾಷೆಯಲ್ಲಿ) ಹೇಳುತ್ತಾರೆ :—

ಭಿಕ್ಷಾಟನಂ ಅಪಿ ಕೃತ್ವಾ – (ಕಾರ್ಯಸಾಧಕ ಬೇರೆ ವಿಭಕ್ತಿಯನ್ನು ಹೊಂದಿಯಾದರೂ) ಯಾಚಿಸಿಯಾದರೂ, ಜ್ಞಾತೀನ್–ಪುತ್ರಾದಿ ಬಂಧುವರ್ಗ ವನ್ನು (ತನ್ನ ಜಾತಿಗೆ ಸೇರಿದ ಸೂಕ್ತಗತ ಅನ್ಯವಾಕ್ಯಗಳ ರಕ್ಷಣೆಗಾಗಿ— 'ಪುರುಷ ಏವೇದಂ' ಎಂಬ ಐಕ್ಯಾರ್ಥವನ್ನು ತಿಳಿದು, ಪೂರ್ವೋತ್ತರ ವಾಕ್ಯ ಗಳಿಗೆ ಅಪ್ರಾಮಾಣ್ಯವನ್ನು ಹೊಂದಿಸುವುದಕ್ಕಿಂತ), ರಕ್ಷಿತುಂ – (ಅವುಗಳ ಪ್ರಾಮಾಣ್ಯವನ್ನು—ಅವುಗಳಿಂದ ಪ್ರತಿಪಾದ್ಯ ಮಹಿಮೆಗಳನ್ನು) ರಕ್ಷಿಸಲಿಕ್ಕೆ, ಅರ್ಹತಿ–ಯೋಗ್ಯವೆನಿಸುತ್ತದೆ (ಸಮರ್ಥವೂ ಆಗಿದೆ); ಯತ್ (ಯಸ್ಮಾತ್)– ಏಕೆಂದರೆ, ಇಯಂ ಭಾರತೀ–ಈ ವೇದವಾಣಿಯೂ (ಭಾರತೀದೇವಿಯಿಂದ ಅಭಿಮನ್ಯವಾದ್ದರಿಂದ ಭಾರತೀ ನಾಮಕ ವಾಕ್ಯವು), ಭೀಮಸೇನದರ್ಶಿತ

---

ಆಪಾತತಃ ಐಕ್ಯಾರ್ಥವನ್ನು ತೋರಿಸುವ, 'ಪುರುಷ ಏವೇದಂ ಸರ್ವಂ' ಎಂಬ ವಾಕ್ಯದಲ್ಲಿ ಪ್ರಥಮಾ ವಿಭಕ್ತಿಯಲ್ಲಿರುವ ಪುರುಷಶಬ್ದಕ್ಕೆ ಸಪ್ತಮ್ಯಂತದ ಅರ್ಥವನ್ನು ತಿಳಿಯುವುದೂ ಹೆಚ್ಚು ಪ್ರಶಸ್ತವೂ ಆಗುತ್ತದೆ; 'ಸುಪಾಂ ಸುಲುಕ್' ನಿಯಮದಂತೆ, ಪ್ರಥಮಾ ವಿಭಕ್ತಿಯಲ್ಲಿರುವ ಪದಕ್ಕೆ ಸಪ್ತಮೀ ವಿಭಕ್ತಿಯ ಅರ್ಥವನ್ನು ಹೇಳಲು ಬರುತ್ತದೆ; ಈ ವೇದವಾಕ್ಯರೂಪಳಾದ ಭಾರತೀದೇವಿಯು ತನ್ನ ಪತಿಯಾದ ಭೀಮಸೇನನ ಮಾರ್ಗವನ್ನೇ ಅನುಸರಿಸು ತ್ತಾಳೆ; ಭೀಮಸೇನನು ಏಕಚಕ್ರ ನಗರದಲ್ಲಿ ಭಿಕ್ಷೆಯನ್ನು ಯಾಚಿಸಿ ತಂದು, ಸ್ವಬಂಧುಗಳನ್ನು ರಕ್ಷಿಸಲಿಲ್ಲವೇ ? ಹಾಗೆಯೇ, ಸ್ವಜನ ಸ್ಥಾನದಲ್ಲಿರುವ ಪೂರ್ವೋತ್ತರ ವಾಕ್ಯಗಳಿಂದ ವಿರೋಧವು ಬಾರದಂತೆ, ಅವುಗಳ ಅರ್ಥವನ್ನು ವ್ಯವಸ್ಥೆಗೊಳಿಸಿ ರಕ್ಷಿಸಲಿಕ್ಕಾಗಿ, ತಾನು ಪ್ರಥಮಾ ವಿಭಕ್ತಿಯಲ್ಲಿದ್ದರೂ, ಯಾಚನೆಯಿಂದ ಸಪ್ತಮೀ ಅರ್ಥವನ್ನು ಸ್ವೀಕರಿಸಿ, 'ಇದಂ ಸರ್ವಂ ಪುರುಷೇ ಏವ' ಈ ಜಗತ್ತೆಲ್ಲವೂ ಪುರುಷನಲ್ಲಿಯೇ ಇರುತ್ತದೆಂದು ಹೇಳುತ್ತದೆ;

ಪದ್ಧತಿಃ–(ತನ್ನ ಪತಿಯಾದ ಭೀಮಸೇನನಿಂದ ತೋರಿಸಲಾದ ಮಾರ್ಗವುಳ್ಳ ವಳಾಗಿ—ಬ್ರಾಹ್ಮಣವೇಷಧಾರಿಯಾಗಿ, ಏಕಚಕ್ರ ನಗರದಲ್ಲಿದ್ದಾಗ ಭಿಕ್ಷಾಟನ ದಿಂದ ಸ್ವಬಂಧುಗಳನ್ನು ರಕ್ಷಿಸಿದಂತೆ, ವಿಭಕ್ತಿ ವ್ಯತ್ಯಾಸದಿಂದ ಕಾರ್ಯಸಾಧಕ ಳಾಗಿ, 'ಪುರುಷ ಏವೇದಂ ಸರ್ವಂ' ಎಂಬ ವಾಕ್ಯವು ಸಪ್ತಮೀ ವಿಭಕ್ತ್ಯರ್ಥ ದಿಂದ, ಪುರುಷನಲ್ಲಿ ಸರ್ವವೂ ಆಶ್ರಿತವೆಂಬ ಅರ್ಥವನ್ನು ಹೇಳಿ) ಪತಿಯ ಮಾರ್ಗವನ್ನೇ ಅನುಸರಿಸಿರುವಳು (ಆಗಿದ್ದಾಳೆ).

**ನ ಚೇತ್ಕಥಮಭೇದಾರ್ಥಾ ಯತೋ ವಾಕ್ಯಂ ಭಿನತ್ತಿ ಸಾ ।**
**ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದೋ ಹಿ ದೂಷಣಂ ॥ ೪೮೯ ॥**

'ಪುರುಷ ಏವೇದಂ ಸರ್ವಂ'[1] ಎಂಬುದಕ್ಕೆ ಅಭೇದಾರ್ಥವನ್ನು ತಿಳಿಯು ವುದರಲ್ಲಿ ಬೇರೆ ದೋಷವನ್ನು ತೋರಿಸುತ್ತಾರೆ :—

ನ ಚೇತ್–ಹಾಗೆ ವಿಭಕ್ತಿ ವ್ಯತ್ಯಾಸದಿಂದ ಬೇರೆ ಅರ್ಥವನ್ನು ತಿಳಿಯ ದಿದ್ದರೆ, ಯತಃ–ಯಾವ ಕಾರಣದಿಂದ, ಸಾ–(ಅಭೇದವನ್ನು ಹೇಳುವುದೆಂದು ಪರನು ತಿಳಿಯುವ) ವಾಕ್ಯವು, ವಾಕ್ಯಂ – ಪೂರ್ವೋತ್ತರ ವಾಕ್ಯವನ್ನು, ಭಿನತ್ತಿ–ಭಿನ್ನಾರ್ಥವುಳ್ಳದ್ದನ್ನಾಗಿ ಮಾಡುತ್ತದೆಯೋ (ಹಿಂದಿನ ಮುಂದಿನ ವಾಕ್ಯಗಳಲ್ಲಿ ಭೇದವು ಹೇಳಲಾಗಿರುವಾಗ), ಅಭೇದಾರ್ಥಾ–ಅಭೇದವನ್ನು (ಐಕ್ಯವನ್ನು) ಹೇಳುವುದು, ಕಥಂ–ಹೇಗೆ? (ಅಭೇದಾರ್ಥವುಳ್ಳದ್ದು ಸರ್ವತ್ರ ಭೇದವನ್ನು ನಿವಾರಿಸಲಿ) ; ಏಕವಾಕ್ಯತ್ವೇ–(ಹಿಂದು ಮುಂದಿನ ವಾಕ್ಯಗಳಿಗೆ ಅನುಗುಣವಾಗಿ) ಏಕಾರ್ಥವನ್ನು ತಿಳಿಯಲು, ಸಂಭವತಿ (ಸತಿ)–ಆಗುತ್ತಿರಲು (ಶಕ್ಯವಾಗಿರಲು), ವಾಕ್ಯಭೇದಃ–(ಅಸಂಗತವಾದ) ಪ್ರತ್ಯೇಕವಾಕ್ಯವನ್ನಾಗಿ ತಿಳಿಯುವುದು, ದೂಷಣಂ ಹಿ–ದೋಷವಲ್ಲವೇ ? (ಹಾಗೆಯೇ ಸರಿ).

---

ಇದರಿಂದ ಪುರುಷನು ಸರ್ವಜಗದಾಧಾರನೆಂದು (ಸರ್ವಾಶ್ರಯನೆಂದು) ಸಿದ್ಧ ವಾಗುತ್ತದೆ (೪೮೮). ಹಾಗೆ ವಿಭಕ್ತಿ ವ್ಯತ್ಯಾಸದಿಂದ ಬೇರೆ ಅರ್ಥವನ್ನು ಹೇಳದಿದ್ದರೆ, ಪೂರ್ವೋತ್ತರ ವಾಕ್ಯಗಳ ವಿರೋಧದಿಂದ, ಸೂಕ್ತಕ್ಕೆ ಏಕಾರ್ಥ

---

[1] 'ಪುರುಷ ಏವೇದಂ ಸರ್ವಂ', ಎಂಬ ವಾಕ್ಯವು ಪುರುಷನಿಗೆ, ಸರ್ವ ಜಗತ್ತಿನಿಂದ ಅಭೇದವನ್ನು (ನಿನ್ನಂತೆ) ಹೇಳುತ್ತಿರಲು, ಕೇವಲ ಪೂರ್ವೋತ್ತರ ವಾಕ್ಯಗಳಿಂದ ಮಾತ್ರ ಭೇದವನ್ನು ತಿಳಿಯುವುದೇಕೆ? ಅಯುಕ್ತವೇ ಸರಿ—ಸರ್ವತ್ರ ಭೇದವನ್ನು ನಿರಾಕರಿಸ ಬೇಕಷ್ಟೆ.

**ಜಡಾತ್ಮೈಕ್ಯಂ ಪ್ರಸಂಗೇನ ಮುಖ್ಯಾರ್ಥಸ್ತು ತವಾಪಿ ನ ।**
**ಯಾಚ್ಞಾಯಾಂ ತು ಪ್ರವೃತ್ತೇನ ಸದನ್ನಂ ಕಿಂ ನ ಯಾಚ್ಯತೇ ॥೪೯೦**

ಪುನಃ ದೋಷಾಂತರವನ್ನು ಹೇಳುತ್ತಾರೆ :—

ಪ್ರಸಂಗೇನ–(ನಿನ್ನ ಅರ್ಥದ) ಸಂದರ್ಭದಿಂದ, ಜಡಾತ್ಮೈಕ್ಯಂ–ಜಡ ಚೇತನರ ಅಭೇದವೇ ಎಂಬುದು (ಪುರುಷನು ಜಡಾಭಿನ್ನನೆಂಬುದು), ತವಾಪಿ – ನಿನಗಾದರೂ, ಮುಖ್ಯಾರ್ಥಃ – ('ಪುರುಷ ಏವೇದಂ ಸರ್ವಂ' ಎಂಬಲ್ಲಿರುವ 'ಸರ್ವ' ಪದಕ್ಕೆ) ಮುಖ್ಯಾರ್ಥವು, ನ ತು–ಯೋಗ್ಯವಾಗುವುದೇ ಇಲ್ಲ; [1] ಯಾಚ್ಞಾಯಾಂ–(ಮುಖ್ಯ ವೃತ್ತಿಯನ್ನು ಬಿಟ್ಟು, ಸರ್ವಂ ಪದಕ್ಕೆ ಸಂಕುಚಿತಾರ್ಥರೂಪದ ಅಮುಖ್ಯಾರ್ಥವನ್ನು ಆಶ್ರಯಿಸುವುದೆಂಬ) ಯಾಚನಾ ವೃತ್ತಿಯಲ್ಲಿ, ಪ್ರವೃತ್ತೇನ–ತೊಡಗಿದ ನಿನ್ನಿಂದ, ಸದನ್ನಂ–('ಸುಪಾಂಸುಲುಕ್' ಎಂಬ ನಿಯಮವನ್ನಾಶ್ರಯಿಸಿ, ಹಿಂದುಮುಂದಿನ ವಾಕ್ಯಗಳಿಗೆ ವಿರೋಧ ಬಾರದಂತೆ ವಿಭಕ್ತಿ ವ್ಯತ್ಯಾಸರೂಪದ) ಸದನ್ನವೆಂಬ ಯಾಚನೆಯನ್ನು, ಕಿಂ ನ ಯಾಚ್ಯತೇ – ಏಕೆ ಯಾಚಿಸುವುದಿಲ್ಲ? (ನೀನು ಮಾಡುವ 'ಸರ್ವ' ಪದ ಸಂಕೋಚಾರ್ಥವೆಂಬ ಅಮುಖ್ಯಾರ್ಥದ ಯಾಚನೆಯು ಕದನ್ನವಲ್ಲವೇ— ಯೋಚಿಸು).

---

ವಿಲ್ಲದಂತಾಗುತ್ತದೆ; ಏಕಾರ್ಥವನ್ನು ತಿಳಿಯಲು ಅವಕಾಶವಿರುತ್ತಿರಲು, ಅಸಂಗತವಾದ ಅನ್ಯಾರ್ಥವನ್ನು ಹೇಳುವುದು (ಸಂಬಂಧವಿಲ್ಲದ ಪ್ರತ್ಯೇಕ ವಾಕ್ಯವನ್ನಾಗಿ ತಿಳಿಯುವುದು), ದೋಷವೇ ಸರಿ (೪೮೯). ಚಿನ್ಮಾತ್ರಕ್ಕೆ ಮಾತ್ರ ಐಕ್ಯವನ್ನು ಹೇಳುವ ನಿನಗೂ (ಮಾಯಾವಾದಿಗೂ) ಜಡಚೇತನಾ ಭೇದವು, ಸಂಮತವಲ್ಲದ್ದರಿಂದ, 'ಪುರುಷ ಏವೇದಂ ಸರ್ವಂ' ಎಂಬ ವಾಕ್ಯಕ್ಕೆ ಮುಖ್ಯಾರ್ಥವು (ಐಕ್ಯಾರ್ಥವು) ಯೋಗ್ಯವಾಗುವುದಿಲ್ಲ; ಸರ್ವ ಶಬ್ದಾರ್ಥ ವನ್ನು ಸಂಕೋಚದಿಂದ ಗ್ರಹಿಸಬೇಕೆಂಬ ಅಮುಖ್ಯಾರ್ಥವನ್ನು ಆಶ್ರಯಿಸುವ (ಅನ್ಯ ಸಹಾಯದ) ಯಾಚನೆಯಲ್ಲಿ ತೊಡಗಿದ ನೀನು, 'ಸುಪಾಂಸುಲುಕ್' ನಿಯಮವನ್ನಾಶ್ರಯಿಸಿ, ಪೂರ್ವೋತ್ತರ ವಾಕ್ಯಗಳಿಗೆ ವಿರೋಧ ಬಾರದಂತೆ,

---

[1] ಚಿನ್ಮಾತ್ರಕ್ಕೆ ಐಕ್ಯವನ್ನು ಮಾಯಾವಾದಿಯು, ಹೇಳುತ್ತಾನೆ—ಜಡೈಕ್ಯವನ್ನಲ್ಲ; ಜಡಜಗತ್ತು–ಮಿಥ್ಯೆಯಾದುದು–ಅದು ಸತ್ಯವೇ ಅಲ್ಲ.

**ಕಿಂಚ ಪೌರುಷಸೂಕ್ತೇಽಸ್ಮಿನ್ ಸರ್ವಸ್ಯ ಪುರುಷಾತ್ಮತಾ ।**
**ಯದ್ಯರ್ಥಸ್ತರ್ಹಿ ಕಾರ್ಯಾರ್ಥಂ ವ್ಯರ್ಥಂ ತೇನ ತದರ್ಥನಂ ॥೪೯೧॥**

'ಪುರುಷ ಏವೇದಂ ಸರ್ವಂ' ಎಂಬ ವಾಕ್ಯಕ್ಕೆ ಸಕಲ ಚೇತನರೂ ಪುರುಷ ನಾಮಕ ನಾರಾಯಣನಿಂದ ಅಭಿನ್ನರೆಂಬ ಅರ್ಥವಿರುವುದಾದರೆ, ಬ್ರಹ್ಮಾದಿ ದೇವತೆಗಳು ಶ್ವೇತ ದ್ವೀಪಕ್ಕೆ ಹೋಗಿ ಪುರುಷಸೂಕ್ತದಿಂದ ವಿಷ್ಣು ವನ್ನು ಉಪಾಸಿಸಿದರೆಂದು ನಿರೂಪಿಸುವ ಪೌರಾಣಿಕ ಕ್ರಿಯೆಯೂ ಅನುಪ ಪನ್ನವೇ ಆಗಬೇಕಾದೀತು, ಎನ್ನುತ್ತಾರೆ :—

ಕಿಂಚ—ಮತ್ತೂ ಏನೆಂದರೆ, ಅಸ್ಮಿನ್—ಈ (ಪ್ರಸಕ್ತವಾದ), ಪೌರುಷೇ ಸೂಕ್ತೇ—ಪುರುಷಸೂಕ್ತದಲ್ಲಿ, ಸರ್ವಸ್ಯ—ಸರ್ವರಿಗೂ, ಪುರುಷಾತ್ಮತಾ—ಪುರುಷ ಸ್ವರೂಪವೇ, ಯದಿ ಅರ್ಥಃ—ಒಂದು ಪಕ್ಷ ಅರ್ಥವಾದರೆ, ತರ್ಹಿ—ಆಗ, ತೇನ— ಅದರಿಂದ (ಪುರುಷಸೂಕ್ತದಿಂದ), ತದರ್ಥನಂ – ವಿಷ್ಣುವನ್ನು ಉಪಾಸಿಸಿ ಪ್ರಾರ್ಥಿಸುವುದು, ಕಾರ್ಯಾರ್ಥಂ – (ಭೂಭಾರಹರಣವೆಂಬ ಕಾರ್ಯಸಿದ್ಧಿ ಗಾಗಿ), ವ್ಯರ್ಥಂ – ವ್ಯರ್ಥವೇ (ಆಗುತ್ತದೆ) (ಬ್ರಹ್ಮಾದಿಗಳೂ ಸ್ವಯಂ ಪುರುಷರೇ ಆಗಿದ್ದು, ವಿಷ್ಣುವು ಉಪಾಸ್ಯನು—ಬ್ರಹ್ಮಾದಿಗಳು ಉಪಾಸಕರೆಂಬ ಭಾವವೇ ಕೂಡುವುದಿಲ್ಲ; ಮತ್ತು ತಾವೇ ಭೂಭಾರಹರಣ ಕಾರ್ಯದಲ್ಲಿ (ಪುರುಷರಾಗಿ) ಸಮರ್ಥರಾಗಿರುವಾಗ, ಪುರುಷನನ್ನು (ವಿಷ್ಣುವೂ ಪುರುಷನೇ) ಪ್ರಾರ್ಥಿಸುವುದೂ ವ್ಯರ್ಥವೇ).

---

ವಿಭಕ್ತಿ ವ್ಯತ್ಯಾಸದಿಂದ ಯೋಜನೆ ಮಾಡುವುದೆಂಬ 'ಸದನ್ನ'ವನ್ನು ಏಕೆ ಯಾಚಿಸುವುದಿಲ್ಲ — ಸರ್ವಪದ ಸಂಕೋಚರೂಪದ ಯಾಚನೆಯು ಕದನ್ನ ವಲ್ಲವೇ ? (೪೯೦). ಈ ಪುರುಷಸೂಕ್ತದಲ್ಲಿನ 'ಪುರುಷ ಏವೇದಂ ಸರ್ವಂ' ಎಂಬುದಕ್ಕೆ ನೀನು ಹೇಳುವಂತೆ, ಎಲ್ಲರೂ ಪುರುಷಸ್ವರೂಪರೇ ಎಂಬ ಐಕ್ಯಾರ್ಥವು ಯುಕ್ತವಾದರೆ, ಪುರುಷಸೂಕ್ತದಿಂದ, ತಮ್ಮ ಕಾರ್ಯಸಿದ್ಧಿ ಗಾಗಿ (ಫಲಪ್ರಾಪ್ತಿಗಾಗಿ) ಬ್ರಹ್ಮಾದಿ ದೇವತೆಗಳು ಪುರುಷಸೂಕ್ತದಿಂದ ಸ್ತುತಿಸಿ, ಪ್ರಾರ್ಥಿಸಿದರೆಂಬ (ಕ್ಷೀರಸಮುದ್ರದ ತೀರಕ್ಕೆ ಹೋಗಿ ಭೂಭಾರ ಹರಣಾರ್ಥವಾಗಿ, ಪ್ರಾರ್ಥಿಸಿದರೆಂಬ ಮುಂತಾದ ಪೌರಾಣಿಕ ಪ್ರಕ್ರಿಯೆಗಳು) ವ್ಯರ್ಥವೇ ಆಗುತ್ತವೆ; ಬ್ರಹ್ಮಾದಿಗಳು ತಾವೇ ಪುರುಷರಾಗಿರುವಾಗ, ಪುರುಷನೇ ಆದ ವಿಷ್ಣುವನ್ನು ಪ್ರಾರ್ಥಿಸುವುದು ವ್ಯರ್ಥವೇ ಅಲ್ಲವೇ ? (೪೯೧).

**ಕಾ ಭೂಃ ಕುತೋ ಭರಸ್ತಸ್ಯಾಃ ಕಃ ಸ್ವಯಂ ಕಶ್ಚ ಪೂರುಷಃ ।**
**ಏತಾವದಪಿ ಸೂಕ್ತಾರ್ಥಂ ಧ್ಯಾತಾ ಧಾತಾ ನ ವೇತ್ತಿ ಕಿಂ ॥ ೪೯೨ ॥**

ಭೂಃ – ಧರಾದೇವಿಯು, ಕಾ–ಯಾರು ? ತಸ್ಯಾಃ – ಆಕೆಯ, ಭರಃ–ಭಾರವು, ಕುತಃ–ಯಾರಿಂದ ? ಸ್ವಯಂ–ತಾನು (ಬ್ರಹ್ಮನು), ಕಃ–ಯಾರು ? ಪೂರುಷಃ ಚ–ಪುರುಷನಾದರೋ, ಕಃ–ಯಾರು ? ಏತಾವತ್ ಅಪಿ–ಇಷ್ಟು ಮಾತ್ರದ, ಸೂಕ್ತಾರ್ಥಂ–ಪುರುಷಸೂಕ್ತದ ಅರ್ಥವನ್ನು, ಧ್ಯಾತಾ–ವಿಷ್ಣುವನ್ನು ಧ್ಯಾನಿಸುವ, ಧಾತಾ – ಬ್ರಹ್ಮದೇವನು, ನ ವೇತ್ತಿ ಕಿಂ – ತಿಳಿದಿರುವುದಿಲ್ಲವೇ ?

**ಪುರುಷಾತ್ ಪುರುಷಸ್ಯೈವ ಭಯೇ ಪುರುಷಪೂಜನಂ ।**
**ಪುರುಷಃ ಕುರುತೇ ಕಸ್ಮಾತ್ತಸ್ಮಾದಸ್ಮನ್ಮತಂ ಸ್ಮರ ॥ ೪೯೩ ॥**

ಪುರುಷಾತ್ – (ದೈತ್ಯರೂಪ) ನಾರಾಯಣನಿಂದ, ಪುರುಷಸ್ಯ ಏವ–(ಧರಾರೂಪಳಾದ) ನಾರಾಯಣನಿಗೇ, ಭಯೇ–ಭಯವುಂಟಾಗಲು, ಪುರುಷಃ – ( ಬ್ರಹ್ಮರೂಪದ ) ಪುರುಷನು, ಪುರುಷಪೂಜನಂ – ( ವಿಷ್ಣುರೂಪ ) ನಾರಾಯಣನ (ಪುರುಷನ) ಪೂಜೆಯನ್ನು, ಕಸ್ಮಾತ್ – ಏಕೆ, ಕುರುತೇ – ಮಾಡುತ್ತಾನೆ ? ( ಮಾಡುವುದೇ ಇಲ್ಲ ) ; ( ಸರ್ವಚೇತನರೂ ನಾರಾಯಣರೂಪರೇ ಆಗಿದ್ದಲ್ಲಿ, ಭೂಭಾರವು ಹೇಗೆ, ದೈತ್ಯರು ಹೇಗೆ ಆ ಭಾರಕಾರಣರು, ವಿಷ್ಣುವು ಪೂಜ್ಯತ್ವವೂ ಬ್ರಹ್ಮನಿಗೆ ಪೂಜಕತ್ವವೂ ಹೇಗೆ? ತನ್ನಿಂದ ತನಗೇ ಭಾರವಾದರೆ, ಅದರ ಪರಿಹಾರಕ್ಕಾಗಿ ತನ್ನನ್ನು ತಾನೇ ಪೂಜಿಸಿಕೊಳ್ಳುವುದೆಂಬುದನ್ನು ವಿವೇಕಿಯಾದವನು ಅಂಗೀಕರಿಸಬಹುದೇ ?), ತಸ್ಮಾತ್–(ಈ ವಿಚಾರವು ಸಂಭಾವ್ಯವೇ ಅಲ್ಲವು) ಆದ್ದರಿಂದ (ಪರನು ಹೇಳುವ ಅರ್ಥವು

---

ಎಲ್ಲವೂ ಪುರುಷನೇ ಆಗಿರುವಾಗ, ಭೂದೇವಿ (ಧರಾದೇವಿ) ಯಾರು ? ಆಕೆಯ ಭಾರವಾವುದು, ಯಾರಿಂದ ? ಬ್ರಹ್ಮನಾರು ? (ತಾನು ಯಾರು ?), ಪುರುಷ (ವಿಷ್ಣು) ಯಾರು ? ಧ್ಯಾನಿಸಿದ ಧಾತನು (ಬ್ರಹ್ಮನು), ಇಷ್ಟೂ ತಿಳಿಯದ ಅಜ್ಞಾನಿಯೇ ? (೪೯೨). ಪುರುಷನಿಂದ (ದೈತ್ಯನಿಂದ) ಪುರುಷನಿಗೆ (ಧರಾದೇವಿಗೆ) ಭಯಪ್ರಾಪ್ತವಾದರೆ, ಪುರುಷನು (ಬ್ರಹ್ಮನು) ಪುರುಷ (ನಾರಾಯಣ) ಪೂಜೆಯನ್ನು ಏಕೆ ಮಾಡುತ್ತಾನೆ? ಆದ್ದರಿಂದ, ಈ ವಿಚಾರವು

ಅತಿವಿರುದ್ಧವಾದ್ದರಿಂದ), ಅಸ್ಮನ್ಮತಂ – ನಮ್ಮ ಅರ್ಥವನ್ನು, ಸ್ಮರ–ಸ್ಮರಿಸು (ಅಂಗೀಕರಿಸು).

**ವ್ಯಾವಹಾರಿಕಭೇದಾಚ್ಚೇತ್ತರ್ಹಿ ಕಾರ್ಯಾನುರೋಧಿನಃ ।**
**ತಸ್ಯಾನುಕೂಲಮೇವಾರ್ಥಂ ವಕ್ತಿ ಸೂಕ್ತಂ ನ ವೈರಿಣಂ ॥ ೪೯೪ ॥**

ವ್ಯಾವಹಾರಿಕ ಭೇದದಿಂದ ಈ ಎಲ್ಲವೂ ಘಟಿಸುತ್ತದೆ (ಸಂಭಾವ್ಯವಾಗುತ್ತದೆ) ಎಂಬ ಪರನ ಅಭಿಪ್ರಾಯವನ್ನು ಹೊರಗಿಟ್ಟು ಅದನ್ನು ದೂಷಿಸುತ್ತಾರೆ :—

ವ್ಯಾವಹಾರಿಕಭೇದಾತ್ – ವ್ಯಾವಹಾರಿಕ ಭೇದದಿಂದ, ಚೇತ್ – (ಪೂಜ್ಯಪೂಜಕಾದಿ ಸರ್ವ ವ್ಯವಸ್ಥೆಯೂ) ಕೂಡುತ್ತದೆಂದರೆ, ತಸ್ಯ – ಈ ಭೇದಕ್ಕೆ, ಕಾರ್ಯಾನುರೋಧಿನಃ–(ಅದರ) ಕಾರ್ಯಕ್ಕೆ ಅನುಸರಿಸುವ, ಅನುಕೂಲಂ–ಅನುಕೂಲವಾದ, ಅರ್ಥಂ ಏವ–(ಪುರುಷ ಶಬ್ದಕ್ಕೆ ಸಪ್ತಮ್ಯರ್ಥವನ್ನೇ ತಿಳಿದರೆ) ಆಧಾರ ಆಧೇಯ ಭಾವಸಿದ್ಧಿಯಾಗುವ ಅರ್ಥವನ್ನೇ, ಸೂಕ್ತಂ–ಸೂಕ್ತವು, ವಕ್ತಿ–ಹೇಳುತ್ತದೆ; ವೈರಿಣಂ ನ–ವಿರುದ್ಧವಾದ ಅರ್ಥವನ್ನಲ್ಲ (ಮುಕ್ತವ್ಯವಹಾರವಿರೋಧಿಯಾದ ಸರ್ವಚೇತನರ ಅಭೇದವನ್ನು ಹೇಳುವುದಿಲ್ಲ) (ಪುರುಷಸೂಕ್ತವು, ಸಕಲ ವ್ಯವಹಾರಗಳಿಗೆ ಸಂಗತವಾಗುವ ಅರ್ಥಗಳನ್ನು ಹೇಳುತ್ತದೆಯಲ್ಲದೇ, ವಿರೋಧವಾದವುಗಳನ್ನಲ್ಲ).

**ಅಂತತಃ ಪರಮಾರ್ಥಶ್ಚ ಸ ಏವ ಸ್ಯಾದ್ಧಿ ಕಾರ್ಯಕೃತ್ ।**
**ಸರ್ವೈಕ್ಯಂ ಸರ್ವಕಾರ್ಯಾಣಾಂ ಭಂಜಕಂ ಕಸ್ಯ ರಂಜಕಂ ॥ ೪೯೫ ॥**

---

ವಿವೇಕಿಗಳಿಂದ ಅಂಗೀಕರಿಸಲರ್ಹವಲ್ಲ; ನಮ್ಮ ಅರ್ಥವನ್ನು ಒಪ್ಪಿಕೊಂಡು, ಅದರ ಯುಕ್ತತೆಯನ್ನು ಮನಗಾಣು (೪೯೩). ಈ ಎಲ್ಲವೂ ವ್ಯಾವಹಾರಿಕ ಭೇದದಿಂದ (ಪೂಜ್ಯಪೂಜಕಾದಿಗಳೂ) ಕೂಡುತ್ತವೆಂದು ತಿಳಿಯುವುದೂ ಸರಿಯಲ್ಲ; ಪುರುಷಸೂಕ್ತವು ಸಕಲ ವ್ಯವಹಾರಗಳಿಗೆ ಸಂಗತವಾದ ಅರ್ಥಗಳನ್ನು ಹೇಳುತ್ತದೆಯಲ್ಲದೇ, ವಿರೋಧಿಸುವ ಅರ್ಥಗಳನ್ನಲ್ಲ; ಸರ್ವಚೇತನರ ಅಭೇದವು ಮುಕ್ತವ್ಯವಹಾರಗಳಿಗೆ ವಿರೋಧವಲ್ಲವೇ ? (ಮುಕ್ತಚೇತನರ ವಿಹಾರಾದಿ ನಾನಾ ವ್ಯವಹಾರಗಳು ಅಭೇದದಿಂದ ಅಸಂಭಾವಿತವೇ ಆಗುತ್ತವೆ) (೪೯೪). ಉಕ್ತಭೇದವು, ಅಪೇಕ್ಷಿತ ಸಕಲಾರ್ಥಕ್ರಿಯಾಕಾರಿಯಾದ್ದರಿಂದ

ಸೂಕ್ತಪ್ರತಿಪಾದ್ಯವಾದ ಅರ್ಥವು ಭೇದವೇ ಆಗಿರಲಿ; ಆ ಭೇದವು ಪರಮಾರ್ಥವೆಂಬುದು ಹೇಗೆ? ಎಂದರೆ ಹೇಳುತ್ತಾರೆ:—

ಅಂತತಃ – ನಿರ್ಣಯಾತ್ಮಕವಾದ್ದರಿಂದ, ಕಾರ್ಯಕೃತ್ – ಅಪೇಕ್ಷಿತ ಸಕಲಾರ್ಥ ಕ್ರಿಯಾಕಾರಿಯಾದ, ಸಃ ಏವ–ಆ ಭೇದವೇ (ಉಕ್ತ ಭೇದವೇ), ಪರಮಾರ್ಥಃ – ಪರಮಸತ್ಯವಾದುದು (ಅಬಾಧ್ಯವಾದ ಅರ್ಥವುಳ್ಳದ್ದು); ಸರ್ವೈಕ್ಯಂ–(ಪುರುಷನಿಗೆ) ಸರ್ವದರಿಂದ ಐಕ್ಯವು, ಸರ್ವಕಾರ್ಯಾಣಾಂ– ಸರ್ವಕಾರ್ಯಸಿದ್ಧಿಗಳಿಗೆ, ಭಂಜಕಂ–ವಿರೋಧವಾದುದು (ಭಂಗವನ್ನುಂಟು ಮಾಡತಕ್ಕದ್ದು); ಕಸ್ಯ – ಯಾವ ಕಾರ್ಯದ, ರಂಜಕಂ – (ಸಾಧಕವು) ಆಗುತ್ತದೆ? (ಶ್ರುತ್ಯುಕ್ತಭೇದವು ಅರ್ಥಕ್ರಿಯಾಕಾರಿತ್ವವುಳ್ಳದ್ದಾದ್ದರಿಂದ ಪಾರಮಾರ್ಥಿಕವೇ ಸರಿ.[1]

**ಬೋಧ್ಯತ್ವಂ ಬೋಧಕತ್ವಂ ಚ ಸಾಧ್ಯಸಾಧಕತಾಂ ತಥಾ ।**
**ಗುರುಂ ಶಿಷ್ಯಂ ಚ ಯದ್ಧಂತಿ ತನ್ನಹಂತಿ ಹಿ ಕಃ ಪುಮಾನ್ ॥ ೪೯೬ ॥**

ಗುರು ಶಿಷ್ಯ, ಬೋಧ್ಯ ಬೋಧಕ ಭಾವಗಳ ಮತ್ತು ಮುಮುಕ್ಷು ಮೋಕ್ಷಗಳಲ್ಲಿ ಸಾಧ್ಯ ಸಾಧಕ ಭಾವಗಳ, ಸರ್ವಾಪೇಕ್ಷಿತ ವರ್ಣಾಶ್ರಮವಿಭೇದಗಳ,

---

ಪಾರಮಾರ್ಥಿಕವು—ವ್ಯಾವಹಾರಿಕವಲ್ಲ; ಪುರುಷನಿಗೆ ಸರ್ವೈಕ್ಯವನ್ನು ಹೇಳುವುದು, ಸರ್ವಕಾರ್ಯಸಿದ್ಧಿಗೆ ವಿರೋಧವಾಗುತ್ತದೆ (ಭಂಜಕವು–ಭಗ್ನಗೊಳಿಸುತ್ತದೆ); ಈ ಪ್ರಕ್ರಿಯೆಯು ಯಾರನ್ನು ರಂಜಿಸುತ್ತದೆ? ಏನನ್ನು ಸಾಧಿಸುತ್ತದೆ? ಅತ್ಯಂತ ಅನುಪಯೋಗಿಯು; ಭೇದವು ಪಾರಮಾರ್ಥಿಕವೇ ಸರಿ (೪೯೫). ಪ್ರತಿಪಾದ್ಯ ಪ್ರತಿಪಾದಕ, ಸಾಧ್ಯಸಾಧಕ, ಗುರುಶಿಷ್ಯ, ಮುಂತಾದ ಭಾವಗಳನ್ನು ನಷ್ಟಗೊಳಿಸುವ (ಈ ಭಾವಗಳ ಘಾತಕವಾದ) ಐಕ್ಯವಾದವನ್ನು

---

1 ಅರ್ಥಕ್ರಿಯಾಕಾರಿತ್ವವಿದ್ದ ಕಾರಣ, ಸತ್ಯವು—ಬ್ರಹ್ಮನಂತೆ, ಎಂದು ಅನ್ವಯಾನುಮಾನವು; ಶುಕ್ತಿರೂಪ್ಯದಂತೆ, ವ್ಯತಿರೇಕ್ಯನುಮಾನವು, ಎಂದು ಪಾರಮಾರ್ಥಿಕ ಸತ್ಯತ್ವವು ಉಭಯ ವಿಧ ಅನುಮಾನದಿಂದಲೂ ಸಿದ್ಧವಾಗುತ್ತದೆ; ಅರ್ಥಕ್ರಿಯಾಕಾರಿತ್ವವು ಅಪೇಕ್ಷಿತವಲ್ಲದಿದ್ದರೆ, ಶುಕ್ತಿರಜತದಂತೆ, ಎಂದು ಮಿಥ್ಯಾತ್ವವೂ ಸಿದ್ಧವಾಗುತ್ತದೆ; ಅಬಾಧ್ಯತ್ವಯೋಗ್ಯವಾದುದಕ್ಕೆ ಬಾಧ್ಯತ್ವವನ್ನೂ, ಬಾಧ್ಯತ್ವಯೋಗ್ಯವಾದುದಕ್ಕೆ ಅಬಾಧ್ಯತ್ವವನ್ನೂ ಹೇಳುವ ಮಾಯಾವಾದಿಯು (ನೀನೇ) ವ್ಯಾಹತಭಾಷಿಯು (ವಿರುದ್ಧವಾಗಿ ಮಾತನಾಡುವವನು).

ಶೂನ್ಯಬ್ರಹ್ಮಭೇದಗಳ ಘಾತಕವಾದ, ಐಕ್ಯವಾದವು ವಿವೇಕಿಗಳಿಂದ ಉಪೇಕ್ಷಿಸಲ್ಪಡಲರ್ಹವಾದುದೇ ಸರಿ, ಎನ್ನುತ್ತಾರೆ :—

ಬೋಧ್ಯತ್ವಂ – ಪ್ರತಿಪಾದ್ಯತ್ವವನ್ನು, ಬೋಧಕತ್ವಂ–ಪ್ರತಿಪಾದಕತ್ವವನ್ನು, ತಥಾ–ಹಾಗೂ, ಸಾಧ್ಯಸಾಧಕತಾಂ–ಸಾಧ್ಯ ಸಾಧಕತ್ವವನ್ನು, ತಥಾ–ಹಾಗೂ, ಸಾಧ್ಯಸಾಧಕತಾಂ–ಸಾಧ್ಯ ಸಾಧಕತ್ವವನ್ನೂ,[1] ಗುರುಂ–ಗುರುವನ್ನು (ಗುರುಭಾವವನ್ನು), ಶಿಷ್ಯಂ ಚ–ಶಿಷ್ಯಭಾವವನ್ನು, ಯತ್–ಯಾವ ಐಕ್ಯವಾದವು, ಹಂತಿ – ನಾಶಗೊಳಿಸುತ್ತದೆ ; ಕಃ ಪುಮಾನ್ – ಯಾವ ವಿವೇಕಿಯು, ತತ್–(ಈ ಅನರ್ಥಕಾರಕ) ಐಕ್ಯವನ್ನು, ನ ಹಂತಿ–ಪರಿತ್ಯಜಿಸುವುದಿಲ್ಲ (ನಿರಾಕರಿಸುವುದಿಲ್ಲ ?)

**ವರ್ಣಾಶ್ರಮವಿಭೇದಸ್ಯ ಶೂನ್ಯಾಶೂನ್ಯವ್ಯವಸ್ಥಿತೇಃ ।**
**ಸಾಧಕಃ ಪರಮಾರ್ಥೋಽರ್ಥೋ ಬಾಧಕೋಽರ್ಥಸ್ತು ಬಾಧ್ಯತೇ ॥**

ವರ್ಣಾಶ್ರಮವಿಭೇದಸ್ಯ – ವರ್ಣಾಶ್ರಮ ವಿವಿಧ ಭೇದಗಳ, ಶೂನ್ಯಾಶೂನ್ಯವ್ಯವಸ್ಥಿತೇಃ – ಶೂನ್ಯ (ಅಶೂನ್ಯ) ಬ್ರಹ್ಮರ ಇರುವಿಕೆಯನ್ನು (ಭೇದವನ್ನು), ಸಾಧಕಃ – ಸಾಧಿಸಿಕೊಡುವ (ಸಕಲ ಅರ್ಥ ಕ್ರಿಯಾಕಾರಿಯಾದ) ಭೇದವು, ಪರಮಾರ್ಥಃ ಅರ್ಥಃ–ಸತ್ಯವಾದ ಭೇದವಾಗಿದೆ (ಪರಮಾರ್ಥವಾದ ಅರ್ಥವು ಅಗಿದೆ) ; ಬಾಧಕಃ ಅರ್ಥಃ–ಬಾಧಿಸುವ ಅರ್ಥವು, ಬಾಧ್ಯತೇ–(ಈ ವ್ಯವಸ್ಥೆಗಳನ್ನು) ಬಾಧಿಸುತ್ತದೆ.

---

ಯಾವ ವಿವೇಕಿಯು ನಿರಾಕರಿಸುವುದಿಲ್ಲ ? ಅನರ್ಥಕರವಾದ ಈ ಐಕ್ಯವಾದವನ್ನು ತಪ್ಪದೇ ಪರಿತ್ಯಜಿಸುತ್ತಾರೆ (೪೯೬). ಇಷ್ಟುಮಾತ್ರವಲ್ಲದೇ, ವರ್ಣಾಶ್ರಮ ವಿಭೇದಗಳ, ಹಾಗೂ ಶೂನ್ಯ ಬ್ರಹ್ಮರ ಭೇದದ, ಪಾರಮಾರ್ಥಿಕತ್ವವನ್ನು (ಪರಮಸತ್ಯವನ್ನು, ಅತ್ಯಂತ ಸತ್ಯಗಳೆಂಬುದನ್ನೂ) ಸಾಧಿಸುತ್ತದೆ; ಐಕ್ಯವಾದದ ವಿರುದ್ಧವಾಗಿ ಭೇದಗಳ ಪರಮಸತ್ಯತ್ವವನ್ನು ಸಾಧಿಸಿ, ಭೇದವನ್ನು ಸಾಧಿಸುವ ಅರ್ಥವನ್ನು ಬಾಧಿಸುವ ಐಕ್ಯವಾದವನ್ನು ನಿರಾಕರಿಸುತ್ತದೆ (೪೯೭).

---

1 ಸಾಧ್ಯ—ಮೋಕ್ಷ; ಸಾಧಕ—ಮುಮುಕ್ಷು; ಇತ್ಯಾದಿ ರೂಪಸಂಬಂಧವನ್ನು (ಹಂತಿ) ನಷ್ಟಗೊಳಿಸುತ್ತದೆ.

**ಯದಿ ಸರ್ವೈಕ್ಯಮರ್ಥೋ ನ ವಾಕ್ಯಂ ಸ್ಯಾತ್ತರ್ಹ್ಯನರ್ಥಕಂ ।**
**ಗೌಣಾರ್ಥಾನುಸೃತೌ ವಿಷ್ಣೋಃ ಸ್ವಾತಂತ್ರ್ಯಾಖ್ಯಗುಣಂ ವದೇತ್ ॥**

ಬೇರೆ ದೋಷವನ್ನು ಐಕ್ಯವಾದದಮೇಲೆ ಹೇಳುತ್ತಾರೆ:—

ಸರ್ವೈಕ್ಯಂ – ('ಪುರುಷ ಏವೇದಂ ಸರ್ವಂ' ಎಂಬ ವಾಕ್ಯಕ್ಕೆ) ಸರ್ವೈಕ್ಯವು (ಎಲ್ಲದರಿಂದ ಪುರುಷನು ಅಭಿನ್ನನೆಂಬ), ಯದಿ ಅರ್ಥಃ–ಒಂದು ಪಕ್ಷದಲ್ಲಿ ಅರ್ಥವಾಗುವುದಾದರೆ, ತರ್ಹಿ – ಆಗ, ವಾಕ್ಯಂ – (ಅದು) ವೇದ ವಾಕ್ಯವು, ನ ಸ್ಯಾತ್–ಆಗದಿರಬೇಕು ; ಅನರ್ಥಕಂ–ಮುಖ್ಯಾರ್ಥವಿಲ್ಲದ್ದು (ದುಷ್ಟಫಲಪ್ರಾಪಕವೂ) ಆಗಬೇಕು ; ಗೌಣಾರ್ಥಾನುಸೃತೌ–(ಮುಖ್ಯಾರ್ಥವಾದ (ಅಭೇದವನ್ನು ಬಿಟ್ಟು) ಅಮುಖ್ಯಾರ್ಥವನ್ನು ಅನುಸರಿಸಿದರೆ (ಅಲ್ಲಿಯೂ), ವಿಷ್ಣೋಃ–ಶ್ರೀವಿಷ್ಣುವಿನ, ಸ್ವಾತಂತ್ರ್ಯಾಖ್ಯಗುಣಂ–ಸ್ವತಂತ್ರನೆಂಬ ಗುಣವನ್ನು, ವದೇತ್ – (ರಾಜನೇ ರಾಷ್ಟ್ರವು, ಎಂಬಂತೆ, ಎಲ್ಲವೂ ಪುರುಷಾಧೀನವೆಂಬ (ಹಿಂದುಮುಂದಿನ ವಾಕ್ಯಗಳಿಗೆ ವಿರೋಧ ಬಾರದ) ಅರ್ಥವನ್ನೇ ಹೇಳಬೇಕು.

**ಸಂಕೋಚೇಪ್ಯಲ್ಪಜಡತಃ ಸ್ಯಾದೈಕ್ಯಂ ನ ತು ಜೀವತಃ ।**
**ಇದಂ ಪದಾರ್ಥೋ ಹಿ ಜಡೋ ಯತ್ತೋ ಜೀವೋನಿದಂಪದಃ ॥೪೯॥**

ಸರ್ವಶಬ್ದವನ್ನು ಮಾತ್ರ ಸಂಕೋಚಮಾಡಿ, ಸರ್ವಚೈತನ್ಯೈಕ್ಯವನ್ನು ಮಾತ್ರ ಹೇಳುವುದರಿಂದ ಅಮುಖ್ಯಾರ್ಥತ್ವವಿಲ್ಲ (ಮುಖ್ಯಾರ್ಥ ತ್ಯಾಗವಿಲ್ಲ), ಎಂದರೆ ಹೇಳುತ್ತಾರೆ:—

---

ಆದ್ದರಿಂದ 'ಪುರುಷ ಏವೇದಂ ಸರ್ವಂ' ಎಂಬ ವಾಕ್ಯಕ್ಕೆ ಸರ್ವೈಕ್ಯವೆಂದರ್ಥವಾದರೆ, ಆ ವಾಕ್ಯವು ವೇದವಾಕ್ಯವೇ ಅಲ್ಲದಿರಬೇಕು; ದುಷ್ಟ (ತಮಸ್ಸೇ ಮೊದಲಾದ) ಫಲಪ್ರಾಪಕವೂ ಆಗಿರಬೇಕು; ಹಾಗಲ್ಲದೇ ಮುಖ್ಯಾರ್ಥವನ್ನು ತ್ಯಜಿಸಿ, ಗೌಣಾರ್ಥವನ್ನೇ ಅನುಸರಿಸಿದರೆ, ಶ್ರೀವಿಷ್ಣುವೇ ಸರ್ವಸ್ವತಂತ್ರನೆಂಬ ಮಹಿಮಾವಾಚಕವಾಗುತ್ತದೆ; ಸಕಲ ಜಗತ್ತು ಪುರುಷಾಧೀನವಾದ ಪರತಂತ್ರವಸ್ತುಗಳೆಂದು ಸಿದ್ಧವಾಗುತ್ತದೆ; ಹಿಂದು ಮುಂದಿನ ವಾಕ್ಯಗಳಿಗೆ ವಿರೋಧ ಬಾರದಂತೆ ಅರ್ಥವನ್ನು ಗ್ರಹಿಸಬೇಕಷ್ಟೆ (೪೮). 'ಪುರುಷ ಏವೇದಂ ಸರ್ವಂ' ಎಂಬಲ್ಲಿರುವ ಸರ್ವಪದವನ್ನು ಸಂಕೋಚಗೊಳಿಸಿ,

ಸಂಕೋಚೇ ಅಪಿ–ಸರ್ವಶಬ್ದದಿಂದ ಜಡವನ್ನು ಬಿಟ್ಟು ಚೇತನಮಾತ್ರವನ್ನು ಗ್ರಹಿಸಿದರೂ (ಅಪಿ ಶಬ್ದವು 'ಗರ್ಹ್ಯ'–ನಿಂದ್ಯವೆಂಬ ಅರ್ಥಸೂಚಕವು), ಅಲ್ಪಜಡತಃ–'ಇದಂ ಸರ್ವಂ' ಎಂಬಲ್ಲಿರುವ ಅಲ್ಪಭಾಗಸೂಚಕವಾದ (ಅಥವಾ ಕ್ಷುದ್ರವಾದ) ಜಡದಿಂದ, ಐಕ್ಯಂ–(ಪುರುಷನಿಗೆ) ಅಭೇದವು, ಸ್ಯಾತ್–ಆಗಲಿ, ಜೀವತಃ–ಜೀವನಿಂದ, ನ ತು–ಅಲ್ಲ (ಹೇಳಲು ಬರುವುದೇ ಇಲ್ಲ); ಯತ್–ಏಕೆಂದರೆ, ತೇ–ನಿನಗೆ (ನಿನ್ನ ಮತದಲ್ಲಿ), ಇದಂ ಪದಾರ್ಥಃ–' ಇದಂ ' ಶಬ್ದಬೋಧ್ಯವಸ್ತುವು, ಜಡಃ ಹಿ–ಜಡವಷ್ಟೆ; ಜೀವಃ–ಜೀವನು, ಅನಿದಂ ಪದಃ–ಅಜಡಶಬ್ದವಾಚ್ಯನು (ಇದಂ ಪದಾರ್ಥವು ಅಲ್ಪಾಕ್ಷರಗಳುಳ್ಳದ್ದು, ಚೇತನನು 'ಅನಿದಂ' ಶಬ್ದವಾಚ್ಯನು; ಆದ್ದರಿಂದ ಸಹ 'ಅಲ್ಪಜಡತಃ' ಎಂಬುದು ಸೂಚಿತವೆಂದೂ ತಿಳಿಯಲವಕಾಶವಿದೆ), (ಆದ್ದರಿಂದ ನೀನು ಜಡೈಕ್ಯವನ್ನು ಪುರುಷನಿಗೆ ಹೇಳಬೇಕಲ್ಲದೇ ಚೈತನ್ಯೈಕ್ಯವನ್ನಲ್ಲ).

**ತತ್ಪೂರ್ವಸ್ವೋತ್ತರಾರ್ಥಘ್ನಂ ಸ್ವೋಪಸ್ಥಾತ್ರರ್ಥಘಾತಕಂ ।**
**ಅಯುಕ್ತಂ ಚ ಜಡಾದ್ಯೈಕ್ಯಮುಕ್ತಂ ಚೇತ್ ಸೂಕ್ತಿತೈವ ನ ॥**
**॥ ೫೦೦ ॥**

ತತ್–ಆದ್ದರಿಂದ (ಹಿಂದೆ ಹೇಳಿದಂತೆ), ಪೂರ್ವಸ್ವೋತ್ತರಾರ್ಥಘ್ನಂ–('ಪುರುಷ ಏವೇದಂ ಸರ್ವಂ' ಎಂಬ ವಾಕ್ಯದ) ಹಿಂದಿನ (ಸಹಸ್ರಶೀರ್ಷಾದಿ) ಅರ್ಥಗಳ ಮತ್ತು (ತನ್ನ ಮುಂದಿನ ವಾಕ್ಯದಲ್ಲಿ ಹೇಳಲಾಗುವ) ಉತ್ತರ ವಾಕ್ಯದ (ಮುಕ್ತೇಶನೆಂಬ ಮುಂತಾದ) ಅರ್ಥಗಳ ನಾಶಕವಾದುದೂ (ಅರ್ಥಗಳನ್ನು ವ್ಯರ್ಥಗೊಳಿಸುವುದೂ), ಸ್ವೋಪಸ್ಥಾತ್ರರ್ಥಘಾತಕಂ–(ಪುರುಷನ)

---

ಕ್ಷುದ್ರವಾದ (ಅಲ್ಪಭಾಗವಾದ) ಜಡವನ್ನು ಮಾತ್ರ ಅರ್ಥವೆಂದು, ಅಂಗೀಕರಿಸಿದರೆ, ಪುರುಷನಿಗೆ ಜಡದಿಂದ ಅಭೇದವನ್ನು (ಐಕ್ಯವನ್ನು) ಹೇಳಿದಂತಾಗುತ್ತದೆ; ನಿನ್ನಂತೆ ಸಹ, 'ಇದಂ' ಶಬ್ದವಾಚ್ಯವಾದುದು ಜಡವಷ್ಟೆ; ಜೀವನು 'ಅನಿದಂ' ಪದವಾಚ್ಯನು; ಆದ್ದರಿಂದ ಪುರುಷನಿಗೆ ಜಡೈಕ್ಯವನ್ನು ಹೇಳಬೇಕಲ್ಲದೇ, ಚೇತನೈಕ್ಯವನ್ನಲ್ಲ) (೪೯೯). ಆದ್ದರಿಂದ 'ಸಹಸ್ರಶೀರ್ಷಾದಿ' ಹಿಂದಿನ ವಾಕ್ಯ ಮತ್ತು 'ಅಮೃತತ್ವೇಶಾನಸ್ಯ' ಎಂಬ ಉತ್ತರವಾಕ್ಯಗಳ ಅರ್ಥಗಳನ್ನು ವ್ಯರ್ಥಗೊಳಿಸುವ, 'ಪುರುಷ'ನನ್ನು ಪ್ರಯೋಜನಾರ್ಥಿಗಳಾಗಿ ಪ್ರಾರ್ಥಿಸುವ ಬ್ರಹ್ಮಾದಿ ದೇವತೆಗಳ ಪ್ರಯೋಜನವನ್ನು ನಾಶಮಾಡುವ,

ತನ್ನ ಉಪಾಸಕರಾದ ಬ್ರಹ್ಮಾದಿಗಳ ಪ್ರಯೋಜನವನ್ನು ನಾಶ (ಇಲ್ಲದಂತೆ) ಮಾಡುವುದೂ, (ಆದ) ಜಡಾದ್ಯೈಕ್ಯಂ ಉಕ್ತಂ–'ಇದಂ' ಪದಪ್ರಭಾವದಿಂದ ಲಭಿಸುವ ಜಡಾದಿಗಳಿಂದ ಪುರುಷನಿಗೆ ಐಕ್ಯವು ಹೇಳಲಾಗಿದೆ, ಎಂಬುದು, ಅಯುಕ್ತಂ ಚ – ಅನುಚಿತವೇ (ಆಗುತ್ತದೆ) ; ಉಕ್ತಂ ಚೇತ್ – ಹೇಳಲಾದ (ಚೇತನೈಕ್ಯವೇ) ಸರಿ ಎಂದರೆ, ಸೂಕ್ತತಾ ಏವ–(ಈ ವೇದಮಂತ್ರಕ್ಕೆ) ಸೂಕ್ತತ್ವವೇ, ನ–ಸಿದ್ಧಿಸುವುದಿಲ್ಲ.[1]

**ವಿಶಿಷ್ಟಚಿದ್ಧಿ ಬಾಹುಲ್ಯಾತ್ಸರ್ವಂ ಸ್ಯಾನ್ನತದೈಕ್ಯವತ್ ।**
**ಚಿನ್ಮಾತ್ರಮಬಹುತ್ವಾತ್ತೇ ನ ಸರ್ವಾಖ್ಯಂ ಯದೈಕ್ಯವತ್ ॥ ೫೦೧ ॥**

'ಪುರುಷ ಏವೇದಂ ಸರ್ವಂ'[2] ಎಂಬಲ್ಲಿರುವ 'ಇದಂ' ಪದವನ್ನು ಪರಿಗಣಿಸದೇ, 'ಸರ್ವಂ' ಎಂಬುದರಿಂದ ಸರ್ವಜೀವರೆಂದು ಮಾತ್ರ ಹಿಡಿದು, ಪುರುಷನಿಗೂ ಸರ್ವಜೀವರಿಗೂ ಅಭೇದವನ್ನು ಹೇಳುತ್ತೇವೆ, ಎಂದರೆ, ಆ ವಾದವೂ ದೂಷಿತವಾಗುತ್ತದೆನ್ನುತ್ತಾರೆ :—

ಹಿ–ಯಾವ ಕಾರಣದಿಂದ, ವಿಶಿಷ್ಟಚಿತ್–(ಅಂತಃಕರಣಾದಿ) ಉಪಾಧಿಯಿಂದ ಕೂಡಿದ ಚೇತನವು, ಬಾಹುಲ್ಯಾತ್ – ಬಹುಸಂಖ್ಯಾಕವಾದ್ದರಿಂದ,

---

ಇದಂ ಶಬ್ದಪ್ರಭಾವದಿಂದ ಲಭಿಸುವ ಜಡೈಕ್ಯವನ್ನು ಪುರುಷನಿಗೆ ಹೇಳುವುದು ಅನುಚಿತವಾಗುತ್ತದೆ; ಜಡೈಕ್ಯವೆಂಬ ಅರ್ಥವನ್ನು ತ್ಯಜಿಸಿ, ಚೇತನೈಕ್ಯವನ್ನು ಹೇಳುವುದಾದರೆ, ಈ ಸೂಕ್ತಕ್ಕೆ ಸೂಕ್ತತ್ವವೇ ಸಿದ್ಧಿಸುವುದಿಲ್ಲ; ಯುಕ್ತಿಯುಕ್ತವಾದ ಅರ್ಥವನ್ನು ಹೇಳುವುದೆಂಬುದೇ ಸೂಕ್ತದ ಸೂಕ್ತತ್ವವಷ್ಟೆ (೫೦೦). ಅಂತಃಕರಣಾದಿ ಉಪಾಧಿಯುಕ್ತವಾದ ಚೇತನರು ಅಸಂಖ್ಯರಾಗಿರುವರು ; ಸರ್ವಶಬ್ದವು ಈ ನಿಮಿತ್ತದಿಂದ ಯೋಗ್ಯವೆನಿಸಿದರೂ,

---

1 'ಸುಷ್ಠು ಉಕ್ತಂ ವಚನಂ ಹಿ ಸೂಕ್ತಂ'—ಯುಕ್ತಿಯುಕ್ತವಾದ ಅರ್ಥವನ್ನು ಹೇಳುವ ವಚನವೇ ಸೂಕ್ತವು ; ಐಕ್ಯವನ್ನು ಹೇಳುವುದರಿಂದ, ದುರುಕ್ತವೇ ಆಗುತ್ತದೆಯಲ್ಲದೇ (ಪುರುಷಸೂಕ್ತವು) ಸೂಕ್ತವಾಗುವುದಿಲ್ಲ.

2 'ಪುರುಷ ಏವೇದಂ ಸರ್ವಂ', ಎಂಬಲ್ಲಿರುವ ಇದಂ ಶಬ್ದವನ್ನು ಗಣನೆಗೆ ತಾರದೇ, ಸರ್ವಶಬ್ದವನ್ನು ಸಂಕೋಚಗೊಳಿಸಿ (ಜಡವನ್ನು ಬಿಟ್ಟು), ಸರ್ವಜೀವ ಚೇತನರು ಪುರುಷನಿಂದ ಅಭಿನ್ನರೆಂಬರ್ಥವೂ ಹೊಂದುವುದಿಲ್ಲ; ಏಕೆಂದರೆ,

ಸರ್ವಂ—ಸರ್ವ ಪದವಾಚ್ಯವಾದರೂ, ತತ್—ಆ ವಿಶಿಷ್ಟಚೇತನ ಸಮುದಾಯವು, ಐಕ್ಯವತ್-(ಮಾಯಾಮತದಂತೆ) ಬ್ರಹ್ಮನಿಂದ (ಪುರುಷನಿಂದ) ಐಕ್ಯವುಳ್ಳದ್ದಲ್ಲ (ಚಿನ್ಮಾತ್ರಕ್ಕೆ ಐಕ್ಯವೆಂದು ಹೇಳುತ್ತದೆ) ; ಚಿನ್ಮಾತ್ರಂ—ಚಿನ್ಮಾತ್ರವು, ತೇ—ನಿನ್ನಂತೆ, ಅಬಹುತ್ವಾತ್ – ಬಹುಸಂಖ್ಯೆಯುಳ್ಳದ್ದಲ್ಲವಾದ್ದರಿಂದ (ಒಂದೇ ಆದ್ದರಿಂದ), ಸರ್ವಾಖ್ಯಂ—ಸರ್ವವೆಂದು ಕರೆಯಲ್ಪಡುವುದು, ನ—ಅಲ್ಲ; ಯತ್—ಯಾವ ಚಿನ್ಮಾತ್ರವು, ಐಕ್ಯವತ್—ಐಕ್ಯವುಳ್ಳದ್ದೋ (ಅದು ಸರ್ವಶಬ್ದವಾಚ್ಯವಲ್ಲ).

**ಅಥವೈಕ್ಯಪರಂ ವಾಕ್ಯಮೇತದಸ್ತು ನ ಮೇ ಭಯಂ ।**
**ತನ್ಮುಖ್ಯಾರ್ಥಂ ಚ ಯುಕ್ತಂ ಚ ಯಥಾಸ್ಯಾತ್ತಾಂ ಕಥಾಂ ಶೃಣು ॥**
**॥ ೫೦೨ ॥**

ಸ್ವಮತದಲ್ಲಿ ಪಕ್ಷಾಂತರವನ್ನು ಹೇಳುತ್ತಾರೆ :—

ಅಥವಾ—ಮತ್ತೇನೆಂದರೆ, ಏತತ್ ವಾಕ್ಯಂ—'ಪುರುಷ ಏವೇದಂ ಸರ್ವಂ' ಎಂಬ ವಾಕ್ಯವು, ಐಕ್ಯಪರಂ—ಐಕ್ಯಾರ್ಥವುಳ್ಳದ್ದೇ, ಅಸ್ತು—ಆಗಲಿ, ಮೇ—ನನಗೆ (ತತ್ವವಾದಿಗೆ), ನ ಭಯಂ—(ಯಾವ) ಭಯವೂ ಇಲ್ಲ ; ತನ್ಮುಖ್ಯಾರ್ಥಂ ಚ—

---

ಈ ಚೇತನರೆಲ್ಲರೂ 'ವಿಶಿಷ್ಟಚೇತನರಾದ್ದರಿಂದ' (ಚಿನ್ಮಾತ್ರರಲ್ಲವಾದ್ದರಿಂದ), ಚಿನ್ಮಾತ್ರಕ್ಕೆ ಐಕ್ಯವನ್ನು ಹೇಳುವ ಮಾಯಾಮತದಂತೆ, ವಿಶಿಷ್ಟಚೇತನರಿಗೆ (ಜೀವರಿಗೆ) ಐಕ್ಯವನ್ನು ಹೇಳಲು ಬರುವುದಿಲ್ಲ; ಚಿನ್ಮಾತ್ರವು ಒಂದೇ ಆದ್ದರಿಂದ, ಸರ್ವಶಬ್ದವಾಚ್ಯವಲ್ಲ (೫೦೧). ಅಷ್ಟೇಕೆ! 'ಪುರುಷ ಏವೇದಂ' ಎಂಬ ವಾಕ್ಯವು ಐಕ್ಯಾರ್ಥವುಳ್ಳದ್ದೇ ಆದರೂ, ತತ್ವವಾದಿಗೆ ಅದರಿಂದ ಯಾವ

---

ಅಂತಃಕರಣಾದಿ ಉಪಾಧಿಯುಳ್ಳ ಚೇತನನು ಜೀವನು—ಆತನೇ ವಿಶಿಷ್ಟಚಿತ್; ಯದ್ಯಪಿ, ಜೀವರು ಬಹುಸಂಖ್ಯೆಯಲ್ಲಿದ್ದರೂ, ಈ ವಿಶಿಷ್ಟನಿಂದ ಪುರುಷನಿಗೆ (ಬ್ರಹ್ಮನಿಗೆ) ಐಕ್ಯವನ್ನು ಅದ್ವೈತವು ಹೇಳುವುದಿಲ್ಲ; ಚಿನ್ಮಾತ್ರಕ್ಕೆ ಐಕ್ಯವನ್ನು ಹೇಳುತ್ತಾರೆ; ಚಿನ್ಮಾತ್ರವು ಬಹುಸಂಖ್ಯೆಯುಳ್ಳದ್ದಲ್ಲ—ಆದ್ದರಿಂದ ಸರ್ವಶಬ್ದವಾಚ್ಯವಲ್ಲ; ಒಂದೇ ಇರುವುದನ್ನು ಸರ್ವವೆಂದು ಕರೆಯಲಾಗುವುದಿಲ್ಲ; ಸರ್ವವಾದುದು (ಜೀವಸಮೂಹವು) ಬ್ರಹ್ಮಾಭಿನ್ನವಲ್ಲ; ಎಲ್ಲಿ 'ಸರ್ವ' ಪದವು ಸಂಭವವೋ ಅಲ್ಲಿ ಐಕ್ಯವಿಲ್ಲ; ಎಲ್ಲಿ ಐಕ್ಯವು ಸಂಭವವೋ ಅಲ್ಲಿ ಸರ್ವಪದದ ಅಸಂಭವವು; ಹೀಗೆ, ಒಂದನ್ನು ಸಾಧಿಸಲು ಹೋದರೆ, ಮತ್ತೊಂದು ಬಿದ್ದುಹೋಗುತ್ತದೆಂಬ ನ್ಯಾಯದಿಂದ ಕೆಸರಲ್ಲಿ ಬಿದ್ದಂತಾಗುತ್ತದೆ; ಐಕ್ಯವನ್ನು ಹೇಗೂ ಹೇಳಲು ಬರುವುದಿಲ್ಲ.

ಐಕ್ಯಾರ್ಥವೇ ಮುಖ್ಯಾರ್ಥವೂ (ಆಗಿರಲಿ), ಯುಕ್ತಂ ಯಥಾಸ್ಯಾತ್–ಅದು ಹೇಗೆ (ಪುರುಷನಲ್ಲಿ—ಪರಮಾತ್ಮನಲ್ಲಿ) ಉಪಪನ್ನವೇ ಆಗುವುದೋ, ತಾಂ ಕಥಾಂ–ಆ ಅನುವಾದವನ್ನು (ಭಗವಂತನ ರೂಪಗಳಲ್ಲಿ, ಗುಣಕ್ರಿಯಾದಿಗಳಲ್ಲಿ ಭೇದವನ್ನು ಶಂಕಿಸಿ, ಅದನ್ನು ನಿರಾಸಗೊಳಿಸುವ ಪ್ರಕಾರದ ನಿರೂಪಣೆ ಯನ್ನು), ಶೃಣು–ಕೇಳು (ಕೇಳಿ, ಅದರಲ್ಲಿ ವಿಶ್ವಾಸಮಾಡು).

**ಅಸಂಖ್ಯದೇಹಿದೇಹೇಷು ಸೋಽತ್ಯತಿಷ್ಠದ್ದಶಾಂಗುಲಂ ।**
**ಇತಿ ಪೂರ್ವಶ್ರುತೌ ಪುಂಸೋ ರೂಪಬಾಹುಲ್ಯಮೀರಿತಂ ॥ ೫೦೩ ॥**

॥ ೬ ಪೂರ್ವಶ್ರುತೌ–'ಅತ್ಯತಿಷ್ಠದ್ದಶಾಂಗುಲಂ' ಎಂಬ ಮೊದಲಿನ ವಾಕ್ಯದಲ್ಲಿ, ಸಃ – ಸಹಸ್ರಶೀರ್ಷಾದಿಗಳುಳ್ಳ ಆ ಪುರುಷನು, ಅಸಂಖ್ಯದೇಹಿದೇಹೇಷು– ಅಸಂಖ್ಯ (ಅನಂತ) ಜೀವರ ದೇಹಗಳಲ್ಲಿ, ದಶಾಂಗುಲಂ – ಅತಿಶಯಿತನಾಗಿ (ಅತ್ಯುತ್ತಮನಾಗಿ), ಅತ್ಯತಿಷ್ಠತ್–ಅತಿಕ್ರಮಿಸಿ ನಿಂತಿರುವನು ('ಕೇಚಿತ್ಸ್ವ-ದೇಹಾಂತರ್ಹೃದಯಾವಕಾಶೇ ಪ್ರಾದೇಶಮಾತ್ರಂ ಪುರುಷಂ ವಸಂತಂ' ಎಂಬ ಶ್ರುತಿಸಮಾಖ್ಯೆಯಂತಿರುವ ಭಾಗವತ ವಾಕ್ಯವು, ಜೀವನನ್ನು ಅತಿಕ್ರಮಿಸಿ (ಅತಿಶಯ ಉತ್ಕೃಷ್ಟನಾಗಿ) ಪ್ರತಿ ಜೀವರಲ್ಲಿ ಪುರುಷನು ವಾಸಮಾಡುತ್ತಿರುವ ನೆಂಬುದರಿಂದ, ಭಗವಂತನಿಗೆ ಅನಂತರೂಪಗಳನ್ನು, ಸ್ಥಾನಭೇದದಿಂದ ಭೇದ ಪ್ರಸಕ್ತಿಯನ್ನೂ ತಂದುಕೊಡುತ್ತದೆ); ಇತಿ–ಎಂದು, ಪುಂಸಃ–(ಪ್ರತಿಪಾದ್ಯ ನಾದ) ಪುರುಷನಿಗೆ, ರೂಪಬಾಹುಲ್ಯಂ–ಅಸಂಖ್ಯರೂಪಗಳು, ಈರಿತಂ– ಹೇಳಲ್ಪಟ್ಟಿದೆ.

---

ಭಯವೂ ಇಲ್ಲ; ಆಗ ಪುರುಷನಲ್ಲಿ (ಭಗವಂತನಲ್ಲಿ), ಮುಖ್ಯಾರ್ಥವಾದ ಐಕ್ಯವೂ ಉಪಪನ್ನವೇ ಆಗುತ್ತದೆ; ಆ ವಾದವನ್ನು ಕೇಳಿ, ಅದರಲ್ಲಿ ವಿಶ್ವಾಸ ಮಾಡು (೫೦೨). ಸಹಸ್ರಶೀರ್ಷಾದಿಗಳುಳ್ಳ ಪುರುಷನು, ಅಸಂಖ್ಯಜೀವರ ದೇಹಗಳಲ್ಲಿ ಅನಂತರೂಪನಾಗಿ ಸ್ಥಿತನಾಗಿದ್ದಾನೆ; ಅಲ್ಲಿಯೂ 'ಅತ್ಯತಿಷ್ಠದ್ದಶಾಂಗುಲಂ' ಎಂದು ಹೇಳಿದಂತೆ, ಜೀವರಿಂದ ಅತ್ಯುತ್ತಮನಾಗಿ (ಅತಿ ಕ್ರಮಿಸಿ) ನಿಂತಿರುವನು; (ಪ್ರತಿ ಜೀವರಲ್ಲಿ) ಭಿನ್ನಾಧಿಷ್ಠಾನಗಳಲ್ಲಿ ಪುರುಷನು ಹೀಗೆ ಅನಂತರೂಪಿಯಾಗಿರುವನೆಂಬ ರೂಪಬಾಹುಲ್ಯವು, ಭಾಗವತಾದಿ ಸ್ಮೃತಿಗಳಿಂದ ಸಹ, ಸಿದ್ಧವಾಗುತ್ತದೆ (೫೦೩).

**ಪ್ರಾದೇಶಗಾತ್ರತೋಕ್ತ್ಯೈಷಾಂ ಪ್ರೋಕ್ತಾ ಮಧ್ಯಮಮಾನತಾ ।**
**ತತ್ತದಂಗುಲಿಮಾನಾನಾಂ ಪ್ರೋಕ್ತಾ ಚಾಲ್ಪಾಲ್ಪಮಾನತಾ ॥ ೫೦೪ ॥**

ಬೇರೆ ರೀತಿಯಿಂದಲೂ ಭೇದಪ್ರಸಕ್ತಿಯನ್ನು ಪ್ರದರ್ಶಿಸುತ್ತಾರೆ:—

ಪ್ರಾದೇಶಗಾತ್ರತೋಕ್ತ್ಯಾ—ಪ್ರಾದೇಶಮಾತ್ರ ಆಕಾರವನ್ನು ಹೇಳುವುದರಿಂದ,[1] ಏಷಾಂ—ಈ (ಪುರುಷ) ರೂಪಗಳಿಗೆ, ಮಧ್ಯಮಮಾನತಾ—ಮಧ್ಯಮ ಪ್ರಮಾಣವು (ಅಳತೆಯು), ಪ್ರೋಕ್ತಾ—ಹೇಳಲ್ಪಟ್ಟಿದೆ (ಇದಕ್ಕಿಂತ ಅಧಿಕ ವ್ಯಾಪ್ತಿಯುಳ್ಳ ರೂಪಗಳಿಂದ ಈ ರೂಪಗಳು ಭಿನ್ನವೆಂಬ ಶಂಕೆಗೆ ಅವಕಾಶವಾಗುತ್ತದೆ); (ಬೇರೆ ವಿಧದಿಂದ ಸಹ ಭೇದವು ಪ್ರಸಕ್ತವಾಗುತ್ತದೆ—ಹೇಗೆಂದರೆ,) ತತ್ತದಂಗುಲಿಮಾನಾನಾಂ – ಅವರವರ (ದೇವ ಮಾನವಾದಿ ಜೀವರ) ಅಂಗುಲಿಗಳಿಗೆ (ಅಂಗುಲಿಗಳ ಮಾನದಲ್ಲಿ), ಅಲ್ಪಾಲ್ಪಮಾನತಾ ಚ—ಅಲ್ಪಾಲ್ಪ ಪ್ರಮಾಣವೂ, ಪ್ರೋಕ್ತಾ—ಹೇಳಲಾಗಿದೆ (ಇದರಿಂದಲೂ, ರೂಪಗಳಲ್ಲಿ ಪರಸ್ಪರ ಭೇದವು ಪ್ರಾಪ್ತವಾಗುತ್ತದೆ.

**ಸ್ಥಾನಭೇದೇನ ರೂಪಾನಂತ್ಯಾಚ್ಚಾತ್ಯಲ್ಪಪ್ರಮಾಣತಃ ।**
**ಪೂರ್ವೋಕ್ತವ್ಯಾಪ್ತಪುರುಷಾದ್ರೂಪಾಣಾಂ ಭೇದಶಂಕಿನೀ ॥ ೫೦೫ ॥**

---

'ಪ್ರಾದೇಶ ಮಾತ್ರಂ ಪುರುಷಂ ವಸಂತಂ' ಇತ್ಯಾದಿ ಭಾಗವತ ವಾಕ್ಯಗಳಲ್ಲಿ, ಪ್ರಾದೇಶಮಾತ್ರ ಪ್ರಮಾಣವುಳ್ಳ ಆಕಾರವುಳ್ಳ ಪುರುಷನು ಮನುಷ್ಯ ದೇಹಗಳಲ್ಲಿ ವಾಸಿಸುವನೆಂದು ಹೇಳಲಾಗುತ್ತದೆ; ಈ ಮಧ್ಯಮ ಪರಿಮಿತಿಯುಳ್ಳ ಆಕಾರಗಳು, ಭಿನ್ನಪ್ರಮಾಣದ ಆಕಾರಗಳುಳ್ಳ ರೂಪಗಳಿಂದ ಭೇದವನ್ನು ಸೂಚಿಸುತ್ತವೆ; ದೇವಮಾನವಾದಿ ದೇಹಗಳ ಅಂಗುಲಿಗಳ ಪ್ರಮಾಣದಲ್ಲಿಯೂ ಭೇದವಿದೆ; ಇದರಿಂದ ಸಹ, ಪುರುಷರೂಪಗಳಲ್ಲಿ (ಪ್ರಾದೇಶವು ದೇಹದ ಪ್ರಮಾಣಕ್ಕೆ ಸಂಬಂಧಿಸಿ, ಅಂಗುಲಿಗಳಿಂದ ತಿಳಿಯಲ್ಪಡುವುದರಿಂದ) ಪರಸ್ಪರ ಭೇದವೂ ಉಂಟೆಂದು ಪ್ರಾಪ್ತವಾಗುತ್ತದೆ (೫೦೪). ಸಹಸ್ರಶೀರ್ಷಾದಿಗಳುಳ್ಳದ್ದೆಂಬ ಪುರುಷನ ವ್ಯಾಪ್ತರೂಪದಿಂದ, ಭಿನ್ನಸ್ಥಲಗಳಲ್ಲಿ,

---

[1] ಪ್ರಾದೇಶವೆಂದರೆ, ಒಂದು ಚೋಟುದ್ದದ ಅಳತೆ; ಪ್ರಾದೇಶಕ್ಕಿಂತ ಅಧಿಕ ಪ್ರಮಾಣದ ರೂಪಗಳು ಮಹದ್ರೂಪಗಳೆಂದೂ, ಕಡಿಮೆ ಪ್ರಮಾಣದವು ಅಣುರೂಪಗಳೆಂದೂ ವ್ಯವಹರಿಸಲ್ಪಡುತ್ತದೆ—ಭಗವದ್ರೂಪಗಳ ಧ್ಯಾನಪ್ರಸಂಗದಲ್ಲಿ ಈ ಮಾನ (ಅಳತೆ) ವು ಪ್ರಸಕ್ತವಾಗುತ್ತದೆ.

**ಶ್ರುತಿಃ ಪುರುಷ ಏವೇದಂ ಸರ್ವಂ ರೂಪಕದಂಬಕಂ ।**
**ಇತ್ಯಭಿನ್ನತ್ವಮಾಹೈಷಾಂ ಪ್ರಾಕ್ ಸ್ವೋಕ್ತವ್ಯಾಪ್ತಪೂರುಷಾತ್ ॥**
**॥ ೫೦೬ ॥**

ಉಕ್ತವಾದುದನ್ನು ಸಂಗ್ರಹಿಸಿ ಹೇಳುತ್ತಾರೆ :—

ಪೂರ್ವೋಕ್ತವ್ಯಾಪ್ತಪುರುಷಾತ್ – ('ಸಹಸ್ರಶೀರ್ಷಾ' ಎಂದೂ, 'ಸ ಭೂಮಿಂ ವಿಶ್ವತೋವೃತ್ವಾ' ಎಂದೂ) ಹಿಂದೆ ಹೇಳಲಾದ ಸರ್ವವ್ಯಾಪ್ತ ಪುರುಷನ ದೆಶೆಯಿಂದ, ಸ್ಥಾನಭೇದೇನ–ಸ್ಥಾನ ವ್ಯತ್ಯಾಸದಿಂದಲೂ, ಅತ್ಯಲ್ಪ ಪ್ರಮಾಣತಃ–ಅಲ್ಪ ಪರಿಮಿತಿ (ಪ್ರಮಾಣ) ವುಳ್ಳವಾದ್ದರಿಂದಲೂ, ರೂಪಾ-ನಂತ್ಯಾತ್ ಚ–ಅಸಂಖ್ಯರೂಪಗಳಿರುವುದರಿಂದಲೂ, ರೂಪಾಣಾಂ–ಈ ಅನಂತ ರೂಪಗಳಿಗೆ, ಭೇದಶಂಕಿನೀ–(ದೇಹಾಂತರ್ಯಾಮಿ) ರೂಪಗಳಿಗೆ ಮತ್ತು (ಉಪಲಕ್ಷಣದಿಂದ ಪರಸ್ಪರವಾಗಿ ಸಹ), ಭೇದವನ್ನು ಶಂಕಿಸಿ (ಭಿನ್ನಗಳೆಂಬ ಸಂಶಯವನ್ನು ಊಹೆಯಿಂದ ಆರೋಪಿಸಿ ; ಶ್ರುತಿಃ – ವೇದವು, ಪುರುಷ ಏವೇದಂ ಸರ್ವಂ– ಈ ಎಲ್ಲವೂ ಪುರುಷನೇ, ಇತಿ–ಎಂದು, ರೂಪಕದಂಬಕಂ– ಬಹುರೂಪಗಳ ಸಮೂಹವನ್ನು (ಸರ್ವಂ ಎಂಬುದರ ವಿವರಣೆಯಿದು), ಏಷಾಂ–ಇವೆಲ್ಲವುಗಳ, ಪ್ರಾಕ್ – ಹಿಂದೆ, ಸ್ವೋಕ್ತಪುರುಷಾತ್ – ತಾನೇ ಹೇಳಿದ ಪುರುಷನಿಂದ, ಅಭಿನ್ನತ್ವಂ–ಐಕ್ಯವನ್ನು (ಒಂದೇ ಎಂದು), ಆಹ– ಹೇಳಿತು (ಹೇಳುತ್ತದೆ).[1]

**ಭೇದಾಭೇದಾದಿಶಂಕಾಯಾ ವಾರಣಾಯಾವಧಾರಣಂ ॥ ೫೦೭ ॥**

---

ಅಲ್ಪಾಲ್ಪತರ ಪ್ರಮಾಣದ ಅಸಂಖ್ಯರೂಪಗಳಿರುವುದರಿಂದ ಅವುಗಳ ಭೇದ ವನ್ನೂ ಅವುಗಳಲ್ಲಿ ಪರಸ್ಪರ ಭೇದವನ್ನೂ, ಊಹೆಯಿಂದ ಆರೋಪಿಸಿ, 'ಪುರುಷ ಏವೇದಂ ಸರ್ವಂ' ಎಂಬ ವಾಕ್ಯವು ಪೂರ್ವೋಕ್ತವ್ಯಾಪ್ತ ಪುರುಷ ರೂಪದಿಂದ, ಅನಂತರೂಪಗಳು ಅಭಿನ್ನಗಳೆಂದು (ಎಲ್ಲವೂ ಒಂದೇ— ಪುರುಷನೇ) ಎಂದೂ ಹೇಳುತ್ತದೆ (೫೦೫–೫೦೬). 'ಪುರುಷ ಏವೇದಂ' ಎಂಬಲ್ಲಿರುವ 'ಏವ'ಕಾರವು, ಪುರುಷನಿಗೆ ಅಂಶ, ಅಂಶಿ ಭಾವದಿಂದ

---

[1] ದೇಹಾಂತರ್ಯಾಮಿ ರೂಪಗಳು ಮತ್ತು ತದಿತರ ಅನಂತರೂಪಗಳಲ್ಲಿ ಯಾವ ಭೇದವನ್ನೂ ತಿಳಿಯಕೂಡದೆಂದು ಹೇಳುತ್ತದೆ.

ಅವಧಾರಣಂ—' ಪುರುಷ ಏವ ' ಎಂಬಲ್ಲಿರುವ ಏವ ಶಬ್ದವು, ಭೇದಾಭೇದಾದಿಶಂಕಾಯಾಃ – ಅಂಶಾಂಶಿಭಾವದಿಂದ ಉಂಟಾಗುವ ಭೇದಾಭೇದ ಶಂಕೆ ಮತ್ತು ಆದಿ ಪದದಿಂದ ಸೂಚಿತವಾದ ಅಂಶರೂಪಗಳಿಗೆ ಅಲ್ಪಶಕ್ತಿತ್ವವುಳ್ಳವುಗಳೆಂಬ ಸಂಶಯಗಳ, ವಾರಣಾಯ – ನಿವಾರಣೆಗಾಗಿ (ಪರಿಹರಿಸಲಿಕ್ಕಾಗಿ) ಇರುತ್ತದೆ (ಏವ ಶಬ್ದವಿರುತ್ತದೆ).

**ಆವಿರ್ಭಾವಾತ್ತಿರೋಭಾವಾತ್ ಭೂತಂ ಭವ್ಯಂ ಭವಚ್ಚ ತತ್ ।**
**ಭೂತಭವ್ಯಭವದ್ದೇಹೇ ಯದ್ರೂಪಂ ಪರಮಾತ್ಮನಃ ॥ ೫೦೮ ॥**

ಹೇಳಲಾದ ಭಗವದ್ರೂಪಗಳಿಗೆ ಭೂತ, ವರ್ತಮಾನ, ಭವಿಷ್ಯತ್ಕಾಲಗಳಲ್ಲಿರುವಿಕೆಯನ್ನು (ತ್ರಿಕಾಲ–ನಿತ್ಯಸ್ಥಿತಿಯನ್ನು) ಉಪಪಾದಿಸುತ್ತಾರೆ:—

ಭೂತಭವ್ಯಭವದ್ದೇಹೇ–ತ್ರಿಕಾಲಗಳಲ್ಲಿರುವ ದೇಹಗಳಲ್ಲಿ (' ದೇಹೇ ' ಎಂಬುದು ಜಾತ್ಯೇಕವಚನವು), ಪರಮಾತ್ಮನಃ–ಶ್ರೀವಿಷ್ಣುವಿನ, ಯದ್ರೂಪಂ–ಯಾವ ರೂಪಗಳೋ, ತತ್–ಆ ರೂಪವೇ, ಭೂತಂ ಭವ್ಯಂ–ಭೂತಭವಿಷ್ಯತ್ಕಾಲಗಳಲ್ಲಿಯೂ, ಚ–ಹಾಗೂ, ಭವತ್–ವರ್ತಮಾನ ದೇಹಗಳಲ್ಲಿಯೂ, (ಇರುತ್ತದೆ) ; ಆವಿರ್ಭಾವಾತ್–(ವರ್ತಮಾನ ದೇಹಗಳಲ್ಲಿ) ಪ್ರಕಟವಾಗಿರುವುದರಿಂದ ಮತ್ತು, ತಿರೋಭಾವಾತ್ – ಭೂತಭವ್ಯ ದೇಹಗಳಲ್ಲಿ ತಿರೋಧಾನ ಹೊಂದಿರುವುದರಿಂದ (ಆ ಭಗವದ್ರೂಪಗಳು ತ್ರಿಕಾಲಗತ ದೇಹಗಳಲ್ಲಿಯೂ ಇರುತ್ತವೆಂದು ತಿಳಿಯಬೇಕು).[1]

---

(ಅನಂತಾಂಶಗಳಿಂದ ಅನಂತರೂಪಿಯಾಗಿರುವನೆಂಬ ಕಾರಣದಿಂದ) ಉಂಟಾಗುವ ಭೇದಾಭೇದ (ಭೇದವೂ ಅಭೇದವೂ ಎರಡೂ ಉಂಟೆಂಬ) ರೂಪದ ಶಂಕೆಯನ್ನು ಪರಿಹರಿಸುತ್ತದೆ ; ಅಂಶಾಂಶಿಗಳಲ್ಲಿ ಪೂರ್ಣಶಕ್ತಿತ್ವಾದಿ ಗುಣಗಳಲ್ಲಿ ಸಹ ಅತ್ಯಂತ ಅಭೇದವನ್ನೂ 'ಏವ'ಕಾರವು ಸಮರ್ಥಿಸುತ್ತದೆ (೫೦೭). ಭೂತಕಾಲ, ಭವಿಷ್ಯತ್ಕಾಲ ಮತ್ತು ವರ್ತಮಾನಕಾಲಗಳೆಂಬ ತ್ರಿಕಾಲಗಳಲ್ಲಿ

---

[1] ಯದ್ಯಪಿ ಶ್ರುತಿಯಲ್ಲಿ ಭೂತಭವ್ಯ (ಭೂತಭವಿಷ್ಯತ್ಕಾಲ) ದೇಹಗಳನ್ನು ಮಾತ್ರ ನಿರೂಪಿಸಲಾಗಿದೆ ; ಇದರ ಸಮಾಖ್ಯಾರೂಪದ ಭಾಗವತ ವಾಕ್ಯವು (ಶ್ರುತಿವ್ಯಾಖ್ಯಾನರೂಪದ ಸ್ಮೃತಿವಾಕ್ಯವು) ' ಸರ್ವಂ ಪುರುಷ ಏವೇದಂ ಭೂತಂ ಭವ್ಯಂ ಭವಚ್ಚಯತ್ । ' ಎಂದು ವರ್ತಮಾನ ದೇಹಗಳನ್ನು ಹಿಡಿದಿರುವುದರಿಂದ, ತ್ರಿಕಾಲ ದೇಹಗಳಲ್ಲಿ ಸ್ಥಿತವಾದ ಭಗವದ್ರೂಪಗಳನ್ನೇ ತಿಳಿಯಬೇಕು.

**ವಿಶೇಷಶಕ್ತ್ಯಾ ಸರ್ವಂ ಚ ನಿರ್ವೋಢುಂ ಶಕ್ಯತೇ ಕಿಲ ।**
**ಪೂರ್ವೋತ್ತರವಿರುದ್ಧೋಽರ್ಥಃ ಶ್ರುತೇರೇವಂ ಭವೇನ್ಮಮ ॥ ೫೦೯ ॥**

ಸರ್ವಂ – ಎಲ್ಲವನ್ನೂ (ಎಂದರೆ, ತಿರೋಧಾನ ಆವಿರ್ಭಾವ, ಅಲ್ಪ ಪರಿಮಾಣ—ಮಹತ್ಪರಿಮಾಣ, ಅವಯವ—ಅವಯವಿ, ಭಾವಗಳೆಲ್ಲವನ್ನು), ಪೂರ್ವೋತ್ತರವಿರುದ್ಧಃ ಅರ್ಥಃ–ಹಿಂದುಮುಂದಿನ ವಾಕ್ಯಗಳ (ಎಲ್ಲ) ಅರ್ಥ ವಿರೋಧವೂ, ವಿಶೇಷಶಕ್ತ್ಯಾ–ವಿಶೇಷ ಬಲದಿಂದ,[1] ನಿರ್ವೋಢುಂ–ನಿರ್ವಹಿಸ ಲಿಕ್ಕೆ (ಬುದ್ಧಿಯು ಗ್ರಹಿಸುವಂತೆ ಮಾಡಿಕೊಳ್ಳಲು), ಶಕ್ಯತೇ ಕಿಲ–ಸಾಧ್ಯ ವಾಗುತ್ತದೆಂಬುದು ಸ್ಪಷ್ಟವೇ ಇದೆ (ಈ ಹಿಂದೆ ಈ ವಿಶೇಷ ಶಕ್ತಿಯ ಪ್ರಸಕ್ತಿ ಯಲ್ಲಿ ಈ ಪ್ರಕ್ರಿಯೆಯನ್ನು ವಿವರಿಸಲಾಗಿದೆ) ; ಮಮ–ನನಗೆ (ನನ್ನ ಮತ ದಲ್ಲಿ), ಶ್ರುತೇಃ – ಶ್ರುತಿಗೆ (ವಿರುದ್ಧೋಽರ್ಥಃ – ಹಿಂದುಮುಂದಿನ ವಾಕ್ಯಗಳ ಅರ್ಥವಿರೋಧವು), ಏವಂ–ಉಕ್ತಪ್ರಕಾರದಿಂದ ಪರಿಹಾರವಾಗಿ, ಭವೇತ್– ಸಂಗತವಾಗುತ್ತದೆ.

---

(ಸೃಷ್ಟವಾಗಿ, ನಾಶ ಹೊಂದುವ) ಎಲ್ಲ ಪ್ರಾಣಿದೇಹಗಳಲ್ಲಿರುವ ಪರಮಾತ್ಮನ ಅನಂತಾನಂತ ರೂಪಗಳು, ಆ ದೇಹಗಳು ಉತ್ಪತ್ತಿ ನಾಶಗಳುಳ್ಳವಾದರೂ, ನಿತ್ಯವಾಗಿ ತ್ರಿಕಾಲದಲ್ಲಿಯೂ ಇರುತ್ತವೆ ; ದೇಹಗತವಾದ ಈ ಭಗವದ್ರೂಪ ಗಳು, ಆವಿರ್ಭಾವ (ಪ್ರಕಟವಾಗುವಿಕೆ) ತಿರೋಭಾವ (ಮರೆಯಾಗುವುದು) ಎಂಬ ಸ್ಥಿತಿವಿಶೇಷಗಳುಳ್ಳವಾಗಿ, ಎಲ್ಲ ಕಾಲದಲ್ಲಿರುವ ನಿತ್ಯರೂಪಗಳೇ ಆಗಿವೆ(೫೦೮). ಅಭೇದವಿದ್ದಲ್ಲಿ ಭೇದವಿದ್ದಂತೆ ವ್ಯವಹರಿಸಲು ಅವಕಾಶಕೊಡುವ ಒಂದು ಶಕ್ತಿಯು, ವಿಶೇಷವೆಂದು ಕರೆಯಲ್ಪಡುತ್ತದೆ; ಇದು ಪರಮಾತ್ಮನಲ್ಲಿ ಅಚಿಂತ್ಯವಾದ ಅದ್ಭುತರೂಪದಿಂದಿದ್ದು, ಅವಯವ ಅವಯವಿ, ಅಲ್ಪ ಮಹತ್ಪರಿ ಮಾಣಗಳು, ಆವಿರ್ಭಾವ ತಿರೋಭಾವಗಳೆಂಬ ಮುಂತಾದ ಅರ್ಥವಿರೋಧ ವನ್ನೂ, ಹಿಂದುಮುಂದಿನ ವಾಕ್ಯಗಳಲ್ಲಿ ತೋರುವ (ತೋರಬಹುದಾದ) ವಿರುದ್ಧಾರ್ಥಗಳನ್ನೂ, ನಿರ್ವಹಿಸಲು (ವಿರೋಧವಿಲ್ಲದಂತೆ ಗ್ರಹಿಸಲು) ಸಹಾಯಕವಾಗುತ್ತದೆ (೫೦೯).

---

1 ಭಗವಂತನ ಅಚಿಂತ್ಯಾದ್ಭುತಶಕ್ತಿಯಿಂದಲೂ, ಅಭೇದವಿದ್ದಲ್ಲಿ ಭೇದವ್ಯವಹಾರಕ್ಕೆ ಅವಕಾಶಕೊಡುವುದೆಂಬ ಸ್ವಭಾವ (ಸಹಜವಾದ) ವಿಶೇಷವೆಂದು ವ್ಯವಹರಿಸಲಾಗುವ ವಸ್ತುಧರ್ಮದ ಬಲದಿಂದಲೂ, ಈ ಎಲ್ಲವನ್ನೂ ನಿರ್ವಹಿಸಲು ಸಾಧ್ಯವಾಗುತ್ತದೆ.

**ಪೂರ್ವೋತ್ತರವಿರುದ್ಧಾರ್ಥಃ ಸ್ವತಶ್ಚ ವ್ಯಾಹತಸ್ತವ ॥ ೫೧೦ ॥**

ತವ–ನಿನಗೆ (ನಿನ್ನ ಮತದಂತೆ), ಪೂರ್ವೋತ್ತರವಿರುದ್ಧಾರ್ಥಃ–ಹಿಂದು ಮುಂದಿನ ವಾಕ್ಯಗಳ ಅರ್ಥವಿರೋಧವು, ಸ್ವತಃ–ತಾನಾಗಿಯೇ, ವ್ಯಾಹತಃ– 'ಪುರುಷ ಏವೇದಂ ಸರ್ವಂ' ಎಂಬುದರ ವಿರೋಧವು (ಸಿದ್ಧವಾಗುತ್ತದೆ).

**ಸ್ಥಾನಸ್ಥಾನಿತ್ವಕಥನಾಜ್ಜ್ಯಾಯಸ್ತ್ವೇಶತ್ವಕೀರ್ತನಾತ್ ।**
**ಜಡಾರ್ಥಸ್ಯಾಪಿ ಸರ್ವತ್ವಾತ್ ಕಥಮೈಕ್ಯಾರ್ಥತಾ ವದ ॥ ೫೧೧ ॥**

ಅದನ್ನೇ ಸ್ಪಷ್ಟಗೊಳಿಸುತ್ತಾರೆ :—

ಸ್ಥಾನಸ್ಥಾನಿತ್ವಕಥನಾತ್ – ('ಸ ಭೂಮಿಂ ವಿಶ್ವತೋ') ಎಂಬುದರ ದಿಂದ ಸ್ಥಾನವನ್ನೂ, ಅದನ್ನು ವ್ಯಾಪಿಸಿ ನಿಂತಿರುವ ಬ್ರಹ್ಮನಿಗೆ (ಪರಮಾತ್ಮ ನಿಗೆ—ಪುರುಷನಿಗೆ) ಸ್ಥಾನವುಳ್ಳತನವನ್ನೂ ಹೇಳುವುದರಿಂದ (ಇದರಿಂದ 'ಪುರುಷ ಏವೇದಂ' ಎಂಬುದರ ಐಕ್ಯಾರ್ಥ ವಿರೋಧವು ಪೂರ್ವವಾಕ್ಯಕ್ಕೆ ತೋರಿಸಲ್ಪಟ್ಟಿತೆಂದೂ), ಜ್ಯಾಯಸ್ತ್ವೇಶತ್ವಕಥನಾತ್–ಶ್ರೇಷ್ಠತ್ವ, ನಿಯಾಮ ಕತ್ವಗಳನ್ನು ಹೇಳಿರುವುದರಿಂದಲೂ (ಇದರಿಂದ ಉತ್ತರವಾಕ್ಯದ ವಿರೋಧವು ತೋರಿಸಲ್ಪಟ್ಟಿತೆಂದೂ), ಜಡಾರ್ಥಸ್ಯ ಅಪಿ – (ಸಕಲ) ಜಡವಸ್ತುಗಳಿಗೆ ಸಹ, ಸರ್ವತ್ವಾತ್–ಸರ್ವತ್ವವಿರುವುದರಿಂದ (ಸರ್ವಶಬ್ದಬೋಧ್ಯ ವಸ್ತುಗಳಲ್ಲಿ ಜಡವೂ ಸೇರುವುದರಿಂದ) (ಇದರಿಂದ ಸ್ವಮತವಿರೋಧವೂ—ಮಾಯಾ ವಾದಿಯು ಬ್ರಹ್ಮನು ಜಡನೆಂದು ಒಪ್ಪುವುದಿಲ್ಲ) ; ಕಥಂ – ಹೇಗೆ,

---

ನಿನಗಾದರೋ (ಮಾಯಾವಾದಿಗೆ) ಪೂರ್ವೋತ್ತರ ವಾಕ್ಯಗಳ ಅರ್ಥವಿರೋಧವು ತಪ್ಪಿದ್ದಲ್ಲ; 'ಪುರುಷ ಏವೇದಂ ಸರ್ವಂ' ಎಂಬುದು ಐಕ್ಯ ವನ್ನು ಹೇಳುತ್ತದೆ ಎಂದರೆ, ಹಿಂದಿನ ಮತ್ತು ಮುಂದಿನ (ಮುಕ್ತೇಶತ್ವಾದಿ) ವಾಕ್ಯಗಳ ವ್ಯಾಹತಿಯು ತಪ್ಪುವುದಿಲ್ಲ ; ಎಂದರೆ ಅವು ಭಗ್ನಗೊಳ್ಳುತ್ತವೆ— ವ್ಯರ್ಥವಾಗುತ್ತವೆಂದರ್ಥ (೫೧೦). ಸ್ಥಾನ ಮತ್ತು ಸ್ಥಾನದಲ್ಲಿರುವಿಕೆಗಳನ್ನು ಪುರುಷನಿಗೆ ಪೂರ್ವವಾಕ್ಯವು ಹೇಳುತ್ತದೆ; ಶ್ರೇಷ್ಠತ್ವ (ಜ್ಯಾಯಸ್ತ್ವ) ಮತ್ತು ನಿಯಾಮಕತ್ವಗಳನ್ನು ಉತ್ತರವಾಕ್ಯವು ಹೇಳುತ್ತದೆ; ಈ ಅರ್ಥಗಳು 'ಪುರುಷ ಏವೇದಂ ಸರ್ವಂ' ಎಂದು ಐಕ್ಯವನ್ನು ಹೇಳುವುದೆಂಬ ವಾಕ್ಯವು ವಿರೋಧಿಸಿ ವ್ಯರ್ಥಗೊಳಿಸುತ್ತದೆ; ಸರ್ವಶಬ್ದವಾಚ್ಯ ವಸ್ತುಗಳಲ್ಲಿ ಸಮಾವೇಶಗೊಳ್ಳುವ

ಐಕ್ಯಾರ್ಥತಾ–('ಪುರುಷ ಏವೇದಂ ಸರ್ವಂ' ಎಂಬ ವಾಕ್ಯಕ್ಕೆ) ಸರ್ವೈಕ್ಯವೆಂಬ (ಎಲ್ಲವೂ ಪುರುಷನೇ ಎಂಬ) ಅರ್ಥವು, ವದ–(ನೀನೇ) ಹೇಳು.[1]

**ಭೇದಸೌರಭಸರ್ವಸ್ವೇ ಸ್ಯಾದಸ್ಯಾರ್ಥಸ್ಯ ವಿಸ್ತೃತಿಃ ।**
**ಶುದ್ಧ್ಯುದ್ಧಾರೇ ತದುದ್ಧಾರಸ್ತ್ವನ್ಯೋನ್ಯಮತಿಮಿಶ್ರಣಾತ್ ॥ ೫೧೨ ॥**

ಅಭೇದಖಂಡನೆಯು ಭೇದಸೌರಭದಲ್ಲಿ ಕರ್ತವ್ಯವಾದ್ದರಿಂದ, ಈ ಶುದ್ಧಿಸೌರಭದಲ್ಲಿ ಹೆಚ್ಚು ವಿಸ್ತರಿಸದೇ ಉಪರಮಿಸುತ್ತಾರೆ:—

ಅಸ್ಯ ಅರ್ಥಸ್ಯ–ಅಭೇದಖಂಡನೆಯ ಅರ್ಥದ, ವಿಸ್ತೃತಿಃ–ವಿಸ್ತಾರವು, ಭೇದಸೌರಭಸರ್ವಸ್ವೇ – (ಮುಂದಿನ) ವಿಸ್ತಾರವಾದ ಭೇದಸೌರಭದಲ್ಲಿ, ಸ್ಯಾತ್–ಆಗುತ್ತದೆ (ಮಾಡಲ್ಪಡುತ್ತದೆ); ಶುದ್ಧ್ಯುದ್ಧಾರೇ–ಶುದ್ಧಿಸೌರಭದಲ್ಲಿ,

---

ಜಡಪದಾರ್ಥಗಳೆಲ್ಲವೂ ಪುರುಷನಿಂದ ಅಭಿನ್ನಗಳೆಂದು ಪ್ರಾಪ್ತವಾಗುತ್ತದೆ; ಹೀಗಿರುವಾಗ, ಈ ವಾಕ್ಯಕ್ಕೆ ಸರ್ವೈಕ್ಯವೆಂಬ ಅರ್ಥವು ಹೇಗೆಂದು ನೀನೇ ಹೇಳು? (ಬ್ರಹ್ಮನು ಜಡನೆಂದು ನೀನೂ ಒಪ್ಪುವುದಿಲ್ಲವಷ್ಟೆ) (೫೧೧).[2] ಈ ಅಭೇದಖಂಡನೆಯು, ಮುಂದಿನ ಭೇದಸೌರಭದಲ್ಲಿ ವಿಸ್ತಾರವಾಗಿ ಪ್ರಸಕ್ತವಾಗಲಿದೆ; ಈ ಶುದ್ಧಿಸೌರಭದಲ್ಲಿ, ವಿಚಾರಕ್ಕೊಳಗಾಗುವ ಕಾರಣವು,

---

[1] ಉಕ್ತ ವ್ಯಾಖ್ಯಾನವನ್ನು ಉಪಲಕ್ಷಣವೆಂದು ತಿಳಿಯಬೇಕು; ಬೇರೆ ರೀತಿಯ ಪ್ರತಿಪಾದನೆಯು ಹೀಗಿರುತ್ತದೆ:—ಪೂರ್ವವಾಕ್ಯವು 'ಸಹಸ್ರಶೀರ್ಷಾ' ಇತ್ಯಾದಿಯಾಗಿ ಪ್ರತಿಪಾದ್ಯ ಪುರುಷನು ನಾನಾ ಶಿರ ಮುಖ ಪಾದಾದಿ ಅವಯವಗಳುಳ್ಳವನೆಂದು ಹೇಳಿ, ಭಗವಂತನ ಅವಯವಗಳಿಗೆ ಭಗವಂತನಿಂದ ಭೇದವೆಂಬ ಶಂಕೆಗೆ ಅವಕಾಶಕೊಡುತ್ತದೆ; ಆದರೆ ಮುಂದೆ 'ಮುಖಂ ಕಿಮಸ್ಯ ಕೌ ಬಾಹೂ' ಇತ್ಯಾದಿ ವಾಕ್ಯವು, ಭಗವಂತನ ಕರಣಚರಣಾದಿಗಳೆಲ್ಲವೂ ಪುರುಷನೇ ಎಂದು ಹೇಳಿ ಅತ್ಯಂತ ಅಭೇದವನ್ನೇ (ಅವಯವ, ಅವಯವಿ ಭೇದವನ್ನು ತಿರಸ್ಕರಿಸಿ) ಹೇಳುತ್ತದೆ; ಈ ಮುಂತಾದ ಭಗವಂತನಲ್ಲಿ ಸಂಭಾವ್ಯಗಳೆಂಬ ಶಂಕೆಗಳನ್ನು ಪರಿಹರಿಸಿ (ನಿರಾಕರಿಸಿ) 'ಪುರುಷ ಏವೇದಂ ಸರ್ವಂ' ಎಂಬ ವಾಕ್ಯವು ಅತ್ಯಂತ ಅಭೇದವನ್ನು ಸಾರುತ್ತದೆ; ಭಗವದ್ರೂಪಾದಿಪರವಾಗಿ ಈ ಸೂಕ್ತದಲ್ಲಿ ಪ್ರಯೋಗಿಸಿರುವ 'ಇದಂ' ಶಬ್ದವೂ ಯುಕ್ತವಾಗುತ್ತದೆ; ಪರನಿಗೆ 'ಇದಂ' ಶಬ್ದವು ಬಾಹ್ಯಜಡಜಗತ್ಪರವಾಗುವುದರಿಂದ, ಯುಕ್ತವಾಗುವುದಿಲ್ಲ (ಶೋಭಿಸುವುದಿಲ್ಲ) ಆದ್ದರಿಂದ ಸಹ ಈ ವ್ಯಾಖ್ಯಾನವೇ ಆದರಣೀಯವು.

[2] ಜಡವು ಮಿಥ್ಯಾ—ಅದು ಇರುವುದೇ ಅಲ್ಲವೆಂದರೆ, ಬ್ರಹ್ಮನೂ ಅದರಂತೆ ಶೂನ್ಯನೆಂದೇ ಹೇಳಿದಂತಾಗುತ್ತದೆ.

ತದುದ್ಧಾರಃ – ಭೇದಸಮರ್ಥನೆಯು, ಅತಿಮಿಶ್ರಣಾತ್–(ಭಗವಂತನ ಗುಣ ಪೂರ್ಣತ್ವ ವಿಷಯವು) ಈ ಉಭಯ ಸೌರಭಗಳಲ್ಲಿ ಕೂಡಿಯೇ ಪ್ರಸಕ್ತವಾಗು ವುದರಿಂದ (ವಿಷಯಮಿಶ್ರಣನಿಮಿತ್ತವಾಗಿ ಇಲ್ಲಿಯೂ ವಿಚಾರಕೈಕೊಳಗಾಗಿದೆ).

**ಅತೋ ವಿಚಾರವಾತೋಽಯಂ ಸೌರಭೇ ಸೌರಭಾಂತರಂ ।**
**ಸಂಯೋಜಯತಿ ತದ್ಗಂಧಃ (ತದ್ಗ್ರಂಥಃ)ಸೋಽಯಂ**
**ಜನಮನೋಹರಃ ॥ ೫೧೩ ॥**

ಅತಃ – (ಆದ್ದರಿಂದ) ಭಗವದ್ಗುಣಗಳು ಅನ್ಯೋನ್ಯವಾಗಿ ಈ ಎರಡೂ ಸೌರಭಗಳಲ್ಲಿ ಸೇರುವುದರಿಂದ, ಅಯಂ–ಈ, ವಿಚಾರವಾತಃ–ವಿಚಾರವೆಂಬ ಗಾಳಿಯು, ಸೌರಭೇ – ಈ ಸೌರಭದಲ್ಲಿದ್ದು, ತದ್ಗಂಧಃ – ಅದರ ಗಂಧವು, ಸೌರಭಾಂತರಂ–ಮುಂದಿನ ಭೇದಸೌರಭವನ್ನು, ಸಂಯೋಜಯತಿ–ಕೂಡಿಸು ತ್ತದೆ (ಸಂಬಂಧವನ್ನು ಹೊಂದಿಸುತ್ತದೆ) (ಮುಂದಿನ ಸೌರಭ ಪ್ರಮೇಯವನ್ನು ಪ್ರಸಂಗಾನುಸಾರವಾಗಿ ಸೇರಿಸುತ್ತದೆ) ; ಸಃ ಅಯಂ – ಈ ವಿಷಯವು, ಜನ ಮನೋಹರಃ–ಜನರ ಮನಸ್ಸನ್ನು ಹರ್ಷಗೊಳಿಸುತ್ತದೆ (ಅಲ್ಲಲ್ಲಿ ಪ್ರಸಂಗದಿಂದ ಉದಯಿಸುವ ಸಂಶಯಗಳ ಪರಿಹಾರಕವಾಗಿ, ಆನಂದಪ್ರದವೂ ಆಗುತ್ತದೆ).

**ತಥಾಪಿ ತತ್ತದರ್ಥಸ್ಯ ತತ್ರತತ್ರ ವಿಶೇಷತಃ ।**
**ವಿಚಾರಣಾತ್ ಸೌರಭಾಣಾಂ ಸರ್ವಸ್ವಂ ಭಾತಿ ಪಂಚಧಾ ॥ ೫೧೪ ॥**

ಹಾಗಾದರೆ ಸೌರಭಭೇದಗಳೇಕೆಂದರೆ ಹೇಳುತ್ತಾರೆ :—

ತಥಾಪಿ–ಹೀಗಿದ್ದರೂ (ಒಂದೇ ವಿಷಯಕ್ಕೆ ಸಂಬಂಧಿಸಿದ ವಿಚಾರವು ಭಿನ್ನಸೌರಭಗಳಲ್ಲಿ ಪ್ರಸಕ್ತವಾದರೂ), ತತ್ತದರ್ಥಸ್ಯ – ಆಯಾ ಸೌರಭಗಳ

---

ಈ ಎರಡೂ ಸೌರಭಗಳಲ್ಲಿ ಭಗವಂತನ ಗುಣಪೂರ್ತಿತ್ವವು, ಮಿಶ್ರವಾಗಿ ಪ್ರಸಕ್ತವಾಗಿರುವುದೇ ಆಗಿರುತ್ತದೆ (೫೧೨). ಉಭಯ ಸೌರಭಗಳಲ್ಲಿ ಪ್ರವೃತ್ತ ವಾದ ವಿಚಾರರೂಪದ ಸುಗಂಧವು, ಭೇದಸೌರಭವನ್ನೂ, ಪ್ರಸಂಗಾನುಸಾರ ಸಂಬಂಧಿಸಿ, ಅದರ (ಈ ವಿಚಾರವಾಯುವಿನ) ಪ್ರಭಾವದಿಂದ, ಜನಮನ ವನ್ನು (ಸಂಶಯಗಳನ್ನು ಪರಿಹರಿಸಿ), ಆನಂದಪ್ರದವೂ (ಮನೋಹರವೂ) ಆಗುತ್ತದೆ (೫೧೩). ಒಂದು ಪ್ರಮೇಯಕ್ಕೆ ಸಂಬಂಧಿಸಿದ ವಿಚಾರವು ಒಂದಕ್ಕಿಂತ ಹೆಚ್ಚಾದ ಸೌರಭದಲ್ಲಿ ಪ್ರಸಕ್ತವಾದರೂ, ಆಯಾ ಸೌರಭಗಳ

ವಿಷಯಗಳಿಗೆ (ಸಂಬಂಧಿಸಿದ ಪ್ರಮೇಯಗಳನ್ನು), ತತ್ರತತ್ರ–ಆಯಾ ಸೌರಭದಲ್ಲಿ, ವಿಶೇಷತಃ – ವಿಶೇಷವಾಗಿ (ಪರಿಪೂರ್ಣವಾಗಿ — ಹೆಚ್ಚಾಗಿ), ವಿಚಾರಣಾತ್–ವಿಚಾರಮಾಡಲಾಗುವುದರಿಂದ, ಸೌರಭಾಣಾಂ–ಸೌರಭಗಳ, ಸರ್ವಸ್ವಂ–ಎಲ್ಲವೂ, ಪಂಚಧಾ–ಐದು ಭಾಗಗಳಿಂದ, ಭಾತಿ–ಶೋಭಿಸುತ್ತದೆ.

**ಅಗ್ರತೋ ಜಾತಪುರುಷಂ ರುದ್ರಂ ಪಶುಪತಿಂ ಪುರಾ ।**
**ದೇವಾಃ ಸರ್ವೇಽಪಿ ಯಜನಯೋಗ್ಯತ್ವಾದ್ಯಜ್ಞನಾಮಕಂ ।**
**ಪ್ರೌಕ್ಷನ್ ಬರ್ಹಿಷಿ ಯೂಪೇ ತಮುಬಧ್ನನ್ ಪುರುಷಂ ಪಶುಂ ॥೫೧೫॥**

ಪುರುಷಸೂಕ್ತದ ಮೊದಲಿನ ಕೆಲವು ವಾಕ್ಯಗಳಿಗೆ ಈ ಹಿಂದೆ ಅರ್ಥವನ್ನು ವಿಚಾರದಿಂದ ನಿರ್ಧರಿಸಿ, ಪ್ರಸಂಗಪ್ರಾಪ್ತವಾದ್ದರಿಂದ ಮುಂದಿನ ವಾಕ್ಯಗಳ ಸಾಮಾನ್ಯಾರ್ಥವನ್ನು ನಿರೂಪಿಸುತ್ತಾ, 'ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್' ಎಂಬ ವಾಕ್ಯದಲ್ಲಿ ಪ್ರತಿಪಾದ್ಯನು ಮಹಾಪುರುಷನಲ್ಲವೆಂಬುದನ್ನು ಸಮರ್ಥಿಸುತ್ತಾರೆ:—

ಅಗ್ರತಃ – ಇಂದ್ರಾದಿಗಳಕಿಂತ ಮೊದಲು, ಜಾತಪುರುಷಂ – ಹುಟ್ಟಿದ ಪುರುಷನಾದ, ರುದ್ರಂ–ರುದ್ರನೆಂಬ, ಪಶುಪತಿಂ–ಪಶುಶ್ರೇಷ್ಠನಾದ ಪುರುಷನನ್ನು, ಪುರಾ–ಹಿಂದೆ (ಮೊದಲಿನ ಯಜ್ಞದಲ್ಲಿ), ದೇವಾಃ ಸರ್ವೇ ಅಪಿ–ಎಲ್ಲ ದೇವತೆಗಳೂ, ಯಜನಯೋಗ್ಯತ್ವಾತ್–ಯಾಗದಲ್ಲಿ ಹೋಮಿಸಲ್ಪಡಲು ಅರ್ಹನಾದ್ದರಿಂದ, ಯಜ್ಞನಾಮಕಂ–ಯಜ್ಞನೆಂಬ ಹೆಸರುಳ್ಳ, ತಂ ಪುರುಷಪಶುಂ–

---

ಪ್ರಮೇಯಗಳು, ಅಲ್ಲಲ್ಲಿಯೇ ವಿಶೇಷವಾಗಿ ವಿವೇಚಿಸಲ್ಪಡುತ್ತದೆಯಾದ್ದರಿಂದ, ಪಂಚಸೌರಭಗಳಲ್ಲಿ ಸಮಸ್ತ ವಿಷಯಗಳನ್ನು ಉಚಿತವಾಗಿ ಅಡಕಮಾಡಿರುವುದು ಶೋಭಿಸುತ್ತದೆ (೫೧೪). ಯದ್ಯಪಿ, ಸಹಸ್ರಶೀರ್ಷಾದಿ ವಾಕ್ಯಗಳಿಂದ, ಮಹಾಪುರುಷನು ಪ್ರತಿಪಾದ್ಯನಾದರೂ, ಪುರುಷಸೂಕ್ತದಲ್ಲಿ ಅಲ್ಲಲ್ಲಿ ಪ್ರಾಪ್ತವಾಗುವ ಪುರುಷಶಬ್ದಾರ್ಥವನ್ನೂ, ಯಜ್ಞಶಬ್ದಾರ್ಥವನ್ನೂ ಯಥೋಚಿತವಾಗಿ ಗ್ರಹಿಸಬೇಕಾದುದು ಅವಶ್ಯಕ; 'ಪುರುಷಂ ಜಾತಮಗ್ರತಃ' ಎಂಬ ವಾಕ್ಯದಲ್ಲಿ ಪ್ರಸಕ್ತನಾದ 'ಪುರುಷನು' ಪುರುಷಪಶುವಾದ ರುದ್ರನು; ಸೂಕ್ತಪ್ರತಿಪಾದ್ಯ ಮಹಾಪುರುಷನಲ್ಲ; ಆತನು ಬ್ರಹ್ಮನ ನಂತರ ಜನಿಸಿದ ರುದ್ರನು, ಆತನೇ ಪಶುಪತಿಯು—ಬ್ರಹ್ಮಾರ್ಪಿತವಾದ ಪಶುಗಳಲ್ಲಿ ಶ್ರೇಷ್ಠನು; ಆದ್ದರಿಂದ

ಪುರುಷಪಶುವಾದ ರುದ್ರನನ್ನು, ಯೂಪೇ – ಕಂಭಕ್ಕೆ (ಯೂಪಸ್ತಂಭಕ್ಕೆ), ಅಬಧ್ನನ್–ಬಿಗಿದರು; ಬರ್ಹಿಷಿ–ಬರ್ಹಿಗಳಿಂದ (ಯಜ್ಞದಲ್ಲಿ), ಪ್ರೌಕ್ಷನ್–ಪ್ರೋಕ್ಷಣೆಮಾಡಿದರು).[1]

**ದೇವಾಃ ಪುರುಷಮೇಧೇನ ತೇನ ಯಜ್ಞೇನ ಸರ್ವಶಃ ।**
**ಅಯಜನ್ ಯಜ್ಞಪುರುಷಂ ಪೂಜ್ಯತ್ವಾದ್ಯಜ್ಞನಾಮಕಂ ॥ ೫೧೬ ॥**

'ಯಜ್ಞೇನ ಯಜ್ಞಮಯಜಂತ ದೇವಾಃ' ಎಂಬ ಅದೇ ಸೂಕ್ತದ ಬೇರೆ ವಾಕ್ಯಾರ್ಥವನ್ನು ವಿಶದಗೊಳಿಸುತ್ತಾರೆ :—

ದೇವಾಃ – ಇಂದ್ರಾದಿ ದೇವತೆಗಳು, ತೇನ – ಆ, ಪುರುಷಮೇಧೇನ ಯಜ್ಞೇನ – ಪುರುಷಪಶುವನ್ನು ಹೋಮಿಸುವ ಯಜ್ಞದಿಂದ, ಸರ್ವಶಃ –

---

'ಪಶುಪತಿ'ಯು, ಯಜನ (ಯಜ್ಞದಲ್ಲಿ ಸಂಹರಿಸಿ ಯಜ್ಞಪುರುಷನಿಗೆ ಅರ್ಪಿಸಲು) ಯೋಗ್ಯವಾದುದರಿಂದ ಯಜ್ಞನಾಮಕನಾದ ಪುರುಷಪಶುವೇ ಆ ರುದ್ರನೆಂಬುದು ಸ್ಪಷ್ಟವಿದೆ; ಅಲ್ಲಿಯೇ ಯೂಪಸ್ತಂಭದಲ್ಲಿ ಬಂಧಿಸಿ, ಬರ್ಹಿಗಳಿಂದ (ದರ್ಭೆಗಳಿಂದ) ಅರ್ಪಣಾರ್ಥವಾಗಿ (ತತ್ಸೂಚಕ) ಪ್ರೋಕ್ಷಣೆಯನ್ನು ಮಾಡಿದರೆಂದೂ ಹೇಳಲಾಗಿದೆ (೫೧೫). ಯಜ್ಞದಲ್ಲಿ ಪೂಜಿಸಲ್ಪಡುವ ಪರಮಪುರುಷನೇ ಮುಖ್ಯವಾಗಿ ಯಜ್ಞನಾಮಕನು; ಯಜ್ಞನಾಮಕ ಪುರುಷ

---

[1] ಇಲ್ಲಿ ಪ್ರಸಕ್ತನಾದ ಯಜ್ಞನಾಮಕನು ಆದಿಪುರುಷ (ಭಗವಂತ) ನಲ್ಲ; ಆತನ ಮಗನಾದ ವಿರಾಟ್‌ಪುರುಷನಾದ ಚತುರ್ಮುಖನೂ ಅಲ್ಲ; ಇವರ ನಂತರ ಹುಟ್ಟಿದ ದೇವತೆಗಳಲ್ಲಿ ಶ್ರೇಷ್ಠನಾದ ರುದ್ರದೇವನಾಗಿದ್ದಾನೆ; ಬ್ರಹ್ಮಾದಿಗಳೆಲ್ಲರೂ ಪುರುಷಪಶುಗಳನ್ನೇ ಅರ್ಪಿಸಿ, ಪ್ರಥಮ ಯಜ್ಞದಲ್ಲಿ ಯಜ್ಞನಾಮಕ ವಿಷ್ಣುವನ್ನು ಪೂಜಿಸಿದರು— ಈ ಯಜ್ಞಕ್ಕೆ ಮಾನಸ ಯಜ್ಞವೆಂಬ ಅರ್ಥವನ್ನು ವಿವರಿಸಿ, ಶ್ರೀ ವಾದಿರಾಜರು ಅನ್ಯತ್ರ ಸ್ವಾರಸ್ಯವಾದ ವ್ಯಾಖ್ಯಾನವನ್ನೂ ಮಾಡಿದ್ದಾರೆ; ಯಜ್ಞದಲ್ಲಿ ಶ್ರೀವಿಷ್ಣುಪೂಜಾರೂಪದಿಂದ, ಅರ್ಪಿಸಲಾದ ಶ್ರೇಷ್ಠಪುರುಷ ಪಶುವಾದ್ದರಿಂದ, ರುದ್ರನಿಗೆ ಪಶುಪತಿಯೆಂಬ ನಾಮವೂ ಪ್ರಸಿದ್ಧವಾಗಿದೆ; 'ಪುರುಷಂ ಜಾತಮಗ್ರತಃ' ಎಂಬ ವಾಕ್ಯದ ಅರ್ಥವೇ 'ಅಗ್ರತೋ ಜಾತಪುರುಷಂ' ಎಂಬುದಾಗಿ ಈ ಶ್ಲೋಕದಲ್ಲಿ ಗ್ರಥಿತವಾಗಿದೆ; ಆತನೇ ರುದ್ರನೂ, ಪಶುಪತಿಯೂ ಎಂದು ಮುಂದಿನ ಶಬ್ದಗಳು ಸ್ಪಷ್ಟಗೊಳಿಸುತ್ತವೆ.

ಏವಂ ಚ 'ಪುರುಷ' ಶಬ್ದವಾಚ್ಯನನ್ನು ಪೂರ್ವಾಪರ ವಿವೇಚನೆಯಿಂದ ತಿಳಿಯಬೇಕೆಂದು ಸೂಚಿತವಾಗಿದೆ.

ಸರ್ವರೂ, ಪೂಜ್ಯತ್ವಾತ್–(ಪೂಜ್ಯರಲ್ಲಿ ಶ್ರೇಷ್ಠನಾಗಿ) ಸರ್ವರಿಂದ ಪೂಜ್ಯನಾದ್ದರಿಂದ, ಯಜ್ಞನಾಮಕಂ – ಯಜ್ಞನಾಮಕ, ಯಜ್ಞಪುರುಷಂ–(ಯಜ್ಞವೆಂಬ ಕರ್ಮದಿಂದ ಪೂಜಿಸಲ್ಪಡುವ) ಮಹಾಪುರುಷನನ್ನು, ಅಯಜನ್–ಪೂಜಿಸಿದರು.

**ತಮಿತ್ಯುಕ್ತಿರ್ಹವಿಃ ಪುಂಸೋ ಯೋ ವಧ್ಯೋ ವಕ್ಷ್ಯತೇ ಪಶುಃ ।**
**ಸ ಹಿ ಪ್ರೋಕ್ಷ್ಯಸ್ತೇನ ತಸ್ಮಾದಿತ್ಯಾದಿಶ್ಚಾತ್ರ ಪುಂಸ್ತುತಿಃ ॥ ೫೧೭ ॥**

ಯಃ ಪಶುಃ–ಯಾವ ಪಶುವು, ವಧ್ಯಃ–('ಅಬಧ್ನನ್ ಪುರುಷಂ ಪಶುಂ' ಎಂಬ ವಾಕ್ಯದಲ್ಲಿ) ವಧ್ಯನೆಂದು, ವಕ್ಷ್ಯತೇ – ಹೇಳಲ್ಪಡುವನೋ, ಹವಿಃ ಪುಂಸಃ – ಯಜ್ಞದಲ್ಲಿ ಹವಿಸ್ಸಿನ ರೂಪದಿಂದ ಅರ್ಪಿಸಲ್ಪಡುವ ಪುರುಷನ, ಉಕ್ತಿಃ–ಉಕ್ತಿಯು, ತಂ ಇತಿ–'ತಂ ಯಜ್ಞಂ ಬರ್ಹಿಷಿ' ಎಂಬಲ್ಲಿರುವ 'ತಂ' ಎಂಬ ಶಬ್ದದಿಂದ ಪರಾಮರ್ಶವೆಂದು (ತಿಳಿಯುತ್ತದೆ); ಹಿ–ಏಕೆಂದರೆ, ಸಃ ಪ್ರೋಕ್ಷ್ಯಃ–ಆತನೇ ಅರ್ಪಿಸಲ್ಪಡತಕ್ಕವನು (ವಧಿಸಲ್ಪಡುವ ಪುರುಷಪಶುವು);[1] ತೇನ–('ತೇನ ದೇವಾ ಅಯಜಂತ' ಅದರಿಂದಲೇ ಪೂಜಿಸಿದರೆಂದು ಹೇಳಿರುವುದರಿಂದ) ಈ ಕಾರಣದಿಂದ, ತಸ್ಮಾದಿತ್ಯಾದಿಃ–'ತಸ್ಮಾದ್ಯಜ್ಞಾತ್ಸರ್ವಹುತಃ'[2]

---

ಪಶುಗಳನ್ನು ಅರ್ಪಿಸುವ ಯಜ್ಞಕರ್ಮದಿಂದ, ಎಲ್ಲ ದೇವತೆಗಳೂ, ಯಜ್ಞಪುರುಷನನ್ನು ಅರ್ಚಿಸಿದರು (೫೧೬). ಪ್ರೋಕ್ಷಿಸಿ ವಧಿಸಲ್ಪಡುವವನೇ ಪುರುಷ ಪಶುವು; ಯಾವ ಪುರುಷನಿಗಾಗಿ ಪಶುವು ಅರ್ಪಿಸಲ್ಪಡುವುದೋ ಆತನೇ ಹವಿಸ್ಸುಗಳನ್ನು (ಪಶು ಮೊದಲಾದ ಹವಿಸ್ಸುಗಳನ್ನು) ಸ್ವೀಕರಿಸುವ ಮಹಾ ಪುರುಷನು; ಆತನೇ ಮುಂದೆ 'ತಮೇವಂ ವಿದ್ವಾನ್' ಎಂಬಲ್ಲಿ ಪ್ರಸಕ್ತನಾದವನು; 'ತಸ್ಮಾದ್ಯಜ್ಞಾತ್ಸರ್ವಹುತಃ' ಎಂಬ ವಾಕ್ಯದಲ್ಲಿ ಹೇಳಲಾದ ಪುರುಷ

1 ಯಜ್ಞದಲ್ಲಿ ವಧ್ಯವಾದ ಪಶುವನ್ನು ಯೂಪಸ್ತಂಭದಲ್ಲಿ ಬಂಧಿಸಿ, ಆ ಪಶುವನ್ನೇ ಪ್ರೋಕ್ಷಣೆಮಾಡಿ (ನೀರನ್ನು ಕ್ಷಿಮಿಸಿ) ಹವಿಸ್ಸನ್ನಾಗಿ ಅರ್ಪಿಸುವ ಸಂಕಲ್ಪಮಾಡುವುದು ತಪ್ಪದ ನಿಯಮವಾಗಿದೆ.

2 ಯಾರಿಗಾಗಿ ಈ ಎಲ್ಲ ಹವಿಸ್ಸುಗಳು ಅರ್ಪಿತವಾದವೋ ಆ ಯಜ್ಞಪುರುಷನಿಂದ (ನಾರಾಯಣನಿಂದ) ಮುಂದೆ, ಚೇತನಾಚೇತನಗಳ ಸೃಷ್ಟಿಯಾಗಿರುತ್ತದೆಂದು ಹೇಳಲಾಗಿದೆ.

ಎಂಬ ಮೊದಲಾದ ಈ ಸೂಕ್ತದ ವಾಕ್ಯವು, ಅತ್ರ–ಇಲ್ಲಿ, ಪುಂಸ್ತುತಿಃ ಚ– ಮಹಾಪುರುಷನ ಸ್ತೋತ್ರವೇ ಆಗಿವೆ.

**ಜ್ಯಾಯಸ್ತ್ವಂ ಮಹಿಮಾವ್ಯಾಪ್ತಿರಮೃತತ್ವೇಶತಾದಿಕಂ ।**
**ನ ಹಿ ವಧ್ಯಪಶೋರ್ದೇವಸ್ರಷ್ಟೃಂಗತ್ವಂ ತದಿಜ್ಯತಾ ॥ ೫೧೮ ॥**

ಒಂದೇ ಪ್ರಕರಣದಲ್ಲಿ ಉಪಯೋಗಿಸಿರುವ ಪುರುಷ ಶಬ್ದಕ್ಕೆ ವಿಭಾಗ ದಿಂದ ಭಿನ್ನಾರ್ಥತ್ವವನ್ನು ಹೇಳುವುದೇಕೆಂದರೆ, ಹೇಳುತ್ತಾರೆ :—

ಜ್ಯಾಯಸ್ತ್ವಂ–ಶ್ರೇಷ್ಠತೆಯೆಂಬುದು, ಮಹಿಮಾವ್ಯಾಪ್ತಿಃ–ಅಸಾಧಾರಣ ಗುಣಗಳ ವಿಸ್ತಾರವು ; (ಅದು ಯಾವುದೆಂದರೆ), ಅಮೃತತ್ವೇಶತಾದಿಕಂ– ಮುಕ್ತಸಮುದಾಯದ ನಿಯಾಮಕತ್ವವೇ ಮೊದಲಾದುದು ; ವಧ್ಯಪಶೋಃ– (ಯಜ್ಞದಲ್ಲಿ ಸಂಹರಿಸಲ್ಪಡುವ) ವಧ್ಯಪಶುವಿಗೆ, ದೇವಸ್ರಷ್ಟೃಂಗತ್ವಂ–ಇಂದ್ರ, ಅಗ್ನಿ ಮೊದಲಾದ ದೇವತೆಗಳನ್ನು ಸೃಷ್ಟಿಸುವ ಅಂಗಗಳ (ಮುಖ, ಚಕ್ಷುರಾದಿ ಗಳ) ಇರುವಿಕೆಯೂ, ತದಿಜ್ಯತಾ – ದೇವತೆಗಳಿಂದ ಪೂಜಿಸಲ್ಪಡುವಿಕೆಯು (ಆ ಯಜ್ಞರೂಪ ಕರ್ಮದಿಂದ ಸೇವಿಸಲ್ಪಡುವಿಕೆಯೂ), ನ ಹಿ – ಇಲ್ಲವಷ್ಟೆ (ಆದ್ದರಿಂದಲೇ, ಮಧ್ಯವಾಕ್ಯದಲ್ಲಿರುವ 'ತಂ' ಎಂಬುದಕ್ಕೆ ಯಜ್ಞಪಶುವೆಂದೂ, ಉತ್ತರ (ಮುಂದಿನ) ವಾಕ್ಯದಲ್ಲಿರುವ 'ತಂ' ಶಬ್ದಕ್ಕೆ ಯಜ್ಞನಾಮಕ (ಪೂರ್ವ ವಾಕ್ಯ ಪ್ರತಿಪಾದ್ಯಪುರುಷ) ಮಹಾಪುರುಷನೆಂಬ ಅರ್ಥವನ್ನು, ಪ್ರತ್ಯೇಕವಾಗಿ ತಿಳಿಯಬೇಕೆಂದು ಸಯುಕ್ತಿಕವಾಗಿ ನಿರೂಪಿಸಲಾಗಿದೆ).

---

ನಿಂದಲೇ ಮುಂದೆ ಹೇಳುವಂತೆ ಚೇತನಾಚೇತನಾತ್ಮಕ ಜಗತ್ತಿನ ಸೃಷ್ಟಿ ಯಾಗಿರುತ್ತದೆಂದೂ ಹೇಳಲಾಗಿದೆ (೫೧೭). 'ಪುರುಷಂ ಜಾತಮಗ್ರತಃ' ಎಂಬ ವಾಕ್ಯದಲ್ಲಿ ಪ್ರಸಕ್ತವಾದ ಪುರುಷಪಶುವನ್ನು, ಮುಕ್ತಚೇತನರ ನಿಯಾಮಕತ್ವವೇ ಮೊದಲಾದ ಗುಣವ್ಯಾಪ್ತಿರೂಪದ ಶ್ರೇಷ್ಠತ್ವವುಳ್ಳದ್ದೆಂದು ಭಾವಿಸುವುದು, ಯುಕ್ತವಲ್ಲ ; ಯಜ್ಞಪಶುವಿಗೆ, ಇಂದ್ರ ಅಗ್ನಿ ಪ್ರಾಣಾದಿ ದೇವತೆಗಳನ್ನು ಸೃಷ್ಟಿಸುವ, ಮುಖಾದಿ ಅಂಗಗಳುಳ್ಳದ್ದೆಂದು ಕಲ್ಪಿಸುವುದು, ಆ ಇಂದ್ರಾದಿಗಳಿಂದ ಪೂಜ್ಯತ್ವವನ್ನು ತಿಳಿಯುವುದೂ ಅಸಂಭಾವಿತ ಕಲ್ಪನೆಯು — ಆದ್ದರಿಂದ ಪೂರ್ವವಾಕ್ಯದಲ್ಲಿನ ('ತಂ ಯಜ್ಞಂ ಬರ್ಹಿಷಿ

**ಅಕೇನ ಸರ್ವಥಾ ಶೂನ್ಯಂ ನಿರ್ದುಃಖಂ ಮೋಕ್ಷಮೇವ ಹಿ ।**
**ನಾಕಾಭಿಧಂ ಪ್ರಾಪುರಂತೇ ನಾಕಿಪ್ರಾಪ್ಯಃ ಸ ಏವ ಹಿ ।**
**ನಾಕೋಽನ್ಯಸ್ಯ ತು ನಾಕಸ್ಯ ಸಿದ್ಧತ್ವಾತ್ಪೂರ್ವಮಪ್ಯಲಂ ॥ ೫೧೯ ॥**

ಅಕೇನ–ದುಃಖದಿಂದ (ಕಂ–ಸುಖಂ; ಅಕಂ–ತದ್ವಿರುದ್ಧ ದುಃಖ), ಸರ್ವಥಾ –ಎಲ್ಲ ರೀತಿಯಿಂದ, ಶೂನ್ಯಂ – ಶೂನ್ಯವಾದುದೂ (ಎಂದೂ, ಎಲ್ಲಿಯೂ, ಯಾವ ವಿಧವಾದ ದುಃಖವೂ ಇಲ್ಲದುದು); ನಿರ್ದುಃಖಂ – ದುಃಖಲೇಶ ವಿಲ್ಲದುದು, ಮೋಕ್ಷಂ ಏವ ಹಿ–ಮೋಕ್ಷವೇ, ಎಂದು ಸಿದ್ಧವು (ಆದ್ದರಿಂದಲೇ ಮೋಕ್ಷವೇ, ನಾಕ ಶಬ್ದ ಮುಖ್ಯವಾಚ್ಯವಾದುದು); ನಾಕಾಭಿದಂ – ನಾಕ ವೆಂಬ ನಾಮವುಳ್ಳ ಮೋಕ್ಷವನ್ನು, ಅಂತೇ – ಎಲ್ಲ ಸಾಧನಗಳ ಅಂತ್ಯದಲ್ಲಿ, ಪ್ರಾಪುಃ – (ದೇವತೆಗಳು) ಹೊಂದಿದರು; ನಾಕಿಪ್ರಾಪ್ಯಃ – ದೇವತೆಗಳಿಂದ ಹೊಂದಲ್ಪಡುವುದು (ನಾಕಿಃ–ಸ್ವರ್ಗವಾಸಿ ದೇವತೆ), ಸ ಏವ ಹಿ–ಮೋಕ್ಷವೇ ಸರಿ; ಅನ್ಯಸ್ಯ ನಾಕಸ್ಯ–ಬೇರೊಂದು ನಾಕದ (ಪ್ರಸಿದ್ಧ ಪುರಂದರಾಧಿಷ್ಠಿತ ಸ್ವರ್ಗದ) ಪ್ರಾಪ್ತಿಯು, ಪೂರ್ವಂ ಅಪಿ–('ಯಜ್ಞೇನ ಯಜ್ಞಂ ಅಯಜಂತ ದೇವಾಃ । ತೇಹ ನಾಕಂ ಮಹಿಮಾನಃ....' ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' ಎಂಬಲ್ಲಿ ಹೇಳಲಾದ ನಿತ್ಯಸ್ಥಾನಪ್ರಾಪ್ತಿಗಿಂತ) ಮೊದಲೇ, ಅಲ್ಪಂ– ಸ್ಪಷ್ಟವಾಗಿ, ಸಿದ್ಧತ್ವಾತ್–ಸಿದ್ಧವಾಗಿರುವುದರಿಂದ, (ನಾಕಃ ಮೋಕ್ಷ ಏವ– ಇಲ್ಲಿ ಪ್ರಸಕ್ತವಾದ ನಾಕವು ಮೋಕ್ಷವೇ ಸರಿ) ('ತೇಹ ನಾಕಂ ಮಹಿಮಾನಃ'

---

ಪ್ರೋಕ್ಷನ್') ತಂ ಎಂಬುದರಿಂದ (ಯಜ್ಞವೆಂದೇ ಕರೆಯಲಾಗುವ ಪುರುಷಪಶು ವನ್ನೂ, ಉತ್ತರವಾಕ್ಯದಲ್ಲಿನ ('ತಮೇವಂ ವಿದ್ವಾನ್ ಅಮೃತ') ತಂ ಎಂಬುದರಿಂದ ಮೋಕ್ಷಪ್ರದನಾದ ಮಹಾಪುರುಷನನ್ನೂ ತಿಳಿಯಬೇಕು— ಆತನೂ ಪೂಜ್ಯನಾದ್ದರಿಂದ) ಯಜ್ಞಶಬ್ದಮುಖ್ಯವಾಚ್ಯನು (೫೧೮). ಹಿಂದಿನ ಪದಾಧಿಷ್ಠಿತ ದೇವತೆಗಳು, ಯಜ್ಞದಿಂದ ಯಜ್ಞಪುರುಷನನ್ನು ಅರ್ಚಿಸಿ ಮುಕ್ತ ರಾದರೆಂದು ಹೇಳುವ ಶ್ರುತಿಯಲ್ಲಿ ಪ್ರಸಕ್ತವಾದ ನಾಕವು, ಪ್ರಸಿದ್ಧ ಸ್ವರ್ಗ ಲೋಕವಲ್ಲ; ಕಿಂತು ಮುಕ್ತಲೋಕವೇ; ಕಂ ಎಂದರೆ ಸುಖವು; ಅಕಂ ಎಂದರೆ ದುಃಖ; ಸರ್ವಥಾ ದುಃಖಶೂನ್ಯವಾದುದು ಮೋಕ್ಷವು, ನಾಕವು; ನಾಕವನ್ನು ಹೊಂದಿದರೆಂದರೆ ಮುಕ್ತರಾದರೆಂದೇ ಅರ್ಥ; ಯಜ್ಞವನ್ನಾಚರಿಸುವ

ಇತ್ಯಾದಿ ವಾಕ್ಯದಲ್ಲಿ ಪ್ರಸಕ್ತವಾದ ನಾಕವು, ಪ್ರಸಿದ್ಧಸ್ವರ್ಗವಲ್ಲ—ದೇವತೆಗಳಿಗ ಅದು ಮೊದಲೇ ಸಿದ್ಧವಿದ್ದುದೇ ಆಗಿದೆ).

**ಪೂರ್ವಂ ಮುಕ್ತ್ವಾ ಯತ್ರ ಸಂತಿ ದೇವಾಃ ಕಿಲ ಸಹಸ್ರಶಃ ।**
**ತೈಃ ಸಹೈವ ಸ್ಥಿತಿರ್ಮೋಕ್ಷೇ ದೇವಾನಾಂ ನಾಪರತ್ರ ಹಿ ॥ ೫೨೦ ॥**

ಈ ವಿಷಯದಲ್ಲಿ ಬೇರೆ ಯುಕ್ತಿಯನ್ನೂ ಹೇಳುತ್ತಾರೆ :—

ಯತ್ರ – ಎಲ್ಲಿ (ಮುಕ್ತಲೋಕದಲ್ಲ), ಪೂರ್ವಂ ದೇವಾಃ – ಹಿಂದಿನ ದೇವತೆಗಳು—ಈಗ ಪದಸ್ಥರಾಗಿರುವ ದೇವತೆಗಳಿಂದ, ಹಿಂದೆ ಆ ಪದಗಳಲ್ಲಿದ್ದ ದೇವತೆಗಳು) ಮೊದಲು, ಮುಕ್ತ್ವಾಃ – ಮುಕ್ತರಾಗಿ, ಸಹಸ್ರಶಃ–ಸಾವಿರಾರು ಜೀವರು, ಸಂತಿ ಕಿಲ – ಇರುವರಂಬ (ಪ್ರಸಿದ್ಧಿಯುಳ್ಳ) ಲೋಕದಲ್ಲಿಯೇ, ದೇವಾನಾಂ–(ಈಗಿನ) ದೇವತೆಗಳಿಗೆ, ತೈಃ ಸಹೈವ–ಹಿಂದೆ ಮುಕ್ತರಾದವರ ಜೊತೆಯಲ್ಲಿಯೇ (ಕೂಡಿಯೇ), ಮೋಕ್ಷೇ–ಮೋಕ್ಷದಲ್ಲಿ, ('ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ') ಎಂದು ಪ್ರಸಕ್ತರಾದ ದೇವತೆಗಳೊಡನೆ, ಸ್ಥಿತಿಃ– ಇರೋಣವು (ವಾಸವು), ಹಿ–ಹೇಳಲ್ಪಡುತ್ತದೆ ; ಅಪರತ್ರ–ಅನ್ಯತ್ರ (ಬೇರೆ ಸ್ಥಲದಲ್ಲಿ), ನ ಹಿ – ಬೇರೆಯಲ್ಲ (ಮೊದಲು ಅಲ್ಲಿ ಮುಕ್ತರಾಗಿ ಬಂದು ವಾಸಿಸುವ ದೇವತೆಗಳಿರುವರೆಂಬುದರಿಂದ ಅವರೂ ಸಂಸಾರಿಗಳಾಗಿದ್ದು ಯಜ್ಞವನ್ನು ಆಚರಿಸಿ, ಮಹಾಪುರುಷನಲ್ಲಿ ಅರ್ಪಿಸಿ, ಸಿದ್ಧರಾದವರೆಂದು ತಿಳಿಯಬರುತ್ತದೆ).

---

ಮೊದಲೇ ದೇವತೆಗಳು ಸ್ವರ್ಗವಾಸಿಗಳೇ ಆಗಿದ್ದರಷ್ಟೆ—ಆದ್ದರಿಂದ ಸ್ವರ್ಗವನ್ನು ಪಡೆದರೆಂಬರ್ಥವು ಉಚಿತವಲ್ಲ (೫೧೯). 'ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' ಎಂಬ ವಾಕ್ಯವು ನಾಕವೆಂಬುದು ಮೋಕ್ಷವೇ ಎಂಬಲ್ಲಿ ಬೇರೆ ಯುಕ್ತಿಯನ್ನು ಒದಗಿಸುತ್ತದೆ; 'ಸಾಧ್ಯಾಃ' ಎಂದರೆ, ಹಿಂದೆ ಯಜ್ಞವನ್ನಾಚರಿಸಿ ಮುಕ್ತರಾದವರು ಅಲ್ಲಿರುವರಂದು ಹೇಳಿರುವುದರಿಂದ ಅದು ಮುಕ್ತಲೋಕವೇ ಸರಿ; ಅವರೊಂದಿಗೆ (ಆ ಮುಕ್ತದೇವತೆಗಳೊಂದಿಗೆ—ಅಸಂಖ್ಯ ಮುಕ್ತದೇವತೆಗಳೊಡನೆ) ಇರೋಣವು, ಮುಕ್ತರಲ್ಲದವರಿಗೆ ಕೂಡುವುದಿಲ್ಲ (೫೨೦).

**ಯಂ ಧಾತಾಪ್ಯಾಹ ವೇದಾಹಂ ಮಹಾಂತಂ ಪುರುಷಂ ತ್ವಿತಿ ।**
**ಆದಿತ್ಯವರ್ಣಃ ಸಕಿಲ ತಮಸಃ ಪಾರ ಏವ ಹಿ ।**
**ಸದಾ ತಿಷ್ಠತಿ ತೇನಾಸೌ ನಿತ್ಯಮುಕ್ತಃ ಪರಃ ಪ್ರಭುಃ ॥ ೫೨೧ ॥**

ವಿಷ್ಣುವೇ ಪುರುಷಸೂಕ್ತ ಪ್ರತಿಪಾದ್ಯನೆಂಬಲ್ಲಿ ಪುನಃ ಯುಕ್ತಿಗಳನ್ನು ಹೇಳಿ, ಅದರಿಂದ ಆತನ ಪರಬ್ರಹ್ಮತ್ವವೂ ಲಭಿಸುತ್ತದೆನ್ನುತ್ತಾರೆ :—

ಯಂ – ಯಾವ ಪುರುಷಸೂಕ್ತ ಪ್ರತಿಪಾದ್ಯನನ್ನು, ಧಾತಾ ಅಪಿ – ('ಧಾತಾ ಪುರಸ್ತಾದ್ಯಮುದಾಜಹಾರ' ಎಂಬ ಉತ್ತರವಾಕ್ಯ ಪರ್ಯಾಲೋಚನೆಯಿಂದ, 'ವೇದಾಹಂ' ಎಂಬ ಪೂರ್ವವಾಕ್ಯವೂ ಬ್ರಹ್ಮದೇವನ ವಾಕ್ಯವೆಂದು ಸಿದ್ಧವೆಂದು ಹೇಳುತ್ತಾರೆ) ಧಾತಾ (ಚತುರ್ಮುಖನೂ) ಕೂಡ, ವೇದಾಹಂ ಮಹಾಂತಂ ಪುರುಷಂ ತು ಇತಿ – 'ವೇದಾಹಂ ಮಹಾಂತಂ ಪುರುಷಂ'— ಈ ಮಹಾಪುರುಷನನ್ನು ನಾನು ತಿಳಿದೆನು, ಎಂದು ಹೇಳಿದ ವಾಕ್ಯವೇ, ಸಃ– (ಬ್ರಹ್ಮನಿಂದ ತಿಳಿಯಲ್ಪಟ್ಟ) ಪುರುಷನು, ಆದಿತ್ಯವರ್ಣಃ–(ಅನಂತ) ಸೂರ್ಯ ಪ್ರಕಾಶದ ವರ್ಣವುಳ್ಳವನು, ತಮಸಃ – ಪ್ರಕೃತಿಯಿಂದ, ಪಾರಃ ಏವ–ಆಚೆ ಗಿರುವವನೇ, ಹಿ – (ಎಂದು) ಪ್ರಸಿದ್ಧನು, (ಅಪ್ರಾಕೃತನೆಂದು 'ತಮಸಃ ಪುರಸ್ತಾತ್' ಎಂಬುದು ತಿಳಿಸುತ್ತದೆ); ಕಿಲ – ಶ್ರುತ್ಯಂತರ (ಬೇರೆ ಶ್ರುತಿ ಪ್ರಸಿದ್ಧಿಯೂ ಉಂಟು–'ಆದಿತ್ಯವರ್ಣಂ ತಮಸಸ್ತುಪಾರೇ' ಎಂಬ ಶ್ರುತಿಯ) ಅರ್ಥವನ್ನು ಹೇಳಿದಂತಾಯಿತು; ಸದಾ ತಿಷ್ಠತಿ – ಎಲ್ಲ ಕಾಲದಲ್ಲಿ ಹೀಗೆ (ಈ ಶ್ರುತಿಗಳಲ್ಲಿ ಉಕ್ತವಾದಂತೆ ತಮಸಃ ಪರತ್ವ, ಬ್ರಹ್ಮವೇದ್ಯತ್ವವುಳ್ಳವನಾಗಿ) ಇರುವನು; ತೇನ – ಕಾರಣದಿಂದ, ಅಸೌ – ಈ, ಪರಃ ಪ್ರಭುಃ– ಸರ್ವೋತ್ತಮ ಸ್ವಾಮಿಯಾದ ಪುರುಷನು, ನಿತ್ಯಮುಕ್ತಃ–ನಿತ್ಯಮುಕ್ತನೆಂದೂ

---

ಈ ಪುರುಷಸೂಕ್ತ ಪ್ರತಿಪಾದ್ಯನನ್ನು, ಬ್ರಹ್ಮದೇವನು, 'ವೇದಾಹಂ ಪುರುಷಂ ಮಹಾಂತಂ' ತಾನು ತಿಳಿದಿರುವುದಾಗಿಯೂ, ಆ ಮಹಾಪುರುಷನು, ಸೂರ್ಯಪ್ರಕಾಶದಂತೆ ಶುಭ್ರಕಾಂತಿಯುಳ್ಳವನಾಗಿ ಪ್ರಕೃತಿಯನ್ನು ಅತಿಕ್ರಮಿಸಿ, ('ತಮಸಃ ಪುರಸ್ತಾತ್') ಅಪ್ರಾಕೃತಸ್ವರೂಪದವನೂ ಆಗಿರುವನೆಂದೂ, ಹೇಳಿರುವನು; ಇದರಿಂದ ಸಹ ಆತನು ನಿತ್ಯಮುಕ್ತನೆಂದು ಸಿದ್ಧವಾಗುತ್ತದೆ; ಆ ಮಹಾಪುರುಷನಿಗೆ, ಪ್ರಕೃತಿಯ ಸ್ಪರ್ಶವೇ ಎಂದೂ ಇಲ್ಲವೆಂದು

ಸಿದ್ಧವಾಗುತ್ತದೆ ('ತು' ಶಬ್ದದಿಂದ ಮೊದಲೇ ಪಾರದಲ್ಲಿರುವ, ಎಂದರೆ ಮುಕ್ತರಾದವರಿಗಿಂತ, ವಿಶೇಷಪಾರಗತ್ವವು ತಿಳಿದುಬರುತ್ತದೆ— ಅದರಿಂದ ನಿತ್ಯಮುಕ್ತತ್ವವೂ ಸಿದ್ಧವಾಗುತ್ತದೆ).

**ಯಃ ಸ್ವಾವಯವತೋ ದೇವಾನಿಂದ್ರಾಗ್ನಿಪ್ರಾಣಪೂರ್ವಕಾನ್ ।**
**ಅಸೃಜತ್ ಸರ್ವವೇದಾಂಶ್ಚ ಪ್ರೋಕ್ತವಾನ್ ಸ್ವಹೃದಿ ಸ್ಥಿತಾನ್॥೫೨**

ರೀತ್ಯಂತರದಿಂದ ಸಹ ವಿಷ್ಣುವೇ ನಿತ್ಯಮುಕ್ತನೆಂದೂ, ಪರಬ್ರಹ್ಮನೆಂದೂ ಸಾಧಿಸುತ್ತಾರೆ :—

ಯಃ – ಯಾವ ಪರಮಪುರುಷನು, ಸ್ವಾವಯವತಃ–ತನ್ನ ಮುಖಾದಿ ಅವಯವಗಳಿಂದ( ಇದರಿಂದ 'ಮುಖಾದಿಂದ್ರಶ್ಚಾಗ್ನಿಶ್ಚ'ಇತ್ಯಾದಿ ವಾಕ್ಯಾರ್ಥವು ಹೇಳಿದಂತಾಗುತ್ತದೆ), ಇಂದ್ರಾಗ್ನಿಪ್ರಾಣಪೂರ್ವಕಾನ್ – ಇಂದ್ರ, ಅಗ್ನಿ, ಪ್ರಾಣಾದಿ, ದೇವಾನ್ – ದೇವತೆಗಳನ್ನು, ಅಸೃಜತ್ – ಸೃಷ್ಟಿಮಾಡಿದನು ; ಸ್ವಹೃದಿ ಸ್ಥಿತಾನ್–ತನ್ನ ಬುದ್ಧಿಸ್ಥಿತವಾದ, ಸರ್ವವೇದಾನ್ ಚ–ಎಲ್ಲ ವೇದಗಳನ್ನೂ (ಇದರಿಂದ 'ಋಚಃ ಸಾಮಾನಿ ಜಜ್ಞಿರೇ' ಇತ್ಯಾದಿ ವಾಕ್ಯಾರ್ಥವು ಉಕ್ತವಾದಂತೆ ಆಗುತ್ತದೆ), ಪ್ರೋಕ್ತವಾನ್–ಉಚ್ಚರಿಸಿ ಉಪದೇಶಿಸಿದನು.

**ಯೋ ಗುರುಃ ಸರ್ವದೇವಾನಾಂ ಪಿತಾ ಚ ಪ್ರಭುರೇವ ಚ ।**
**ಚರಾಚರಜಗತ್ಕರ್ತಾ ದೇವಾರಾಧ್ಯಪದಾಂಬುಜಃ ॥ ೫೨೩ ॥**

---

ಬೇರೆ ಶ್ರುತಿಗಳೂ ಹೇಳುತ್ತವೆ (೫೨೧). ಪುರುಷಸೂಕ್ತ ಪ್ರತಿಪಾದ್ಯನಾದ ಈ ಮಹಾಪುರುಷನೇ ಶ್ರೀವಿಷ್ಣುವೆಂದೂ, ಆತನೇ ಪರಬ್ರಹ್ಮನೆಂದೂ ಸಿದ್ಧವಾಗುತ್ತದೆ; ಯಾವಾತನು, ತನ್ನ ಮುಖ, ಚಕ್ಷುರಾದಿ ಅವಯವಗಳಿಂದ, ಇಂದ್ರ ಅಗ್ನಿ ಪ್ರಾಣಾದಿ ದೇವತೆಗಳನ್ನು ಸೃಷ್ಟಿಸಿರುವನೋ, ಅನಾದಿಕಾಲದಿಂದ ಸ್ವಬುದ್ಧಿಸ್ಥಿತವಾದ ವೇದಗಳನ್ನು ಪ್ರಕಟಗೊಳಿಸಿ, ಬ್ರಹ್ಮಾದಿಗಳಿಗೆ ಸೃಷ್ಟ್ಯಾದಿಯಲ್ಲಿ ಉಪದೇಶಿಸಿರುವನೋ ಆತನೇ ಪರಬ್ರಹ್ಮನು—ಆತನೇ ವಿಷ್ಣುವು (೫೨೨). ಈತನೇ ಸರ್ವದೇವತೆಗಳ ಗುರುವು, ಜನ್ಮಪಿತೃ ತಂದೆ ಮತ್ತು ಆಳುವ ಪ್ರಭು; ಚರಾಚರ ಜಗತ್ತಿನ ಸೃಷ್ಟ್ಯಾದಿ ಕರ್ತನು; ದೇವತೆಗಳಿಂದ ಆರಾಧ್ಯವಾದ ಪಾದಕಮಲಗಳುಳ್ಳವನು; ಸಕಲ ದೇವತೆಗಳಿಗೆ ಮುಕ್ತಿಪ್ರದನೂ ಆತನೇ; ಬ್ರಹ್ಮದೇವನಿಗಿಂತ ಅನಂತ ಅಧಿಕ ಮಹಾತ್ಮೆಯುಳ್ಳವನು;

**ದೇವಾನಾಮಪಿ ಕೈವಲ್ಯದಾತಾ ಧಾತುಶ್ಚ ಯೋ ಮಹಾನ್ ।**
**ನಿತ್ಯಮುಕ್ತಶ್ಚ ಭಗವಾನ್ ಪರಬ್ರಹ್ಮ ಸ ಏವ ಹಿ ॥ ೫೨೪ ॥**

ಉಕ್ತವಾಕ್ಯಗಳ ತಾತ್ಪರ್ಯದಿಂದ ಲಭಿಸುವ ಪ್ರಮೇಯವನ್ನು ಹೇಳು ತ್ತಾರೆ :—

ಯಃ—ಯಾವ ಪರಮಪುರುಷನು, ಸರ್ವದೇವಾನಾಂ—ಸಕಲ ದೇವತೆಗಳ, ಗುರುಃ – ಗುರುವೂ (ಜ್ಞಾನೋಪದೇಶಕನೂ), ಪಿತಾ ಚ – ಜನ್ಮಪಿತೃ ತಂದೆಯೂ, ಚ—ಮತ್ತು, ಪ್ರಭುಃ ಏವ—ಆಳುವ ಸ್ವಾಮಿಯೂ, ಚರಾಚರ ಜಗತ್ಕರ್ತಾ—ಚೇತನಾಚೇತನ ಜಗತ್ತಿನ ಸೃಷ್ಟ್ಯಾದಿ ಕರ್ತನೂ (ಇದರಿಂದ, 'ತಸ್ಮಾದಶ್ವಾ ಅಜಾಯಂತ' ಮತ್ತು 'ನಾಭ್ಯಾ ಅಸೀದಂತರಿಕ್ಷಂ' ಇತ್ಯಾದಿ ವಾಕ್ಯಾರ್ಥಗಳು ಹೇಳಲ್ಪಡುತ್ತವೆ), ದೇವಾರಾಧ್ಯಪದಾಂಬುಜಃ – ದೇವತೆ ಗಳಿಂದ ಸೇವ್ಯವಾದ ಪಾದಕಮಲಗಳುಳ್ಳವನೂ, ದೇವಾನಾಂ ಅಪಿ—ದೇವತೆ ಗಳಿಗೆ ಸಹ, ಕೈವಲ್ಯದಾತಾ – ಮೋಕ್ಷಪ್ರದನೂ, ಯಃ – ಯಾವ ಪರಮ ಪುರುಷನು, ಧಾತುಶ್ಚ—(ಬ್ರಹ್ಮದೇವನಿಗೂ ಮುಕ್ತಿಪದನೂ) ಬ್ರಹ್ಮನಿಗಿಂತ, ಸಹ, ಮಹಾನ್ – ಅಧಿಕ ಮಾಹಾತ್ಮ್ಯವುಳ್ಳವನೂ, ಸಃ – ಆತನೇ, ನಿತ್ಯ ಮುಕ್ತಃ—('ತಸ್ಮಾದ್ವಿರಾಳಜಾಯತ' ಇತ್ಯಾದಿ ವಾಕ್ಯದಿಂದ ಬ್ರಹ್ಮಾದಿ ಸಕಲ ಜಗತ್ತಿನ ಸೃಷ್ಟಿಯನ್ನು ಹೇಳಿ, ಪರಮಪುರುಷನಿಗೆ ಹೇಳದೇ ಇರುವುದರಿಂದ, ಜನ್ಮಾದಿ ಸಂಸಾರಶೂನ್ಯನಾದ್ದರಿಂದ) ನಿತ್ಯಮುಕ್ತನೂ, ಚ – ಮತ್ತು, ಭಗವಾನ್—ಭಗವಚ್ಛಬ್ದ ಮುಖ್ಯವಾಚ್ಯನಾದ, ಪರಬ್ರಹ್ಮ ಏವ ಹಿ—ಪರಬ್ರಹ್ಮ ನೆಂದೇ ನಿಶ್ಚಯವಾಗುತ್ತದೆ ('ಜನ್ಮಾದ್ಯಸ್ಯ ಯತಃ' ಎಂಬ ಬ್ರಹ್ಮಸೂತ್ರದಲ್ಲಿ ನಿರ್ಣಯಿಸಿ ಹೇಳಲಾದ ಪರಬ್ರಹ್ಮಲಕ್ಷಣದಿಂದಲೂ, ಪುರುಷಸೂಕ್ತ ಪ್ರತಿ ಪಾದ್ಯ ಪರಮಪುರುಷನೇ, ಸಂಸಾರಿ ಜೀವರಲ್ಲಿ ಅಸಂಭಾವಿತವಾದ ಬ್ರಹ್ಮ

---

ನಿತ್ಯಮುಕ್ತನೂ, ಪರಬ್ರಹ್ಮನೂ ಆತನೇ—ಅನ್ಯ ಮತ್ತೊಬ್ಬನಿಲ್ಲ; ಮುಕ್ತ ಬ್ರಹ್ಮಾದಿಗಳಿಗೂ 'ಜಗದ್ವ್ಯಾಪಾರವರ್ಜಂ' ಎಂಬ ಬ್ರಹ್ಮಸೂತ್ರವು ನಿರ್ಣಯಿಸಿರುವಂತೆ, ಜಗತ್ತಿನ ಕರ್ತೃತ್ವಾದಿ ವ್ಯಾಪಾರಗಳಿಲ್ಲ; ಜನ್ಮಾದ್ಯಸ್ಯ ಯತಃ' ಎಂಬ ಸೂತ್ರವು ಸೃಷ್ಟ್ಯಾದ್ಯಷ್ಟ ಕರ್ತೃತ್ವವು, ಪರಬ್ರಹ್ಮನ ಲಕ್ಷಣ ವೆಂದು ನಿಶ್ಚಯಿಸುತ್ತದೆ; ಬ್ರಹ್ಮಾದಿಗಳಿಗೆ ಸೃಷ್ಟಿಯನ್ನು ಹೇಳಿ, ವೇದವು,

ಗುರುತ್ವಾದಿ ವಿಶೇಷಣಗಳಿಂದಲೂ, 'ಜಗದ್ವ್ಯಾಪಾರವರ್ಜಂ' ಎಂಬ ಸೂತ್ರದಲ್ಲಿ ನಿರ್ಣಯಿಸಿದಂತೆ, ಮುಕ್ತರಲ್ಲಲ್ಲದ ಜಗತ್ಸೃಷ್ಟ್ಯಾದಿ ಕರ್ತನೆಂಬುದರಿಂದಲೂ, ನಿತ್ಯಮುಕ್ತ ಪರಬ್ರಹ್ಮನೆಂದು ಸಿದ್ಧವಾಗುತ್ತದೆ.

**ಶ್ರೀಶ್ಚ ಲಕ್ಷ್ಮೀಶ್ಚ ಯತ್ಪತ್ನ್ಯೌ ಸೂಕ್ತಾಂತೇ ತಸ್ಯ ಕೀರ್ತಿತೇ ।**
**ಅತಃ ಪುರುಷಸೂಕ್ತೋಕ್ತಿಃ ಸಾಕ್ಷಾನ್ನಾರಾಯಣಃ ಪ್ರಭುಃ ।**
**ಸ್ಪಷ್ಟಂ ಭಾಗವತೇ ಚೋಕ್ತಾ ಪುಂಸೂಕ್ತೇ ವಿಷ್ಣುಸೂಕ್ತತಾ ॥೫೨೫॥**

ಶ್ರೀವಿಷ್ಣುವೇ ಪುರುಷಸೂಕ್ತ ಪ್ರತಿಪಾದ್ಯನೆಂಬಲ್ಲಿ ಅಂತರಂಗವಾದ ಅತಿ ಪ್ರಬಲಯುಕ್ತಿಯನ್ನು ಹೇಳುತ್ತಾರೆ:—

ಯತ್—ಯಾವ ಕಾರಣದಿಂದ, ತಸ್ಯ—(ಪುರುಷಸೂಕ್ತ ಪ್ರತಿಪಾದ್ಯನಾದ) ಮಹಾಪುರುಷನಿಗೆ, ಸೂಕ್ತಾಂತೇ—ಯಜುರ್ವೇದಿಗಳ ಪುರುಷಸೂಕ್ತದ ಅಂತ್ಯ ಭಾಗದಲ್ಲಿ, ಶ್ರೀಶ್ಚ ಲಕ್ಷ್ಮೀಶ್ಚ ಪತ್ನ್ಯೌ—ಶ್ರೀದೇವಿಯೂ ಲಕ್ಷ್ಮೀದೇವಿಯೂ ಭಾರ್ಯರೆಂದು ('ಶ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬ ವಾಕ್ಯದಲ್ಲಿ), ಕೀರ್ತಿತೇ—ಹೇಳಲ್ಪಟ್ಟಿರುವರೋ, ಅತಃ—ಆದ್ದರಿಂದ, ಪುರುಷಸೂಕ್ತೋಕ್ತಿಃ—ಪುರುಷಸೂಕ್ತ ಪ್ರತಿಪಾದ್ಯನು, ಪ್ರಭುಃ—ಜಗದೊಡೆಯನಾದ, ಸಾಕ್ಷಾನ್ನಾರಾಯಣಃ—ಸ್ವಯಂ ನಾರಾಯಣನೇ (ಆಗಿರುವನು); ಭಾಗವತೇ ಚ—ಭಾಗವತದಲ್ಲಿಯೂ, ಪುಂಸೂಕ್ತೇ – ಪುರುಷಸೂಕ್ತದಲ್ಲಿ, ವಿಷ್ಣುಸೂಕ್ತತಾ – ವಿಷ್ಣುಸೂಕ್ತತ್ವವು, ಉಕ್ತಾ—('ತತ್ರ ಗತ್ವಾ ಜಗನ್ನಾಥಂ' ಇತ್ಯಾದಿಯಾಗಿ, ಕ್ಷೀರ

---

ಈ ಮಹಾಪುರುಷನಿಗೆ, ಹೇಳದಿರುವುದರಿಂದ, ಸಂಸಾರಶೂನ್ಯನಾದ ಈತನೇ, ನಿತ್ಯಮುಕ್ತನಾದ, ಅನ್ಯರಿಗೆ ಮುಕ್ತಿಪ್ರದನಾದ, ಪರಬ್ರಹ್ಮನೆಂದೇ ಸಿದ್ಧವಾಗುತ್ತದೆ—ಆತನೇ ವಿಷ್ಣುವು (೫೨೩–೫೨೪). ಯಜುರ್ವೇದಿಗಳ ಪುರುಷಸೂಕ್ತದಲ್ಲಿ (ಕಡೆಯ ಭಾಗದಲ್ಲಿ) ಆ ಸೂಕ್ತ ಪ್ರತಿಪಾದ್ಯನಾದ ಪುರುಷನಿಗೆ ಶ್ರೀದೇವಿಯೂ, ಲಕ್ಷ್ಮೀದೇವಿಯೂ ಭಾರ್ಯರೆಂದು ವರ್ಣಿಸಲಾಗಿದೆ; ಆದ್ದರಿಂದ ಈತನು ಸಾಕ್ಷಾನ್ನಾರಾಯಣನೇ ಎಂದು ತಿಳಿದುಬರುತ್ತದೆ; ಭಾಗವತದಲ್ಲಿ, ಬ್ರಹ್ಮನು ಜಗದೊಡೆಯನಾದ ವಿಷ್ಣುವನ್ನು, ಪುರುಷಸೂಕ್ತದಿಂದ ಸ್ತುತಿಸಿ, ಪ್ರಾರ್ಥಿಸಿದನೆಂದು ಹೇಳಿರುವುದರಿಂದ ಸಹ ವಿಷ್ಣುವೇ ಪುರುಷಸೂಕ್ತ ಪ್ರತಿಪಾದ್ಯನು; ಪುರುಷಸೂಕ್ತವೇ ವಿಷ್ಣುಸೂಕ್ತವೂ ಆಗಿದೆ,

ಸಮುದ್ರತೀರಕ್ಕೆ ಹೋಗಿ, ಜಗದೊಡೆಯನಾದ ವಿಷ್ಣುವನ್ನು ಪುರುಷಸೂಕ್ತದಿಂದ ಬ್ರಹ್ಮದೇವನು ಸ್ತುತಿಸಿದನೆಂದು) ಹೇಳಲ್ಪಟ್ಟಿರುತ್ತದೆ.

**ತಸ್ಮಾದಜಾಯತ ವಿರಾಡಿತಿ ಯಃ ಪುಂಸುತೋ ವಿರಾಟ್ ।**
**ಸಹಸ್ರಶೀರ್ಷಾಪಿ ಪುಮಾನಸಾವೇವ ಕಿಲಾದ್ಭುತಂ ॥ ೫೨೬ ॥**

**ಇತ್ಥಂ ಸೂಕ್ತೋಕ್ತಮಹಿಮಾ ಯಸ್ಯ ಸರ್ವೇಶ್ವರಸ್ಯ ಹಿ ।**
**ಪರಂಬ್ರಹ್ಮ ಸ ವಿಷ್ಣೈಕೋ ನಾರಾಯಣ ಇತಿ ಸ್ಥಿತಂ ॥ ೫೨೭ ॥**

ಪುರುಷಸೂಕ್ತದ ಪ್ರತಿಪಾದ್ಯ ದೇವತೆಯು, ವಿರಾಟ್ ಪುರುಷನೆಂದು ಹೇಳುವವರನ್ನು ನಿಂದಿಸುತ್ತಾರೆ :—

ತಸ್ಮಾತ್—ಆ ಪರಮಪುರುಷನಿಂದ, ವಿರಾಟ್—ವಿರಾಟ್ ಎಂಬ, ಯಃ—ಯಾವನು, ಪುಂಸುತಃ ವಿರಾಟ್—ಪುರುಷನ ಪುತ್ರನಾದ ವಿರಾಟ್ ನಾಮವುಳ್ಳವನು, ಅಜಾಯತ – ಉತ್ಪನ್ನನಾದನೋ, ಅಸೌ – ಆ ಈತನೇ, ಸಹಸ್ರಶೀರ್ಷಾಪಿ – ಸಹಸ್ರ ಶೀರ್ಷನೂ ಆದ, ಪುಮಾನ್ – ಪುರುಷನೂ, ಕಿಲ—(ಎಂಬುದು) ಆಶ್ಚರ್ಯವು; ಅದ್ಭುತಂ—ಪರಮಾಶ್ಚರ್ಯವು ! ('ತಸ್ಮಾದ್ವಿರಾಡಜಾಯತ' ಎಂದು, ಪುರುಷನಿಂದ ವಿರಾಟ್ ಹುಟ್ಟಿದನೆಂದು ಹೇಳುತ್ತದೆ; ಹೀಗಿರಲು, ಈತನು ಸಹಸ್ರ ಶೀರ್ಷಾದಿಯುಕ್ತನಾದ ಉತ್ಪಾದಕ ತಂದೆಯೇ ಎಂಬುದು ಆಶ್ಚರ್ಯವಲ್ಲವೇ ? ತಂದೆಮಕ್ಕಳು ಒಂದೇ ಎನ್ನಬಹುದೇ ? ಸೃಷ್ಟಿಕ್ರಮದಲ್ಲಿ ಮೊದಲು ಹುಟ್ಟಿದ ವಿರಾಟ್ ನಾಮಕನು, ತಂದೆಯ ಸಾದೃಶ್ಯವುಳ್ಳವನಾಗಬಹುದಲ್ಲದೇ ತಂದೆಯೇ ಆಗುತ್ತಾನೆಯೇ ? ಸರ್ವಥಾ ಯುಕ್ತವಲ್ಲ, ಎಂದು ಕಿಲ, ಅದ್ಭುತಂ ಶಬ್ದಗಳು ಸೂಚಿಸುತ್ತವೆ.) ಇತ್ಥಂ—ಬ್ರಹ್ಮಾದಿ ಸಕಲ ಜಗತ್ತಿನ ಉತ್ಪಾದಕನೆಂದು, ಸೂಕ್ತೋಕ್ತಮಹಿಮಾ—ಪುರುಷಸೂಕ್ತ

---

ಎಂದೂ ಸಮರ್ಥಿತವಾಗುತ್ತದೆ (೫೨೫). ವಿರಾಟ್ ಪುರುಷನು ಆ ಮಹಾಪುರುಷನಿಂದ, ಹುಟ್ಟಿದ ಪುತ್ರನಲ್ಲದೇ, ಆತನು ಸೂಕ್ತ ಪ್ರತಿಪಾದ್ಯ ಪುರುಷನಲ್ಲ; 'ತಸ್ಮಾದ್ವಿರಾಡಜಾಯತ', ಆ ಸಹಸ್ರಶೀರ್ಷಾದಿ ವಾಕ್ಯಗಳಿಂದ ಹೇಳಲ್ಪಟ್ಟ ಮಹಾಪುರುಷನಿಂದ, ವಿರಾಟ್ ಹುಟ್ಟಿದನು, ಎಂದು ಹೇಳಲಾಗಿದೆ; ಕೆಲವರು ವಿರಾಟ್ ಪುರುಷನೇ, ಸೂಕ್ತ ಪ್ರತಿಪಾದ್ಯ ಪುರುಷನೆಂದು ತಿಳಿಯುತ್ತಾರೆ; ತಂದೆ ಮಕ್ಕಳು ಒಂದೇ ಆಗುವರೇ ? ಸಾದೃಶ್ಯವಿರಬಹುದಾದರೂ

ದಲ್ಲಿ ಹೇಳಲಾದ ಮಹಿಮೆಯು, ಹಿ–ಯಾವ ಕಾರಣದಿಂದ, ಯಸ್ಯ–ಯಾವ, ಸರ್ವೇಶ್ವರಸ್ಯ – ಸರ್ವನಿಯಾಮಕನಿಗೋ, ಸಃ ಏವ – ಆತನೇ, ಏಕಃ – ಸ್ವತಂತ್ರನು (ಸರ್ವೋತ್ತಮನು), ಪರಂ ಬ್ರಹ್ಮ–ಪರಬ್ರಹ್ಮನು, ನಾರಾಯಣ ಇತಿ–(ಮೂಲರೂಪೀ) ನಾರಾಯಣನೇ ಎಂದು, ಸ್ಥಿತಂ–ನಿಶ್ಚಿತವಾಗಿ ನಿಲ್ಲುತ್ತದೆ.

**ತಮುಕ್ತವಿಧಯಾ ವಿದ್ವಾನ್ ಮುಕ್ತಃ ಸ್ಯಾನ್ನಾನ್ಯಥಾ ಕಿಲ ।**
**ಅತೋ ಮುಮುಕ್ಷುಭಿರ್ಜ್ಞೇಯಮಿದಂ ಬ್ರಹ್ಮ ನ ಚಾಪರಂ ॥೫೨೮॥**

ತಂ–ಆ ಮಹಾಪುರುಷನನ್ನು, ಉಕ್ತವಿಧಯಾ–ಈವರೆಗೆ ನಿರೂಪಿಸಿದ ಪ್ರಕಾರದಿಂದ ('ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂಬಲ್ಲಿರುವ 'ಏವಂ ವಿದ್ವಾನ್' ಎಂಬುದರ ಅರ್ಥವು), ವಿದ್ವಾನ್–ತಿಳಿದು ಉಪಕರಿಸಿದ ಅಧಿಕಾರಿಯು, ಮುಕ್ತಃ ಸ್ಯಾತ್–ಮುಕ್ತನಾಗುತ್ತಾನೆ; ಅನ್ಯಥಾ–ಬೇರೆ ರೀತಿಯಿಂದ ('ನಾನ್ಯಃ ಪಂಥಾ ಅಯನಾಯ ವಿದ್ಯತೇ'—ಆತನನ್ನು ಹೊಂದಲು ಅನ್ಯಮಾರ್ಗವಿಲ್ಲ, ಎಂಬ ವಾಕ್ಯಾರ್ಥವು ಸೂಚಿತ), ನ ಕಿಲ – ಮುಕ್ತಿಯಲ್ಲವೆಂಬುದು ಸ್ಪಷ್ಟವೇ ಇದೆ; ಅತಃ – ಆದ್ದರಿಂದ (ಮುಕ್ತಿಪ್ರದನಾದ್ದರಿಂದ), ಮುಮುಕ್ಷುಭಿಃ–ಮೋಕ್ಷಾಪೇಕ್ಷಿಗಳಿಂದ, ಇದಂ ಬ್ರಹ್ಮ–ಈತನೇ ಬ್ರಹ್ಮನೆಂದು (ಇಲ್ಲಿ ಪ್ರತಿಪಾದ್ಯ ವಸ್ತುವೇ ಬ್ರಹ್ಮನೆಂದು), ಜ್ಞೇಯಂ–ತಿಳಿಯಲ್ಪಡತಕ್ಕದ್ದು; ಅಪರಂ ನ ಚ–ಬೇರೆ ಯಾವುದೂ (ಬ್ರಹ್ಮ) ಅಲ್ಲ.

---

ಪುತ್ರನು ತಂದೆಯೇ ಆಗುವುದಿಲ್ಲ ; ಈ ವಿಧ ತಪ್ಪುಭಾವನೆಯು ಆಶ್ಚರ್ಯಕರವು ! ಚರಾಚರ ಜಗತ್ತಿನ ಉತ್ಪಾದಕನೆಂದೂ, ಸರ್ವನಿಯಾಮಕನಾದ ಸ್ವತಂತ್ರನಾದ ಪರಬ್ರಹ್ಮನೇ ಈ ಸೂಕ್ತಪ್ರತಿಪಾದ್ಯನೆಂದು ನಿಸ್ಸಂಶಯವಾಗಿ ಸಿದ್ಧವಾಗಿ ನಿಲ್ಲುತ್ತದೆ; ಆತನೇ ಸಾಕ್ಷಾನ್ನಾರಾಯಣನು (೫೨೬–೫೨೭). ಈವರೆಗೆ ನಿರೂಪಿಸಿದ ಮಹಿಮಾ ವಿಶೇಷಗಳುಳ್ಳ ಪರಮ ಪುರುಷನೆಂದೇ ತಿಳಿದು ಸಾಕ್ಷಾತ್ಕರಿಸಿಕೊಳ್ಳಲು, ಮೋಕ್ಷಾಪೇಕ್ಷಿಗಳು ಯತ್ನಿಸಬೇಕು; ಆತನಿಂದಲೇ ಮೋಕ್ಷವು; ಆತನೇ ಬ್ರಹ್ಮನು—ಅನ್ಯರಲ್ಲ (ಶಿವಾದಿಗಳು ಯಾರೂ ಅಲ್ಲ); 'ನಾನ್ಯಃ ಪಂಥಾ ಅಯನಾಯ ವಿದ್ಯತೇ'—ಮೋಕ್ಷಪ್ರಾಪ್ತಿಗೆ ಅನ್ಯಮಾರ್ಗವಿಲ್ಲೆಂದು ಸ್ಪಷ್ಟವಾಗಿ ಹೇಳುತ್ತಿದೆ, ಶ್ರುತಿ (೫೨೮).

**ಮುಕ್ತಾವನುಪಯೋಗ್ಯನ್ಯದ್ಬ್ರಹ್ಮ ಯದ್ಯಸ್ತಿ ತತ್ತ್ವವ ।**
**ತಮೋ ಜಿಗಮಿಷೋರ್ಮುಕ್ತಿಯೋಗ್ಯಾನಾಮಿದಮೇವ ನಃ ॥೫೨೯॥**

ಮುಕ್ತೌ–ಮುಕ್ತಿಪ್ರಾಪ್ತಿಯಲ್ಲಿ, ಅನುಪಯೋಗಿ–ಉಪಯುಕ್ತವಾಗದ, ಅನ್ಯತ್ ಬ್ರಹ್ಮ–ನಿರ್ಗುಣನೆಂಬ ಮತ್ತೊಬ್ಬ ಬ್ರಹ್ಮನು, ಯದಿ ಅಸ್ತಿ–ಇರುವುದಾದರೆ (ಶ್ರುತ್ಯುಕ್ತನಲ್ಲದ್ದರಿಂದ ಅಪ್ರಾಮಾಣಿಕನೆಂದು ಸೂಚಿತವು), ಮತ್ತು ಶಿವಾದಿಗಳನ್ನು ಆಯಾ ಭಕ್ತರು ಬ್ರಹ್ಮಭಾವದಿಂದ ಮುಕ್ತಿಪ್ರದನೆಂದು ತಿಳಿಯುವುದೂ ಸರಿಯಲ್ಲ—'ನಾನ್ಯಃ ಪಂಥಾ ಅಯನಾಯ' ಎಂದು ಹೇಳಿರುವುದರಿಂದ), ತತ್–ಆ ಬ್ರಹ್ಮನು (ತಮಸ್ಸನ್ನು ಹೊಂದಿಸುವವನು) ; ತಮಃ–ತಮಸ್ಸನ್ನು (ಮಾಯೆಯನ್ನು), ಜಿಗಮಿಷೋಃ–ಜಯಿಸುವ ಇಚ್ಛೆಯುಳ್ಳ, ತವ ಏವ–ನಿನಗೆ ಮಾತ್ರ ; ಮುಕ್ತಿಯೋಗ್ಯಾನಾಂ ನಃ–ಮುಕ್ತಿಯೋಗ್ಯರಾದ ನಮಗೆ, (ನಿನ್ನಂತೆ ಮಾಯೆಯನ್ನು ಗೆಲ್ಲುವ ಇಚ್ಛೆಯುಳ್ಳವರಿಗಲ್ಲ ಕಿಂತು), ಇದಂ – ಈ ಬ್ರಹ್ಮನು (ಪುರುಷಸೂಕ್ತ ಪ್ರತಿಪಾದ್ಯನಾದ ಈತನೇ ಪರಬ್ರಹ್ಮನು).

**ಸಾಕಾರಸಗುಣಶ್ರೀಶಸೇವೈಕಾಮೃತಪದ್ಧತಿಃ ।**
**ನಾನ್ಯಸ್ಯ ಸೇವಾ ಮೋಕ್ಷಸ್ಯ ಪಂಥಾ ಇತ್ಯಾಹ ಹಿ ಶ್ರುತಿಃ ॥ ೫೩೦ ॥**

ಉಕ್ತಪ್ರಮೇಯವನ್ನು ವಿವೇಚಿಸಿ, ಮೋಕ್ಷಮಾರ್ಗವನ್ನು ನಿಶ್ಚಯಿಸಿ ನಿರೂಪಿಸುತ್ತಾರೆ :—

---

ಸ್ವತಂತ್ರನೂ ಗುಣಪೂರ್ಣನೂ ಆದ ಈ (ಪ್ರತಿಪಾದ್ಯ) ವಿಷ್ಣು (ಪರಬ್ರಹ್ಮನಲ್ಲದೇ) ವಲ್ಲದ, ಅನ್ಯ ಪರಬ್ರಹ್ಮನು ಮುಕ್ತಿರೂಪದ ಪ್ರಯೋಜನಾಪೇಕ್ಷಿಗಳಿಗೆ ಏನೂ ಉಪಯೋಗನಾಗುವುದಿಲ್ಲ ; ಮುಕ್ತಿಗೆ ಅನುಪಯೋಗಿಯಾದ ನಿರ್ಗುಣಬ್ರಹ್ಮನೆಂಬುವನು, ಮಾಯೆಯನ್ನು ದಾಟಿ ಐಕ್ಯವನ್ನು ಸಾಧಿಸಲಿಚ್ಛಿಸುವ, ನಿನಗೆ (ಮಾಯಾವಾದಿಗೆ) ಇರಲಿ ; ಮುಕ್ತಿಯೋಗ್ಯರಾದ ನಮ್ಮೆಲ್ಲರಿಗೆ, ಈ ಪುರುಷಸೂಕ್ತ ಪ್ರತಿಪಾದ್ಯನಾದ ಪರಪುರುಷನೇ, ಬ್ರಹ್ಮನು (೫೨೯). ಅಪ್ರಾಕೃತ ರೂಪನೂ (ಸಾಕಾರನೂ—ನಿರಾಕಾರನಲ್ಲ), ಗುಣಪೂರ್ಣನೂ ಲಕ್ಷ್ಮೀಪತಿಯೂ ಆದ ಶ್ರೀ ನಾರಾಯಣನ ಸೇವೆಯೇ ಮುಕ್ತಿಸಾಧಕ ಮಾರ್ಗವು ; ಆತನೇ ಸ್ವತಂತ್ರನು—ಅನ್ಯರಾರೂ ಅಲ್ಲ ; ಅನ್ಯಸೇವೆ

ಸಾಕಾರಸಗುಣಶ್ರೀಶಸೇವಾ–ಸಹಸ್ರಶೀರ್ಷಾದ್ಯುಕ್ತ ಆಕಾರವುಳ್ಳವನೂ, ಜ್ಯಾಯಸ್ತ್ವಾದಿ (ಸರ್ವೋತ್ತಮತ್ವಾದಿ) ಗುಣಪೂರ್ಣನೂ ಲಕ್ಷ್ಮೀಪತಿಯೂ ಆದ ಶ್ರೀವಿಷ್ಣುವಿನ ಸೇವೆಯೇ, ಏಕಾ – ಪ್ರಧಾನವಾದ (ಮುಖ್ಯವಾದ— ಏಕಮಾತ್ರವೂ ಆದ), ಅಮೃತಪದ್ಧತಿಃ–ಮೋಕ್ಷ (ಮಾರ್ಗವು) ಸಾಧನವು ; ಅನ್ಯಸ್ಯ–(ಬ್ರಹ್ಮನ ನಿಷ್ಪ್ರಕಾರಕ ಜ್ಞಾನದಿಂದ ಮೋಕ್ಷವಿಲ್ಲವೆಂದು ಸೂಚಿಸ ಲಿಕ್ಕಾಗಿ) ನಿರ್ಗುಣಬ್ರಹ್ಮನ ಅಥವಾ ಶಿವಾದಿಗಳನ್ನು ಸೃಷ್ಟ್ಯಾದಿಕರ್ತ ಬ್ರಹ್ಮ ನೆಂದು, ಸೇವಾ–ಸೇವಿಸುವುದು (ಉಪಾಸಿಸುವುದು), ನ ಪಂಥಾ ಇತಿ–ಮೋಕ್ಷ ಸಾಧನವಲ್ಲವೆಂದು, ಶ್ರುತಿಃ – ಶ್ರುತಿಯು ('ನಾನ್ಯಸ್ಯ ಪಂಥಾ ಅಯನಾಯ ವಿದ್ಯತೇ' ಎಂಬ ವೇದವಾಕ್ಯವು), ಆಹ ಹಿ–ಸ್ಪಷ್ಟ ನುಡಿದಿರುತ್ತದೆ (ಬ್ರಹ್ಮನ ರೂಪ, ಗುಣಾದಿಗಳೆಲ್ಲವೂ ಪರಮಾರ್ಥ ಸತ್ಯತ್ವವುಳ್ಳವುಗಳೇ, ವ್ಯಾವಹಾರಿಕ ವಲ್ಲ, ಎಂಬ ಜ್ಞಾನನಿಶ್ಚಯದಿಂದಲೇ ಸೇವಿಸಬೇಕು),

**ಅತೋ ಮುಕುಂದಾದಿತರದ್ಬ್ರಹ್ಮ ವೇದವಿನಿಂದಿತಂ ।**
**ಮೋಕ್ಷೇಂತರಂಗಹೇತುತ್ವಾನ್ಮುಖ್ಯಂ ಬ್ರಹ್ಮ ಸ ಏವ ಹಿ ॥ ೫೩೧ ॥**

ಅತಃ–ವಿಷ್ಣುಭಿನ್ನನು ಮೋಕ್ಷೋಪಯೋಗಿಯಲ್ಲದ್ದರಿಂದ, ಮೋಕ್ಷೇ– ಮೋಕ್ಷಪ್ರಾಪ್ತಿಯಲ್ಲಿ, ಅಂತರಂಗಹೇತುತ್ವಾತ್–ಅಂತರಂಗ (ರಹಸ್ಯ) ಸಾಧನ ನಾದ್ದರಿಂದ, ಮುಖ್ಯಂ ಬ್ರಹ್ಮ–ಮುಖ್ಯ (ಪ್ರತಿಪಾದ್ಯ)ನು (ಬ್ರಹ್ಮಶಬ್ದಮುಖ್ಯ ವಾಚ್ಯನು), ಸಃ ಏವ ಹಿ–ಆತನೇ ಎಂಬುದು ಅತಿಸ್ಪಷ್ಟವು; ಮುಕುಂದಾತ್– ಮೋಕ್ಷಪ್ರದನಾದ ವಿಷ್ಣುವಿನಿಂದ, ಇತರದ್ಬ್ರಹ್ಮ–ಇನ್ನೊಂದು ಬ್ರಹ್ಮವಸ್ತು ವೆಂಬ ಜ್ಞಾನವು, ವೇದವಿನಿಂದಿತಂ–ವೇದದಿಂದ ನಿಂದಿತವಾಗಿದೆ (ತಿರಸ್ಕೃತ ವಾಗಿದೆ).

---

ಯಿಂದ, ಮೋಕ್ಷವಿಲ್ಲ—ನಿಷ್ಪ್ರಕಾರಕ ಜ್ಞಾನವಾಗಲಿ, ಶಿವಾದಿಗಳ ಉಪಾಸನೆ ಯಾಗಲಿ, ಮುಕ್ತಿಸಾಧಕವಲ್ಲ; 'ನಾನ್ಯಃ ಪಂಥಾ ಅಯನಾಯ ವಿದ್ಯತೇ' ಎಂದು, ವೇದವು ಸ್ಪಷ್ಟವಾಗಿ ಘೋಷಿಸುತ್ತದೆ (೫೩೦). ಮೋಕ್ಷಪ್ರದ ನಾದ್ದರಿಂದ ಮುಕುಂದನೆಂಬ ಸಾರ್ಥಕನಾಮದಿಂದ ಪ್ರಸಿದ್ಧನಾದ, ಮುಕುಂದ ನಿಂದ ಭಿನ್ನನಾದ ಮತ್ತೊಬ್ಬ ಬ್ರಹ್ಮನು ಇಲ್ಲ—ಇನ್ನೊಬ್ಬ ಬ್ರಹ್ಮನಿರುವನೆಂಬ ಜ್ಞಾನವು ವೇದನಿಂದಿತವು ; ಬ್ರಹ್ಮಶಬ್ದ ಮುಖ್ಯವಾಚ್ಯನು, ಮೋಕ್ಷಕ್ಕೆ

**ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ।**
**ಶುದ್ಧಿಸೌರಭಸರ್ವಸ್ವಮದ್ಧಾ ವಿಷ್ಣೋರ್ನ್ಯವೇದಯತ್ ॥ ೫೩೨ ॥**

ವಾದಿರಾಜಾಖ್ಯಯತಿನಾ–ವಾದಿರಾಜರೆಂಬ ಯತಿಗಳಿಂದ, ಸಾಧಿತಾ–ಸಾಧಿಸಲ್ಪಟ್ಟ, ಯುಕ್ತಿಮಲ್ಲಿಕಾ–ಯುಕ್ತಿಮಲ್ಲಿಕೆಯು, ಶುದ್ಧಿಸೌರಭಸರ್ವಸ್ವಂ–ಶುದ್ಧಿಸೌರಭವೆಂಬ ಸರ್ವವನ್ನು (ಸುಮನದ ಪರಿಮಳ ಗಂಧವನ್ನೆಲ್ಲವನ್ನು), ಅದ್ಧಾ–ಚೆನ್ನಾಗಿ (ಭಕ್ತಿಯಿಂದ), ವಿಷ್ಣೋಃ–ಶ್ರೀವಿಷ್ಣುವಿಗೆ, ನ್ಯವೇದಯತ್–ಅರ್ಪಿಸಿರುವಳು.

**ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಮದ್ವಾದಿರಾಜ ಪೂಜ್ಯಚರಣ ವಿರಚಿತಾಯಾಂ ಯುಕ್ತಿಮಲ್ಲಿಕಾಯಾಂ ಶುದ್ಧಿಸೌರಭಂ ಸಂಪೂರ್ಣಂ**

ದಾವಣಗೆರೆ ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದ ಸದಸ್ಯನಾದ ಸಜ್ಜನಸೇವಕ ಬಿ. ಭೀಮರಾಯನಿಂದ ರಚಿತವಾದ ಶುದ್ಧಿಸೌರಭದ ಕನ್ನಡಾನುವಾದವು ಮುಗಿದುದು.

ಶ್ರೀಕೃಷ್ಣಾರ್ಪಣಮಸ್ತು

---

ಅಂತರಂಗಸಾಧನನಾದ್ದರಿಂದ, ಆತನೇ ಬ್ರಹ್ಮನೆಂಬ ನಿಶ್ಚಯಜ್ಞಾನವನ್ನು ದೊರಕಿಸಿಕೊಳ್ಳಬೇಕು (೫೩೧). ಶ್ರೀ ವಾದಿರಾಜರೆಂಬ ಯತಿಗಳಿಂದ ಸಂಪಾದಿಸಲ್ಪಟ್ಟ ಯುಕ್ತಿಮಲ್ಲಿಕೆಯು, (ತನ್ನ ವಿವಿಧ ಸೌರಭಗಳಲ್ಲಿ ಒಂದಾದ) ಶುದ್ಧಿಸೌರಭವೆಂಬ ಸರ್ವವನ್ನು, ಪುಷ್ಪದ ಪರಿಮಳ ಗಂಧವನ್ನೆಲ್ಲ ಚೆನ್ನಾಗಿ (ಭಕ್ತಿಯಿಂದ) ಶ್ರೀವಿಷ್ಣುವಿಗೆ, ಅರ್ಪಿಸಿದ್ದಾಳೆ (೫೩೨).

# ಶ್ರೀ ಯುಕ್ತಿಮಲ್ಲಿಕಾ - ಶುದ್ಧಿಸೌರಭ

## ವಿಷಯಾನುಕ್ರಮಣಿಕಾ—ಶ್ಲೋಕಸಂಖ್ಯಾ ೫೩೨